# ವಸಾಹತುಶಾಹಿ ಕಾಲಘಟ್ಟದ ಕನ್ನಡ ಭೂಪ್ರದೇಶಗಳ ಗ್ಯಾಸೆಟಿಯರುಗಳ ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು
ಆರ್. ಸುಮನ

ಮಾರ್ಗದರ್ಶಕರು
ಡಾ. ಸಿ.ಆರ್. ಗೋವಿಂದರಾಜು
ಪ್ರಾಧ್ಯಾಪಕರು, ಚರಿತ್ರೆ ವಿಭಾಗ






ಸಮಾಜ ವಿಜ್ಞಾನಗಳ ನಿಕಾಯ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೧-೧೨

# ವಸಾಹತುಶಾಹಿ ಕಾಲಘಟ್ಟದ ಕನ್ನಡ ಭೂಪ್ರದೇಶಗಳ ಗ್ಯಾಸೆಟಿಯರುಗಳ ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ಆರ್. ಸುಮನ

ಮಾರ್ಗದರ್ಶಕರು
ಡಾ. ಸಿ.ಆರ್. ಗೋವಿಂದರಾಜು
ಪ್ರಾಧ್ಯಾಪಕರು, ಚರಿತ್ರೆ ವಿಭಾಗ




ಸಮಾಜ ವಿಜ್ಞಾನಗಳ ನಿಕಾಯ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೧-೧೨

# ಮಾರ್ಗದರ್ಶಕರ ಪ್ರಮಾಣ ಪತ್ರ

ಆರ್. ಸುಮನ ಇವರು **"ವಸಾಹತುಶಾಹಿ ಕಾಲಘಟ್ಟದ ಕನ್ನಡ ಭೂಪ್ರದೇಶಗಳ ಗ್ಯಾಸೆಟಿಯರ್‌ಗಳ ಚಾರಿತ್ರಿಕ ಅಧ್ಯಯನ"** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ದಿನಾಂಕ :**
**ಸ್ಥಳ** : ವಿದ್ಯಾರಣ್ಯ

(ಡಾ. ಸಿ.ಆರ್. ಗೋವಿಂದರಾಜು)
ಮಾರ್ಗದರ್ಶಕರು ಹಾಗೂ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಸಂಶೋಧಕರ ಪ್ರಮಾಣ ಪತ್ರ

"ವಸಾಹತುಶಾಹಿ ಕಾಲಘಟ್ಟದ ಕನ್ನಡ ಭೂಪ್ರದೇಶಗಳ ಗ್ಯಾಸೆಟಿಯರ್‌ಗಳ ಚಾರಿತ್ರಿಕ ಅಧ್ಯಯನ" ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ. ಸಿ.ಆರ್. ಗೋವಿಂದರಾಜು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

R. Sumana

ದಿನಾಂಕ :

ಸ್ಥಳ : ವಿದ್ಯಾರಣ್ಯ

(ಆರ್. ಸುಮನ)
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

# ಅಧ್ಯಯನದ ಹಿನ್ನೆಲೆ, ಮಹತ್ವ, ಸ್ವರೂಪ, ವಿಧಿ-ವಿಧಾನಗಳು ಹಾಗೂ ಅಧ್ಯಯನದ ಮಿತಿ

ವಸಾಹತುಶಾಹಿ ಸಂದರ್ಭದಲ್ಲಿನ ಕನ್ನಡದ ಛಿದ್ರಗೊಂಡ ಭೂಪ್ರದೇಶಗಳನ್ನು ಗ್ಯಾಸೆಟಿಯರ್‌ಗಳ ಮೂಲಕ ಗುರುತಿಸುವುದು ಹಾಗೂ ರಚನೆಯ ಪ್ರಕ್ರಿಯೆಗಳನ್ನು ವಿಶ್ಲೇಷಿಸುವುದು ಈ ಅಧ್ಯಯನದ ಆಶಯವಾಗಿದೆ. ವಾಣಿಜ್ಯೋದ್ಯಮದ ನಿಮಿತ್ತ 'ಈಸ್ಟ್ ಇಂಡಿಯಾ ಕಂಪನಿ'ಯನ್ನು ಕಟ್ಟಿಕೊಂಡು ಕ್ರಿ.ಶ. ೧೬೦೦ರಲ್ಲಿ ಭಾರತಕ್ಕೆ ಬಂದ ಬ್ರಿಟಿಷರು, ಪಾಂಡಿಚೇರಿಯಲ್ಲಿ 'ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ'ಯನ್ನು ಕ್ರಿ.ಶ. ೧೬೬೪ರಲ್ಲಿ ಸ್ಥಾಪಿಸುವುದರ ಮೂಲಕ ಇಲ್ಲಿಯೇ ನೆಲೆಸಿದರು. ಹೀಗೆ ಭಾರತಕ್ಕೆ ಬಂದ ಪಾಶ್ಚಾತ್ಯರಲ್ಲಿ ಇವರು ಮೂರನೆಯವರು. ಇವರಿಗೂ ಮೊದಲು ಪೋರ್ಚುಗೀಸರು(೧೪೯೮) ಮತ್ತು ಡಚ್ಚರು(೧೫೯೫) ಬಂದು ಇಲ್ಲಿ ವ್ಯಾಪಾರ-ವಾಣಿಜ್ಯ ಕೇಂದ್ರಗಳನ್ನು ತೆರೆದಿದ್ದರೂ, ಅಂತಿಮವಾಗಿ ಬಂದವರು ಫ್ರೆಂಚರು. ದೇಶಿ ಅರಸರ ಅನೈಕ್ಯತೆ ಮತ್ತು ಇವರ ವ್ಯಾಪಾರಿ ಕೇಂದ್ರಗಳ ಸ್ಪರ್ಧೆಯಲ್ಲಿ ಕಡೆಗೆ ಉಳಿದವರು ಬ್ರಿಟಿಷರು ಮಾತ್ರ. ಹೀಗೆ ಪ್ರಭುಗಳಾಗಿ ಮಾರ್ಪಟ್ಟ ಪೋರ್ಚುಗೀಸರು ಮತ್ತು ಫ್ರೆಂಚರು ಗೋವಾ, ಪಾಂಡಿಚೇರಿ ಮೊದಲಾದ ಕೆಲವು ಭಾಗಗಳನ್ನು ಉಳಿಸಿಕೊಂಡು ಸಂತಸಪಟ್ಟರು. ಇವುಗಳ ಹೊರತಾಗಿ ಇಡೀ ಭಾರತವನ್ನೇ ತಮ್ಮ ಅಂಕುಶಕ್ಕೆ ತೆಗೆದುಕೊಂಡು ೧೯೪೭ರವರೆಗೂ ಆಳ್ವಿಕೆ ನಡೆಸಿದವರು ಬ್ರಿಟಿಷರು ಮಾತ್ರ.

ಟಿಪ್ಪುವಿನ ಪತನದ ನಂತರ ಕನ್ನಡದ ಸಮಗ್ರ ಭೂಭಾಗಗಳು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿದ್ದವು. ಪ್ರಾರಂಭದಲ್ಲಿ ಇವರ ಆಶಯವು ಕೇವಲ ವ್ಯಾಪಾರ ಮಾಡಿ ಅಧಿಕ ಲಾಭವನ್ನು ಪಡೆಯುವುದೇ ಆಗಿತ್ತು. ಕ್ರಮೇಣ ಇವರು ಸಾಮ್ರಾಜ್ಯಶಾಹಿಗಳಾಗುವ ತಮ್ಮ ಮೂಲ ಇಂಗಿತವನ್ನು ನೇರ ಆಡಳಿತದ ಮೂಲಕ ಅನಾವರಣಗೊಳಿಸದೆ ಬಿಡಲಿಲ್ಲ. ಹೀಗಾಗಿ ಎಲ್ಲಾ ಪ್ರದೇಶಗಳ ಮೇಲೆ ನೇರ ಹಾಗೂ ಪರೋಕ್ಷವಾದ ಅಧಿಕಾರವನ್ನು ತಮ್ಮ ಕಂಪನಿಯ ಮೂಲಕ ಸ್ಥಾಪಿಸಿದ್ದರು. ಆಡಳಿತವನ್ನು ಈಸ್ಟ್ ಇಂಡಿಯಾ ಕಂಪನಿಯಿಂದ ನೇಮಿತರಾದ ಅಧಿಕಾರಿಗಳೇ ನಡೆಸುತ್ತಿದ್ದರು. ಹೀಗೆ ಬಂದಂಥ

ಅಧಿಕಾರಿಗಳು ಪಾಶ್ಚಾತ್ಯರಾಗಿದ್ದುದರಿಂದಾಗಿ ಅವರಿಗೆ ಈ ಪ್ರದೇಶಗಳು ಹೊಸದಾಗಿದ್ದವು. ಇಲ್ಲಿ ನೇರವಾಗಿ ಆಳ್ವಿಕೆ ನಡೆಸಲು ಅವರಿಗೆ ಯಾವುದೇ ರೀತಿಯ ಲಿಖಿತ ದಾಖಲೆಗಳಿರಲಿಲ್ಲ. ಹಾಗಾಗಿ ಆಯಾ ಪ್ರದೇಶಗಳ ಬಗೆಗೆ ಮಾಹಿತಿ ಅರಿವು ಸಹಜವಾಗಿ ಬೇಕಾಗುತ್ತಿತ್ತು. ಅಂದರೆ ಅನ್ಯ ದೇಶದಿಂದ ಬಂದಂಥ ಇವರಿಗೆ ಇಲ್ಲಿನ ಜನರ ಭಾಷೆ, ಆಚರಣೆ, ಧರ್ಮ, ಸಂಪ್ರದಾಯ, ನೆಲ, ಪರಂಪರೆ, ಸಂಸ್ಕೃತಿ, ಆಡಳಿತ ಇತರೆ ಯಾವುದೇ ರೀತಿಯ ದಾಖಲೆಗಳು ಲಭ್ಯ ಇರಲಿಲ್ಲ. ಆದ್ದರಿಂದ ಅವರಿಗೆ ದಾಖಲೆ ಹಾಗೂ ಮಾಹಿತಿಗಳ ರೂಪದ ಗ್ರಂಥಗಳ ಅವಶ್ಯಕತೆ ಇತ್ತು. ಈ ಉದ್ದೇಶದಿಂದ ಇಡೀ ಭಾರತಕ್ಕೆ ಸಂಬಂಧಿಸಿದಂತೆ ವಿವರಗಳನ್ನೊಳಗೊಂಡ ಭೌಗೋಳಿಕ ಮಾಹಿತಿಯ ದಾಖಲೆಗಳು ರಚನೆಯಾಗಬೇಕಿತ್ತು. ಅಂದರೆ ತಮ್ಮ ಮೂಲ ಆಶಯಕ್ಕಾಗಿ ಇಲ್ಲಿನ ಭೂಪ್ರದೇಶ, ಜನ, ಬದುಕು ಹಾಗೂ ಸಾಂಸ್ಕೃತಿಕ ವಿಚಾರಗಳನ್ನು ಅರಿತುಕೊಳ್ಳುವ ಜರೂರು ಅವರಿಗೆ ಕಾಣಿಸಿಕೊಂಡಿತ್ತು. ಈ ಹಿನ್ನೆಲೆಯಲ್ಲಿ ಹುಟ್ಟಿಕೊಂಡದ್ದೇ 'ಗ್ಯಾಸೆಟಿಯರ್' ಪರಿಕಲ್ಪನೆ. ಗ್ಯಾಸೆಟಿಯರ್ ಎಂದರೆ ಒಂದು ಪ್ರದೇಶದಲ್ಲಿರುವ ನೆಲ, ಜಲ, ಬದುಕು, ಸಂಸ್ಕೃತಿ, ಧರ್ಮ, ಜಾತಿ ಇತರೇ ಎಲ್ಲಾ ಅಂಶಗಳನ್ನು ಒಳಗೊಂಡಿರುವ ಗ್ರಂಥ. ಒಂದು ಪ್ರದೇಶದ ಭೌಗೋಳಿಕ ಗ್ರಂಥ ಅಥವಾ 'ಪ್ರಾದೇಶಿಕ ಪರಿಚಯ ಕೋಶ' ಎಂದರ್ಥ. ಇದು ವಸಾಹತುಶಾಹಿಗಳಿಂದಲೇ ರಚನೆಗೊಳ್ಳುತ್ತಿತ್ತು. ಅಂದರೆ ಕಲೆಕ್ಟರ್‌ಗಳು, ಉನ್ನತಾಧಿಕಾರಿಗಳಿಂದ ರಚನೆ ಆಗುತ್ತಿದ್ದವು. ಈ ಮೊದಲಾದ ರೀತಿಯ ರಚನಾ ಕಾರ್ಯವು ವಸಾಹತುಶಾಹಿಗಳ ಕಾಲದಲ್ಲಿ ಭಾರತದ ಎಲ್ಲಾ ಕಡೆಯೂ ಆರಂಭಗೊಂಡಿತ್ತು. ಭಾರತಕ್ಕೆ ಸಂಬಂಧಿಸಿದಂತೆ ಗ್ಯಾಸೆಟಿಯರ್ ರಚನಾಕಾರರಲ್ಲಿ ಸರ್. ವಿಲಿಯಂ ಹಂಟರ್ ಸಂಪಾದಕತ್ವದಲ್ಲಿ 'ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ' ೧೮೮೧ರಲ್ಲಿ ಒಂಬತ್ತು ಸಂಪುಟಗಳು ಪ್ರಾರಂಭದಲ್ಲಿ ರಚನೆಗೊಂಡವು. ಅಂತೆಯೇ ಭಾರತದ ಬೇರೆ-ಬೇರೆ ಪ್ರಾಂತ್ಯಗಳಲ್ಲಿಯೂ ಇದೇ ಥರದ ಗ್ಯಾಸೆಟಿಯರ್‌ಗಳ ರಚನೆ ಆರಂಭಗೊಂಡಿತ್ತು.

ಈ ಅಧ್ಯಯನದಲ್ಲಿ ಭಾರತಕ್ಕೆ ಸಂಬಂಧಿಸಿದಂತೆ ರಚನೆಗೊಂಡ ಗ್ಯಾಸೆಟಿಯರ್‌ಗಳನ್ನು ಸ್ಥೂಲವಾಗಿ ದಾಖಲಿಸಿ, ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಆದರೆ ಅದು ಕನ್ನಡ ಭೂಪ್ರದೇಶಗಳಿಗೆ ಸಂಬಂಧಿಸಿದ ಗ್ಯಾಸೆಟಿಯರ್‌ಗಳನ್ನು ಕುರಿತು ಮಾತ್ರ. ಅಂದರೆ ಆಂಗ್ಲರ ಆಳ್ವಿಕೆಯ ಕಾಲದಲ್ಲಿ ಕನ್ನಡ ಭೂಪ್ರದೇಶಗಳು ಛಿದ್ರಗೊಂಡು ಹಳೆಯ ಮೈಸೂರು ಸಂಸ್ಥಾನ, ಮುಂಬಯಿ ಕರ್ನಾಟಕ, ಮದ್ರಾಸ್(ಬ್ರಿಟಿಷ್) ಕರ್ನಾಟಕ, ಹೈದರಾಬಾದ್(ನಿಜಾಂ) ಸಂಸ್ಥಾನ ಹಾಗೂ ಕೊಡಗು ಪ್ರದೇಶಗಳಾಗಿ ವಿಭಜನೆಗೊಂಡಿದ್ದವು. ಈ ಐದು ಪ್ರದೇಶಗಳಿಗೆ ಸಂಬಂಧಿಸಿದಂತೆ ರಚನೆಗೊಂಡ ಗ್ಯಾಸೆಟಿಯರ್‌ಗಳ ವಿವರಣೆಗಳ ಮೂಲಕ ವಿಶ್ಲೇಷಣೆ ಮಾಡುವ ಪ್ರಯತ್ನ ಇಲ್ಲಿನದು. ಈ ಹಿನ್ನೆಲೆಯಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದಂತೆ ೧೮೦೯ರಲ್ಲಿ ಪ್ರಕಟವಾದ ಎಚ್. ವೆಲ್ಲೆಸ್ಲಿ ಅವರ ಮೈಸೂರು ಜಿಲ್ಲೆಗೆ ಸಂಬಂಧಪಟ್ಟ ಗ್ಯಾಸೆಟಿಯರ್ ಹಾಗೂ ೧೮೭೦ರಲ್ಲಿನ ರೆವೆರೆಂಡ್ ರಿಚ್ಟರ್ .ಜಿ. ಅವರ 'ಗ್ಯಾಸೆಟಿಯರ್ ಆಫ್ ಕೂರ್ಗ್'ಗಳು ಮೊದಲ ಪ್ರಯತ್ನಗಳೆಂದು ಗುರುತಿಸಬಹುದು. ಅನಂತರ ಬಿ.ಎಲ್. ರೈಸ್ ಅವರ 'ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್'(ಮೂರು ಸಂಪುಟಗಳಲ್ಲಿ). ಅಲ್ಲದೆ ಜಾನ್‌ಕೆಲ್‌ಸಾಲ್ ಅವರ 'ಬಳ್ಳಾರಿ ಮ್ಯಾನ್ಯುಯಲ್ ಸಂ. ೧', ವಿಲಿಯಮ್ ಫ್ರಾನ್ಸಿಸ್ ಅವರ

'ಬಳ್ಳಾರಿ ಮ್ಯಾನ್ಯುಯಲ್ ಸಂ. ೨', ಮ್ಯಾಕ್ಲೀನ್ ಸಿ.ಡಿ ಅವರ 'ಮದ್ರಾಸ್ ಪ್ರೆಸಿಡೆನ್ಸಿ ಮ್ಯಾನ್ಯುಯಲ್'ಗೆ ಸೇರಿದ ಮೂರು ಸಂಪುಟಗಳು ಮುಖ್ಯವಾದವು. ಸಿ. ಹಯವದನ್‌ರಾವ್ ಅವರ 'ಮೈಸೂರು ಗ್ಯಾಸೆಟಿಯರ್‌ಗಳು', ಜೇಮ್ಸ್ ಎಂ. ಕ್ಯಾಂಬೆಲ್ ಅವರ 'ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳ ಗ್ಯಾಸೆಟಿಯರ್‌ಗಳು', ಜೆ.ಎಫ್. ಹಾಲ್ ಹಾಗೂ ಕೃಷ್ಣಯ್ಯಂಗಾರ್ ಹೀಗೆ ಅನೇಕರು ಗ್ಯಾಸೆಟಿಯರ್‌ಗಳ ರಚನೆಯನ್ನು ಕೈಗೊಂಡರು. ಹೀಗೆ ರಚನೆಗೊಂಡ ಗ್ಯಾಸೆಟಿಯರ್‌ಗಳನ್ನು ಕುರಿತು ವಿಮರ್ಶಾತ್ಮಕ ಅಧ್ಯಯನ ನಡೆಸುವ ಆಶಯ ಇಲ್ಲಿನದು.

ವಸಾಹತುಕಾಲೀನ ಬ್ರಿಟಿಷರು ಹಾಗೂ ಅವರ ಬರಹಗಳನ್ನು ಕುರಿತು ಸಾಕಷ್ಟು ಅಧ್ಯಯನಗಳು ನಡೆದಿವೆ. ಆದರೆ ಅವರು ತಮಗಾಗಿ ತಮ್ಮ ಮುಂದಿನ ಕಲೆಕ್ಟರ್ ಹಾಗೂ ಆಡಳಿತಗಾರರಿಗೆ ಮಾರ್ಗದರ್ಶಿಯಾಗಬೇಕೆಂಬ ಆಶಯದಿಂದ ರಚಿಸಿದ ಗ್ಯಾಸೆಟಿಯರ್‌ಗಳನ್ನು ಕುರಿತು ಯಾವುದೇ ಅಧ್ಯಯನಗಳು ನಡೆದಿಲ್ಲ. ಹಾಗಾಗಿ ಈ ಅಧ್ಯಯನಕ್ಕೆ ಹೆಚ್ಚಿನ ಮಹತ್ವವಿದೆ. ಆಂಗ್ಲರು ರಚಿಸಿದ ಗ್ಯಾಸೆಟಿಯರ್‌ಗಳಲ್ಲಿ ಅವುಗಳ ಅರ್ಥವೇನು? ಅವುಗಳು ಒಳಗೊಂಡಿರುವ ವಿಷಯಗಳೇನು? ಎಂಬುದನ್ನು ತಿಳಿಯುವುದು ಅಗತ್ಯವಾಗಿರುತ್ತದೆ. ಆ ಮೂಲಕವಾಗಿ ಅಂದಿನ ಸಂದರ್ಭದ ಸಮಾಜವನ್ನು ಯಾವ ರೀತಿಯಾಗಿ ಚಿತ್ರಿಸಿದ್ದಾರೆ ಎಂಬುದು ತಿಳಿಯುವುದು ಮುಖ್ಯವಾಗಿರುತ್ತದೆ. ಗ್ಯಾಸೆಟಿಯರ್ ರಚನೆಯ ಒಟ್ಟು ಆಶಯ ಆಂಗ್ಲಅಧಿಕಾರಿಗಳಿಗೆ ಗ್ಯಾಸೆಟಿಯರ್‌ಗಳ ಮೂಲಕ ಮಾಹಿತಿಗಳನ್ನು ಒದಗಿಸುವುದು. ಗ್ಯಾಸೆಟಿಯರ್‌ಗಳ ಮಾಹಿತಿಗಳಿಂದ ಹೊಸದಾಗಿ ಬರುವ ಅಧಿಕಾರಿಗಳಿಗೆ ಹಾಗೂ ಇತರರಿಗೆ ಅವು ಮಾರ್ಗದರ್ಶಿಯಾಗಬೇಕೆಂಬುದೇ ಆಗಿತ್ತು. ಜೊತೆಗೆ ತಮ್ಮ ಯೋಜನೆಗಳು, ಕೈಗೊಂಡ ಕಾರ್ಯಕ್ರಮಗಳನ್ನು ಹಾಗೂ ಇತರೆ ಎಲ್ಲವನ್ನು ಸಮಕಾಲೀನ ಸಂದರ್ಭದ ಆಂಗ್ಲ ಅಧಿಕಾರಿಗಳಿಗೆ ತಿಳಿಯಪಡಿಸುವುದು ಇದೊಂದು ತಮ್ಮ ಆಳ್ವಿಕೆಯ ಮುಂದಿನ ಆಡಳಿತಗಾರರಿಗೆ ದಾಖಲೆಗಳಾಗಿ ಉಳಿಯಬೇಕೆಂಬ ಆಶಯ. ಅಲ್ಲದೆ ಯಾವುದೇ ರೀತಿಯ ಗೊಂದಲಗಳಿಗೆ ಅವಕಾಶವಿಲ್ಲದಂತೆ ಆಳ್ವಿಕೆ ಮಾಡುವುದು ಆಂಗ್ಲರ ಮೂಲ ಉದ್ದೇಶವಾಗಿತ್ತು. ಹೀಗಾಗಿ ಗ್ಯಾಸೆಟಿಯರ್‌ಗಳ ರಚನೆ ಅಂದಿನ ಆಳುವ ವರ್ಗದವರ ಹಿತಾಸಕ್ತಿಯ ಕೂಸಾಗಿ ರೂಪು ತಳೆಯಿತು. ಹೀಗಾಗಿ ಗ್ಯಾಸೆಟಿಯರ್‌ಗಳ ಮಾಹಿತಿಗಳಿಂದ ಆಳುವ ಅಧಿಕಾರಿಗಳಿಗೆ ತಮ್ಮ ಇಲಾಖೆಯ ಸರಹದ್ದುಗಳ ಜೊತೆಗೆ ಕಂದಾಯ ಇತ್ಯಾದಿ ವಸೂಲಾತಿಗೂ ಅನುಕೂಲಗಳಾಗಿದ್ದವು. ಜೊತೆಗೆ ನ್ಯಾಯಾಂಗ, ಆರ್ಥಿಕತೆ, ವ್ಯಾಪಾರ, ವಾಣಿಜ್ಯ ಇತರೇ ಅಭಿವೃದ್ಧಿ ಕಾರ್ಯಗಳ ಬಗೆಗೆ ಕೈಗೊಂಡ ಕ್ರಮಗಳ ಬಗ್ಗೆಯೂ ಅರಿವು ಮೂಡುತ್ತಿತ್ತು. ಹೀಗಾಗಿ ಬರುತ್ತಿದ್ದ ಹೊಸ ಕಲೆಕ್ಟರನು ಯಾವುದೇ ತೊಡಕುಗಳಿಲ್ಲದೆ ಆಯಾ ಪ್ರಾಂತ್ಯವನ್ನು ಸುಲಭವಾಗಿ ಆಳಬಹುದಿತ್ತು. ಈ ಹಿನ್ನೆಲೆಯಲ್ಲಿ ಗ್ಯಾಸೆಟಿಯರ್‌ಗಳ ಹಿಂದಿದ್ದ ರಚನೆಯ ಹಿನ್ನೆಲೆಯ ಆಶಯವನ್ನು ಅರಿಯುವುದಾಗಿದೆ.

ಬ್ರಿಟಿಷ್ ಹಾಗೂ ಪಾಶ್ಚಿಮಾತ್ಯರ ಮೂಸೆಯಿಂದ ಹೊರಹೊಮ್ಮಿದ ಈ ಗ್ಯಾಸೆಟಿಯರ್‌ನ ರಚನೆ ಈ ಹೊತ್ತಿಗೂ ಹಲವು ಬಗೆಯ ಆತ್ಮಕಥನ, ಜೀವನ ಚರಿತ್ರೆ, ವೃತ್ತಾಂತ, ಡೈರಿ, ಕೈಪಿಡಿ ಇತ್ಯಾದಿಗಳ ಹೆಸರಿನಲ್ಲಿ ಮುಂದುವರಿಯುತ್ತಿದೆ. ಇಲ್ಲಿ ಮುಖ್ಯವಾದ ಪ್ರಶ್ನೆ ಎಂದರೆ ಬ್ರಿಟಿಷ್ ವಸಾಹತುಶಾಹಿ ಸಂದರ್ಭದ ಹಾಗೂ

ಅನಂತರದ ಕಾಲಘಟ್ಟದಲ್ಲಿ ರಚನೆಗೊಂಡ ಇಂಥ ಕೃತಿಗಳನ್ನು ಕುರಿತು ವಿಮರ್ಶಾತ್ಮಕ ಅಧ್ಯಯನ ಏಕೆ ನಡೆದಿರುವುದಿಲ್ಲ ಎಂಬುದು. ಹೀಗಾಗಿ ಪ್ರಸ್ತುತ ಅಧ್ಯಯನ ತನ್ನದೇ ಆದ ಮಹತ್ವವನ್ನು ಪಡೆದಿದೆ. ಆದಕಾರಣ ಈ ಗ್ಯಾಸೆಟಿಯರ್‌ಗಳ ಕುರಿತು ಬಿ. ಸುರೇಂದ್ರರಾವ್ ಅವರ 'ಗ್ಯಾಸೆಟಿಯರ್ ಇನ್ ಕಲೋನಿಯಲ್ ಸಬ್ಬಕ್ಟಿಫಿಕೇಶನ್ ಸ್ಪರ್ರೋಕಾಸ್ ಮ್ಯಾನ್ಯುಯಲ್ ಆಫ್ ಸೌತ್‌ಕೆನರಾ' ಹಾಗೂ ಕೆ.ಎಂ. ಲೋಕೇಶ್ ಅವರ 'ವಸಾಹತುಶಾಹಿ ಗ್ಯಾಸೆಟಿಯರ್‌ಗಳಲ್ಲಿ ಉಡುಪಿ ಜಿಲ್ಲೆ' ಎಂಬ ಎರಡು ಲೇಖನಗಳು ದಕ್ಷಿಣ ಕನ್ನಡಕ್ಕೆ ಸಂಬಂಧಿಸಿದಂತೆ ಪ್ರಕಟವಾಗಿವೆ. ಆದರೆ ಇಡೀ ವಸಾಹತುಶಾಹಿ ಕಾಲಘಟ್ಟಕ್ಕೆ ಸಂಬಂಧಿಸಿದಂತೆ, ಯಾವುದೇ ಅಧ್ಯಯನವು ಗ್ಯಾಸೆಟಿಯರ್‌ಗಳ ಕುರಿತಂತೆ ನಡೆದಿಲ್ಲ. ಹೀಗಾಗಿ ಪ್ರಸ್ತುತ ಅಧ್ಯಯನವು ತನ್ನದೇ ಆದ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿದೆ. ಹೀಗಾಗಿ ಇಂಥ ಕೃತಿಗಳಲ್ಲಿ ಅವುಗಳ ಹುಟ್ಟು, ಉದ್ದೇಶ, ಸೈದ್ಧಾಂತಿಕತೆಗಳ ಹಿನ್ನೆಲೆಯನ್ನು ಪರಿಶೀಲಿಸುವುದಾಗಿದೆ. ಅಲ್ಲದೆ ಮಾಹಿತಿ- ವಿವರ ಗಳನ್ನೊಳಗೊಂಡ ಈ ಥರದ ಕೃತಿಗಳು ಚಾರಿತ್ರಿಕವಾಗಿ ಸಂಶೋಧನೆಗೆ ಒಳಪಡುವುದು ಅವಶ್ಯಕವಾಗಿರುತ್ತದೆ.

ಅಂದಿನ ಆರ್ಥಿಕವಾದ ಪ್ರಧಾನ ಆಶಯಕ್ಕೆ ಇನ್ನುಳಿದ ಅಂಶಗಳು ಹೇಗೆ ಪೂರಕವಾಗುತ್ತಾ ಹೋದವು ಎಂಬುದನ್ನು ಪರಿಶೀಲಿಸುವುದು ಅಷ್ಟೇ ಮುಖ್ಯ. ಅಲ್ಲದೆ, ಈ ಗ್ಯಾಸೆಟಿಯರ್‌ಗಳ ಚಿಂತನೆ, ಬರಹ ಯಾವ ಸ್ವರೂಪದಲ್ಲಿ ಅಥವಾ ಆ ಬಗೆಯ ಉಲ್ಲೇಖಿಸಬಹುದಾದವು ಈಗಾಗಲೇ ನಮ್ಮಲ್ಲಿ ಚಾಲ್ತಿಯಲ್ಲಿ ಇದ್ದವೆಂಬುದನ್ನು ಹಿಂದೆ ರಚನೆಗೊಂಡ ವಾಯುಪುರಾಣ, ಅರ್ಥಶಾಸ್ತ್ರ, ಬೃಹತ್‌ಸಂಹಿತೆ, ಮಾನಸೋಲ್ಲಾಸ, ಮೇಘದೂತ, ರಾಜತರಂಗಿಣಿ ಮೊದಲಾದ ದೇಶಿ ಕೃತಿಗಳ ಮೂಲಕ ತಿಳಿಸುವುದಾಗಿದೆ. ಹೀಗಾಗಿ ಗ್ಯಾಸೆಟಿಯರ್ ತರಹದ ಮಾಹಿತಿಗಳು ಹಿಂದಿನ ಕಾಲದ ದೇಶಿ ಕೃತಿಗಳ ರಚನೆಗಳಿಂದ ಸ್ಥೂಲವಾಗಿ ವಿವರಿಸಲಾಗಿದೆ. ಆಂಗ್ಲರಿಂದ ರಚನೆಗೊಂಡ ಗ್ಯಾಸೆಟಿಯರ್‌ಗಳಲ್ಲಿ ಒಳಗೊಂಡಿರುವ ಮಾಹಿತಿಗಳೇನು, ಗ್ಯಾಸೆಟಿಯರ್‌ಗಳ ಅರ್ಥ, ಅವುಗಳ ಉದ್ದೇಶಗಳೇನಾಗಿದ್ದವು ಎಂಬುದನ್ನು ತಿಳಿಯುವುದಾಗಿದೆ. ಗ್ಯಾಸೆಟಿಯರ್‌ಗಳಲ್ಲಿ ವಿವಿಧ ವರ್ಗಗಳಿವೆ. ಮುಖ್ಯವಾಗಿ ದೇಶ, ರಾಜ್ಯ, ಜಿಲ್ಲೆಗಳಿಗೆ ಸಂಬಂಧಿಸಿದಂತೆ ದಾಖಲಿಸಲ್ಪಟ್ಟಿರುತ್ತವೆ. ಅಂದಿನ ಗ್ಯಾಸೆಟಿಯರ್‌ಗಳಲ್ಲಿನ ಮಹತ್ವ ಇತ್ಯಾದಿಗಳ ಕುರಿತು ವಿವರಿಸುವುದು ಮುಖ್ಯವಾಗಿರುತ್ತದೆ. ಅಲ್ಲದೆ ಆಂಗ್ಲರಿಂದ ರಚನೆಗೊಂಡ ನಂತರದಲ್ಲಿ ಅಂದರೆ ಏಕೀಕರಣಗೊಂಡ ನಂತರದಲ್ಲಿ ಕರ್ನಾಟಕದಲ್ಲಿ ಗ್ಯಾಸೆಟಿಯರ್‌ಗಳ ಇಲಾಖೆಯು ಸ್ಥಾಪನೆಗೊಂಡಿದ್ದು ಅಲ್ಲಿ ರಚಿತವಾದ ಗ್ಯಾಸೆಟಿಯರ್‌ಗಳನ್ನು ಸೂಕ್ಷ್ಮವಾಗಿ ಅಧ್ಯಯನಿಸುವುದು ಮುಖ್ಯವಾಗಿರುತ್ತದೆ. ಈ ಎಲ್ಲಾ ಹಿನ್ನೆಲೆಗಳಿಂದ ಪ್ರಸ್ತುತ ಅಧ್ಯಯನವು ತನ್ನದೇ ಆದ ಮಹತ್ವವನ್ನು ಪಡೆದಿದೆ.

**ಅಧ್ಯಯನದ ಸ್ವರೂಪ ಮತ್ತು ಮಿತಿ**

'ವಸಾಹತುಶಾಹಿ ಕಾಲಘಟ್ಟದ ಕನ್ನಡ ಭೂಪ್ರದೇಶಗಳ ಗ್ಯಾಸೆಟಿಯರ್‌ಗಳ ಚಾರಿತ್ರಿಕ ಅಧ್ಯಯನ' ಎಂಬ ಶೀರ್ಷಿಕೆಯ ಪ್ರಸ್ತುತ ಅಧ್ಯಯನವು ಒಟ್ಟು ಏಳು ಅಧ್ಯಾಯಗಳನ್ನು ಒಳಗೊಂಡಿದೆ. ಈ ಅಧ್ಯಯನವು ಗ್ಯಾಸೆಟಿಯರ್‌ಗಳ ರಚನೆ ಮತ್ತು ಅವುಗಳ ಸ್ವರೂಪವನ್ನು ವಿಶ್ಲೇಷಿಸುವಂಥದ್ದು. ಆದ್ದರಿಂದ ಗ್ಯಾಸೆಟಿಯರ್ ಗಳನ್ನಷ್ಟೇ ಅಲ್ಲದೆ ಆ ಬಗೆಯ ಸ್ವರೂಪದ ಎಲ್ಲಾ ಮಾಹಿತಿ ಹಾಗೂ ರಚನೆಗಳನ್ನು ಸಹ ಅಧ್ಯಯನಕ್ಕೆ

ಬಳಸಿಕೊಳ್ಳಲಾಗುತ್ತದೆ. ಈ ನಿಟ್ಟಿನಲ್ಲಿ ಸ್ಥೂಲವಾದ ಕೆಲವು ಅಧ್ಯಾಯಗಳನ್ನು ಅಧ್ಯಯನದ ಸ್ವರೂಪದಲ್ಲಿ ವರ್ಗೀಕರಿಸಿಕೊಳ್ಳಲಾಗಿದೆ.

ಮೊದಲ ಅಧ್ಯಾಯದಲ್ಲಿ, ಈ ಅಧ್ಯಯನದ ಜರೂರು ಯಾವ ಥರದ್ದು ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ. ಅಧ್ಯಯನದಲ್ಲಿನ ಸಮಸ್ಯೆ ಹಾಗೂ ಕುತೂಹಲಗಳಿಗೆ ಉತ್ತರಗಳನ್ನು ಕಂಡುಕೊಳ್ಳುವುದು ಬಹಳ ಮುಖ್ಯವಾದುದು. ಆ ಮೂಲಕ ಅಧ್ಯಯನದ ಸ್ವರೂಪ ಮತ್ತು ಎಲ್ಲೆಗಳನ್ನು ನಿರ್ಧರಿಸಿಕೊಂಡು ಅಭ್ಯಾಸ ಮಾಡಲು ಸಾಧ್ಯ.

ಎರಡನೆಯ ಅಧ್ಯಾಯದಲ್ಲಿ, ವಸಾಹತುಶಾಹಿಗಳಿಂದ ರಚನೆಗೊಂಡ 'ಗ್ಯಾಸೆಟಿಯರ್'ಗಳೇ ಕೇಂದ್ರ ಬಿಂದು ಆಗಿರುತ್ತವೆ. ಈ ಅಧ್ಯಯನಕ್ಕೆ ಚಾರಿತ್ರಿಕ ಹಿನ್ನೆಲೆಯನ್ನು ನೀಡುವುದು ಜರೂರಿನ ಸಂಗತಿ. ಆ ಕಾರಣದಿಂದ ಎರಡನೆಯದರಲ್ಲಿ ಈ ಬಗ್ಗೆ ಗಮನ ಹರಿಸಲಾಗಿದ್ದು, ಒಟ್ಟು ಭಾರತಕ್ಕೆ ಸಂಬಂಧಿಸಿದಂತೆ ಸ್ಥೂಲ ಪರಿಚಯ ನೀಡಿ, ಅನಂತರ ಕರ್ನಾಟಕಕ್ಕೆ ಸಂಬಂಧಿಸಿದಂತೆ ಗ್ಯಾಸೆಟಿಯರ್‌ಗಳ ರಚನೆಯ ಹುಟ್ಟು, ಬೆಳವಣಿಗೆ, ಅರ್ಥ, ವ್ಯಾಖ್ಯಾನಗಳನ್ನು ಕನ್ನಡದ ಛಿದ್ರಗೊಂಡ ಭೂಪ್ರದೇಶಗಳ ಮೂಲಕ ವಿವರಣೆ ನೀಡಿ ವಿಶ್ಲೇಷಿಸುವುದು ಮುಖ್ಯವಾಗಿರುತ್ತದೆ.

ಪ್ರಸ್ತುತ ಅಧ್ಯಯನದ ಬಹಳ ಮುಖ್ಯ ಅನ್ನಿಸಿಕೊಳ್ಳುವ ಅಧ್ಯಾಯಗಳಲ್ಲಿ ಮೂರನೆಯ ಅಧ್ಯಾಯವೂ ಒಂದು. ಇದು ಕನ್ನಡ ಭೂ ಪ್ರದೇಶಗಳಲ್ಲಿ ವಸಾಹತುಗಳ ನೆಲೆಯಾಗಿಸಿಕೊಂಡಿದ್ದ ಮುಂಬಯಿ ಕರ್ನಾಟಕ, ಮೈಸೂರು ಸಂಸ್ಥಾನ, ಹೈದರಾಬಾದ್(ನಿಜಾಂ) ಕರ್ನಾಟಕ, ಮದ್ರಾಸ್(ಬ್ರಿಟಿಷ್) ಕರ್ನಾಟಕ ಹಾಗೂ ಕೊಡಗು ಪ್ರದೇಶಗಳು ಸೇರಿಕೊಂಡಿವೆ. ಈ ಐದು ಪ್ರಾಂತ್ಯಗಳಿಗೆ ಸಂಬಂಧಿಸಿದಂತೆ ರಚನೆಗೊಂಡ ಗ್ಯಾಸೆಟಿಯರ್‌ಗಳ ಮೂಲಕ ಅಂದಿನ ಜನಜೀವನದಲ್ಲಿ ಅಲ್ಲಿನ ಜನಸಂಖ್ಯೆ, ಭಾಷೆ, ಆಹಾರಪದ್ಧತಿ, ಉಡುಗೆ-ತೊಡುಗೆಗಳು, ಧಾರ್ಮಿಕ ಆಚರಣೆ ಇತ್ಯಾದಿಗಳನ್ನು ಒಳಗೊಂಡಿರುವ ಸಂಸ್ಕೃತಿ ವಿಚಾರಗಳನ್ನು ಕುರಿತು ಗ್ಯಾಸೆಟಿಯರ್ ಮೂಲಕ ವಿಶ್ಲೇಷಿಸುವುದು ಹಾಗೂ ದಾಖಲೆಗೊಂಡಿರುವ ವಿಚಾರಗಳನ್ನು ಕುರಿತು ಚರ್ಚಿಸುವ ಪ್ರಯತ್ನ ಮಾಡಲಾಗಿದೆ. ಏಕೆಂದರೆ ವಸಾಹತುಕಾಲೀನ ಐದು ಪ್ರಾಂತ್ಯಗಳು ಸಹ ಮಹತ್ವ ಪಡೆದಂಥವುಗಳಾಗಿದ್ದವು. ಹೀಗಾಗಿ ಗ್ಯಾಸೆಟಿಯರ್‌ಗಳಲ್ಲಿ ಅಂದಿನ ಸಮಾಜವನ್ನು ಹೇಗೆ ದಾಖಲಿಸಲ್ಪಟ್ಟಿದೆ ಎಂಬುದನ್ನು ತಿಳಿಯುವುದು ಅಗತ್ಯವಾದುದು.

ನಾಲ್ಕನೆಯ ಅಧ್ಯಾಯವು ಆಂಗ್ಲ ಅಧಿಕಾರಿಗಳ ಆಡಳಿತವನ್ನು ವಿವರಿಸುತ್ತದೆ. ಅಧಿಕಾರಿಗಳೆಂದರೆ ಕಲೆಕ್ಟರ್‌ಗಳ ಆಡಳಿತವೆನ್ನಬಹುದು. ವಿವಿಧ ರೀತಿಯಲ್ಲಿ ಆಡಳಿತವನ್ನು ವಿಭಜಿಸಿಕೊಂಡು ಆಳ್ವಿಕೆ ನಡೆಸಿರುವುದು ಮುಖ್ಯವಾಗಿರುತ್ತದೆ. ಇಲ್ಲಿನ ಆಡಳಿತ ವರ್ಗದಲ್ಲಿ ಗ್ರಾಮಮಟ್ಟದ ಅಧಿಕಾರಿಗಳಿಂದ ಕಲೆಕ್ಟರ್‌ಗಳವರೆಗಿನ ಅಧಿಕಾರದವರೆವಿಗೂ ವಿಶ್ಲೇಷಿಸಲಾಗಿದೆ. ಇವರ ಆಳ್ವಿಕೆಗೆ ಒಳಪಡುವ ಕಂದಾಯ, ನ್ಯಾಯಾಂಗ, ಸ್ಥಳೀಯ ಸಮಿತಿಗಳ ಆಳ್ವಿಕೆಯ ಕ್ರಮಗಳ ವಿಶ್ಲೇಷಣೆ ಜೊತೆಗೆ ಅವರು ವಿವಿಧ ಹುದ್ದೆಗಳನ್ನು ಸೃಷ್ಟಿಸಿಕೊಂಡು ಆಳ್ವಿಕೆ ನಡೆಸಿದ ರೀತಿ ಅದ್ಭುತವಾದದ್ದು. ಇಲ್ಲಿ ಇವರ ಮುಖ್ಯ ಉದ್ದೇಶ ಆರ್ಥಿಕ ಸಂಪತ್ತನ್ನು

ಕೇಂದ್ರೀಕರಿಸುವುದಾಗಿತ್ತು. ಆ ಹಿನ್ನೆಲೆಯಿಂದ ಕೈಗೊಂಡ ಅಭಿವೃದ್ಧಿ ಯೋಜನೆಗಳನ್ನು ರೈಲ್ವೆರಸ್ತೆ, ಸೇತುವೆಗಳ ನಿರ್ಮಾಣ, ಅಂಚೆ-ತಂತಿ ಇತರ ಕಟ್ಟಡಗಳ ನಿರ್ಮಾಣದ ವಿಶೇಷತೆಗಳನ್ನು ಕುರಿತು ಚರ್ಚಿಸಲಾಗಿದೆ. ಜೊತೆಗೆ ಆಂಗ್ಲರು ಅನೇಕ ರೀತಿಯ ತೆರಿಗೆಗಳನ್ನು ವಿಧಿಸುತ್ತಿದ್ದರು. ಆ ತೆರಿಗೆ ಪದ್ಧತಿಯನ್ನು ಇಲ್ಲಿ ವಿವರಿಸಲಾಗಿದೆ. ಇವರ ಒಟ್ಟು ಆರ್ಥಿಕ ನೀತಿ-ನಿಯಮಗಳೇನೆಂಬುದನ್ನು ತಮ್ಮ ಅಗತ್ಯಗಳಿಗೆ ತಕ್ಕಂತೆ ಕಾಯ್ದೆಕಾನೂನು ಜಾರಿಗೊಳಿಸಿದ ಬಗೆ ಹಾಗೂ ಅದರ ಹಿಂದಿನ ಹುನ್ನಾರಗಳೇನು ಎಂಬುದನ್ನು ಚರ್ಚಿಸಲಾಗಿದೆ.

ಪ್ರಬಂಧದ ಐದನೆಯ ಅಧ್ಯಾಯವು ಸಂಸ್ಕೃತಿಯನ್ನು ಕುರಿತು ವಿವರಿಸುತ್ತದೆ. ಏಕೆಂದರೆ ವಸಾಹತುಕಾಲೀನ ಸಂಸ್ಕೃತಿಗೂ, ಭಾರತೀಯ ಸಂಸ್ಕೃತಿಗೂ ತನ್ನದೇ ಆದ ಭಿನ್ನತೆಗಳನ್ನು ಒಳಗೊಂಡಿದೆ. ನಮ್ಮ ಸಂಸ್ಕೃತಿಯ ನೆಲೆಗಳೇ ಬೇರೆ, ಅವರ ದೃಷ್ಟಿಕೋನದಲ್ಲಿನ ಸಂಸ್ಕೃತಿಯೇ ಬೇರೆಯಾಗಿದೆ. ಹಾಗಾಗಿ ಆಧುನಿಕ ಕಾಲಘಟ್ಟದಲ್ಲಿ 'ಸಂಸ್ಕೃತಿ' ಎಂಬ ಪದವು ವಿಶಾಲಗೊಂಡಿದ್ದು, ಇದು ಎಲ್ಲಾ ಕ್ಷೇತ್ರಗಳೊಂದಿಗೆ ಬೆಸೆದುಕೊಂಡಿರುತ್ತದೆ. ಆ ವಿವಿಧ ಕ್ಷೇತ್ರಗಳಲ್ಲಿ ಸಾಹಿತ್ಯ, ಶಾಸನ, ಜಾನಪದ, ಚಿತ್ರಕಲೆ, ನಾಟಕ, ಛಾಯಾಚಿತ್ರ, ಪತ್ರಿಕೆ ಹೀಗೆ ವಿವಿಧ ಕ್ಷೇತ್ರಗಳಲ್ಲಿ ಆಂಗ್ಲರಿಂದ ಹೊಸ ಸಂಸ್ಕೃತಿಯೊಂದು ಉದಯಿಸಿತ್ತು. ಆ ಸಂಸ್ಕೃತಿಯ ಬಗೆಗಿನ ಚರ್ಚೆಯೇ ಈ ಅಧ್ಯಾಯವಾಗಿದೆ. ಅಲ್ಲದೆ ವಸಾಹತುಶಾಹಿ ಸಂಸ್ಕೃತಿಯ ಪ್ರಭಾವವು ಇಲ್ಲಿನ ಜನರ ಮೇಲೆ ಯಾವ ರೀತಿ ಪ್ರಭಾವ ಬೀರಿತು? ಇದರಿಂದ ಯಾವ ರೀತಿಯ ಪರಿಣಾಮಗಳು ಉಂಟಾದವು? ಎಂಬ ವಿಚಾರಗಳನ್ನು ಕುರಿತು ಸಹ ವಿಶ್ಲೇಷಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಏಕೀಕರಣ ನಂತರದ ಕಾಲಘಟ್ಟದಲ್ಲಿ, ಅಂದರೆ ವಸಾಹತುಶಾಹಿಗಳಿಂದ ಮುಕ್ತವಾದ ನಂತರದ ಅಂಶಗಳನ್ನು ಕುರಿತು ಚರ್ಚಿಸಲಾಗಿದೆ. ಇಲ್ಲಿ ಬ್ರಿಟಿಷರಿಂದ ಆದ ಗ್ಯಾಸೆಟಿಯರ್ ರಚನೆಯ ಮಹತ್ವವನ್ನು ಮನಗಂಡಿದ್ದ ಸರ್ಕಾರ ಅದನ್ನು ತಾನೂ ರಚಿಸಲು ಪ್ರಾರಂಭಿಸಿತು. ಅಂದರೆ ಪ್ರತ್ಯೇಕ ಗ್ಯಾಸೆಟಿಯರ್‌ಗಳ ಇಲಾಖೆಯನ್ನು ಸ್ಥಾಪಿಸುವುದರ ಮೂಲಕ ಗ್ಯಾಸೆಟಿಯರ್ ಕೃತಿಗಳನ್ನು ಇಂದಿನ ಸ್ವರೂಪದಲ್ಲಿ ಪ್ರಕಟಿಸಿರುವುದನ್ನು ಕುರಿತು ಚರ್ಚಿಸಿದೆ. ಅಂದರೆ ಇಲ್ಲಿ ಕರ್ನಾಟಕ ಸರ್ಕಾರದಿಂದ ರಚನೆಗೊಂಡಿರುವ ಎಲ್ಲಾ ಗ್ಯಾಸೆಟಿಯರ್‌ಗಳನ್ನು ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸುವುದು ಹಾಗೂ ಇಲಾಖೆಯ ಮಹತ್ವವನ್ನು ಹೇಳುವುದು ಮುಖ್ಯ.

ಕೊನೆಯ ಅಥವಾ ಏಳನೆಯ ಅಧ್ಯಾಯವು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾದ ಅಥವಾ ತಳೆದ ನಿಲುವುಗಳಿಗೆ ಸಂಬಂಧಿಸಿದೆ. ಇಲ್ಲಿ 'ವಸಾಹತುಶಾಹಿ-ಗ್ಯಾಸೆಟಿಯರ್' ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಅಭಿವ್ಯಕ್ತಗೊಂಡಿರುವ ತಾತ್ವಿಕತೆಯನ್ನು ಗುರುತಿಸುವ ಪ್ರಯತ್ನ ಇದೆ. ಅಂದರೆ ವಸಾಹತುಶಾಹಿಗಳಿಂದ ರಚನೆಗೊಂಡ ಗ್ಯಾಸೆಟಿಯರ್‌ಗಳ ಚಾರಿತ್ರಿಕ ಚಿಂತನೆಗಳನ್ನು ಕಟ್ಟಿಕೊಡುವ ಒಟ್ಟು ಆಶಯಗಳು ಯಾವ ರೀತಿಯವು ಎಂಬುದನ್ನು ಇಲ್ಲಿ ಪ್ರಾದೇಶಿಕ, ಸಾಮಾಜಿಕ, ಆರ್ಥಿಕ, ಭಾವನಾತ್ಮಕ, ಸಾಂಸ್ಕೃತಿಕ ವಿಚಾರಗಳು ತಳೆದ ನಿಲುವುಗಳಾಗಿ ಹೊರಬಂದಿವೆ. ಉಳಿದಂತೆ ನಕಾಶೆಗಳು, ಆಕರ, ಪೂರಕ ಗ್ರಂಥಗಳನ್ನು ಒಳಗೊಂಡಿರುವ ಭಾಗಗಳು.

ಅಧ್ಯಯನದ ಮಿತಿಗಳಿಗೆ ಸಂಬಂಧಿಸಿದಂತೆ ಒಂದೆರಡು ಮಾತುಗಳನ್ನು ಹೇಳಬೇಕಾದ ಅನಿವಾರ್ಯತೆ ಇದೆ. ಏಕೆಂದರೆ ಯಾವುದೇ ಸಂಶೋಧನೆ, ಅಧ್ಯಯನಗಳು 'ಅಂತಿಮ' ಅಲ್ಲವೆಂಬ ನಿಲುವು ಈ ಅಧ್ಯಯನದ್ದು. ಹಿಂದಿನ ಅಧ್ಯಯನ-ಅಭ್ಯಾಸಗಳಿಗೆ ಕೆಲವು ಹೊಸ ವಿಚಾರ, ಒಳನೋಟಗಳನ್ನು ಸೇರಿಸುವುದರ ಮೂಲಕ ಅಧ್ಯಯನದ ವಿಷಯ ವ್ಯಾಪ್ತಿಯನ್ನು ವಿಸ್ತರಿಸಿ ಹೇಳಲು ಪ್ರಯತ್ನಿಸಲಾಗಿದೆ. ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಕಾಲಘಟ್ಟದ ವ್ಯಾಪ್ತಿಯನ್ನು ಕ್ರಿ.ಶ. ೧೮೦೦ರ ದಶಕದಿಂದ ೧೯೫೦ರವರೆಗೆ ಎಂದು ಗುರುತಿಸಿಕೊಳ್ಳಲಾಗಿದೆ. ಅಂದರೆ ಈ ಅಧ್ಯಯನವು ಅಂದಿನ ಕನ್ನಡದ ಐದು ಆಡಳಿತ ಘಟಕಗಳ ಪ್ರಾಂತ್ಯಗಳಿಗೆ ಸೀಮಿತವಾದದ್ದು. ಕನ್ನಡ ಭೂಪ್ರದೇಶಗಳು ಆಂಗ್ಲರ ಆಡಳಿತಕ್ಕೆ ಒಳಪಟ್ಟ ಅನಂತರ ಯಾವ ಬಗೆಯದಾಗಿತ್ತು ಎಂಬುದನ್ನು ಆಂಗ್ಲರಿಂದಲೇ ರಚನೆಗೊಂಡ ಗ್ಯಾಸೆಟಿಯರ್‌ಗಳಿಂದ ಚರ್ಚಿಸುವುದು ಇಲ್ಲಿನ ಮುಖ್ಯವಾದ ಪರಿಧಿಗಳನ್ನು ಸ್ಪಷ್ಟಪಡಿಸುತ್ತದೆ. ಅಂದರೆ ವಸಾಹತುಶಾಹಿ ಕಾಲಘಟ್ಟದ ಎಲ್ಲ ಬಗೆಯ ಗ್ಯಾಸೆಟಿಯರ್‌ಗಳ ರಚನೆಯನ್ನು ಕುರಿತು ಅಧ್ಯಯನ ಮಾಡುವ ಪರಿಮಿತಿಗೆ ಒಳಪಟ್ಟಿದೆ. ಈ ಅವಧಿಯಲ್ಲಿನ ಚಾರಿತ್ರಿಕ ದಾಖಲೆಗಳ ಜೊತೆಗೆ ಇತರ ಪ್ರಕಾರದವುಗಳನ್ನು ಸಹ ವಸಾಹತುಶಾಹಿ ಪ್ರತಿಕ್ರಿಯೆಗೆ ಮುಖ್ಯ ಆಕರಗಳನ್ನಾಗಿಸಿ ಕೊಳ್ಳಲಾಗಿದೆ. ವಸಾಹತು ಮತ್ತು ಆಧುನಿಕ ಚಿಂತನೆಗಳ ಪ್ರಭಾವಗಳು ಈ ಅಧ್ಯಯನದ ವ್ಯಾಪ್ತಿಗೆ ಬರುತ್ತವೆ. ಜೊತೆಗೆ ೧೯೫೮ರಲ್ಲಿ(ಸ್ವಾತಂತ್ರ್ಯದ ನಂತರ) ಗ್ಯಾಸೆಟಿಯರ್ ಇಲಾಖೆ ಸ್ಥಾಪನೆಗೊಂಡಿದ್ದು, ಇಲಾಖೆಗಳಿಂದ ರಚನೆಗೊಂಡ ಅಂದು-ಇಂದಿನ ಗ್ಯಾಸೆಟಿಯರ್‌ಗಳನ್ನು ಕುರಿತು ಸೂಕ್ಷ್ಮವಾಗಿ ವಿಶ್ಲೇಷಿಸಲಾಗಿದೆ.

ಹೀಗಾಗಿ ವಸಾಹತುಶಾಹಿಗಳಿಂದ ರಚನೆಗೊಂಡ ಗ್ಯಾಸೆಟಿಯರ್ ಆಂಗ್ಲರ ಆಶಯಕ್ಕೆ ಸ್ಪಂದಿಸಿದಷ್ಟು ಇನ್ನುಳಿದ ಪ್ರಕಾರಗಳು ಪ್ರತಿಕ್ರಿಯಿಸುವುದಿಲ್ಲ. ಆದ್ದರಿಂದ ವಸಾಹತುಶಾಹಿ ಕಾಲಘಟ್ಟದಲ್ಲಿ ಆಂಗ್ಲರಿಂದ ರಚನೆಗೊಂಡ ದೇಶಕೋಶಗಳಿಗೆ ಹೆಚ್ಚಿನ ಒತ್ತು ನೀಡಲಾಗಿದೆ. ಈ ಗ್ಯಾಸೆಟಿಯರ್‌ಗಳಲ್ಲಿ ದಾಖಲೆಗೊಂಡ ವಿಷಯಗಳಲ್ಲಿ ಎಲ್ಲಾ ವಿಚಾರಗಳಿಗೂ ಸ್ಪಂದಿಸಲು ಹೋಗಿಲ್ಲ. ಸಾಮಾಜಿಕತೆ, ಆರ್ಥಿಕತೆ, ಆಡಳಿತಾತ್ಮಕ ಅಭಿವೃದ್ಧಿ, ಸಾಂಸ್ಕೃತಿಕ ವಿಚಾರಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ವಿಭಿನ್ನ ಪ್ರದೇಶಗಳಾಗಿ ಛಿದ್ರಗೊಂಡ ಕನ್ನಡ ಪ್ರದೇಶಗಳನ್ನು ಒಟ್ಟಿಗೆ ಕಟ್ಟಿಕೊಡುವ ಪ್ರಯತ್ನವೂ ನಡೆದಿದೆ.

ಈ ಹಿನ್ನೆಲೆಯಲ್ಲಿ 'ಗ್ಯಾಸೆಟಿಯರ್'ಗಳ ವಿಶ್ಲೇಷಣೆಯೂ, ಆಂಗ್ಲ ಅಧಿಕಾರಿಗಳಿಗೆ ಪರೋಕ್ಷವಾಗಿ ಸ್ಪಂದಿಸಿದ ಬಗೆಯಾಗಿದೆ. ನೇರವಾಗಿ ಗ್ಯಾಸೆಟಿಯರ್‌ಗಳ ಸೀಮಿತ ಆಕರ ಗ್ರಂಥಗಳಿಂದಲೇ ಈ ಅಧ್ಯಯನದಲ್ಲಿ ವಸಾಹತುಶಾಹಿ ತಾತ್ವಿಕ ನೆಲೆಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಈ ಅಧ್ಯಯನದಲ್ಲಿನ ವಿಶ್ಲೇಷಣೆ ತಾತ್ವಿಕ ನೆಲೆಗಟ್ಟಿನ ಚರ್ಚೆಗಳಿಗೆ ಹೆಚ್ಚು ಒತ್ತು ಕೊಡಲಾಗಿದೆಯಾದ್ದ ರಿಂದ ವಸಾಹತುಶಾಹಿ ಕಾಲಘಟ್ಟದ ಛಿದ್ರಗೊಂಡ ನೆಲೆಗಳ ಚಿಂತನೆಯ ವಿಭಿನ್ನ ನೆಲೆಗಳನ್ನು ವಿಶ್ಲೇಷಿಸಿ ತಾತ್ವಿಕವಾಗಿ ಒಂದು ಚೌಕಟ್ಟನ್ನು ನೀಡುವುದು ಅಧ್ಯಯನದ ಮಿತಿಗೆ ಒಳಪಟ್ಟಿದೆ. ಪ್ರಸ್ತುತ ಅಧ್ಯಯನವು ಸಾಮಾಜಿಕತೆ, ಆರ್ಥಿಕ ಸ್ಥಿತಿಗಳು, ಅಭಿವೃದ್ಧಿಕಾರ್ಯಗಳು ಹೀಗೆ ವಸಾಹತುಶಾಹಿ ಸಂದರ್ಭದಲ್ಲಿನ ಸಂಕೀರ್ಣ ಸಂಬಂಧಗಳ ಹಿನ್ನೆಲೆಯಲ್ಲಿ ಹಾಗೂ ವ್ಯಾಪ್ತಿಯನ್ನು ಆಂಗ್ಲರ ಸಾಂಸ್ಕೃತಿಕ ವಿಚಾರಗಳನ್ನು ಅರಿಯುವುದಾಗಿದೆ.

## ಅಧ್ಯಯನದ ವಿಧಿ-ವಿಧಾನಗಳು

'ವಸಾಹತುಶಾಹಿ ಕಾಲಘಟ್ಟದ ಕನ್ನಡ ಭೂಪ್ರದೇಶಗಳ ಗ್ಯಾಸೆಟಿಯರ್‌ಗಳ ಚಾರಿತ್ರಿಕ ಅಧ್ಯಯನ' ಎಂಬ ಶೀರ್ಷಿಕೆಯೇ ಹೇಳುವಂತೆ ಇದೊಂದು ಚಾರಿತ್ರಿಕ ಅಧ್ಯಯನವಾಗಿದೆ.

ಭಾರತದ ಇನ್ನಿತರ ಪ್ರದೇಶಗಳ ಗ್ಯಾಸೆಟಿಯರ್‌ಗಳನ್ನು ಕುರಿತಂತೆ ಈಗಾಗಲೇ ಪ್ರಕಟಿತ ಕೃತಿಗಳು ಮತ್ತು ಲೇಖನಗಳು ವಸಾಹತುಕಾಲೀನ ಆಂಗ್ಲರ ನೀತಿಯನ್ನು ಅರ್ಥೈಸಿಕೊಳ್ಳುವುದಕ್ಕೆ ನೆರವಾಗುತ್ತವೆ. ಬ್ರಿಟಿಷ್ ಆಡಳಿತಗಾರರ ಬರಹಗಳು ಪೂರ್ವಾಗ್ರಹಪೀಡಿತವಾಗಿದ್ದು ಅವುಗಳನ್ನು ಎಚ್ಚರಿಕೆಯಿಂದ ಅಧ್ಯಯನ ನಡೆಸಬೇಕಾಗುತ್ತದೆ. ಅದೇ ರೀತಿ ಸ್ಥಳೀಯ ಆಕರಗಳಲ್ಲಿನ ವೈಭವೀಕೃತ ನಿರೂಪಣೆಗಳನ್ನು ಕೈಬಿಡ ಬೇಕಾಗುತ್ತದೆ. ಈ ಎಲ್ಲಾ ಎಚ್ಚರಿಕೆಯೊಂದಿಗೆ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಈ ಅಧ್ಯಯನವು ಚರಿತ್ರೆಯ ಎಲ್ಲ ಬಗೆಯ ವಿಧಿ-ವಿಧಾನಗಳನ್ನು ಬಳಸಿಕೊಂಡಿದೆ. ಮಾಹಿತಿಗಳ ಸಂಗ್ರಹ, ಜೋಡಣೆ ಹಾಗೂ ವಿಶ್ಲೇಷಣೆ ಮಾಡುವಾಗ ಚರಿತ್ರೆಯ ವಿಧಾನಗಳ ಹಿನ್ನೆಲೆಯಲ್ಲಿಯೇ ನೋಡಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಬೇಕಾದ ದಾಖಲೆಗಳು ಹಾಗೂ ಆಕರ ಸಾಮಗ್ರಿಗಳನ್ನು ಸರ್ಕಾರಿ ರಾಜ್ಯ ಪತ್ರಾಗಾರ, ಗ್ಯಾಸೆಟಿಯರ್ ಇಲಾಖೆ, ಗ್ರಂಥಾಲಯಗಳು, ಸರ್ಕಾರಿ ಹಾಗೂ ಖಾಸಗಿ ಸಂಗ್ರಹಾಲಯ ಗಳಲ್ಲಿ ಹೊಂದಿಸಿಕೊಳ್ಳಲಾಗಿದೆ. ಸಂಗ್ರಹಿಸಿದ ಮಾಹಿತಿಗಳನ್ನು ವೈಜ್ಞಾನಿಕವಾಗಿ ವರ್ಗೀಕರಿಸಿಕೊಂಡು, ವಿಮರ್ಶಿಸಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ.

ಅಧ್ಯಾಯ ಎರಡು

# ವಸಾಹತುಶಾಹಿ ಸನ್ನಿವೇಶ ಮತ್ತು ಗ್ಯಾಸೆಟಿಯರ್ ರಚನೆಯ ಆಶಯ

# ವಸಾಹತುಶಾಹಿ ಸನ್ನಿವೇಶ ಮತ್ತು ಗ್ಯಾಸೆಟಿಯರ್ ರಚನೆಯ ಆಶಯ

## ೨.೧. ಚಾರಿತ್ರಿಕ ಹಿನ್ನೆಲೆ

ಜಗತ್ತಿನ ಅನೇಕ ದೇಶಗಳು ಬ್ರಿಟಿಷ್ ಸಾಮ್ರಾಜ್ಯಶಾಹಿ ಆಡಳಿತಕ್ಕೆ ಒಳಪಟ್ಟಿದ್ದುದು ಈ ಹೊತ್ತಿಗೆ ಚರಿತ್ರೆಗೆ ಸೇರಿ ಹೋಗಿರುವ ಸಂಗತಿ. ಹೀಗೆ ಆಳ್ವಿಕೆಗೊಳಗಾದ ಪ್ರದೇಶಗಳು 'ವಸಾಹತು'ಗಳಾಗಿ ತಮ್ಮನ್ನು ತಾವು ಬರಿದು ಮಾಡಿಕೊಂಡಿವೆ. ಅಂಥ ದೇಶಗಳಲ್ಲಿ 'ಭಾರತ'ಸಹ ಒಂದು,[೧] ವಸಾಹತುಶಾಹಿ ಪ್ರಭುತ್ವ (Colonialism) ಎಂದರೆ ಯಾವುದೇ ಒಂದು ದೇಶ ತನ್ನ ಕೈಕೆಳಗೆ ಒಂದು ಅಥವಾ ಹಲವಾರು ದೇಶದ ಜನರು ಮತ್ತು ಭೂಪ್ರದೇಶವನ್ನು ತನ್ನ ಆಧೀನ ಆಳ್ವಿಕೆಗೆ ಒಳಪಡಿಸುವುದಾಗಿದೆ. ಅಂದರೆ, ಒಂದು ಸಮಾಜದ ಮೇಲೆ ಮತ್ತೊಂದು ಸಮಾಜವು ನಿಯಂತ್ರಣವನ್ನು ಹೇರುವುದಕ್ಕೆ 'ವಸಾಹತುಶಾಹಿ' ಎನ್ನುವರು.[೨] ಈ ವಸಾಹತುಶಾಹಿ ಎಂಬುದನ್ನು ಮುಖ್ಯವಾಗಿ ಗಮನಿಸುವುದಾದರೆ ಹೊರ ಮತ್ತು ಒಳಗಿನ ಕಾರಣಗಳಿಂದ ಏರ್ಪಡುವ ದಮನಾವಸ್ಥೆ ಯಾವುದೇ ರೀತಿಯ ದಬ್ಬಾಳಿಕೆಯ, ಶೋಷಕ, ಸಂಚುಗಾರಿಕೆಯ ವ್ಯವಸ್ಥೆಯನ್ನು 'ವಸಾಹತುಶಾಹಿ' ಸಂಸ್ಕೃತಿಯೆಂದು ತಿಳಿಯಬಹುದು. ರಾಷ್ಟ್ರ-ರಾಷ್ಟ್ರಗಳ, ವರ್ಣ-ವರ್ಗಗಳ, ದೇಶ-ಭಾಷೆಗಳ ಗಂಡು-ಹೆಣ್ಣುಗಳ ಮಟ್ಟದಲ್ಲಿ ಏರ್ಪಡುವ ಕ್ರೌರ್ಯ ಶೋಕಿತಾವಸ್ಥೆ, ಧಾರ್ಮಿಕ, ಆರ್ಥಿಕ, ಬಲತ್ಕಾರವನ್ನು ವಸಾಹತುಶಾಹಿ ಸಂಸ್ಕೃತಿಯೆಂದು ಗುರುತಿಸಿಕೊಳ್ಳಬಹುದಾಗಿದೆ.[೩] ವಸಾಹತುಶಾಹಿ ಎಂಬ ಪದವು 'ವಸ್' ಎಂಬ ಧಾತುವಿನಿಂದ ಬಂದಿದೆ. ಇದನ್ನು Englishನಲ್ಲಿ Dowell ಎಂದು ಕರೆಯುತ್ತಾರೆ. 'ಶಾಹಿ' ಎಂಬುದು ಪಾರ್ಸಿ ಶಬ್ದವಾಗಿದ್ದು ಕನ್ನಡದಲ್ಲಿ 'ಅಧಿಕಾರವನ್ನುಳ್ಳವರು' ಎಂಬ ಅರ್ಥವನ್ನು ನೀಡುತ್ತದೆ.[೪]

ಡಿ.ಆರ್. ನಾಗರಾಜರ ಮಾತುಗಳಲ್ಲಿ ಹೇಳುವುದಾದರೆ "ಚರಿತ್ರೆಯಲ್ಲಿ ಮುಂದುವರಿದ ಸಮಾಜಗಳು, ಶಕ್ತಿಗಳು ಹಿಂದುಳಿದಿರುವ ಸಮಾಜವನ್ನು ಆಕ್ರಮಿಸುವ ಪ್ರಕ್ರಿಯೆಯೆ ವಸಾಹತುಶಾಹಿ" ಎನ್ನಲಾಗುತ್ತದೆ. ಈ ವಸಾಹತುಶಾಹಿಯ ಆಕ್ರಮಣವು ಇಬ್ಬಗೆಯದು, ಅಂದರೆ ಭೌತಿಕ ಹಾಗೂ ಮಾನಸಿಕ ಎರಡೂ ನೆಲೆಗಳಲ್ಲಿ

ಇದು ನಡೆಯುತ್ತದೆ.[೫] ಒಟ್ಟಾರೆಯಾಗಿ ವಸಾಹತುಶಾಹಿ ಎಂದರೆ ನಮ್ಮ ದೇಶದಲ್ಲಿ ವಾಸಕ್ಕಾಗಿ ಬಂದವರು ಕೇವಲ ವಾಸಿಸದೇ ಅಧಿಕಾರವನ್ನು ಚಲಾಯಿಸಲು ಮುಂದಾದರು ಎಂಬುದನ್ನು ಸೂಚಿಸುತ್ತದೆ. ವಸಾಹತುಶಾಹಿ ಆಳ್ವಿಕೆಗೆ ಒಳಪಡಿಸಿಕೊಂಡ ರಾಷ್ಟ್ರಗಳೆಂದರೆ ಆಗ್ನೇಯ ಏಷ್ಯಾದ ಎಲ್ಲಾ ರಾಷ್ಟ್ರಗಳಲ್ಲಿ ಪೋರ್ಚುಗೀಸರು, ಸ್ಪ್ಯಾನಿಯರ್ಡ್ಸ್, ಫ್ರೆಂಚ್, ಡಚ್ ಮತ್ತು ಇಂಗ್ಲಿಷ್ ರಾಷ್ಟ್ರಗಳು. ವಸಾಹತುಶಾಹಿಗೆ ಒಳಪಟ್ಟ ರಾಷ್ಟ್ರಗಳೆಂದರ ಇಂಡೋನೇಷಿಯಾ ಇಂಡೋಚೈನಾ, ದಕ್ಷಿಣ ಅಮೆರಿಕಾ, ಕ್ಯೂಬಾ, ಸ್ಪೇನ್, ಭಾರತ ಹಾಗೂ ಇತರೆ ರಾಷ್ಟ್ರಗಳಾಗಿವೆ.[೬]

ಒಳ್ಳೆಯ ನಿರ್ವಹಣೆ ಮತ್ತು ವ್ಯಾವಹಾರಿಕ ಜಾಣತನದಿಂದ ಬ್ರಿಟಿಷರು ಬಹಳಷ್ಟು ಪ್ರದೇಶವನ್ನು ತಮ್ಮ ನೇರ ನಿಯಂತ್ರಣದಲ್ಲಿರಿಸಿಕೊಂಡರೂ, ವಸಾಹತು ಪ್ರದೇಶದಲ್ಲಿ ರಾಜಕೀಯ ನಿಯಂತ್ರಣ ಮತ್ತು ಆರ್ಥಿಕ ಪ್ರಯೋಜನಗಳ ಪೂರ್ಣಸ್ವಾಮ್ಯ ಪಡೆಯಲು ಅವರಿಗೆ ಸಾಧ್ಯವಾಗಿದ್ದಕ್ಕೆ 'ಭಾರತ' ಒಂದು ಉತ್ತಮ ಉದಾಹರಣೆ ಎನ್ನಲಾಗುತ್ತದೆ.[೭] ಈ ಮುಖೇನವಾಗಿ ಭಾರತವನ್ನು ಯುರೋಪಿಯನ್ನರು ಹೇಗೆ ವಸಾಹತುಶಾಹಿ ದೇಶವಾಗಿ ಪರಿವರ್ತಿಸಿದರು ಎಂಬುದನ್ನು ಚರ್ಚಿಸುವುದು ಮುಖ್ಯಸಂಗತಿಯಾಗಿದೆ.

ವ್ಯಾಪಾರ ವಾಣಿಜ್ಯದ ಆಶಯಗಳಿಂದ ಅನೇಕ ಯುರೋಪಿಯನ್ನರು ಭಾರತಕ್ಕೆ ಆಗಮಿಸಿದರು ಪ್ರಾರಂಭದಲ್ಲಿ ಯುರೋಪಿಯನ್ನರು ತುರ್ಕಿಯ ಮೂಲಕ ವ್ಯಾಪಾರ ಮಾಡುತ್ತಿದ್ದರು.[೮] ಅಂದರೆ ಭಾರತದಿಂದ ಸರಕು ಸಾಗಣೆ ಮಾರ್ಗಗಳೆಲ್ಲ ತುರ್ಕಿ ಸಾಮ್ರಾಜ್ಯದ ಆಧೀನದಲ್ಲಿದ್ದವು. ತುರ್ಕಿಯು ಪಶ್ಚಿಮ ತೀರದ ಬಂದರುಗಳ ಮೂಲಕ ಮಾತ್ರ ಈ ವ್ಯಾಪಾರ ಸಾಗುತ್ತಿದ್ದು ಆ ದೇಶವು ಈ ವಿಚಾರದಲ್ಲಿ ಏಕಾಧಿಪತ್ಯ ಪಡೆದಿತ್ತು. ಜೊತೆಗೆ ನಾಲ್ಕು ಶತಮಾನಗಳ ಹೋರಾಟ ನಡೆಸಿಯೂ ತುರ್ಕಿಯ ಬಲವನ್ನು ಕುಂದಿಸುವ ಪ್ರಯತ್ನಗಳಲ್ಲಿ ಯುರೋಪಿಯನ್ ದೇಶಗಳು ವಿಫಲಗೊಂಡಿದ್ದವು. ೧೫ನೇ ಶತಮಾನದ ಮಧ್ಯಭಾಗದಲ್ಲಿ ತುರ್ಕಿಯ ವ್ಯಾಪಾರ ಮಾರ್ಗಗಳ ಏಕಾಧಿಪತ್ಯ ಮತ್ತು ರಾಜಕೀಯ ಬಲಗಳನ್ನು ಮುರಿಯುವ ಉದ್ದೇಶದಿಂದ ಪೋರ್ಚುಗಲ್ ಕೆಲ ಕ್ರಮಗಳನ್ನು ಕೈಗೊಂಡಿತು.

ಭಾರತಕ್ಕೆ ಜಲಮಾರ್ಗವನ್ನು ಕಂಡುಹಿಡಿದರೆ ಈ ಎರಡು ಗುರಿಗಳು ಕೈಗೂಡುತ್ತವೆ ಎಂದು ಮನಗಂಡ ಪೋರ್ಚುಗಲ್ಲಿನ ರಾಜಕುಮಾರ 'ಹೆನ್ರಿ-ಹೆನ್ರಿ ದಿ ನ್ಯಾವಿಗೇಟರ್' ಎಂದು ಹೆಸರಾಗಿದ್ದಾನೆ, ಅವನು ಲಿಸ್ಬನ್ ನಗರದಲ್ಲಿ ಅಂದಿನ ಯುರೋಪಿನ ತಜ್ಞನಾವಿಕ, ಹಡಗು ಕಟ್ಟುವವರು, ಭೂಗೋಳಶಾಸ್ತ್ರಜ್ಞರು, ನಕ್ಷಾಕಾರರು ಮುಂತಾದವರನ್ನೆಲ್ಲ ಕಲೆ ಹಾಕಿ ಒಂದು ನೌಕಾಯಾನ ಸಂಸ್ಥೆಯನ್ನು ಸ್ಥಾಪಿಸಿದ. ಪ್ರತಿವರ್ಷವೂ ಸೂಕ್ತ ಕಾಲದಲ್ಲಿ ಲಿಸ್ಬನ್ನಿನಿಂದ ಹಡಗುಗಳು ಸಜ್ಜಾಗಿ ಆಫ್ರಿಕಾ ಖಂಡದ ಪಶ್ಚಿಮ ತೀರವನ್ನು ಹಿಡಿದು ದಕ್ಷಿಣದತ್ತ ಹೊರಡುತ್ತಿದ್ದವು. ಮೂರು ದಶಕಗಳ ಕಾಲದ ಈ ನಿರಂತರ ಪ್ರಯತ್ನಗಳಿಂದ ಸಮುದ್ರಯಾನವನ್ನು ಕುರಿತು ಅಪಾರ ಪ್ರಮಾಣದ ಮಾಹಿತಿಗಳು ಸಂಗ್ರಹವಾದವು.

ಇಂತಹ ಒಂದು ಯಾನದಲ್ಲಿ ಬಾರ್ತಲೋಮಿಯ ಡಯಾಜ್ ೧೪೮೭ರಲ್ಲಿ 'ಗುಡ್‌ಹೋಪ್' ಭೂಶಿರವನ್ನು ಸುತ್ತಿ ಹಿಂದೂ ಮಹಾಸಾಗರಕ್ಕೆ ಪ್ರವೇಶಿಸಿದ. ಹೆನ್ರಿ ಇಪ್ಪತ್ತು ವರ್ಷಗಳ ಹಿಂದೆಯೇ ತೀರಿ

ಹೋಗಿದ್ದನಾದರೂ ಅವನ ಕನಸು ಹೀಗೆ ಕೈಗೂಡಿತು. ಡಯಾಜ್‌ನ ತಂಡದಲ್ಲಿದ್ದವರಲ್ಲಿ ಒಬ್ಬನಾದ ವಾಸ್ಕೋಡಗಾಮ ೧೪೯೮ರಲ್ಲಿ ಕಲ್ಲಿಕೋಟೆ ಬಂದರಿನಲ್ಲಿ ಲಂಗರು ಹಾಕಿದ. ಈ ಮೂಲಕವಾಗಿ ಯುರೋಪಿಯನ್ನರಿಗೆ ಭಾರತ ಹಾಗೂ ಪೂರ್ವದೇಶಗಳ ಹೆದ್ದಾರಿ ತೆರೆದಿಟ್ಟಂತಾಯಿತು.[೯] ಅನಂತರ ಪೂರ್ವ ಮತ್ತು ಪಶ್ಚಿಮ ದೇಶಗಳ ನಡುವೆ ಹೆಚ್ಚಿನ ಸಂಪರ್ಕವೇರ್ಪಟ್ಟಿತು, ಯುರೋಪಿನ ಜನ ಪೂರ್ವದೇಶದೊಡನೆ ವ್ಯಾಪಾರ ಮಾಡಲಾರಂಭಿಸಿದರು. ಎರಡು ದೇಶಗಳ ನಡುವೆ ಹಾಯಿದೋಣಿಗಳಲ್ಲಿ ಸುದೀರ್ಘ ಸಮುದ್ರಯಾನ ಮಾಡುವುದು, ಒಬ್ಬೊಬ್ಬ ವರ್ತಕರೇ ವ್ಯಾಪಾರ ನಡೆಸುವುದು ದುಸ್ಸಾಧ್ಯವಾಗಿತ್ತು. ಆದ್ದರಿಂದ ಆಯಾದೇಶಗಳ ಕೆಲವು ವರ್ತಕರು ಒಟ್ಟಾಗಿ ಸೇರಿ ವ್ಯಾಪಾರ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ವ್ಯಾಪಾರ ನಡೆಸುವ ನಿರ್ಧಾರಕ್ಕೆ ಬಂದರು. ಇದಕ್ಕೆ ಅವರ ಸರಕಾರಗಳ ಒಪ್ಪಿಗೆಯೂ ದೊರೆಯಿತು. ಈ ಸಂಸ್ಥೆಗಳಿಗೆ 'ಈಸ್ಟ್ ಇಂಡಿಯಾ ಕಂಪನಿ' ಎಂದು ಹೆಸರು. ಫ್ರೆಂಚರು, ಡಚ್ಚರು, ಇಂಗ್ಲಿಷರು ಇವರೆಲ್ಲರೂ ವ್ಯಾಪಾರ ಸಂಸ್ಥೆಗಳನ್ನು ಭಾರತದಲ್ಲಿ ಸ್ಥಾಪಿಸಿಕೊಂಡರು.[೧೦]

ಹದಿನಾರನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದವರೆಗೆ ಪಶ್ಚಿಮದೇಶಗಳ ವ್ಯಾಪಾರವೆಲ್ಲ ಈ ಸಂಸ್ಥೆಗಳ ಕೈಯಲ್ಲಿತ್ತು. ೧೫೮೭ರಲ್ಲಿ ದೂರ ಪ್ರದೇಶಗಳ ವ್ಯಾಪಾರಕ್ಕಾಗಿ ಪ್ರಾರಂಭವಾದ ಡಚ್ ವ್ಯಾಪಾರ ಸಂಸ್ಥೆ ೧೬೦೨ರಲ್ಲಿ ನೆದರ್‌ಲೆಂಡ್ಸ್ ಸರಕಾರದಿಂದ ಒಂದು ಸನ್ನದನ್ನು ಪಡೆದು ಇಂಡಿಯಾ ಮತ್ತು ಈಸ್ಟ್ ಇಂಡೀಸ್ ದ್ವೀಪಗಳೊಡನೆ ವ್ಯಾಪಾರ ಆರಂಭಿಸಿತು. ಇಪ್ಪತ್ತೊಂದು ವರ್ಷಗಳ ಕಾಲ ಪ್ರತಿಸ್ಪರ್ಧಿಯೇ ಇಲ್ಲದೆ ಸಂಸ್ಥೆಯು ಬಹಳ ಅಭಿವೃದ್ಧಿಗೆ ಬಂದಿತು, ಭದ್ರತೆಗಾಗಿ ತಕ್ಕಷ್ಟು ಸೇನಾಬಲವನ್ನು ಪಡೆದಿದ್ದ ಈ ಕಂಪನಿ ಹಲವು ದೇಶಗಳಲ್ಲಿ ಕಾಲೂರಿ ೧೬೬೩ರಲ್ಲಿ ಮಲಬಾರ್ ಪ್ರದೇಶದ ಮುಖ್ಯ ಪೋರ್ಚುಗೀಸ್ ವಸಾಹತುಗಳನ್ನು ಅಧೀನಪಡಿಸಿಕೊಂಡಿತು. ಕಂಪನಿ ಹೊಂದಿದ್ದ ಅಧಿಕಾರವನ್ನೆಲ್ಲ ೧೭೮೧ರಲ್ಲಿ ಡಚ್ ಸರಕಾರ ವಹಿಸಿಕೊಂಡಿತು.[೧೧]

'ಡಚ್ ಈಸ್ಟ್ ಇಂಡಿಯಾ ಕಂಪನಿ'ಯಿಂದ ಸ್ಫೂರ್ತಿಗೊಂಡ ಇಂಗ್ಲಿಷರು ೧೬೦೦ರಲ್ಲಿ ಒಂದು ವ್ಯಾಪಾರ ಸಂಸ್ಥೆಯನ್ನು ಆರಂಭಿಸಿದರು. ಅದಕ್ಕೆ 'ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ' ಎಂದು ನಾಮಕರಣ ಮಾಡಿದರು. ಈ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಗೆ ಪೌರ್ವಾತ್ಯ ದೇಶಗಳೊಂದಿಗೆ ವ್ಯವಹರಿಸಲು ಒಂದು ಸನ್ನದಿನ ಅವಶ್ಯಕತೆ ಇತ್ತು. ಇಂಥ ಒಂದು ಸನ್ನದ್ದನ್ನು ಅಂದಿನ ಬ್ರಿಟನ್ನಿನ ರಾಣಿ 'ಎಲಿಜಬೆತ್'ಳು ೩೦.೧೨.೧೬೦೦ ರಂದು ಹೊರಡಿಸಿದಳು. ಅಲ್ಲಿಂದ ಮುಂದಕ್ಕೆ ಬ್ರಿಟನ್ ಸಂಪದ್ಭರಿತವೂ, ಶಕ್ತಿಯುತವೂ ಆದ ಪ್ರಬಲ ರಾಷ್ಟ್ರವಾಗಿ ಗುರುತಿಸಿಕೊಂಡಿತು.[೧೨] ಬ್ರಿಟಿಷರು ೧೬೦೮ರಲ್ಲಿ ಆಗ ಭಾರತದ ಚಕ್ರವರ್ತಿಯಾಗಿದ್ದ 'ಜಹಾಂಗೀರನ' ಸಮ್ಮತಿಯನ್ನು ಪಡೆದು 'ಸೂರತ್' ಪಟ್ಟಣದಲ್ಲಿ ಕಂಪನಿಯು ತನ್ನ ಪ್ರಥಮ ಮಳಿಗೆಯನ್ನು ಪ್ರಾರಂಭಿಸಿತು.[೧೩]

೧೬೩೪ರಲ್ಲಿ ಕಲ್ಕತ್ತ ಮತ್ತು ೧೬೪೯ರಲ್ಲಿ ಮದರಾಸು ಕೋಠಿಗಳು ಇಂಗ್ಲೀಷರಿಂದ ನಿರ್ಮಾಣವಾದವು. ೧೬೬೨ರಲ್ಲಿ ಇಂಗ್ಲೆಂಡಿನ ರಾಜ '೨ನೇ ಚಾರ್ಲ್ಸ್' ಪೋರ್ಚುಗೀಸ್ ರಾಜಕುಮಾರಿಯನ್ನು ಮದುವೆಯಾದಾಗ

ಅವನಿಗೆ ಬೊಂಬಾಯಿ ದ್ವೀಪಗಳು ಬಳುವಳಿಯಾಗಿ ನೀಡಲ್ಪಟ್ಟವು. ಅವನು ಅವುಗಳನ್ನು ಕಂಪನಿಗೆ ಬಿಟ್ಟುಕೊಟ್ಟ. ಈ ಮುಖ್ಯವಾದ ಸ್ಥಳಗಳಲ್ಲದೆ ಇಂದು ಭೂಪಟದಲ್ಲಿ ಹೆಸರು ಕಾಣಿಸದ ಹಲವು ಬಂದರುಗಳು ಇಂಗ್ಲೀಷರ ಹಾಗೂ ಇತರ ಯುರೋಪಿಯನ್ನರ ವಶದಲ್ಲಿದ್ದವು, ಮದ್ರಾಸಿನ ಉತ್ತರದ ಪುಲಿಕಾಟ್ ದಕ್ಷಿಣದ ಮದರಾಸ್, ನಾಗಪಟ್ಟಣ, ಕೊಚ್ಚಿ ಬಂದರುಗಳು ಡಚ್ಚರವಾಗಿದ್ದವು. ಗೋವಾ, ಡಿಯು, ಡಾಮನ್, ಸಾಲ್ಸೆಟ್ ಮುಂತಾದ ಬಂದರುಗಳು ಪೋರ್ಚುಗೀಸರವಾಗಿದ್ದವು.

ಮಚಲಿಪಟ್ಟಣ, ಪಾಂಡಿಚೇರಿ ಫ್ರೆಂಚರ ವಶದಲ್ಲಿದ್ದವು. ಡೆನ್ಮಾರ್ಕಿನವರು ಟ್ರಾಂಕಿಬಾರ್ ಮತ್ತು ಸೆರಾಮ್‌ಪುರಗಳಲ್ಲಿ ನೆಲೆಗೊಂಡಿದ್ದರು. ಭಾರತಕ್ಕೆ ಬಂದ ಮುಖ್ಯ ಯುರೋಪಿಯನ್ನರಲ್ಲಿ ಫ್ರೆಂಚರೇ ಕೊನೆಯವರು. ೧೬೬೪ರಲ್ಲಿ ಫ್ರೆಂಚ್ ಇಂಡಿಯಾ ಕಂಪನಿ ಸ್ಥಾಪನೆಯಾಯಿತು. ಪೂರ್ವ ಕರಾವಳಿಯ ಪಾಂಡಿಚೇರಿ ಅವರ ನೆಲೆಯಾಯಿತು. ಈ ಕಂಪನಿಗಳಿಗೆ ಅವರವರ ದೇಶಗಳು ಬೆಂಬಲವಾಗಿದ್ದವು. ತಮ್ಮ ವ್ಯವಹಾರಗಳನ್ನು ನಡೆಸುವುದಕ್ಕೆ, ಇತರರೊಂದಿಗೆ ವ್ಯಾಜ್ಯ ಹುಟ್ಟಿದರೆ ಪರಿಹರಿಸಿಕೊಳ್ಳುವುದಕ್ಕೆ ಅಗತ್ಯವಾದ ಅಧಿಕಾರಗಳನ್ನು ಕಾಯಿದೆ ಪ್ರಕಾರ ಕಂಪನಿಗಳಿಗೆ ನೀಡುತ್ತಿದ್ದವು.[೧೪]

ಈ ಮೂಲಕವಾಗಿ ೧೭೧೭ರಲ್ಲಿ ಈಸ್ಟ್ ಇಂಡಿಯಾ ಕಂಪನಿಯು ತನ್ನ ವಸ್ತುಗಳನ್ನು ಯಾವುದೇ ತೆರಿಗೆಗಳಿಲ್ಲದೆ ಆಮದು ಹಾಗೂ ರಫ್ತು ಮಾಡಲು ಹಾಗೂ ಈ ವಸ್ತುಗಳನ್ನು ರವಾನೆ ಮಾಡಲು ಪಾಸುಗಳು ಅಥವಾ ದಸ್ತಕ್‌ಗಳನ್ನು ನೀಡಲು ಅನುವಾಗುವಂತೆ ಮೊಗಲ ಚಕ್ರವರ್ತಿಯಿಂದ ಒಂದು ರಾಜಫರ್ಮಾನನ್ನು ಪಡೆದಿತ್ತು. ಆದರೆ ಬಂಗಾಲದ ನವಾಬರು ಇಂಥ ಫರ್ಮಾನುಗಳಿಂದ ಅಸಂತೃಪ್ತರಾಗಿದ್ದರು. ಯಾಕೆಂದರೆ ಅವರಿಗೆ ಈಸ್ಟ್ ಇಂಡಿಯಾ ಕಂಪನಿಯಿಂದ ಯಾವ ಆದಾಯವೂ ಸಿಗುತ್ತಿರಲಿಲ್ಲ. ಕಂಪನಿಯು ವಸ್ತುಗಳನ್ನು ರವಾನೆ ಮಾಡಲು ನೀಡುತ್ತಿದ್ದ ದಸ್ತ್‌ಕ್‌ಗಳನ್ನು ಕಂಪನಿಯ ನೌಕರರು ದುರುಪಯೋಗಪಡಿಸಿಕೊಳ್ಳುತ್ತಿದ್ದರು. ಆಲಿಖಾನ್‌ನಿಂದ ಹಿಡಿದು ಆಲಿವರ್ದಿಖಾನ್‌ರವರೆಗೆ ಬಂಗಾಳದ ಎಲ್ಲಾ ನವಾಬರು ಬಂದ ಆದಾಯವನ್ನು ಬಂಗಾಳಕ್ಕೆ ನೀಡುವಂತೆ ಒತ್ತಾಯಿಸಿದರು. ಹೀಗೆ ಬ್ರಿಟಿಷರ ವ್ಯಾಪಾರ ಆಸಕ್ತಿಗಳು ಹಾಗೂ ಸ್ಥಳೀಯ ಬಂಗಾಳದ ಸರ್ಕಾರದ ನಡುವೆ ತಿಕ್ಕಾಟ ೧೮ನೇ ಶತಮಾನದ ವೇಳೆಗೆ ಆರಂಭವಾಗಿ[೧೫] ಇದು ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿಯ ಸೈನ್ಯಗಳು '೧೭೫೭ರ ಪ್ಲಾಸಿ ಕದನದಲ್ಲಿ' ಬಂಗಾಳದ ನವಾಬನಾದ 'ಸಿರಾಜುದ್ದೌಲ'ನನ್ನು ಸೋಲಿಸುವುದರ ಮೂಲಕ ಭಾರತದಲ್ಲಿ ಬ್ರಿಟೀಷರ ಆಡಳಿತವು ಪ್ರಾರಂಭವಾಗುವಂತೆ ಮಾಡಿತ್ತು.[೧೬] ಒಟ್ಟಿನಲ್ಲಿ ೧೬ನೇ ಮತ್ತು ೧೭ನೇ ಶತಮಾನದ ಕೊನೆಯ ವೇಳೆಗೆ ಭಾರತದ ಪೂರ್ವ ಮತ್ತು ಪಶ್ಚಿಮ ಸಮುದ್ರತೀರ ಪ್ರದೇಶಗಳ ಮೇಲೆ ವ್ಯಾಪಾರಸ್ವಾಮ್ಯ ಪಡೆದಿದ್ದ ಯುರೋಪಿಯನ್ನರು ಕ್ರಮೇಣ ವ್ಯಾಪಾರದ ಜೊತೆಗೆ ಭಾರತದ ರಾಜಕೀಯವನ್ನು ಪ್ರವೇಶಿಸಿದರು.[೧೭]

**೨.೨. ಕರ್ನಾಟಕದಲ್ಲಿ ವಸಾಹತುಶಾಹಿ ಸನ್ನಿವೇಶ**

ಮೊಗಲ್ ಸಾಮ್ರಾಜ್ಯದ ಪತನದ ನಂತರ ೧೮ನೇ ಶತಮಾನದಲ್ಲಿ ಮೈಸೂರು ಹಾಗೂ ಮರಾಠರಂತಹ ಸಣ್ಣ ಸಣ್ಣ ಪ್ರಾದೇಶಿಕ ಶಕ್ತಿಗಳು ಅಸ್ತಿತ್ವಕ್ಕೆ ಬಂದವು. ಇದೇ ಸಂದರ್ಭದಲ್ಲಿ ಯುರೋಪಿನ ವಸಾಹತುಶಾಹಿ

ಶಕ್ತಿಗಳು ಭಾರತೀಯ ಉಪಖಂಡದಲ್ಲಿ ಪ್ರವೇಶಿಸಿದವು. ಸ್ಥಳೀಯ ರಾಜಕೀಯ ಶಕ್ತಿಗಳು ಹಾಗೂ ವಸಾಹತುಶಾಹಿ ಶಕ್ತಿಗಳ ನಡುವೆ ರಾಜಕೀಯ ಪ್ರಾಬಲ್ಯಕ್ಕೆ ಕಾದಾಟ ಆರಂಭವಾಯಿತು. ಈ ಎರಡು ಶಕ್ತಿಗಳ ಇಂಗ್ಲಿಷರು-ಫ್ರೆಂಚರು ಸೆಣಸಾಟದ ನಡುವೆ ಭಾರತದ ರಾಜರಲ್ಲಿಯೇ ರಾಜಕೀಯ ಪರಮಾಧಿಕಾರಕ್ಕಾಗಿ ಹೋರಾಟ ಆರಂಭವಾಯಿತು.[೧೮] ಅಂದರೆ ಭಾರತವು ಈ ವೇಳೆಗಾಗಲೇ ಹಲವಾರು ರಾಜರು, ಸಂಸ್ಥಾನಿಕರು ಮತ್ತು ಪಾಳೆಯಗಾರರ ನಡುವೆ ಹಂಚಿಹೋಗಿತ್ತು. ಅವರು ಆಕ್ರಮಣಕಾರಿ ಹೋರಾಟಗಳಲ್ಲಿ ನಿರತರಾಗಿ ಎಂದಿಗೂ ನಿರ್ಣಾಯಕವಾಗದ ಸೋಲು-ಗೆಲುವುಗಳ ಸ್ಥಿತ್ಯಂತರ ಪರಿಸ್ಥಿತಿಯಲ್ಲಿ ಸ್ವಪ್ರತಿಷ್ಠೆಯನ್ನು ಕಾಪಾಡಿಕೊಂಡು ಗೆದ್ದೆವೆಂದು ಬೆನ್ನು ತಟ್ಟಿಕೊಳ್ಳಲು ಮೂರನೆಯವರ ಸಹಾಯಹಸ್ತವನ್ನು ಅಪೇಕ್ಷಿಸುತ್ತಿದ್ದರು. ವ್ಯಾಪಾರಕ್ಕಾಗಿ ಬಂದ ಯುರೋಪಿಯನ್ನರು ಪರಿಸ್ಥಿತಿಯ ಅನುಕೂಲ ಪಡೆದು, ಸಂದರ್ಭಕ್ಕೆ ತಕ್ಕಂತೆ ಯಾರಾದರೊಬ್ಬರ ನೆರವಿಗೆ ನಿಲ್ಲುತ್ತಾ ತಮ್ಮ ನೆರವಿಗೆ ಪ್ರತಿಫಲವಾಗಿ ನಗದು ರೂಪದಲ್ಲಿ ಮಾತ್ರವಲ್ಲದೆ ಭೂಮಿಯ ರೂಪದಲ್ಲಿ ಆಸ್ತಿ ಮಾಡಿಕೊಂಡರು.[೧೯] ಈ ಸಂದರ್ಭದಲ್ಲಿ ಮೈಸೂರಿನ ಹೈದರಾಲಿಯು ಸ್ಥಳೀಯ ಪಾಳೆಯಗಾರರನ್ನು ಹತ್ತಿಕ್ಕಿ ಪ್ರಬಲನಾಗಿದ್ದ. ಇಂಥ ಸಂದರ್ಭದಲ್ಲಿ ಹೈದರಾಬಾದಿನ ನಿಜಾಮ ಮತ್ತು ಮರಾಠರು ಇಬ್ಬರೂ ಸೇರಿ ಬ್ರಿಟಿಷರ ಸಹಯೋಗದೊಂದಿಗೆ ಮೈಸೂರಿನ ವಿರುದ್ಧ ಹೋರಾಟ ನಡೆಸಿದರು. ಆದರೆ ನಿಜಾಮನಿಗೆ ದಕ್ಷಿಣದಲ್ಲಿ ಮರಾಠರು ಬೆಳೆಯುತ್ತಿದ್ದ ಪ್ರಾಬಲ್ಯದ ಬಗ್ಗೆ ಒಳಗೆ ಆತಂಕವಿದ್ದುದರಿಂದ ಅವನು ಮರಾಠರ ವಿರುದ್ಧ ಬ್ರಿಟಿಷರ ಜೊತೆ ಕೈ ಜೋಡಿಸಿದ. ಈ ರೀತಿಯ ಪರಸ್ಪರ ಹಗೆತನ ಸ್ಥಳೀಯ ರಾಜರ ನಡುವೆ ಇದ್ದುದರಿಂದ ಬ್ರಿಟಿಷರಿಗೆ ಅವರ ಆಂತರಿಕ ವ್ಯವಹಾರಗಳಲ್ಲಿ ಮಧ್ಯ ಪ್ರವೇಶಿಸಲು ಅನುಕೂಲವಾಯಿತು.[೨೦]

ಬ್ರಿಟಿಷರು ಮೈಸೂರು ಹಾಗೂ ಮರಾಠ ರಾಜ್ಯಗಳ ನಡುವೆ ಮಧ್ಯ ಪ್ರವೇಶಿಸಿದ್ದು ಮೂಲತಃ ವ್ಯಾಪಾರದ ಕಾರಣಗಳಿಗಾಗಿಯೇ. ಹೈದರ್ ಹಾಗೂ ಟಿಪ್ಪುಸುಲ್ತಾನ ಇಬ್ಬರೂ ಮಲಬಾರ್ ತೀರದ ವ್ಯಾಪಾರವನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದರು. ಅವರು ಮದ್ರಾಸಿನಲ್ಲಿ ಬ್ರಿಟಿಷರ ವ್ಯಾಪಾರಿ ಉದ್ದೇಶಗಳಿಗೆ ಆತಂಕಕಾರಿಯಾಗಿದ್ದರು. ಮರಾಠರು ಪಶ್ಚಿಮ ಕರಾವಳಿಯ ವ್ಯಾಪಾರವನ್ನು ಅದರಲ್ಲೂ ಆಗ ತಾನೇ ಬೆಳೆಯುತ್ತಿದ್ದ ಹತ್ತಿ ಉದ್ಯಮವನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಂಡಿದ್ದುದರಿಂದ ಬ್ರಿಟಿಷರು ಇಂಥ ಲಾಭದಾಯಕ ಉದ್ಯಮವನ್ನು ಮರಾಠರಿಗೆ ದಕ್ಕದಂತೆ ಮಾಡಬೇಕೆಂದು ಯೋಚಿಸಿದರು.

೧೭೬೭ರಿಂದ ೧೭೯೯ರವರೆಗೆ ಬ್ರಿಟಿಷರು ಮೈಸೂರು ರಾಜ್ಯದ ವಿರುದ್ಧ ನಾಲ್ಕು ಯುದ್ಧ ನಡೆಸಿದರು. ಈ ಯುದ್ಧಗಳಲ್ಲಿ ಮರಾಠರು, ಕರ್ನಾಟಕದ ನವಾಬ ಹಾಗೂ ಹೈದರಾಬಾದಿನ ನಿಜಾಮ ಎಲ್ಲರೂ ಕಾಲಕಾಲಕ್ಕೆ ಬ್ರಿಟಿಷರೊಂದಿಗೆ ಸೇರಿ ಮೈಸೂರಿನ ಪ್ರಾಬಲ್ಯವನ್ನು ಅಡಗಿಸಲು ಯತ್ನ ನಡೆಸಿದರು. ಈ ಎಲ್ಲ ರಾಜ್ಯಗಳು ಆಗ ತಾನೇ ತಮ್ಮ ಪ್ರದೇಶಗಳನ್ನು ವಿಸ್ತರಿಸುತ್ತಿದ್ದುದರಿಂದ ಮೈಸೂರು ರಾಜ್ಯ ಪ್ರವರ್ಧಮಾನಕ್ಕೆ ಬರುತ್ತಿದ್ದುದನ್ನು ಕಂಡು ಆತಂಕಕ್ಕೊಳಗಾಗಿದ್ದರು.

ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಹೈದರನ ಪ್ರಾಬಲ್ಯವನ್ನು ಸಹಿಸದಾಯಿತು. ತಮ್ಮ ಎದುರಿಗೆ ಭಾರತದಲ್ಲಿ ದೇಶೀಯ ರಾಜನೊಬ್ಬ ಬೆಳೆಯುವುದನ್ನು ಬ್ರಿಟಿಷರು ಎಂದಿಗೂ ಸಹಿಸಲಿಲ್ಲ. ಅವರು ಒಡೆದು

ಆಳುವ ನೀತಿಯನ್ನು ಮುಂದುವರಿಸಿದರು. ಅಂದರೆ ೧೭೭೨ಕ್ಕಿಂತಲೂ ಮುಂಚೆ ಹೈದರ್ ಮತ್ತು ಬ್ರಿಟಿಷರ ಸಂಬಂಧ ಉತ್ತಮವಾಗಿಯೇ ಇದ್ದವು. ಆದರೆ ೧೭೭೨ರ ವೇಳೆಗೆ ಪರಸ್ಪರ ಆಕ್ರಮಣಕಾರಿ ವಿರುದ್ಧ ಯುದ್ಧ ಸಾರಲು ದೇಶೀಯ ರಾಜರನ್ನು ಒಂದುಗೂಡಿಸಲು ಪ್ರಯತ್ನಿಸಿದರು. ಆ ಮೂಲಕವಾಗಿ ಬ್ರಿಟಿಷರು ಮರಾಠರನ್ನು ಹಾಗೂ ಹೈದರಾಬಾದಿನ ನಿಜಾಮನೊಂದಿಗೆ ಸೇರಿ ಮೈಸೂರಿನ ಮೇಲೆ ಆಕ್ರಮಣ ನಡೆಸಿದರು. ಆದರೆ ಹೈದರಾಲಿಯ ಚಾಣಾಕ್ಷತೆಯಿಂದ ಮರಾಠರೊಂದಿಗೆ ರಾಜಿ ಮಾಡಿಕೊಂಡು ಹಾಗೂ ನಿಜಾಮನಿಗೆ ಹೆಚ್ಚಿನ ಹಣಸುರಿದು ತನ್ನ ಕಡೆ ಸೆಳೆದುಕೊಳ್ಳುವುದರಲ್ಲಿ ಸಫಲನಾದ ಹೈದರಾಲಿಯು ಇವರೆಲ್ಲರ ಸಹಯೋಗದಿಂದ ಬ್ರಿಟಿಷರ ವಿರುದ್ಧ ಸಮರ ಸಾರಿದನು. ಆರ್ಕಾಟ್ ಯುದ್ಧದಲ್ಲಿ ಬ್ರಿಟಿಷರಿಂದ ಹೈದರನು ಸೋತು ಹೋದನು. ಚೆಂಕಮನ ಹತ್ತಿರ ನಡೆದ ಯುದ್ಧದಲ್ಲಿ ಸಂಯುಕ್ತ ಸೈನ್ಯಕ್ಕೆ ಸೋಲುಂಟಾಗಿ ಹೈದರಾಬಾದ್ ನಿಜಾಮನು ಯುದ್ಧಭೂಮಿಯಿಂದ ನಿರ್ಗಮಿಸಿ ಹೈದರಾಬಾದ್‌ಗೆ ಹಿಂದಿರುಗಿದನು. ಆದರೆ ಹೈದರ್ ಏಕಾಂಗಿಯಾಗಿ ತನ್ನ ಹೋರಾಟವನ್ನು ಮುಂದುವರೆಸಿದನು. ವಾಣಿಯಂಬಾಡಿ ಮುಳಬಾಗಿಲ್ ಆರ್ನಿ ಯುದ್ಧಗಳು ನಿರ್ಣಾಯಕವಾದ ಯುದ್ಧಗಳಾಗಿರಲಿಲ್ಲ. ಆದರೆ ಹೈದರನು ತನ್ನ ದಿಟ್ಟತನದಿಂದ ಅಶ್ವಪಡೆಯನ್ನೇರಿ ಹೋರಾಟ ಮುಂದುವರೆಸಿ ಬ್ರಿಟಿಷರ ವ್ಯಾಪಾರ ಕೇಂದ್ರವಾದ ಮದ್ರಾಸ್‌ವರೆಗೂ ಮುನ್ನಡೆ ಸಾಧಿಸಿದನು.

ಹೈದರನ ಈ ಭಯಂಕರ ದಾಳಿಯಿಂದ ಭೀತನಾದ ಬ್ರಿಟಿಷ್ ಗವರ್ನರ್ ಜನರಲ್ ವಾರನ್ ಹೇಸ್ಟಿಂಗ್‌ನು ಹೈದರ್‌ನೊಂದಿಗೆ ಸಂಧಾನ ಮಾಡಲು ಇಚ್ಛಿಸಿದನು. ಇದರಿಂದಾಗಿ ೧೭೬೯ರಲ್ಲಿ ಹೈದರ್ ಮತ್ತು ಬ್ರಿಟಿಷರ ಮಧ್ಯೆ 'ಮದ್ರಾಸ್ ಒಪ್ಪಂದ' ಏರ್ಪಟ್ಟಿತು. ಈ ಒಪ್ಪಂದದ ಪ್ರಕಾರ ಯುದ್ಧ ಕೈದಿಗಳನ್ನು ಬಿಡುಗಡೆ ಮಾಡುವುದಾಗಿ ಪರಸ್ಪರರು ಕಷ್ಟಕಾಲದಲ್ಲಿ ಸಹಾಯ ಮಾಡುವುದಾಗಿ ಒಪ್ಪಿಕೊಂಡರು. ಈ ರೀತಿ ಸಹಿ ಹಾಕಲ್ಪಟ್ಟ ಮದ್ರಾಸ್ ಒಪ್ಪಂದ ಪ್ರಥಮ ಆಂಗ್ಲೋ ಮೈಸೂರು ಯುದ್ಧವನ್ನು ಮುಕ್ತಾಯಗೊಳಿಸಿತು.

ಆದರೆ ೧೭೬೯ರಲ್ಲಿ ಮರಾಠರು ಮೈಸೂರಿನ ಮೇಲೆ ಆಕ್ರಮಣ ಮಾಡಿದರು. ಮದ್ರಾಸ್ ಒಪ್ಪಂದದ ಪ್ರಕಾರ ಬ್ರಿಟಿಷರು ತನಗೆ ಸಹಾಯ ಮಾಡುವರೆಂಬ ಭಾವನೆ ಹೈದರನಿಗೆ ಇತ್ತು. ಆದರೆ ಬ್ರಿಟಿಷರು ಹೈದರನ ನೆರವಿಗೆ ಬರದೇ ಮೋಸ ಮಾಡಿದರು.

೧೭೭೧ರಲ್ಲಿ ಹೈದರಾಲಿಯ ಮೇಲೆ ಮರಾಠರು ದಾಳಿ ನಡೆಸಿದಾಗ ಬ್ರಿಟಿಷರು ಅವನ ಸಹಾಯಕ್ಕೆ ಬರಲಿಲ್ಲ. ಇದರಿಂದಾಗಿ ಹೈದರಾಲಿ ಬ್ರಿಟಿಷರ ಬಗೆಗಿನ ನಂಬಿಕೆಯನ್ನು ಕಳೆದುಕೊಂಡ. ಅಲ್ಲದೆ ಬ್ರಿಟಿಷರು ಫ್ರೆಂಚ್‌ರ ವಸಾಹತುವಾದ ಮಾಹೆಯನ್ನು ಆಕ್ರಮಿಸಿದರು. ಫ್ರೆಂಚರ ಮಿತ್ರನಾದ ಹೈದರನು ಬ್ರಿಟಿಷರಿಗೆ ಸೂಚಿಸಿದನು. ಇದಕ್ಕೆ ಬ್ರಿಟಿಷರು ಒಪ್ಪಲಿಲ್ಲ. ಇದರಿಂದಾಗಿ ಹೈದರ್ ಬ್ರಿಟಿಷರ ಮಧ್ಯೆ ಯುದ್ಧ ಅನಿವಾರ್ಯ ವಾಯಿತು. ಈ ಸಂದರ್ಭದಲ್ಲಿ ಮರಾಠರು ಹೈದರಾಬಾದ್ ನಿಜಾಮರು ಬ್ರಿಟಿಷರೊಂದಿಗೆ ಸೇರಿಕೊಂಡು ತ್ರಿಪಕ್ಷಕೂಟವನ್ನು ರಚಿಸಿದರು. ಸರ್ ಗವರ್ನರ್ ವಾರನ್ ಹೇಸ್ಟಿಂಗ್ಸ್‌ನು ತನ್ನ ನೆಚ್ಚಿನ ಸೇನಾನಿ ಐರ್‌ಕೂಟ್‌ನನ್ನು ಹೈದರಾಲಿಯ ವಿರುದ್ಧ ಕಳಿಸಿಕೊಟ್ಟನು. ಆಗ ಯುದ್ಧದ ದಿಕ್ಕೇ ಬದಲಾಯಿತು. ಐರ್‌ಕೂಟ್‌ನು ಹೈದರ್‌ನನ್ನು 'ಪೋರ್ಟ್‌ನೋವಾ' ಎಂಬಲ್ಲಿ ಸಂಪೂರ್ಣವಾಗಿ ಸೋಲಿಸಿದನು. ಆಗಲೇ ಬೆನ್ನು ರೋಗಗ್ರಸ್ತನಾದ

ಹೈದರ್ ಬ್ರಿಟಿಷರೊಂದಿಗೆ ಹೋರಾಟ ಮಾಡುತ್ತಾ ಚಿತ್ತೂರು ಬಳಿ ಇರುವ ನರಸಿಂಗರಾಯಪೇಟೆ ಎಂಬಲ್ಲಿ ೧೭೮೨ ಡಿಸೆಂಬರ್ ೭ರಂದು ಯುದ್ಧಭೂಮಿಯಲ್ಲಿಯೇ ಮಡಿದ. ಆದರೆ ಅವನ ಮಗ ಟಿಪ್ಪುಸುಲ್ತಾನನ ನಾಯಕತ್ವದಲ್ಲಿ ಯುದ್ಧ ಮುಂದುವರೆಯಿತು, ಯಾವ ಬಣಕ್ಕೂ ಇನ್ನೊಂದನ್ನು ಸೋಲಿಸಲು ಸಾಧ್ಯವಾಗದೆ ಇದ್ದುದರಿಂದ ಮಾರ್ಚ್ ೧೭೮೪ರಲ್ಲಿ 'ಮಂಗಳೂರು ಒಪ್ಪಂದಕ್ಕೆ' ಸಹಿ ಹಾಕಿದರು. ಇದು ಬ್ರಿಟಿಷರ ಪಾಲಿಗೆ ಅತ್ಯಂತ ಅವಮಾನಕರವಾದ ಒಪ್ಪಂದವಾಗಿತ್ತು.

೧೭೮೪ರ ಈ ಒಪ್ಪಂದದಿಂದ ಟಿಪ್ಪು ಹಾಗೂ ಬ್ರಿಟಿಷರ ನಡುವಿನ ಕಾದಾಟವನ್ನು ನಿಲ್ಲಿಸಲು ಸಾಧ್ಯವಾಗಲಿಲ್ಲ. ಬದಲಾಗಿ ಅದು ಕಾದಾಟವನ್ನು ಮುಂದಕ್ಕೆ ಹಾಕಿತ್ತು. ಬ್ರಿಟಿಷರು ಟಿಪ್ಪುವನ್ನು ದಕ್ಷಿಣದ ಪ್ರಬಲವೈರಿ ಎಂದು ಪರಿಗಣಿಸಿದರು. ತಿರುವಾಂಕೂರಿನ ರಾಜ ಮತ್ತು ಡಚ್ಚರ ಮಧ್ಯೆ ಯುದ್ಧ ಸಂಭವಿಸಿದಾಗ ಟಿಪ್ಪು ತಿರುವಾಂಕೂರಿನ ರಾಜನ ಪರವಾಗಿ ಹೋರಾಟ ಮಾಡಿದನು. ಆದರೆ ತಿರುವಾಂಕೂರಿನ ರಾಜನು ಅಯ್ಯರ್‌ಕೋಟೆ ಇನ್ನಿತರ ಪ್ರದೇಶಗಳನ್ನು ಟಿಪ್ಪುವಿನ ಗಮನಕ್ಕೆ ತರದೆ ಎರಡು ಪ್ರದೇಶಗಳನ್ನು ಬ್ರಿಟಿಷರಿಗೆ ಒಪ್ಪಿಸಿದನು. ಇದು ಟಿಪ್ಪುವಿನ ಕೋಪಕ್ಕೆ ಕಾರಣವಾಯಿತು. ಇದರಿಂದಾಗಿ ಟಿಪ್ಪು ತಿರುವಾಂಕೂರು ರಾಜನ ಮೇಲೆ ಯುದ್ಧ ಗವರ್ನರ್ ಜನರಲ್ ಲಾರ್ಡ್ ಕಾರನ್‌ವಾಲೀಸ್‌ನು ಟಿಪ್ಪುವಿನ ಮೇಲೆ ಯುದ್ಧ ಸಾರಿದನು. ಎರಡು ವರ್ಷಗಳವರೆಗೆ ನಡೆದು ೩ನೇ ಮೈಸೂರು ಯುದ್ಧದಲ್ಲಿ ಟಿಪ್ಪು ತೀವ್ರ ಸೋಲನ್ನು ಅನುಭವಿಸಿ ಶಾಂತಿಗಾಗಿ ಮುಂದೆ ಬಂದ. ಈ ಪ್ರಕಾರ ೧೭೯೨ರಲ್ಲಿ 'ಶ್ರೀರಂಗಪಟ್ಟಣ ಒಪ್ಪಂದ'ವು ಜಾರಿಗೆ ಬಂದು, ಇದರ ಪ್ರಕಾರ ಟಿಪ್ಪುವು ತನ್ನ ಅರ್ಧರಾಜ್ಯವನ್ನು ಕೊಡುವುದರ ಜೊತೆಗೆ ೩ ಕೋಟಿ ೩೦ ಲಕ್ಷ ರೂಪಾಯಿಗಳನ್ನು ನಷ್ಟ ಪರಿಹಾರವಾಗಿ ನೀಡಬೇಕಾಯಿತು. ಆದರೆ ಅಷ್ಟೊಂದು ಹಣವು ಇಲ್ಲದ ಪ್ರಯುಕ್ತ ಹಣ ತೀರಿಸುವವರೆಗೂ ತನ್ನ ಇಬ್ಬರೂ ಮಕ್ಕಳನ್ನು ಬ್ರಿಟಿಷರಿಗೆ ಒತ್ತೆಯಾಳಾಗಿಟ್ಟನು. ಈ ಮೂಲಕ ೩ನೇ ಆಂಗ್ಲೋ ಕರ್ನಾಟಿಕ್ ಯುದ್ಧ ಕೊನೆಗೊಂಡಿತು.

ಲಾರ್ಡ್ ವೆಲ್ಲೆಸ್ಲಿಯು ತನ್ನ ಸಹಾಯಕ ಸೈನ್ಯ ಪದ್ಧತಿಯ ಅಡಿಯಲ್ಲಿ ಮೈಸೂರನ್ನು ತರಲು ಯೋಚಿಸಿದ. ಆದರೆ ಟಿಪ್ಪುಗೆ ತನ್ನ ಅಧಿಕಾರವನ್ನು ಬ್ರಿಟಿಷರಿಗೆ ಒಪ್ಪಿಸಲು ಇಷ್ಟವಿರಲಿಲ್ಲ. ಹೀಗಾಗಿ ಲಾರ್ಡ್‌ವೆಲ್ಲೆಸ್ಲಿಯು ತನ್ನ ಮೆಚ್ಚಿನ ಸೇನಾನಿ ಜನರಲ್ ಹ್ಯಾರೀಶ್‌ನ ನಾಯಕತ್ವದಲ್ಲಿ ಟಿಪ್ಪುವಿನ ವಿರುದ್ಧ ಯುದ್ಧ ಪ್ರಾರಂಭಿಸಿದರು. ಟಿಪ್ಪು ಎಲ್ಲವನ್ನು ಆತುರದಿಂದ ಸಜ್ಜುಮಾಡಿಕೊಂಡು ಬ್ರಿಟಿಷರ ವಿರುದ್ಧ ಯುದ್ಧ ಪ್ರಾರಂಭಿಸಿದ. ಟಿಪ್ಪುವಿನ ವಿರುದ್ಧ ಪ್ರಾರಂಭವಾದ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧ ಅಲ್ಪಾವಧಿಯದಾಗಿದ್ದರೂ ಸಹ ಅತ್ಯಂತ ನಿರ್ಣಾಯಕವಾದ ಯುದ್ಧವಾಗಿತ್ತು. ಹೈದರಾಬಾದ್ ನಿಜಾಮ, ಮರಾಠರು ಬ್ರಿಟಿಷರ ಪರ ಬಂದರು. ಹೀಗೆ ಪ್ರಬಲಶಕ್ತಿಯ ಮುಂದೆ ಟಿಪ್ಪುವಿನ ಆಟ ನಡೆಯಲಿಲ್ಲ. ಹೀಗೆ ಒಬ್ಬಂಟಿಯಾಗಿ ವೀರಯೋಧನಾಗಿ ಹೋರಾಡುತ್ತಾ ೧೭೯೯ರಲ್ಲಿ ಮೇ ೪ರಂದು ಟಿಪ್ಪು ಮರಣವನ್ನಪ್ಪಿದನು. ಹೀಗೆ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧವು ಅಂತ್ಯಗೊಂಡಿತ್ತು. ಹೀಗೆ ಬ್ರಿಟಿಷರಿಗೆ ಪ್ರಬಲಶತ್ರುವಾಗಿದ್ದ ಟಿಪ್ಪುವನ್ನು ನಿರ್ನಾಮ ಮಾಡಿದ ಹಿರಿಮೆ ಅವರದಾಗಿತ್ತು.

ಈ ಸಂದರ್ಭದಲ್ಲಿ ಶ್ರೀರಂಗಪಟ್ಟಣವನ್ನು ಕೊಳ್ಳೆಹೊಡೆಯಲಾಯಿತು. ಟಿಪ್ಪುವಿನ ಅರ್ಧರಾಜ್ಯವನ್ನು ಬ್ರಿಟಿಷರು, ಮರಾಠರು ಹೈದರಾಬಾದ್ ನಿಜಾಮರು ಹಂಚಿಕೊಂಡರು. ಒಡೆಯರ್ ವಂಶದವರಿಗೆ ಮೈಸೂರು ಪುನಃ ಸಿಕ್ಕಿದಂತಾಗಿ ಮೈಸೂರು ಬ್ರಿಟಿಷರ ಮೇಲೆ ಅವಲಂಬಿತವಾಯಿತು.[೨೧]

ಪಶ್ಚಿಮದಲ್ಲಿ ಪೇಶ್ವೆಯವರು ಮಾತ್ರ ಉಳಿದಿದ್ದರಷ್ಟೆ. ಕ್ರಿ.ಶ. ೧೭೬೧ರ ಪಾಣಿಪತ್ ಯುದ್ಧದ ಕಾಲದಿಂದ ಇಳಿಮುಖವಾಗಿದ್ದ ಅವರ ಅರಸೊತ್ತಿಗೆಯು ಕ್ರಿ.ಶ. ೧೮೧೮ರ "ಖಡಕಿ"ಯ ಯುದ್ಧದಲ್ಲಿ ಸಂಪೂರ್ಣ ಅಸ್ತಂಗತವಾಯಿತು. ಅಂದಿನಿಂದ ಭಾರತದಲ್ಲಿ ಬ್ರಿಟಿಷರಿಗೆ ಸರಿಸಮನಾಗಿ ಸೆಣಸಾಡಬಲ್ಲ ಯಾವ ದೊಡ್ಡ ರಾಜರೂ ಉಳಿಯಲಿಲ್ಲ, ನಿಜಾಮನಾದಿಯಾಗಿ ಸಣ್ಣ, ದೊಡ್ಡ ಸಂಸ್ಥಾನಿಕರೆಲ್ಲರೂ ಬ್ರಿಟಿಷರ ಹತೋಟಿಯಲ್ಲಿಯೇ ಇದ್ದರು.[೨೨] ಈ ಮೂಲಕವಾಗಿ ಬ್ರಿಟಿಷರಿಗೆ ಭಾರತದ ಮೇಲೆ ಸಂಪೂರ್ಣ ಹತೋಟಿಯು ಬಂದಿತು.

ಕರ್ನಾಟಕದಲ್ಲಿ ಬ್ರಿಟಿಷರ ನೇರವಾದ ಆಡಳಿತಕ್ಕೆ ಒಳಗಾದ ಮೊತ್ತ ಮೊದಲ ಪ್ರದೇಶವೆಂದರೆ 'ಕೆನರಾ' (೧೭೯೯). ಅದು ಟಿಪ್ಪುವಿನಿಂದ ದೊರೆತದ್ದು, ಮರುವರ್ಷ ೧೮೦೦ರಲ್ಲಿ ನಿಜಾಮನು ಬಳ್ಳಾರಿ ವಿಭಾಗವನ್ನು ಬ್ರಿಟಿಷರಿಗೆ ಬಿಟ್ಟುಕೊಟ್ಟನು. ಖಡಕಿಯ ಯುದ್ಧವು ಜರುಗುವುದಕ್ಕೆ ಒಂದು ವರುಷ ಮೊದಲೇ ಬ್ರಿಟಿಷರು ಪೇಶ್ವೆಯವರಿಂದ ಧಾರವಾಡ ಸುಭೆಯನ್ನು ಪಡೆದಿದ್ದರು.[೨೩] ೧೭೯೯ರಲ್ಲಿ ಟಿಪ್ಪುವು ಮರಣ ಹೊಂದಿದ ನಂತರ ಕನ್ನಡ, ತೆಲುಗು ಭಾಷಿಕ ಪ್ರದೇಶಗಳು ಹೈದರಾಬಾದ್ ನಿಜಾಮನಿಗೂ, ಕನ್ನಡ ಜಿಲ್ಲೆ ಕೊಯಮತ್ತೂರು, ವೈನಾಡು ಪ್ರಾಂತ್ಯಗಳು ಬ್ರಿಟಿಷರ ಪಾಲಿಗೂ ಸೇರಿದವು. ಆಗ ಆದ ಒಪ್ಪಂದದಲ್ಲಿ ಮರಾಠರು ಪಾಲ್ಗೊಳ್ಳಲಿಲ್ಲ. ಮರಾಠರು ಟಿಪ್ಪುವಿನ ವಿರುದ್ಧದ ಯುದ್ಧಗಳಲ್ಲಿ ಮಾತ್ರ ಬ್ರಿಟಿಷರ ಜೊತೆಗಿದ್ದರು. ಉಳಿದಂತೆ ಬ್ರಿಟಿಷರ ವಿರುದ್ಧವಾಗಿಯೇ ಇರುತ್ತಿದ್ದರು. ಪೇಶ್ವೆ ಮಾಧವರಾವ್‌ನ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದ ಪಟವರ್ಧನ ಮನೆತನದ ಮರಾಠರು ೧೮ನೇ ಶತಮಾನದ ಕೊನೆಯ ವೇಳೆಗೆ ಸಾಂಗಲಿ, ಮೀರಜ್, ಜಮಖಂಡಿ ಮತ್ತು ಕುರಂದವಾಡ ಸಂಸ್ಥಾನಗಳ ಅಧಿಕಾರ ಪಡೆದಿದ್ದರು. ಕ್ರಿ.ಶ.೧೮೦೧ರಲ್ಲಿ ಬ್ರಿಟಿಷರ ವಿರುದ್ಧ ಬಂಡೆದ್ದ ದೊಂಡೀ ವಾಘನನ್ನು ನಿವಾರಿಸಲು ಬ್ರಿಟಿಷರ ಜೊತೆಗೆ ನಿಪ್ಪಾಣಿಯ ದೇಸಾಯಿ ಸಹಕಾರ ನೀಡಿದ. ದೊಂಡೀ ವಾಘನ ಮರಣಾನಂತರ ಪೇಶ್ವೆ ಬಾಜೀರಾಯನಿಂದ ನಿಪ್ಪಾಣಿಯ ದೇಸಾಯಿಯವರು ಹುಕ್ಕೇರಿ ಮತ್ತು ಮಳವಳ್ಳಿ ಸೀಮೆಗಳ ಹಕ್ಕನ್ನು ಪಡೆದರು. ಬ್ರಿಟಿಷರೊಂದಿಗೆ ಸ್ನೇಹ ಬೆಳೆಸುವ ಸಲುವಾಗಿ ಕ್ರಿ.ಶ.೧೮೦೧ರಲ್ಲೇ ಬಾಜೀರಾಯನು ಅವರಿಗೆ ಧಾರವಾಡ ಪ್ರಾಂತ್ಯವನ್ನು ನೀಡಿದ ನಂತರವೂ ಮುಂದಿನ ೧೬ ವರ್ಷಗಳು ಅವನಿಗೂ ಬ್ರಿಟಿಷರಿಗೂ ಹಲವು ಹೋರಾಟಗಳು ನಡೆದವು.

೧೮೧೭ರಲ್ಲಿ ಸೋತ ಬಾಜೀರಾಯನಿಂದ ಬ್ರಿಟಿಷರು ಪೇಶ್ವೆಗಳ ಆಳ್ವಿಕೆಗೆ ಸೇರಿದ ಎಲ್ಲಾ ಪ್ರಾಂತ್ಯಗಳನ್ನು ವಶಪಡಿಸಿಕೊಂಡರು. ಆಗಲೇ ಬಿಜಾಪುರ, ಬೆಳಗಾವಿ ಮತ್ತು ಧಾರವಾಡ ಪ್ರಾಂತ್ಯಗಳು ಇಡಿಯಾಗಿ ಬ್ರಿಟಿಷರ ಆಳ್ವಿಕೆಗೆ ಸೇರಿದವು. ೧೮೨೬ರಲ್ಲಿ ಧಾರವಾಡ ಜಿಲ್ಲೆಯನ್ನು ಆಡಳಿತಾತ್ಮಕ ಕಾರಣಗಳಿಂದ ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಲು ಮನ್ರೋ ಶಿಫಾರಸು ಮಾಡಿದ್ದ. ಮುಂಬಯಿ ಕರ್ನಾಟಕ ಪ್ರಾಂತ್ಯವನ್ನು, ದಕ್ಷಿಣ ಮರಾಠ

ಪ್ರಾಂತ್ಯವೆಂದು ಕರೆದು ತಪ್ಪು ಮಾಡಿದೆನೆಂದು ಹೇಳಿದ ಮನ್ರೋ ದಕ್ಷಿಣ ಮರಾಠ ಪ್ರಾಂತ್ಯವು ಮರಾಠಿ ಪ್ರದೇಶವಲ್ಲವೆಂದು ಒಪ್ಪಿಕೊಂಡಿದ್ದ.

ಸಿಪಾಯಿ ಸೇನೆಯ ಬಲದ ಮೂಲಕವಾಗಿ ಭಾರತದ ಬಹುತೇಕ ಭಾಗಗಳ ಸಂಸ್ಥಾನಿಕರ ಮೇಲೆ ಆಡಳಿತಾತ್ಮಕವಾಗಿಯೂ ಅಧಿಕಾರವನ್ನು ಪಡೆದ ಬ್ರಿಟಿಷರು ಒಂದೊಂದೇ ಸಂಸ್ಥಾನವನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುವ ಸಂದರ್ಭದಲ್ಲಿ ದತ್ತು ಪುತ್ರರಿಗೆ ಹಕ್ಕಿಲ್ಲ ಎಂಬ ದತ್ತಕ ವಿರೋಧಿ ಪದ್ಧತಿಯೂ ನೆರವಿಗೆ ಬಂದದ್ದನ್ನು ಮರೆಯುವಂತಿಲ್ಲ. ೧೮೨೧ರಲ್ಲಿ ಸಾಂಗಲಿಯ ಸಂಸ್ಥಾನದ ೮ ಗ್ರಾಮಗಳನ್ನು ಪಡೆದ ಬ್ರಿಟಿಷರು ೧೮೨೪ರಲ್ಲಿ ಪ್ರಬಲ ವಿರೋಧದ ನಡುವೆ 'ಕಿತ್ತೂರ'ನ್ನು ವಶಪಡಿಸಿಕೊಂಡರು. ೧೮೨೭ರಲ್ಲಿ ಕೊಲ್ಹಾಪುರದ ರಾಜನಿಂದ ಚಿಕ್ಕೋಡಿ ಮತ್ತು ಮುನವಳ್ಳಿ ಪ್ರಾಂತ್ಯಗಳು ಬ್ರಿಟಿಷ್ ಆಳ್ವಿಕೆಗೆ ಸೇರಿದವು. ೧೮೩೬ರಲ್ಲಿ ಚಿಂಚೋಲಿಯ ಪಟವರ್ಧನನಿಗೆ ಸಂತತಿಯಿರಲಿಲ್ಲ ಎಂಬ ಕಾರಣಕ್ಕಾಗಿ ಗೋಕಾಕ್, ಯಾದವಾಡ, ತೇರದಾಳ್, ಕೊಕಟನೂರು ಮತ್ತು ಅಥಣಿಗಳನ್ನು ವಶಪಡಿಸಿಕೊಂಡ ಬ್ರಿಟಿಷರಿಗೆ ೧೮೩೭ರಲ್ಲಿ ಚಿಂಚೋಳಿಯೂ ಲಭ್ಯವಾಯಿತು. ಅದೇ ವರ್ಷ ಕುರಂದವಾಡದ ನೀಲಕಂಠರಾಯ ಸತ್ತು ಅವನಿಗೆ ವಾರಸುದಾರರಿರಲಿಲ್ಲವೆಂಬ ಕಾರಣದಿಂದ ಕುರಂದವಾಡವೂ ಬ್ರಿಟಿಷರ ಕೈವಶವಾಯಿತು. ಸಂತತಿಯಿಲ್ಲವೆಂಬ ಕಾರಣದಿಂದಲೇ ೧೮೩೬ರಲ್ಲಿ ನಿಪ್ಪಾಣಿ, ೧೮೪೨ರಲ್ಲಿ ಲಕ್ಷ್ಮೇಶ್ವರ, ೧೮೪೮ರಲ್ಲಿ ಸತಾರಾ ಮತ್ತು ತಾಸಗಾವಿ, ೧೮೫೭ರಲ್ಲಿ ಕಾಗವಾಡ ಮತ್ತು ೧೮೫೮ರಲ್ಲಿ ನರಗುಂದ ಸಂಸ್ಥಾನಗಳು ಬ್ರಿಟಿಷರ ಕೈವಶವಾದವು.[೨೪]

ದಕ್ಷಿಣ ಮಹಾರಾಷ್ಟ್ರವೆಂದು ಕರೆಯಲ್ಪಟ್ಟ ಇಡೀ ಭಾಗವು ಮೊದಲಿಗೆ ಬಳ್ಳಾರಿಯ ಕಲೆಕ್ಟರನ ಆಳ್ವಿಕೆಗೆ ಒಳಪಟ್ಟು ಮದ್ರಾಸ್ ಆಧಿಪತ್ಯಕ್ಕೆ ಸೇರಿತು. 'ಕೆನರಾ'ವನ್ನು ೧೮೬೨ರಲ್ಲಿ ಒಡೆದು ಉತ್ತರ ಕನ್ನಡ ಜಿಲ್ಲೆಯನ್ನು ಸೃಷ್ಟಿಸಿ ಮುಂಬಯಿ ಪ್ರಾಂತ್ಯಕ್ಕೆ ಸೇರಿಸಲಾಯಿತು. ಮತ್ತೊಂದು ದಕ್ಷಿಣಕನ್ನಡ ಪ್ರದೇಶವನ್ನು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಲಾಯಿತು.[೨೫] ಕೊಡಗು ಪ್ರಾಂತ್ಯವನ್ನು ೧೮೩೪ರಲ್ಲಿ ಬ್ರಿಟಿಷರು ನೇರವಶಕ್ಕೆ ತೆಗೆದುಕೊಂಡರು.

೧೮೩೪ಕ್ಕಿಂತ ಮೊದಲು ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ಮತ್ತು ಪುತ್ತೂರು ಮುಂತಾದ ಪ್ರದೇಶಗಳು ಮದರಾಸು ಪ್ರೆಸಿಡೆನ್ಸಿಯ ಆಡಳಿತಕ್ಕೆ ಒಳಪಟ್ಟಿದ್ದು ಕೊಡಗಿನ ಆಡಳಿತವನ್ನು ಸಹ ಮದರಾಸು ಪ್ರೆಸಿಡೆನ್ಸಿಯೇ ನೋಡಿಕೊಳ್ಳುತ್ತಿತ್ತು. ಮೇಲೆ ವಿವರಿಸಿದಂತೆ ಕರ್ನಾಟಕವು ಹಲವಾರು ಘಟಕಗಳಾಗಿ ವಿಭಜನೆಗೊಂಡಿತು. ಬ್ರಿಟಿಷ್ ಆಡಳಿತದಲ್ಲಿ ಕನ್ನಡ ಭಾಷಿಕರೇ ಅಧಿಕವಾಗಿದ್ದ ೨೨ ಘಟಕಗಳಿದ್ದವು. ಅವುಗಳೆಂದರೆ[೨೬]

೧. ಮುಂಬೈ ಕರ್ನಾಟಕ

೨. ಮದ್ರಾಸ್ ಕರ್ನಾಟಕ

೩. ಕಂಟೋನ್ಮೆಂಟ್ ಕರ್ನಾಟಕ

(ಅ) ಬೆಳಗಾವಿ (ಆ) ಬೆಂಗಳೂರು (ಇ) ಬಳ್ಳಾರಿ(ಈಗೀಗ ಸಂಕುಚಿತವಾಗಿ)

೪. ಕೊಡಗು ಕರ್ನಾಟಕ

೫. ಹೈದರಾಬಾದ್ ಕರ್ನಾಟಕ

೬. ಹೈದರಾಬಾದ್ ಕರ್ನಾಟಕದ ಜಹಗೀರು(ಕೊಪ್ಪಳ, ಗದ್ವಾಲ)

೭. ಮೈಸೂರು ಸಂಸ್ಥಾನ

೮. ಕೊಲ್ಹಾಪುರ ಸಂಸ್ಥಾನ(ಕೆಲವು ಭಾಗ ಮಾತ್ರ ಕನ್ನಡ)

೯. ಕೊಲ್ಹಾಪುರ ಸಂಸ್ಥಾನ ಜಹಗೀರುಗಳು

ಅ) ಈಚಲ ಕಾರಂಜಿ(೭೮ ಹಳ್ಳಿಗಳಿದ್ದು ½ ಮಾತ್ರ ಉಳಿದದ್ದೆಲ್ಲ ಕನ್ನಡ)

ಆ) ಕಾಗಲ(ಹಿರಿ) ೪೧ ಹಳ್ಳಿಗಳಿದ್ದು ಕೆಲವು ಮಾತ್ರ ಮರಾಠಿ

ಇ) ಕಾಗಲ(ಕಿರಿ) ೬ ಹಳ್ಳಿಗಳಿದ್ದು ಕೆಲವು ಮಾತ್ರ ಮರಾಠಿ, ರಾಜಧಾನಿ ಕೊಲ್ಹಾಪುರ

ಈ) ಗಗನ ಭಾವಡ ೭೬ ಹಳ್ಳಿಗಳಿದ್ದು ಕೆಲವು ಮಾತ್ರ ಕನ್ನಡ

ಉ) ವಿಶಾಲಗಡ ೬೬ ಹಳ್ಳಿಗಳಿದ್ದು ಕೆಲವು ಮಾತ್ರ ಕನ್ನಡ ರಾಜಧಾನಿ ಮಲಿಕಾಪುರ

ಊ) ಕಾಪ್ಸಿ ೧೧ ಹಳ್ಳಿಗಳಿದ್ದು ಕೆಲವು ಮಾತ್ರ ಮರಾಠಿ

ಋ) ತೊರಗಲ್ಲು ೩೪ ಹಳ್ಳಿಗಳಿದ್ದು ಎಲ್ಲವೂ ಕನ್ನಡ

೧೦. ಸಾಂಗಲಿ ಸಂಸ್ಥಾನ(ಬಹುಭಾಗ ಕನ್ನಡ)

೧೧. ಔಂಧ(ಕೆಲಭಾಗ ಕನ್ನಡ)

೧೨. ಮಿರಜಿ(ಹಿರಿ)

೧೩. ಮಿರಜಿ(ಕಿರಿ)

೧೪. ಕುರಂದವಾಡ(ಹಿರಿ)

೧೫. ಕುರಂದವಾಡ(ಕಿರಿ)

೧೬. ಜಮಖಂಡಿ

೧೭. ಮುಧೋಳ

೧೮. ರಾಮದುರ್ಗ

೧೯. ಅಕ್ಕಲಕೋಟೆ

೨೦. ಜತ್ತ ಸಂಸ್ಥಾನ

೨೧. ಸವಣೂರು ಸಂಸ್ಥಾನ

೨೨. ಸಂಡೂರು ಸಂಸ್ಥಾನ

ಈ ಮೇಲಿನ ಇಪ್ಪತ್ತೆರಡು ವಿಭಾಗಗಳನ್ನು ಬ್ರಿಟಿಷ್ ಆಳರಸರು ಕಾನೂನು, ಕೋರ್ಟು, ಶಿಕ್ಷಣ, ಕಂದಾಯ, ಸೈನ್ಯ, ಪೊಲೀಸ್ ಮೊದಲಾದ ಆಡಳಿತದ ಅನುಕೂಲತೆಗಳಿಗಾಗಿ ಐದು ಪ್ರಮುಖ ಘಟಕಗಳನ್ನಾಗಿ ಮಾಡಿಕೊಂಡಿದ್ದರು. ೧೯೪೨ರ ಅನಂತರದ ಘಟಕಗಳು ಸಹ ಐದೇ ಆಗಿದ್ದವು ಅವು

೧. ಮುಂಬಯಿ ಕರ್ನಾಟಕ

೨. ಮೈಸೂರು ಸಂಸ್ಥಾನ

೩. ಹೈದರಾಬಾದ್ ಕರ್ನಾಟಕ

೪. ಮದ್ರಾಸ್(ಬ್ರಿಟಿಷ್) ಕರ್ನಾಟಕ ಮತ್ತು

೫. ಕೊಡಗು(ಪ್ರತ್ಯೇಕ ಘಟಕ)

ಈ ಐದು ಘಟಕಗಳಾಗಿ ವಿಂಗಡಿಸಿಕೊಂಡು ಇವುಗಳ ಮೂಲಕ ಈ ಐದು ಘಟಕಗಳಲ್ಲಿನ ಆ ಹೊತ್ತಿನ ಸ್ಥಿತಿಗತಿಗಳನ್ನು ಭಿನ್ನವಾಗಿ ಅರಿಯಬೇಕಾದ ಜರೂರು ಬಹಳ ಮುಖ್ಯವಾದದು.[೨೭] ಈ ಐದು ವಿಭಾಗಗಳಾಗಿ ಹಂಚಲ್ಪಟ್ಟಾಗ ಬ್ರಿಟಿಷರು ಯಾವುದೇ ವೈಚಾರಿಕ ತಳಹದಿಯನ್ನು ಇಟ್ಟುಕೊಂಡಿರಲಿಲ್ಲ. ಭಾಷಾ ವಿಷಯಕ್ಕಾಗಲಿ ಅಥವಾ ಭೌಗೋಳಿಕ, ಆರ್ಥಿಕ, ಜನಾಂಗೀಯ ತಾತ್ವಿಕತೆಯನ್ನು ಆಧರಿಸಿದ ಈ ಹಂಚಿಕೆ ತಮ್ಮ ಒಡೆದು ಆಳುವ ನೀತಿಗೆ ಅನುಸಾರವಾಗಿ ಸ್ವಾರ್ಥಪೂರಿತವಾಗಿತ್ತು[೨೮] ಹೀಗಾಗಿ ಇಂಥ ಕನ್ನಡದ ಭೂಪ್ರದೇಶವನ್ನು ಕುರಿತು ಚರ್ಚಿಸುವುದು ಮುಖ್ಯವಾಗಿರುತ್ತದೆ. ವಸಾಹತುಶಾಹಿಗಳು ತಮಗೆ ಅನುಕೂಲಕರ ವಾದ ರೀತಿಯಲ್ಲಿ ಆಡಳಿತವನ್ನು ವಿಭಜಿಸಿಕೊಂಡು, ಆ ಮೂಲಕ ಅವರು ಕೈಗೊಂಡ ಕ್ರಮಗಳೇನು? ಆಡಳಿತ ನೀಡಿದ ವಿಧಾನಗಳೇನು? ಎಂಬುದು ಅರಿಯುವುದು ಅಗತ್ಯವಾದುದಾಗಿದೆ. ಅಲ್ಲದೆ ಆಂಗ್ಲರು ಇಲ್ಲಿ ಆಡಳಿತ ನಡೆಸಬೇಕಾದರೆ ಇಲ್ಲಿನ ಸ್ಥಳಗಳ ಜನರ ನೀತಿ ಇತರೆ ಎಲ್ಲಾ ಅಂಶಗಳ ಮಾಹಿತಿಯ ಪರಿಚಯ ಅಗತ್ಯವಾಗಿತ್ತು. ಆ ಮೂಲಕ ಅವರು ಅನುಸರಿಸಿದ ನೀತಿಗಳೇನು? ಎಂಬುದರ ಕುರಿತು ಬೆಳಕು ಚೆಲ್ಲುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

**೨.೩. ಗ್ಯಾಸೆಟಿಯರ್‌ಗಳ ರಚನೆಯ ಸ್ವರೂಪದ ಹಿನ್ನೆಲೆಯಲ್ಲಿ ದೇಶಿ ಹಾಗೂ ವಿದೇಶಿಯರ ಬರಹಗಳು**

ಭಾರತೀಯರು ಹಲವಾರು ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದರು. ಭೂಗೋಳಶಾಸ್ತ್ರವನ್ನು ಮಾತ್ರ ನಿರ್ಲಕ್ಷಿಸಿದ್ದರು. ಇತಿಹಾಸದ ಬಗ್ಗೆಯೂ ನಿರ್ಲಕ್ಷ್ಯ ವಹಿಸಿದ್ದು ಭಾರತೀಯರ ವೈಶಿಷ್ಟ್ಯ. ಆಗಿನ ಕಾಲದಲ್ಲಿ ಚೀನಿಯರು ಹಾಗೂ ಅರಬರು ಭೂಗೋಳಶಾಸ್ತ್ರದಲ್ಲಿ ಸಾಕಷ್ಟು ಪ್ರಾವೀಣ್ಯತೆಯನ್ನು ಸಂಪಾದಿಸಿದ್ದರು. ತಮ್ಮ ತಮ್ಮ ದೇಶಗಳ ಭೌಗೋಳಿಕ ಸ್ವರೂಪಗಳ ವಿವರವಾದ ಮಾಹಿತಿಯನ್ನು ಅವರು ಬರೆದಿಟ್ಟಿರುವರು. ಆದರೆ ಸಂಸ್ಕೃತ ವಾಙ್ಮಯವನ್ನೆಲ್ಲ ತಳಸೋಸಿ ತೆಗೆದರೂ ಭಾರತದ ಪ್ರಮುಖ ಭೌಗೋಳಿಕ ಸ್ವರೂಪಗಳ ನಿರ್ದಿಷ್ಟವಾದ ವಿವರಣೆ ನಮಗೆ ಎಲ್ಲಿಯೂ ದೊರೆಯುವುದಿಲ್ಲ[೨೯] ಎಂಬ ಅಭಿಪ್ರಾಯವಿದೆ. ಆದರೂ ಸಹ ಭಾರತೀಯರು ಹಲವಾರು ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದರೂ ಸಹ ಭೂಗೋಳಶಾಸ್ತ್ರದ ಬಗ್ಗೆ ನಿರ್ದಿಷ್ಟವಾಗಿ ಅಲ್ಲದಿದ್ದರೂ ಅವುಗಳಿಗೆ ಹೋಲಿಸಬಹುದಾದ ಸ್ವಲ್ಪಮಟ್ಟಿನ ಮಾಹಿತಿಯನ್ನು ತಮ್ಮದೇ ಆದ ರೀತಿಯಲ್ಲಿ ಕ್ರೋಢೀಕರಿಸಿಕೊಂಡಿದ್ದರು.

ಈ ದೃಷ್ಟಿಯಿಂದ ಗ್ಯಾಸೆಟಿಯರ್‌ನಂಥ ಸಾಹಿತ್ಯದ ರಚನೆ ಪ್ರಾದೇಶಿಕ ವರ್ಣನೆಗಳನ್ನೊಳಗೊಂಡ ಅನೇಕ ವಿವರಣೆ ಪುರಾಣಗಳ ಕಾಲದಿಂದಲೇ ಪ್ರಾರಂಭವಾಯಿತೆನ್ನಬಹುದು. ಒಂದು ದೇಶದ ಭೌಗೋಳಿಕ

ಲಕ್ಷಣಗಳು ಅಲ್ಲಿಯ ಜನರ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಜೀವನ ಇವನ್ನು ಕುರಿತು ಪ್ರವಾಸಿಗಳು ನೀಡುವ ವೃತ್ತಾಂತಗಳು ಸಾಹಿತ್ಯದ ಒಂದು ಬಗೆಯೆಂದು, ಸಾಕಷ್ಟು ಪ್ರಾಚೀನ ಕಾಲದಿಂದಲೂ ಪರಿಚಿತವಾಗಿದೆ. ಇದನ್ನು ಕೂಡ ಕೆಲವೊಮ್ಮೆ ಗ್ಯಾಸೆಟಿಯರ್ ವರ್ಗಕ್ಕೆ ಸೇರಿಸಲಾಗಿದೆ.[೧೦] ಭಾರತದ ವೈವಿಧ್ಯತೆಯನ್ನು ನೋಡಲು ಹಲವಾರು ದೇಶಗಳಿಂದ ನೂರಾರು ಪ್ರವಾಸಿಗಳು ಸುಮಾರು ಕ್ರಿ.ಪೂ. ೫೦೦ರಿಂದ ಅಂದರೆ ಇಲ್ಲಿಗೆ ೨೫೦೦ ವರ್ಷಗಳಿಂದ ನಮ್ಮ ದೇಶಕ್ಕೆ ಬಂದು ತಾವು ಕಂಡು, ಕೇಳಿದ ವಿಷಯಗಳನ್ನು ಬರೆದಿಟ್ಟು ಹೋಗಿದ್ದಾರೆ.

ಇದರಲ್ಲಿ ಮೊಟ್ಟ ಮೊದಲಿಗರೆಂದರೆ ಗ್ರೀಸಿನ ಹೇರೋಡೋಟಸ್ ಮತ್ತು ಫೇಸಿಯಾಸ್ ಇವರಿಗೆ ಪರ್ಷಿಯಾ ದೇಶದ ಮೂಲಗಳಿಂದ ನಮ್ಮ ದೇಶಕ್ಕೆ ಸಂಬಂಧಪಟ್ಟ ವಿಷಯಗಳು ದೊರೆತಿರಬೇಕು. ಅಲೆಗ್ಸಾಂಡರ್ ಕ್ರಿ.ಪೂ ೩೨೭ರಲ್ಲಿ ಈ ದೇಶದ ಮೇಲೆ ದಂಡಯಾತ್ರೆಗೆ ಬಂದಾಗ ಕೆಲವು ಜನ ಅವನ ಸಂಗಡ ಇಲ್ಲಿ ಕಂಡ ವಿಷಯಗಳನ್ನು ಬರೆದಿಟ್ಟು ಹೋಗಿದ್ದಾರೆ. ಅಲೆಗ್ಸಾಂಡರ್ ತನ್ನ ದೇಶಕ್ಕೆ ಹಿಂದಿರುಗಿದ ನಂತರ ಅವನು ಗೆದ್ದ ರಾಜ್ಯಕ್ಕೆ ಅಧಿಪತಿಯಾಗಿ ನೇಮಕವಾದ 'ಸೆಲ್ಯೂಕಸ್'ನಿಂದ ಕಳುಹಿಸಲ್ಪಟ್ಟ 'ಮೆಗಾಸ್ತನೀಸ್' ಎಂಬ ರಾಯಭಾರಿ ಚಂದ್ರಗುಪ್ತ ಮೌರ್ಯನ ಆಸ್ಥಾನದಲ್ಲಿ ನೆಲೆಸಿದ್ದ ವಿಚಾರ ಎಲ್ಲರಿಗೂ ಗೊತ್ತಿದೆ. ಆತನು ತಾನು ಕಂಡು ಕೇಳಿದುದನ್ನು 'ಇಂಡಿಕಾ' ಎಂಬ ಗ್ರಂಥದಲ್ಲಿ ಬರೆದಿಟ್ಟಿದ್ದಾನೆ. ಈ ಗ್ರೀಕ್ ಪ್ರವಾಸಿಗಳಲ್ಲಿ ವಿಶೇಷ ಗಮನಕ್ಕೆ ಅರ್ಹರಾದವರು, ನಮ್ಮ ದೇಶದ ಭೂಗೋಳ ಮತ್ತು ಪ್ರಾಣಿ ಜೀವನ ಚರಿತ್ರೆ ಬರೆದಂಥವರು. ಇವರಲ್ಲಿ ಅತ್ಯಂತ ಮೊದಲಿಗನು 'ಎರಿತ್ರಿನ್ ಸಮುದ್ರ ಮಾರ್ಗದರ್ಶನ'(ಪೆರಿಪ್ಲಸ್ ಆಫ್ ದೀ ಎರಿತ್ರಿಯನ್ ಸೀ) ಎಂಬ ಗ್ರಂಥ ಬರೆದ ಅನಾಮಧೇಯ. ಇವನು ಗ್ರೀಸಿನವನಾದರೂ ಈಜಿಪ್ಟಿನಲ್ಲಿ ನೆಲೆಸಿ ಕ್ರಿ.ಶ. ೮೦ರಲ್ಲಿ ಇಂಡಿಯಾ ದೇಶದ ಸಮುದ್ರತೀರದಲ್ಲಿ ಅಲೆದಾಡಿ ಈ ದೇಶದ ಬಂದರುಗಳು ಬಹುವಿಷಯಗಳಿಂದ ಕೂಡಿದ ಗ್ರಂಥಗಳನ್ನು ಬರೆದಿಟ್ಟು ಹೋಗಿದ್ದಾರೆ. ಇವನ ಗ್ರಂಥ ವಿಲ್ಲದಿದ್ದರೆ ಪ್ರಾಚೀನ ಭಾರತದ ವ್ಯಾಪಾರ ಮತ್ತು ವಾಣಿಜ್ಯ ಒಂದು ಮುಖದ ದರ್ಶನ ನಮಗೆ ದೊರೆಯದೇ ಹೋಗುತ್ತಿತ್ತು. ಆದ್ದರಿಂದ ಇವನ ಗ್ರಂಥ ಅಪರಂಜಿಗೆ ಸಮ ಎಂದು ಹೇಳಲಾಗುತ್ತದೆ.

ಇವನ ನಂತರ ಎರಡನೆಯ ಶತಮಾನದಲ್ಲಿ ಬಂದ ಟಾಲೆಮಿ ಈ ದೇಶದ ಭೂಗೋಳದ ಬಗ್ಗೆ "ಜಿಯೋಗ್ರಫಿ" ಎಂಬ ಗ್ರಂಥವನ್ನು ಶಾಸ್ತ್ರೀಯವಾಗಿ ಬರೆದಿದ್ದಾನೆ. ಆದರೂ ಇದರಲ್ಲಿ ಅನೇಕ ತಪ್ಪುಗಳಿವೆ. ಅದರಲ್ಲಿಯೂ ಈ ದೇಶದ ಆಕೃತಿಯ ಬಗ್ಗೆ ತಿಳುವಳಿಕೆ ಬಹಳ ತಪ್ಪಾಗಿದೆ. ಆದರೂ ಅವನ ಪ್ರಯತ್ನ ಸ್ತುತಿಗೆ ಅರ್ಹವಾದದ್ದು ಅನೇಕ ಅಮೂಲ್ಯ ವಿಷಯಗಳು ಅವನ ಗ್ರಂಥದಿಂದ ತಿಳಿಯುತ್ತವೆ. ಈ ಮಾತನ್ನು ಇದಕ್ಕೆ ಮುಂಚೆ ಅಂದರೆ ಕ್ರಿ.ಶ ಒಂದನೇ ಶತಮಾನದಲ್ಲಿ ಈ ದೇಶದ ಪ್ರಾಣಿಗಳು, ಗಿಡಮರಗಳು, ಖನಿಜಗಳ ಬಗ್ಗೆ ಬರೆದ ಗ್ರಂಥಗಳಿಗೂ ಹೇಳಬಹುದು.

ಈ ಗ್ರೀಕ್ ಲೇಖಕರು ಬರೆದುದು ನಮಗೆ ತಿಳಿಯುವಂತೆ ಮಾಡಿದ ಉಪಕಾರ 'ಮಾಕ್ರಿಂಡಲ್' ಎಂಬ ಮಹಾಶಯನಿಗೆ ಸಲ್ಲಬೇಕು. ಅವರು ಮೂಲ ಭಾಷೆಯಲ್ಲಿದ್ದ ಗ್ರಂಥಗಳನ್ನು ಇಂಗ್ಲಿಷಿಗೆ ತರ್ಜುಮೆ ಮಾಡಿ ಕೃತಾರ್ಥರಾಗಿದ್ದಾರೆ.

ಗ್ರೀಕ್ ಲೇಖಕರು ಮತ್ತು ಪ್ರವಾಸಿಗಳ ನಂತರ ನಮ್ಮ ದೇಶಕ್ಕೆ ಅರಬ್ಬಿ ನಾವಿಕರು, ವರ್ತಕರು ಬಂದರು. ಅವರಲ್ಲಿ 'ಸುಲೇಮಾನ್' ಮತ್ತು 'ಆಲ್‌ಮಸೂರಿ' ಎಂಬುವರು ಬರೆದಿಟ್ಟ ವಿಷಯಗಳು ಅಲ್ಪವಾದರೂ ಉಪಯುಕ್ತವಾಗಿದೆ.[೬೧]

ಕೌಟಿಲ್ಯನ 'ಅರ್ಥಶಾಸ್ತ್ರ'ದಲ್ಲಿ ಮೌರ್ಯಕಾಲೀನ ಭಾರತದ ಬಗ್ಗೆ ಭೌಗೋಳಿಕ ಮತ್ತಿತರ ವಿಷಯಗಳ ಅಂಕಿ -ಅಂಶಗಳ ಸಹಿತವಾದ ಅಮೂಲ್ಯ ವಿವರಗಳನ್ನೊದಗಿಸುತ್ತದೆ. ಈ ಗ್ರಂಥದಲ್ಲಿ ಒಂದುನೂರ ಎಂಬತ್ತು ಪ್ರಕರಣಗಳನ್ನೊಳಗೊಂಡ ಹದಿನೈದು ಅಧಿಕಾರಿಣೆಗಳಿದ್ದು ಅವುಗಳನ್ನು ತಂತ್ರ, ಅವಾಸ, ಶೇಷ ಎಂದು ಮೂರು ಭಾಗವಾಗಿ ವಿಂಗಡಿಸಲಾಗಿದೆ. ಇದರಲ್ಲಿ ಅಸಂಖ್ಯಾತ ವಿಷಯಗಳು ಅಡಗಿವೆ, ರಾಜನೀತಿ, ರಾಜ್ಯಕಾರ್ಯದ ಎಲ್ಲಾ ಅಂಶಗಳು ಇದರಲ್ಲಿ ವಿವರಿಸಲ್ಪಟ್ಟಿವೆ. ರಾಜ, ಆತನ ಪ್ರತಿನಿಧಿಗಳು, ಮಂತ್ರಿಗಳು, ಮಂತ್ರಾಲೋಚನಾ ಸಭೆಯ ರಾಜ್ಯದ ವಿವಿಧ ಅಂಶಗಳು, ಯುದ್ಧ ಮತ್ತು ಶಾಂತಿ ಕಾಲದ ರಾಜನೀತಿಯೂ ಅದರಲ್ಲಿದೆ. ಹಸ್ತಿ, ಅಶ್ವ, ರಥ ಪದಾತಿಗಳನ್ನೊಳಗೊಂಡ ಚಂದ್ರಗುಪ್ತನ ಮಹಾಸೇನೆಯ ವಿವರವಿದೆ. ಆದಾಗ್ಯೂ ಬರೀ ಸಂಖ್ಯೆ ಇದ್ದರೆ ಮಾತ್ರ ಸಾಲದು. ಶಿಸ್ತು, ಸಂಘಟನೆ ಮತ್ತು ಸರಿಯಾದ ನಾಯಕತ್ವವಿಲ್ಲದೆ ಅದೊಂದು ಭಾರವಾಗಬಹುದು ಎಂದಿದ್ದಾನೆ. ರಾಜ್ಯ ರಕ್ಷಣೆ ಮತ್ತು ಕೋಟೆಕೊತ್ತಲಗಳ ವಿಷಯವನ್ನು ತಿಳಿಸಿದ್ದಾನೆ.[೬೨]

ಅಲ್ಲದೆ ವಜ್ರ ಮತ್ತು ಇತರ ಸರಕುಗಳ ಬಗ್ಗೆ ಬರೆಯುವಾಗ ಅವು ಯಾವ ಯಾವ ಸ್ಥಳಗಳಲ್ಲಿ ದೊರೆಯುತ್ತದೆ ಎಂಬುದನ್ನು ಕೌಟಿಲ್ಯ ಹೇಳುತ್ತಾನೆ. ತಾಮ್ರಪಣಿ, ಪಾಂಚ್ಯಕವಾಟ ಹಾಗೂ ಕೇರಳದಲ್ಲಿಯ ಚೂರ್ಣಿನದಿ ಇವು ವಜ್ರಗಳು ದೊರೆಯುವ ಸ್ಥಳಗಳು ಎಂದು ಕೌಟಿಲ್ಯ ಬರೆದಿದ್ದಾನೆ. ದೇಶದ ವಿವಿಧ ಪ್ರದೇಶಗಳನ್ನು ಉಲ್ಲೇಖಿಸುತ್ತಾನೆ. ಆ ಪ್ರದೇಶಗಳು ಭೌಗೋಳಿಕ ಸ್ವರೂಪದ ಪರಿಚಯಕ್ಕೆ ಆ ಉಲ್ಲೇಖಗಳಿಂದ ಪ್ರಯೋಜನವಾಗುವುದಿಲ್ಲ.

ವಾತ್ಸಾಯನನು ತನ್ನ 'ಕಾಮಸೂತ್ರ' ಗ್ರಂಥದಲ್ಲಿ ಭಾರತದ ಬೇರೆ ಬೇರೆ ಭಾಗದ ಜನರ ಸಂಪ್ರದಾಯ ಹಾಗೂ ವ್ಯವಹಾರಗಳನ್ನು ವರ್ಣಿಸಿದ್ದಾನೆ. ಭಾರತದ ಪ್ರಾಕೃತಿಕ ಸ್ವರೂಪದಲ್ಲಿ ಪ್ರಾಚ್ಯ, ಮಧ್ಯದೇಶ ಹಾಗೂ ದಕ್ಷಿಣಪಥ ಎಂದು ಮೂರು ವಿಭಾಗಗಳನ್ನು ಮಾಡಿದ್ದಾನೆ. ಅನೇಕ ರಾಜ್ಯಗಳ ಹೆಸರುಗಳನ್ನು ಹೇಳುತ್ತಾನೆ. ಅವು ಇದ್ದಿರಬಹುದಾದ ಸ್ಥಳಗಳ ಮಾಹಿತಿಯನ್ನು ನಿರ್ದಿಷ್ಟವಾಗಿ ಕೊಡುತ್ತಾನೆ. ಇಲ್ಲಿಗೆ ಭೂಗೋಳದ ಅವನ ಚರ್ಚೆ ನಿಲ್ಲುತ್ತದೆ.

ವಿವಿಧ ಜನರ ರೀತಿ ರಿವಾಜುಗಳನ್ನು ಖಚಿತವಾಗಿ ವಿವರವಾಗಿ ವರ್ಣಿಸುತ್ತಾನೆ. ಆದ್ದರಿಂದ ಸಾಮಾಜಿಕ ಇತಿಹಾಸಕಾರರಿಗೆ ಪ್ರಯೋಜನವಾಗಬಲ್ಲದು. ಅವನು ಉಲ್ಲೇಖಿಸಿದ ಪ್ರದೇಶಗಳ ಭೌಗೋಳಿಕ ಮಾಹಿತಿಯ ದೃಷ್ಟಿಯಿಂದ ಹಾಗೂ ಭೂಗೋಳಶಾಸ್ತ್ರದ ದೃಷ್ಟಿಯಿಂದ ವಾತ್ಸಾಯನನ ವಿವರಗಳು ಅಪ್ರಸ್ತುತವಾಗುತ್ತವೆ. ಕಾಳಿದಾಸನ ಮಾತೇ ಬೇರೆ. ಅವನ 'ಮೇಘದೂತ' ಹಾಗೂ 'ರಘುವಂಶ' ಕಾವ್ಯಗಳಲ್ಲಿ ಭಾರತದ ಬೆಟ್ಟಗಳು, ನದಿಗಳು, ಮೈದಾನಗಳು, ಪರ್ವತ ಹಾಗೂ ನಗರಗಳ ವರ್ಣನೆಗಳು ಉದ್ದಕ್ಕೂ ಹರಡಿಕೊಂಡಿವೆ.

ರಾಮಗಿರ್ಯಾಶ್ರಮದಿಂದ ಹಿಮವತ್ ಪರ್ವತದ ಮಹಾದ್ವಾರದವರೆಗೆ ಹೋಗಿ ಮುಂದೆ ಆ ಪರ್ವತವನ್ನು ಹೇಗೆ ಏರಬೇಕು ಎಂಬುದನ್ನು ಕಾಳಿದಾಸನ ಯಕ್ಷನು ಮೇಘಕ್ಕೆ ಹೇಳುತ್ತಾನೆ. ಕವಿಗಳಲ್ಲಿ ಕ್ವಚಿತ್ತಾಗಿ ಕಂಡುಬರುವ ಭೌಗೋಳಿಕ ದೃಷ್ಟಿಕೋನದ ಅರಿವು ಕಾಳಿದಾಸನಲ್ಲಿ ಪ್ರಬಲವಾಗಿದ್ದನ್ನು ಈ ವರ್ಣನೆಗಳು ತೋರಿಸಿಕೊಡುತ್ತವೆ.[೩೩] ಇವು ಗ್ಯಾಸೆಟಿಯರುಗಳಿಗೆ ಹೋಲಿಸಬಹುದಾದ ಕೃತಿಗಳಾಗಿವೆ. ಅಲ್ಲದೆ ವಿಶ್ವಕೋಶವನ್ನೇ ಹೋಲುವ ಕೃತಿಗಳು ನಮ್ಮಲ್ಲಿಯೂ ಉಂಟು. ಕನ್ನಡದಲ್ಲಿ ಈ ಬಗೆಯ ಬಹು ವಿಷಯ ವಸ್ತುಕೋಶ ರಚನೆಗೊಂಡದ್ದು ಉಂಟು.

ಚಾವುಂಡರಾಯನ 'ಲೋಕೋಪಕಾರ' ಇದಕ್ಕೆ ಮೊದಲ ಹಾಗೂ ಮುಖ್ಯ ಉದಾಹರಣೆ ಚಾವುಂಡರಾಯನ 'ಕಾಲ ಕ್ರೋಧನ ಸಂವತ್ಸರ ಮಾರ್ಗಶಿರ ಮಾಸದ ನಿತ್ಯಪಕ್ಷದ ಬಿದಿಗೆ ಗುರುವಾರ ಪುಷ್ಯ ನಕ್ಷತ್ರದಲ್ಲಿ' ಈ ಗ್ರಂಥವು ಮುಗಿಯಿತೆಂದು ಹೇಳುವುದರಿಂದ ಈ ಕವಿಯ ಕಾಲ ಕ್ರಿ.ಶ. ೧೦೨೫, ಚಾಲುಕ್ಯ ಜಯಸಿಂಹನ ಶಾಸನಗಳ ಆಧಾರದಿಂದ ಈ ಕಾಲವನ್ನು ಸಮರ್ಥಿಸಲು ಅವಕಾಶಗಳಿವೆ. ಇವನು 'ಚಾಲುಕ್ಯಭರಣಂ ತ್ರಿಭುವನ ಮಲ್ಲದೇವನ' ಪೋಷ್ಯವರ್ಗಕ್ಕೆ ಸೇರಿದವನು. ಇವನು ಬ್ರಾಹ್ಮಣ ಮನುಷ್ಯನಿಗೆ ಜೀವಿತಕಾಲದಲ್ಲಿ ಅವಶ್ಯವಿರುವಂತಹ ಎಲ್ಲ ವಿದ್ಯೆಗಳು ಇದರಲ್ಲಿ ಅಡಗಿರುವುದರಿಂದ ಈ ಹೆಸರು ಈ ಗ್ರಂಥಕ್ಕೆ ಸಂಪೂರ್ಣ ಅನ್ವಯವಾಗುತ್ತದೆ. 'ಲೋಕೋಪಕಾರ' ಪ್ರಾರಂಭವಾಗುವುದೇ ಭೂಮಂಡಲ ಎಂಬ ರೂಪಕ ಪ್ರಪಂಚದಿಂದ ಅದೇ ರೀತಿ ಗ್ಯಾಸೆಟಿಯರುಗಳ ಮೊದಲ ಅಧ್ಯಯನವು ಭೂಮಂಡಲದ ನೈಸರ್ಗಿಕ ಸಂಪನ್ಮೂಲಗಳಿಂದ ಪ್ರಾರಂಭವಾಗುತ್ತದೆ. ಆದ್ದರಿಂದ ನಿರ್ವಿವಾದವಾಗಿ 'ಲೋಕೋಪಕಾರ' ಕನ್ನಡದಲ್ಲಿ ಮೊದಲ ವಿಶ್ವಕೋಶ. ವಿಶ್ವಕೋಶವನ್ನು ಇನ್ನೊಂದು ಪರಿಭಾಷೆಯ ಮೂಲಕ ಹೇಳುವುದಾದರೆ ಬಹು ವಿಷಯವಸ್ತುಕೋಶ ಎಂದು ಕರೆಯಬಹುದಾಗಿದೆ.[೩೪]

ಸೋಮೇಶ್ವರನ 'ಮಾನಸೋಲ್ಲಾಸ' ಪ್ರಾಚೀನ ಕರ್ನಾಟಕದ ಒಂದು ಸುಪ್ರಸಿದ್ಧ ವಿಶ್ವಕೋಶ. ಈ ಕೃತಿಯನ್ನು ರಚಿಸಿದವನು ೧೨ನೇ ಶತಮಾನದ ಕಲ್ಯಾಣ ಚಾಲುಕ್ಯರ ಚಕ್ರವರ್ತಿ ಸರ್ವಜ್ಞ ಸೋಮೇಶ್ವರ, ಕನ್ನಡಿಗನೊಬ್ಬನು ಸಂಸ್ಕೃತದಲ್ಲಿ ರಚಿಸಿದ 'ಮಾನಸೋಲ್ಲಾಸ'ವು ಸಂಸ್ಕೃತದ ಮೊದಲ ವಿಶ್ವಕೋಶವೆಂದು ಪರಿಗಣಿಸಲ್ಪಟ್ಟಿದೆ. ಸಂಸ್ಕೃತ ಭಾಷೆಯ ಇದರ ಮೂಲ ಗ್ರಂಥದಲ್ಲಿ ೫ ವಿಂಶತಿಯಿದ್ದು ಪ್ರತಿಯೊಂದು ವಿಂಶತಿಯಲ್ಲಿ ೨೦ ಅಧ್ಯಯನದಂತೆ ಒಟ್ಟು ೧೦೦ ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯದಲ್ಲಿ ಒಂದು ಮುಖ್ಯ ವಿಷಯದ ಬಗ್ಗೆ ವಿವರಣೆ ಸಿಗುತ್ತದೆ. ಈ ಮುಖ್ಯ ವಿಷಯವಲ್ಲದೆ ಆಯಾ ವಿಷಯಗಳಿಗೆ ಸಂಬಂಧಿಸಿದ ಉಪ ವಿಷಯಗಳು ಬರುತ್ತವೆ. ಹೀಗೆ ಇದು ಸಾವಿರಾರು ವಿಷಯಗಳನ್ನೊಳಗೊಂಡ ಮಹಾಕೋಶ, ಇದರ ಎಲ್ಲಾ ಅಧ್ಯಾಯ ಸೇರಿ ಒಟ್ಟು ಸುಮಾರು ೮೦೦ ಶ್ಲೋಕಗಳು ಈ ಕೃತಿಯಲ್ಲಿವೆ. ಆಗಿನ ಕರ್ನಾಟಕದ ರಾಜನೀತಿ, ಜ್ಯೋತಿಷ್ಯ, ವೈದ್ಯ, ವಾಸ್ತುವಿಗ್ರಹ, ರಾಜಭೋಗ, ರಾಜಉಪಭೋಗ, ವಿನೋದ, ಗೀತ, ವಾದ್ಯ, ನೃತ್ಯ, ಕಥಾ ಚಮತ್ಕಾರ, ಕ್ರೀಡೆ ಮೊದಲಾದ ಕ್ಷೇತ್ರಗಳ ಮೇಲೆ ಬೆಳಕು ಚೆಲ್ಲುವ ಅಗಾಧ ಮಾಹಿತಿ ಈ ಕೃತಿಯಲ್ಲಿ ಇದೆ.[೩೫]

ಸ್ಥಳಪುರಾಣಗಳು ಮತ್ತು ಪಾಶ್ಚಾತ್ಯ ಪ್ರವಾಸಿಗಳು ಒದಗಿಸುವ ಕಥನಗಳು ಇದೇ ಗುಂಪಿಗೆ ಸೇರುತ್ತವೆ. ವಿಜಯನಗರ ಕಾಲದಲ್ಲಿಯೂ ಅನೇಕ ಜನ ಪ್ರವಾಸಿಗರು ಬಂದು ಹೋಗಿದ್ದಾರೆ. ಅದರಲ್ಲಿ ಪ್ರಮುಖನೆಂದರೆ ಅಬ್ದುಲ್‌ರಜಾಕ್ ಇವನು ಕ್ರಿ.ಶ. ೧೪೪೧ರಲ್ಲಿ ರಾಯಭಾರಿಯಾಗಿ ಕಲ್ಲಿಕೋಟೆಯಲ್ಲಿ ಇಳಿದು ಅಲ್ಲಿನ ಜಾಮೊರಿನ್ ದೊರೆಯನ್ನು ಕಂಡು ಅಲ್ಲಿಂದ ಮಂಗಳೂರು ಮಾರ್ಗವಾಗಿ ವಿಜಯನಗರ ತಲುಪಿದ. ವಿಜಯನಗರದಲ್ಲಿ ಅವನಿಗೆ ಆದರಪೂರ್ವಕವಾಗಿ ಸ್ವಾಗತ ಸಿಕ್ಕಿತು ಎಂದು ಬರೆದಿದ್ದಾನೆ. ಅವನ ಬರವಣಿಗೆಯ ಪ್ರಕಾರ ವಿಜಯನಗರವು ಬಹಳ ದೊಡ್ಡದಾದ ಜನವಸತಿಯುಳ್ಳ ರಾಜ್ಯ. ರಾಜನ ಖ್ಯಾತಿ ಮತ್ತು ಅವನ ಪ್ರಭುತ್ವ ಮಹೋನ್ನತವಾಗಿದೆ. ರಾಜ್ಯ ಸೆರೆನ್‌ದಿಜ(ಸಿಂಹಳ) ಗಡಿಯಿಂದ ಕಲ್ಬರ್ಗದ ಕೊಟ್ಟ ಕೊನೆಯವರೆಗೆ ಬಂಗಾಳದಿಂದ ಮೆಲಿಬಾರ್(ಮಲಬಾರ್) ಕೊನೆಯವರೆಗೆ (ಕೃಷ್ಣಾನದಿಯಿಂದ ಕೇಪ್ ಕಾಮೋರಿನ್‌ನವರೆಗೆ) ಸಾವಿರ ಫರ್ಲಾಂಗುಗಳಷ್ಟು ವಿಸ್ತರಿಸಿದೆ. ದೇಶದ ಬಹುಭಾಗ ಸಾಗುವಳಿಯಲ್ಲಿಟ್ಟು ಬಹು ಫಲವತ್ತಾಗಿದೆ. ಈ ದೇಶದಲ್ಲಿ ಮುನ್ನೂರು ಬಂದರುಗಳಿವೆ. ಪರ್ವತೋಪಾದಿಯಲ್ಲಿರುವ ಮತ್ತು ಪೆಡಂಭೂತಗಳಂತಿರುವ ಸಾವಿರಕ್ಕೂ ಮೀರಿದ ಆನೆಗಳನ್ನು ಇಲ್ಲಿ ನೋಡಬಹುದು. ಇಲ್ಲಿನ ಸೈನ್ಯದಲ್ಲಿ ಹನ್ನೊಂದು ಲಕ್ಷದಷ್ಟು ಯೋಧರಿದ್ದಾರೆಂದು, ಈ ರಾಯನ ಶ್ರೇಷ್ಠತೆಯನ್ನು ಮೀರಿಸುವವರು ಇಡೀ ಹಿಂದೂಸ್ಥಾನದಲ್ಲಿ ಎಲ್ಲಿ ಹುಡುಕಿದರೂ ಸಿಕ್ಕುವುದಿಲ್ಲ.

ಹಿಂದೂಸ್ತಾನದ ರಾಜರನ್ನು ರಾಯ್ ಎಂದು ಕರೆಯುತ್ತಾರೆ. ರಾಯನನ್ನು ಬಿಟ್ಟರೆ ಬ್ರಾಹ್ಮಣರು ಉಳಿದೆಲ್ಲರಿಗಿಂತ ಶ್ರೇಷ್ಠ ಸ್ಥಾನವನ್ನು ಪಡೆದಿದ್ದಾರೆ. ಅಲ್ಲದೆ ಏಳುಸುತ್ತಿನ ಕೋಟೆಯ ಬಗ್ಗೆ ವೇಶ್ಯಾಗೃಹಗಳ ವೇಶ್ಯಯರ ವಿವರಣೆ, ಅವರ ಆದಾಯ, ಉಡುಪುಗಳ ಬಗ್ಗೆ, ಭೋಜನ ಬಗ್ಗೆ, ಜನರ ಗೃಹಗಳ ಬಗ್ಗೆ, ಜನಜೀವನ ಬಗ್ಗೆ ವಿವರಣೆ ಇದೆ. ಈ ಮೂಲಕ ಅಂದಿನ ಸ್ಥಿತಿಗತಿ ಬಗ್ಗೆ ತಿಳಿಯಬಹುದಾಗಿದೆ.[೩೬]

ಡೊಮಿಂಗೋ ಪ್ಯಾಸ್ ಕ್ರಿ.ಶ. ೧೫೨೦ರಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ಅಂದರೆ ವಿಜಯನಗರಕ್ಕೆ ಬಂದಿದ್ದನು. ಅದು ವಿಜಯನಗರದ ಉಚ್ಛ್ರಾಯ ಕಾಲ. ಕೃಷ್ಣದೇವರಾಯನನ್ನು ಪ್ಯಾಸ್ ಹಲವಾರು ಸಲ ಕಂಡು ಅವನ ವೈಭವದ ಬಗ್ಗೆಯೂ, ಅವನ ಕಾಲದ ನಡೆನುಡಿಗಳ ಬಗ್ಗೆಯೂ ಬರೆದಿದ್ದಾನೆ. ನ್ಯೂನಿಜ್ ಬಂದದ್ದು ಪ್ಯಾಸ್‌ನ ನಂತರ ಕ್ರಿ.ಶ. ೧೫೩೭ ಅಥವಾ ಕ್ರಿ.ಶ. ೧೫೭೭ರಲ್ಲಿ. ಆಗ ಕೃಷ್ಣದೇವರಾಯನ ನಂತರ ಪಟ್ಟಕ್ಕೆ ಬಂದ ಅಚ್ಚುತರಾಯ ಆಳುತ್ತಿದ್ದ ಕಾಲ. ಇವನು ಕೈಯಲ್ಲಾಗದ ಸ್ವಾರ್ಥದ, ಹೇಡಿತನದ, ಕ್ರೂರ ಸ್ವಭಾವದ ವಿವರವಿದೆ. ಅವನ ಈ ಗುಣಗಳು ವಿಜಯನಗರದ ಸಾಮ್ರಾಜ್ಯದ ಅವನತಿಗೆ ಅಂಕುರಾರ್ಪಣ ಮಾಡಿದನು. ಇವನು (ಪ್ಯಾಸ್ ಮತ್ತು ನ್ಯೂನಿಜ್) ಬರೆದಿರುವುದು ಚರಿತ್ರಾ ದೃಷ್ಟಿಯಿಂದಲಾಗಲೀ ಅಥವಾ ಆ ದೇಶದ ಅದರಲ್ಲಿಯೂ ರಾಜಧಾನಿಯ ಅದರ ಉತ್ಪನ್ನ ವಸ್ತುಗಳು ಅಲ್ಲಿಯ ಪದ್ಧತಿಗಳ ಮತ್ತು ಇತರ ಸಂಗತಿಗಳ ವರ್ಣನೆಯ ದೃಷ್ಟಿಯಿಂದಲಾಗಲೀ ಬೇರೆಯವರ ವಿವರಣೆಯನ್ನು ಸಹ ಮೀರಿಸುತ್ತವೆ. ಇಟಲಿ ದೇಶದ ಪ್ರವಾಸಿಗಳಾದ ನಿಕೋಲೊ-ದೆ-ಕೊಂತಿ, ವಜ್ತಿಮಾ ಮತ್ತು ಫ್ರೆಡರಿಕ್ ಇವರು ಕಂಡು ಬರೆದ ಚಿತ್ರಣ ಇವುಗಳಷ್ಟು ವಿವರವಾಗಿಲ್ಲ, ಈ ಕಾರಣಗಳಿಂದ ಪ್ಯಾಸ್ ಮತ್ತು ನ್ಯೂನಿಜ್ ವೃತ್ತಾಂತಗಳು ವಿಜಯನಗರ ಸಾಮ್ರಾಜ್ಯ ಸ್ಥಿತಿ-ಗತಿಗಳನ್ನು ಅರಿಯಲು ಬಹು ಸಹಾಯಕವಾಗಿವೆ.[೩೭]

ಆದರೆ ಉತ್ಕೃಷ್ಟ ಉದಾಹರಣೆಯೆಂದರೆ ಅಬುಲ್ ಫಜಲ್‌ನ ಐನ್ ಇ ಅಕ್ಬರಿ. ಅಕ್ಬರ ಸಂಸ್ಥೆಗಳು ವ್ಯವಸ್ಥಿತ ಸಂಶೋಧನೆ ಹಾಗೂ ಅಸಾಧಾರಣ ಪ್ರಯತ್ನಗಳ ಫಲವಾಗಿ ಅಕ್ಬರನ ರಾಜ್ಯ ಪದ್ಧತಿ ಆಗಿನ ಕಾಲದ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿ, ಸೈನ್ಯ ಪರಿವೀಕ್ಷಣೆ ಮುಂತಾದ ವಿವರಗಳನ್ನು ನೀಡುವ ಗ್ರಂಥ. ಮೊಗಲ್ ಹಾಗೂ ಮರಾಠ ರಾಜ್ಯಗಳಲ್ಲಿ ಅಲ್ಲಲ್ಲಿಯ ಮುಖ್ಯಸ್ಥಳಗಳಲ್ಲಿ ಅಖಾಬಾರನ್ ವೀಸಾ ಎಂಬ ಅಧಿಕಾರಗಳನ್ನು ನೇಮಿಸಲಾಗಿತ್ತು. ಅವರು ತಮ್ಮ ಮೇಲಧಿಕಾರಿಗಳಿಗೆ ಆಗಾಗ್ಗೆ ವಿಶೇಷ ವಿವರಣೆಗಳನ್ನು, ಪತ್ರಿಕೆಗಳನ್ನು ಕಳುಹಿಸುತ್ತಿದ್ದರು.[೩೮] ಅಲ್ಲಿ ವಿವರಿಸಿ ಐನ್‌ಗಳೇ ಗ್ಯಾಸೆಟಿಯರ್‌ನಲ್ಲಿ ಇರತಕ್ಕಂಥ ವಿಷಯಗಳಾಗಿವೆ. ಆದ್ದರಿಂದ ಇವೊಂದು ಪ್ರಮುಖ ಆಧಾರಗಳೆಂದು ಪರಿಗಣಿಸಲ್ಪಟ್ಟಿವೆ.[೩೯]

ಭಾರತೀಯ ಸಾಹಿತ್ಯದಲ್ಲಿ ಕಲ್ಹಣನಿಗೆ ವಿಶಿಷ್ಟಸ್ಥಾನವಿದೆ. ಅವನು ವಿಶ್ವಮಾನ್ಯನೆಸಿದ ಓರ್ವ ಕವಿ, ಚರಿತ್ರೆಕಾರ, ಸಾಮಾಜಿಕ ಕಳಕಳಿಯ ಚಿಂತಕನೆಂದು ಗುರುತಿಸಲ್ಪಟ್ಟಿದ್ದಾನೆ. ಇವನು ರಚಿಸಿದ 'ರಾಜತರಂಗಿಣಿ' ಬಹಳ ಅಪೂರ್ವವಾದ ಗ್ರಂಥ ಕಲ್ಹಣನು ತನ್ನ ಕೃತಿಯಲ್ಲಿ ನಿರೂಪಿಸಿದ ಅಧಿಕೃತ ದಾಖಲೆ ಗ್ರಂಥವು ಎಂದು ರಾಜತರಂಗಿಣಿ ವಿಶ್ವಮಾನ್ಯವಾಗಿದೆ. ಇದರಲ್ಲಿ ಪ್ರಾಚೀನಕಾಲದಿಂದ ಆರಂಭಿಸಿ ೧೨ನೇ ಶತಮಾನದವರೆಗಿನ ಕಾಶ್ಮೀರದ ಇತಿಹಾಸವನ್ನು ಪ್ರಮುಖವಾಗಿ ದಾಖಲಿಸುವ ಅದ್ವಿತೀಯ ಕೃತಿಯೆಂದು ಪ್ರಸಿದ್ಧಗೊಂಡಿದೆ. ಕಲ್ಹಣನು ಚಿತ್ರಿಸಿದ ಕಾಶ್ಮೀರದ ಭೂಭಾಗ ಬಹಳ ವಿಸ್ತಾರವಾಗಿತ್ತು. ಇಂದಿನ ಕಾಶ್ಮೀರಕ್ಕಿಂತ ಬಹುಪಾಲು ದೊಡ್ಡದಾದ ಅಂದಿನ ಸಾಮ್ರಾಜ್ಯಕ್ಕೆ ಅಫಘಾನಿಸ್ತಾನ ಹಾಗೂ ನಮ್ಮ ಕೈತಪ್ಪಿರುವ ಕೆಲ ಭೂಭಾಗಗಳು ಸೇರಿದ್ದವು. ಕಪಿಲ, ಗಾಂಧಾರ ವರ್ಣಿಸಿದ ಇನ್ನಿತರ ಕಾಶ್ಮೀರದ ಭಾಗಗಳಾಗಿದ್ದವು. ಕಲ್ಹಣನು ರಾಜತರಂಗಿಣಿಯಲ್ಲಿ ತನ್ನ ಕಾಲದ ರಾಜನೈತಿಕ ವಿಚಾರಗಳನ್ನು ಸ್ಪಷ್ಟವಾಗಿ ನಿರೂಪಿಸಿದ್ದಾನೆ. ಜನಜೀವನ ವಿಧಾನ, ಆಡಳಿತ, ಒಳಗುಟ್ಟು, ಅಧಿಕಾರಿಗಳ ಮರ್ಜಿಗಳನ್ನೆಲ್ಲಾ ಕಲ್ಹಣನು ಸ್ಪಷ್ಟವಾಗಿ ಗುರುತಿಸಿದ್ದಾನೆ. ಕಾಯಸ್ಥ ಎಂಬುದು ಜಾತಿಯಾಗಿರಲಿಲ್ಲ. ರಾಜರು ತಮ್ಮ ಆಡಳಿತದ ವ್ಯವಸ್ಥೆಗಾಗಿ ನೇಮಿಸಿಕೊಂಡ ಅಧಿಕಾರಿಗಳು, ಕ್ರಮೇಣ ತಮ್ಮ ಸಂಘಟನೆಗಳನ್ನು ಬೆಳೆಸಿಕೊಂಡು ರಾಜಸ್ವವನ್ನು ಅಪಹರಿಸುವ ಮಟ್ಟಕ್ಕೆ ತಲುಪಿದರು. ಜನರಲ್ಲಿ ಅಂಥ ವಿಶ್ವಾಸ ಹರಡಿತ್ತು. ಬ್ರಾಹ್ಮಣರು ಪೂಜೆ ಪುನಸ್ಕಾರಗಳ ಹೆಸರಿನಲ್ಲಿ ಪ್ರಜೆಗಳನ್ನು ಸುಲಿಗೆ ಮಾಡುತ್ತಿದ್ದರಲ್ಲದೆ ರಾಜರನ್ನು ಸಹ ಉಪವಾಸಾದಿಗಳಿಂದ ಬೆದರಿಸಿ ಹಣ ಕೀಳುತ್ತಿದ್ದರು. ಹೀಗಾಗಿ ಪುರೋಹಿತಶಾಹಿ ವರ್ಗ ಪ್ರಬಲವಾಗಿತ್ತು ಹಾಗೂ ಶ್ರಮಜೀವಿಗಳ ಶ್ರಮದ ಫಲವಾಗಿ ನಾನಾ ವರ್ಗಗಳು ಇಂದಿನಂತೆ ಅಂದೂ ಸುಲಿಗೆ ಮಾಡುವುದು ರೂಢಿಯಾಗಿತ್ತು. ರಾಜರ ಸುಖಲೋಲುಪತೆ, ರಾಣಿಯರ ಅನೈತಿಕತೆ, ಪಾಮರರ ಕ್ರೂರ ನೀತಿಗಳನ್ನು ಅವನು ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆದಿದ್ದಾನೆ. ಹಾಗೆಯೇ ಉತ್ತಮವಾದ ಪರಂಪರೆ, ವಿದ್ಯೆ, ಸಂಸ್ಕೃತಿ ರಾಜನೀತಿಯನ್ನು ಅವನು ಎತ್ತಿಹಿಡಿದಿದ್ದಾನೆ. ಅವನ ಕಾಲದಲ್ಲಿ ಕಾಶ್ಮೀರದಲ್ಲಿ, ಶೈವ, ವೈಷ್ಣವ, ಬೌದ್ಧ, ಜೈನ ಮೊದಲಾದ ವಿಭಿನ್ನ ಧರ್ಮಗಳು ಪರಸ್ಪರ ಸಹಿಷ್ಣುತೆಗಳಿಂದ ಆರಾಧನೀಯವಾಗಿದ್ದವು. ಕಲ್ಹಣನು ಚರಿತ್ರೆ ನಿರೂಪಣೆಗಾಗಿ ಹಳ್ಳಿ, ಹಳ್ಳಿಗಳಲ್ಲಿ ಮಠಮಂದಿರಗಳನ್ನು ಸುತ್ತಿ ಪ್ರಾಮಾಣಿಕವಾದ ದೇಶಭಕ್ತಿಯ ಗಾದೆಯನ್ನು ನಿರ್ಮಿಸಿ ಮುಂದಿನ ಪರಂಪರೆಗೆ ಬಿಟ್ಟುಹೋಗಿದ್ದಾನೆ. ನಿರ್ಭೀತ, ನಿಷ್ಪಕ್ಷಪಾತ, ಪ್ರಾಮಾಣಿಕ ಚರಿತ್ರೆಕಾರನಾದ ಕಲ್ಹಣನು ಒಬ್ಬ ಉತ್ತಮ ನ್ಯಾಯಾಧೀಶನಂತೆ

ವರ್ತಿಸಿದ್ದಾನೆ. ತಪ್ಪುಗಳನ್ನು ಖಂಡಿಸಿದ್ದಾನೆ. ಚರಿತ್ರೆಯನ್ನು ಯಥಾವತ್ ಆಗಿ ರಚಿಸಿದ್ದಾನೆ. ವಂಶಾವಳಿಯನ್ನು ಕೂಡಾ ಗಮನವಿಟ್ಟು ನಿರೂಪಿಸಿದ್ದಾನೆ. ಉತ್ತರದ ತಾನಿರುವುದಕ್ಕಿಂತ ಮೇಲೇರಿ ಭಾರತವನ್ನು ಕಂಡಿದ್ದಾನೆ. ರಾಜತರಂಗಿಣಿಯಲ್ಲಿ ಕಾಶ್ಮೀರದ ರಾಜನೀತಿಯ ಇತಿಹಾಸ, ಅದರ ಭೌಗೋಳಿಕ ವಿಸ್ತಾರ, ಸಾಮಾಜಿಕ ವ್ಯವಸ್ಥೆ, ಸಾಹಿತ್ಯಕ ಸಮೃದ್ಧಿ, ಆರ್ಥಿಕ ಸ್ಥಿತಿಗತಿ ಇದೇ ಮುಂತಾದ ಹಲವುಹತ್ತು ವಿವರಗಳನ್ನು ಬಹುವ್ಯಾಪ್ತಿಯಲ್ಲಿ ನೀಡುವುದರಿಂದ ಕಲ್ಹಣನ 'ರಾಜತರಂಗಿಣಿ' ಗ್ರಂಥವನ್ನು 'ವಿಶ್ವಕೋಶ'ವೆಂದೇ ಪ್ರಾಜ್ಞರು ಪರಿಗಣಿಸಿದ್ದಾರೆ.[೪೦]

ಕೆಳದಿಯ ಶ್ರೀ ಬಸವರಾಜ ಎಂಬ ಕನ್ನಡಿಗನು 'ಶಿವತತ್ತ್ವರತ್ನಾಕರ' ಎಂಬ 'ವಿಶ್ವಕೋಶ'ವನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದನು. ಇದರ ಸಂಕರಿಸುವ ಬಹುದೊಡ್ಡ ಪ್ರಯತ್ನವು ಕ್ರಿ.ಶ. ೧೬೬೮-೧೭೧೪ರ ಸುಮಾರಿಗೆ ನಡೆಯಿತು. ಶಿವತತ್ವರತ್ನಾಕರವು ರಚನೆಗೊಂಡ ಕಾಲಕ್ಕೆ ರಾಜ, ರಾಜತ್ವ ಎಂಬ ಮಾತು ಕೊನೆಗೊಂಡು ಪ್ರಜಾರಾಜ್ಯ ಎಂಬ ಸಾಮಾಜಿಕ ಪ್ರಕ್ರಿಯೆ ಬಹು ಹಿಂದಿನಿಂದಲೇ ಪ್ರಾರಂಭವಾಗಿತ್ತು. ದೊಡ್ಡ ದೊಡ್ಡ ಸಾಮ್ರಾಜ್ಯಗಳು ಅಳಿದು, ಚಿಕ್ಕ ಪುಟ್ಟ ಸಂಸ್ಥಾನಗಳೇ ಅವುಗಳ ಪ್ರತಿರೂಪವೊ ಶಿಥಿಲರೂಪವೋ ಆಗಿದ್ದವು. ಏಷ್ಟಾದರೂ ಇವು ಸಂಸ್ಥಾನಗಳೇ ಆಗಿದ್ದವು. ಆದರೆ ಜನ ಬದುಕಬೇಕೆಂಬ ಆಂತರಿಕ ತಾತ್ವಿಕ ನೆಲೆ ಮಧ್ಯಕಾಲೀನ ಉತ್ತರಭಾಗದ ಸಾಂಸ್ಕೃತಿಕ ಕಥನವಾಗಿದ್ದಿತು. ಇದರ ಪ್ರತಿರೂಪ ಶಿವತತ್ವರತ್ನಾಕರದಲ್ಲಿ ನಾವು ಕಾಣುತ್ತೇವೆ.

ಆದುದರಿಂದಲೇ ಶಿವತತ್ತ್ವರತ್ನಾಕರವು ರಾಜ್ಯಪ್ರಾಪ್ತಿ, ಹೇತುಪಾಯ ಕಥನದಿಂದ ಪ್ರಾರಂಭಿಸದೇ ಸೃಷ್ಟಿಯ ಮಹಾಕಥನಕ್ಕೆ ಮೊರೆಹೋದದ್ದು. ಇದು ಕುತೂಹಲಕರವಾದ ಅಧ್ಯಯನಗಳ ಕಡೆ ನಮ್ಮನ್ನು ಕರೆದುಕೊಂಡು ಹೋಗುತ್ತದೆ. ಬಾಹ್ಯರಚನೆ ಎಂಬುದು ಆಂತರಿಕ ರಚನಾವಿನ್ಯಾಸದ ಹೊರರೂಪ. ಒಂದೊಂದು ವಿಷಯದ ವ್ಯಾಪ್ತಿ ಚರ್ಚಿತ ವಿಷಯಗಳ ಆಯ್ಕೆಗೆ ಸಂಬಂಧಿಸಿದ್ದು. ಒಟ್ಟಿನಲ್ಲಿ ಶಿವತತ್ತ್ವರತ್ನಾಕರವು ಹಲವು ವಿದ್ವಾಂಸರ ಹಾಗೂ ಭೂಪಾಲ ಇವರಿಬ್ಬರ ಸಖ್ಯದ ಫಲ ಎನ್ನಲಾಗುತ್ತದೆ.

ಈ ಗ್ರಂಥ ವಿಜ್ಞಾಪೂರ್ವವರ್ತಿಯಾದ ಸಂಸ್ಕೃತಿಯನ್ನೂ ಅಭ್ಯಸಿಸುವವರಿಗೆ ಅದ್ಭುತವಾದ ರಸದೌತಣ ಮಣಿ, ಮಂತ್ರ, ಔಷಧ ರಸ, ಸಾಹಿತ್ಯ, ಸಂಗೀತ, ಚಿತ್ರ, ವಾಸ್ತು, ನೃತ್ಯ, ಇತಿಹಾಸ, ಜ್ಯೋತಿಷ್ಯ, ಆಗಮ, ಖಗೋಳ, ಭೂಗೋಳ, ರಥ, ತುರಗ, ಹಸ್ತಿ, ಸಂಗ್ರಾಮ, ಕೃಷ್ಣ, ರಾಜನೀತಿ ಮುಂತಾದ ವಿಷಯ ವೈವಿಧ್ಯತೆಗಳನ್ನೊಳಗೊಂಡ ಅಪೂರ್ವ ಗ್ರಂಥವಾಗಿದೆ. ಒಟ್ಟಿನಲ್ಲಿ ಇದು ಎಲ್ಲಾ ವಿಷಯಗಳನ್ನು ಒಳಗೊಂಡ ಅಪೂರ್ವಗ್ರಂಥ ಭಂಡಾರವಾಗಿದೆ.[೪೧] ಸಂಸ್ಕೃತದಲ್ಲಿ ರಚನೆಗೊಂಡ ವಿಶ್ವಕೋಶಗಳಲ್ಲಿ ಎರಡನೇ ಸ್ಥಾನ ಮಾನಸೋಲ್ಲಾಸಕ್ಕೆ ಹೋದರೆ ಮೊದಲನೇ ಸ್ಥಾನವು ಶಿವತತ್ತ್ವರತ್ನಾಕರಕ್ಕೆ ಸಲ್ಲುತ್ತದೆ.

ಇಂತಹ ಕೃತಿಗಳಿಂದ 'ಗ್ಯಾಸೆಟಿಯರ್'ಗೆ ಹೋಲಿಸಬಹುದಾದ ಕೃತಿಗಳು ಪ್ರಾಚೀನ ಕಾಲದಿಂದಲೂ ಇತ್ತು ಎಂಬ ಅಂಶವನ್ನು ಮನಗಾಣಬಹುದು. ಇಲ್ಲಿ ಪ್ರಮುಖವಾಗಿ ಭಾರತಕ್ಕೆ ಸಂಬಂಧಿಸಿದಂತೆ ವಿಸ್ತಾರವಾಗಿ ತಿಳಿಸುವ ಗ್ರಂಥ ಕಲ್ಹಣನ ರಾಜತರಂಗಿಣಿಯಾಗಿದೆ. ಕರ್ನಾಟಕದ ಕನ್ನಡ ಭೂಪ್ರದೇಶಕ್ಕೆ ಸಂಬಂಧಿಸಿದಂತೆ ಪ್ರಮುಖವಾಗಿ ಚಾವುಂಡರಾಯನ 'ಲೋಕೋಪಕಾರ' ಪ್ರಮುಖ ಹಾಗೂ ಮೊದಲ ಕನ್ನಡದ ವಿಶ್ವಕೋಶ

ವಾಗಿದೆ. ಮತ್ತೆರಡು ಪ್ರಮುಖವಾದ ಬಹು ವಿಷಯ ವಿಶ್ವಕೋಶಗಳೆಂದರೆ 'ಮಾನಸೋಲ್ಲಾಸ' ಹಾಗೂ 'ಶಿವತತ್ತ್ವರತ್ನಾಕರ' ಇವೆರೆಡು ಸಂಸ್ಕೃತದಲ್ಲಿ ರಚನೆಗೊಂಡ ಗ್ರಂಥಗಳು, ಈ ಮೂಲಕವಾಗಿ ಭಾರತೀಯ ವಿದ್ವಾಂಸರಿಗೂ ಸಹ ವಿಶ್ವಕೋಶ ರೂಪದ ರಚನೆಯ ಕಲ್ಪನೆ ಇತ್ತು. ಆದರೆ ಅದರಲ್ಲಿ ಸ್ಥಳಗಳಿಗೆ ಹಾಗೂ ಸಾಮಾಜಿಕ ಜೀವನಕ್ಕೆ ಸಂಬಂಧಿಸಿದಂತೆ ವಿಷಯಗಳಿರಲಿಲ್ಲ. ಹೆಚ್ಚಾಗಿ ರಾಜಕೀಯಕ್ಕೆ ಹಾಗೂ ರಾಜನ ಆಡಳಿತದ ಹಾಗೂ ವೈಭವಕ್ಕೆ ಪ್ರಾಮುಖ್ಯತೆ ನೀಡಲಾಗುತ್ತಿತ್ತು. ಹೆಚ್ಚಾಗಿ ಅನೇಕ ಕೃತಿಗಳು ರಚನೆಗೊಂಡಿದ್ದರೂ ಸಹ, ಬಹುವಿಷಯಗಳನ್ನು ಒಳಗೊಂಡ ಕೃತಿಗಳ ಸಂಖ್ಯೆ ಅತ್ಯಲ್ಪ ಎಂದು ಹೇಳಬಹುದು. ಹೀಗಾಗಿ ಇವುಗಳೆಲ್ಲವೂ ಪ್ರಾಚೀನ ಕಾಲದ ಗ್ಯಾಸೆಟಿಯರ್‌ಗಳಿಗೆ ಹೋಲಿಸಬಹುದಾದ ಕೃತಿಗಳಾಗಿವೆ ಎಂಬುದಾಗಿ ತಿಳಿಯಬಹುದು.

**೨.೪. ಗ್ಯಾಸೆಟಿಯರ್‌ಗಳ ಅರ್ಥ, ವ್ಯಾಖ್ಯಾನಗಳು**

ಮಿತಸಂಖ್ಯೆಯ ಬ್ರಿಟಿಷರು ವಿಶಾಲ ಭೂಖಂಡವಾದ ಭಾರತವನ್ನು ಸಮರ್ಪಕವಾಗಿ ಆಳುವುದು ಸುಲಭಸಾಧ್ಯ ಎನಿಸಿರಲಿಲ್ಲ. ಇಂತಹ ಅಂಕುಶವನ್ನು 'ಬಂದೂಕು' ಮತ್ತು 'ಕಾನೂನು'ಗಳಿಂದ ಸಮರ್ಪಕವಾಗಿ ಸಾಧಿಸುವುದು ಸಾಧ್ಯವಿಲ್ಲ ಎಂಬ ನೈಜ ತಿಳುವಳಿಕೆ ಬ್ರಿಟಿಷರಿಗಿತ್ತು. ಆದ್ದರಿಂದ ಭಾರತೀಯ ಬದುಕನ್ನು ಗೌರವಿಸುವ ನಿಟ್ಟಿನಲ್ಲಿ ಅವರ ಮನೋಭೂಮಿಕೆಗೂ ಪ್ರವೇಶಿಸಿದರು.[೨] ಆದ್ದರಿಂದ ಭಾರತೀಯರಿಗೆ 'ಚರಿತ್ರೆ'ಯ ಪರಿಜ್ಞಾನವೇ ಇಲ್ಲವೆಂದು ಮೂದಲಿಸಿದ ಅಂದಿನ ಪಾಶ್ಚಾತ್ಯ ಓರಿಯಂಟಲಿಸ್ಟ್‌ರು ಹಾಗೂ ಚರಿತ್ರೆಕಾರರು ಅದನ್ನು ಕಲಿಸುವ ಹೊಣೆ ತಮ್ಮದೆಂದು ಪರಿಭಾವಿಸಿದ್ದರು. ಈ ಹಿನ್ನೆಲೆಯಲ್ಲಿ ಮುಂದುವರಿದು ಅವರು ಚರಿತ್ರೆ ರಚನೆಯ ಬಗೆಗೆ ಬೋಧಿಸಲು ಹಾಗೂ ಬರೆಯಲು ಕಲಿಸಲಾರಂಭಿಸಿದರು. ಈ ಸಂದರ್ಭದಲ್ಲಿ ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆ ಕಡಿಮೆ ಎಂಬ ಮಾತಿಗೆ ಅನುಗುಣವಾಗಿ ಶಾಸನ, ಹಸ್ತಪ್ರತಿ, ಪುರಾತನ ವಸ್ತುಗಳ ಸಂಗ್ರಹ ಮತ್ತು ಅಧ್ಯಯನಕ್ಕೆ ಸಂಬಂಧಿಸಿದ ಯಾವುದೇ ಕೃತಿಗಳು ಭಾರತೀಯರಿಂದ ಬಂದಿರಲಿಲ್ಲ. ಇದರ ಅಗತ್ಯವನ್ನು ಮೊದಲಿಗೆ ಮನಗಂಡವರು ಬ್ರಿಟಿಷರು. ಈ ಮಾತು ಕನ್ನಡದ ಸಂದರ್ಭಕ್ಕೂ ಅನ್ವಯ ವಾಗುತ್ತದೆ. ಅಂದರೆ ಹೇಗೆ ರಾಷ್ಟ್ರೀಯ ಮಟ್ಟದಲ್ಲಿ ವಸಾಹತುಶಾಹಿಗಳ ಧೋರಣೆಗಳು ವ್ಯಕ್ತಗೊಂಡವೋ ಹಾಗೆಯೇ ಪ್ರಾಂತೀಯ ನೆಲೆಗಳಲ್ಲಿಯೂ ಸಹ ಆರಂಭದಲ್ಲಿ ಆರ್ಥಿಕ ಆಶಯಗಳಿಗಾಗಿ ನಮ್ಮನ್ನು ಆವರಿಸಿದ ಬ್ರಿಟಿಷರು ಇಲ್ಲಿ ನೆಲೆನಿಂತು ಕ್ರಮೇಣ ಸಾಮ್ರಾಜ್ಯಶಾಹಿಗಳಾಗುವ ತಮ್ಮ ಮೂಲ ಇಂಗಿತವನ್ನು ಅನಾವರಣಗೊಳಿಸದೇ ಬಿಡಲಿಲ್ಲ. ಈ ಮೂಲ ಆಶಯಕ್ಕಾಗಿ ಇಲ್ಲಿನ ಭೂಪ್ರದೇಶ, ಹವಾಮಾನ, ಜನ, ಬದುಕು, ಹಾಗೂ ಸಂಸ್ಕೃತಿ ವಿಚಾರಗಳನ್ನು ಅರಿತುಕೊಳ್ಳುವ ಜರೂರು ಅವರಿಗೆ ಕಾಣಿಸಿಕೊಂಡಿತ್ತು. ಆಡಳಿತ ನಡೆಸಲು ಬರುತ್ತಿದ್ದ ಬ್ರಿಟಿಷ ಅಧಿಕಾರಿಗಳಿಗೆ ಇಲ್ಲಿನ ಆಡಳಿತ ನಡೆಸಲು ಅಗತ್ಯವಾದ ಒಂದು ಸತ್ಯವಾದ ಜ್ಞಾನಭಂಡಾರದ ಅವಶ್ಯಕತೆ ಇತ್ತು. ಏಕೆಂದರೆ ಅಧಿಕಾರಿಗಳಿಗೆ ಆಯಾ ಪ್ರದೇಶಗಳ ಕುರಿತು ಮಾಹಿತಿಗಳ ಬಗೆಗೆ ಸಹಜವಾಗಿ ಅರಿವು ಬೇಕಾಗುತ್ತಿತ್ತು. ಪರಿಣಾಮಕಾರಿಯಾದ ಆಡಳಿತವನ್ನು ನೀಡಲು ಹಾಗೂ ನಿಯಂತ್ರಿಸಲು ಮಾಹಿತಿಗಳು ಬೇಕಾಗುತ್ತಿತ್ತು. ಅದಕ್ಕಾಗಿ ಹುಟ್ಟಿಕೊಂಡದ್ದೆ 'ಗ್ಯಾಸೆಟಿಯರ್' ಪರಿಕಲ್ಪನೆ. ಈ ಗ್ಯಾಸೆಟಿಯರ್ ರಚನೆಯು ಅಂದಿನ ಆಳುವ ವರ್ಗದವರ ಹಿತಾಸಕ್ತಿಯ ಕೂಸಾಗಿ ರೂಪುತಳೆಯಿತು.

ಅಂದರೆ ಈ ಗ್ಯಾಸೆಟಿಯರುಗಳಲ್ಲಿನ ಮಾಹಿತಿಗಳಿಂದ ಆಳುವ ಅಧಿಕಾರಿಗಳಿಗೆ ತಮ್ಮ ಭೂ ಇಲಾಖೆಯ ಸರಹದ್ದುಗಳ ಜೊತೆಗೆ ಕಂದಾಯ ಇತ್ಯಾದಿಗಳ ವಸೂಲಾತಿಗೂ ಅನುಕೂಲಗಳಾಗಿದ್ದವು. ಅಂದರೆ ಇಲ್ಲಿಗೆ ಬರುತ್ತಿದ್ದ ಹೊಸ ಕಲೆಕ್ಟರನು ಯಾವುದೇ ತೊಡಕುಗಳಿಲ್ಲದೆ ಆಯಾ ಪ್ರಾಂತ್ಯವನ್ನು ಸುಲಭವಾಗಿ ಆಳಬಹುದಿತ್ತು. ಈ ಹಿನ್ನೆಲೆಯಲ್ಲಿ ಗ್ಯಾಸೆಟಿಯರ್‌ಗಳು ರಚನೆಗೊಂಡವು.

'ಗ್ಯಾಸೆಟಿಯರ್'(Gazetteer) ಎಂಬುದು ಆಧುನಿಕ ಕಾಲದ ಪ್ರಕಟಣೆಯಾಗಿದೆ. ಗ್ಯಾಸೆಟಿಯರ್ ಎಂದರೆ ಸ್ಥಳಗಳ, ಪ್ರದೇಶಗಳ, ದೇಶಗಳ ವಿವರಣೆ ಕುರಿತಾಗಿ ಇಷ್ಟೋ, ಅಷ್ಟೋ ಮಾಹಿತಿಗಳನ್ನು ಒಳಗೊಂಡ ಕೋಶ, ಇದಕ್ಕೆ 'ಗ್ಯಾಸೆಟಿಯರ್' ಅಥವಾ 'ವಿಶ್ವಕೋಶ' ಅಥವಾ 'ಮ್ಯಾನ್ಯುಯಲ್' ಅಥವಾ 'ಪ್ರಾದೇಶಿಕ ಪರಿಚಯಕೋಶ' 'ಭೂವಿವರಣಾಕೋಶ' ಅಥವಾ 'ದೇಶಕೋಶ' ಇತ್ಯಾದಿ ಅರ್ಥಗಳಿಂದ ಪರಿಚಯಿಸ ಲಾಗುತ್ತದೆ. ಅಂದರೆ ಒಂದು ನಾಡು ಇಲ್ಲವೆ ಪ್ರದೇಶವನ್ನು ಅದರ ಎಲ್ಲ ಮುಖಗಳ ಸಹಿತ ಪರಿಚಯ ಮಾಡಿಕೊಡುವ ಉದ್ದೇಶ ಗ್ಯಾಸೆಟಿಯರ್‌ನದು. ನೆಲ, ಭೌಗೋಳಿಕ ಸ್ಥಿತಿಗತಿ, ಪಶುಸಂಪತ್ತು, ಸಸ್ಯಸಂಪತ್ತು ಮತ್ತು ಇತರೇ ನೈಸರ್ಗಿಕ ಲಕ್ಷಣಗಳು, ಸಂಪನ್ಮೂಲಗಳು, ಜನತೆ, ಮತ, ಧರ್ಮಗಳು, ಜಾತಿಗಳು, ಇತಿಹಾಸ, ಆಡಳಿತ, ಮಳೆ, ಬೆಳೆ, ವಾಣಿಜ್ಯ, ಕೈಕಸುಬುಗಳು, ಸಾರಿಗೆ ಸಂಪರ್ಕ ಸಾಧನಗಳು, ಬೇರೆ ಬೇರೆ ಹಂತಗಳಲ್ಲಿನ ಆಡಳಿತ ವ್ಯವಸ್ಥೆ ಹಾಗೂ ಅವುಗಳ ವಿಕಸನ ಮತ್ತು ಒಂದು ನಾಡು ಮತ್ತು ಅಲ್ಲಿನ ಜನತೆಯನ್ನು ಅರ್ಥ ಮಾಡಿಕೊಳ್ಳಲು ನೆರವಾಗುವ ಇನ್ನಾವುದೇ ವಿಧದ ಮಾಹಿತಿ, ಇವೆಲ್ಲವೂ ಗ್ಯಾಸೆಟಿಯರ್ ನಲ್ಲಿ ಸಮಾವೇಶಗೊಂಡಿರುತ್ತದೆ. ಇಂಥ ಜ್ಞಾನದ ಮಹತ್ವವನ್ನು ವಿಶೇಷವಾಗಿ ಒತ್ತಿ ಹೇಳಬೇಕಾದುದೇನೂ ಇಲ್ಲ. ಒಂದು ಪ್ರದೇಶದ ಬಗ್ಗೆ ಒಂದು ವಿಶ್ವಕೋಶವಾಗಬೇಕೆಂಬುದೇ ಗ್ಯಾಸೆಟಿಯರ್‌ನ ಆಕಾಂಕ್ಷೆ ಎಂಬುದು ಮನವರಿಕೆಯಾಗುತ್ತದೆ.[೪೩]

ಅಲ್ಲದೆ ಇಲ್ಲಿ ದೇಶ-ಕೋಶ 'ಗ್ಯಾಸೆಟಿಯರ್' ಎಂಬ ಪದ ಪ್ರಯೋಗದ ಬಗ್ಗೆ ಒಂದು ಮಾತನ್ನು ಹೇಳುವುದು ಅವಶ್ಯವಿದೆ. 'ಗ್ಯಾಸೆಟಿಯರ್' ಎಂಬುದು ಇಂಗ್ಲಿಷ್ ಪದವಾಗಿದೆ. ಭಾರತದ ಎಲ್ಲಾ ಭಾಗಗಳಲ್ಲಿಯೂ 'ಗ್ಯಾಸೆಟಿಯರ್' ಎಂಬ ಪದವನ್ನು ಬಳಸುವುದಿಲ್ಲ. ಗ್ಯಾಸೆಟಿಯರ್ ಎಂಬ ಇಂಗ್ಲಿಷ್ ಪದವನ್ನು ಪಂಜಾಬ್, ಕೇರಳ, ಉತ್ತರಪ್ರದೇಶ, ಒರಿಸ್ಸಾ, ಜಮ್ಮು ಕಾಶ್ಮೀರ, ದಿಲ್ಲಿ ಮೊದಲಾದ ರಾಜ್ಯಗಳು ಸ್ವೀಕರಿಸಿವೆ. 'ಗ್ಯಾಸೆಟಿಯರ್' ಈ ಪದದ ಅರ್ಥವು 'ದೇಶ ವಿವರಣಾ ಕೋಶ' ಎಂದಾಗುತ್ತದೆ. ಒಂದು ದೇಶದ ಬಗ್ಗೆ ವಿವರವಾಗಿ ಅಧಿಕೃತವಾದ ಎಲ್ಲ ಮಾಹಿತಿ ಕೊಡುವುದೇ ಗ್ಯಾಸೆಟಿಯರ್‌ಗಳ ಉದ್ದೇಶ, ಆದ್ದರಿಂದ ಗ್ಯಾಸೆಟಿಯರ್‌ಗಳಿಗೆ 'ವಿವರಣಿಕಾ' ಎಂಬ ಪದವನ್ನು ರಾಜಸ್ಥಾನ, ಹರಿಯಾಣ, ಅಸ್ಸಾಮ್, ಮಧ್ಯಪ್ರದೇಶ, ಬಿಹಾರ ಮುಂತಾದ ರಾಜ್ಯಗಳು ಬಳಸುತ್ತಿವೆ.[೪೪]

ರಾಷ್ಟ್ರೀಯ, ಅಂತಾರಾಷ್ಟ್ರೀಯ ಹಾಗೂ ದೇಶಗಳಲ್ಲಿ ಗ್ಯಾಸೆಟಿಯರ್ ಎಂಬ ಹೆಸರು ಹೆಚ್ಚು ಪ್ರಚಲಿತ ದಲ್ಲಿದೆ. ಕರ್ನಾಟಕದಲ್ಲೂ ಸಹ ಇದೇ ಹೆಸರು ಹೆಚ್ಚು ಪ್ರಚಲಿತದಲ್ಲಿದೆ. ಆರಂಭದಲ್ಲಿ 'ಗ್ಯಾಸೆಟಿಯರ್' ಸಂಪುಟಗಳನ್ನು 'ಗೆಜೆಟ್' ಅಥವಾ 'ರಾಜ್ಯಪತ್ರ'ವೆಂದು ಭಾವಿಸಲಾಗುತ್ತಿತ್ತು. ಆದರೆ 'ಗ್ಯಾಸೆಟಿಯರ್'

ಹಾಗೂ 'ಗೆಜೆಟ್' ಎರಡೂ ಪದಗಳು ಬೇರೆ ಬೇರೆ. ಒಂದು ಉತ್ತರ ಧ್ರುವವಾದರೆ ಇನ್ನೊಂದು ದಕ್ಷಿಣಧ್ರುವ. ಆಂಗ್ಲ ಭಾಷೆಯಲ್ಲಿ 'ಗೆಜೆಟ್' ಮತ್ತು 'ಗ್ಯಾಸೆಟಿಯರ್' ಪದಗಳು ಒಂದೇ ರೀತಿಯಲ್ಲಿ ಕಂಡುಬರುವಂತೆ ಪದಪ್ರಯೋಗವನ್ನು ಮಾಡಲಾಗುತ್ತದೆ. ಆಂಗ್ಲಭಾಷೆಯ ಗ್ಯಾಜ(Gaza) ಎಂಬ ಪದವು ಮೂಲತಃ ಗ್ರೀಕ್ ಭಾಷೆಯದ್ದಾಗಿದ್ದು 'ವಾರ್ತೆಗಳ ಖಜಾನೆ' ಎಂದು ಪರಿಗಣಿಸಿ ಪ್ರಯೋಗವಾಗಿರುವುದು ದಾಖಲೆಗಳಿಂದ ವ್ಯಕ್ತವಾಗುತ್ತದೆ.

ಆಂಗ್ಲಭಾಷೆಯ ಗೆಜೆಟ್ ಎಂಬುದು ಆಡಳಿತ ಪ್ರಭುತ್ವವನ್ನು ನಿರ್ವಹಿಸುವವರ ಆದೇಶಗಳು, ಆಜ್ಞೆಗಳು, ಸರಕಾರದ ನಡಾವಳಿಗಳೆಂದು ಪರಿಗಣಿಸಲ್ಪಟ್ಟಿದೆ.[೪೫] ಈ ರೀತಿಯಾಗಿ 'ಗ್ಯಾಸೆಟಿಯರ್' ಹಾಗೂ 'ಗೆಜೆಟ್' ಎಂಬುದು ಬೇರೆ, ಬೇರೆ ಎಂಬುದನ್ನು ಮನಗಾಣಬಹುದಾಗಿದೆ.

ಗ್ಯಾಸೆಟಿಯರ್‌ಗಳಿಗೆ ತಮ್ಮದೇ ಆದ ವ್ಯಾಖ್ಯಾನಗಳನ್ನು ಕೆಲವು ವಿದ್ವಾಂಸರು ನೀಡಿದ್ದಾರೆ. ಮುಖ್ಯವಾಗಿ; 'ಲೂಯಿಶ್ ಶೋರ್ಸ್' ಮತ್ತು 'ರಿಚರ್ಡ್ ಕ್ರಿಝುನ್' ಅವರ ಪ್ರಕಾರ: ''ಭೌಗೋಳಿಕ ಗ್ರಂಥಗಳೆಂದರೆ ಇಡೀ ವಿಶ್ವದಲ್ಲಿಯ ಸ್ಥಳಗಳ ನಿರ್ದೇಶನ ವಿವರಣೆಗಳನ್ನು ಒದಗಿಸುವ ಗ್ರಂಥಗಳು ಎಂದು ಹೇಳಿದ್ದಾರೆ.'' ಒಟ್ಟಾರೆ ಇವು ಭೌಗೋಳಿಕ ಮಾಹಿತಿಗಳನ್ನು ಒದಗಿಸುವ ಗ್ರಂಥಗಳಾಗಿವೆ ಎಂದಿದ್ದಾರೆ.

'ವಿಲಿಯಂ ಎ ಕಾಟ್ಜ' ಅವರ ಪ್ರಕಾರ: ಭೂವಿವರ ಕೋಶವನ್ನು ಭೌಗೋಳಿಕ ನಿಘಂಟೆಂದು ವ್ಯಾಖ್ಯಾನಿಸಬಹುದು. ಇದು ಭೂಪಟ ಸೂಚಿಗಿಂತ ಭಿನ್ನವಾಗಿದ್ದು ಹೆಚ್ಚು ವಿವರಣಾತ್ಮಕವಾಗಿರುತ್ತದೆ. ಒಂದು ಒಳ್ಳೆಯ ಭೂವಿವರ ಕೋಶದಲ್ಲಿ ಮತ್ತು ಇತರ ಭೌಗೋಳಿಕ ಲಕ್ಷಣಗಳು, ಜನಸಂಖ್ಯೆ ಅಕ್ಷಾಂಶ ಮತ್ತು ರೇಖಾಂಶ ಕೆಲವು ಸ್ಥಳಗಳ ಸಂಕ್ಷಿಪ್ತ ಇತಿಹಾಸ, ಆರ್ಥಿಕ ಮತ್ತು ರಾಜಕೀಯ ಲಕ್ಷಣಗಳನ್ನು ಇತಿಹಾಸ, ಆರ್ಥಿಕ ಮತ್ತು ರಾಜಕೀಯ ಲಕ್ಷಣಗಳನ್ನು ಇವು ಹೊಂದಿರುತ್ತವೆ ಎಂದಿದ್ದಾರೆ.[೪೬]

'ಮ್ಯಾಕಂಡರರ' ಪ್ರಕಾರ: ಪ್ರತಿಯೊಂದು ದೇಶಕ್ಕೂ ಅದರದೇ ಆದ ಒಂದು ಭೌಗೋಳಿಕ ನೋಟವಿದೆ ಎಂಬ ಅಭಿಪ್ರಾಯವನ್ನು ನೀಡುತ್ತಾರೆ.[೪೭]

### ೨.೫. ಗ್ಯಾಸೆಟಿಯರ್ ರಚನೆಯ ಸ್ವರೂಪದ ಸಂಪ್ರದಾಯ

ಇದೊಂದು ಆಧುನಿಕ ಇಂಗ್ಲಿಷ್ ಪದವಾಗಿರುವುದರಿಂದ ಮುಖ್ಯವಾಗಿ ರಾಷ್ಟ್ರೀಯ ಮಟ್ಟದಲ್ಲಿ ಮೊಟ್ಟಮೊದಲ ಬಾರಿಗೆ ಈ ಪದವು ಪ್ರಚಲಿತಕ್ಕೆ ಬಂದಿತ್ತು. ಮುಖ್ಯವಾಗಿ ಗ್ಯಾಸೆಟಿಯರ್ ಎಂದು ಕರೆಯುವ ಪರಿಪಾಟ ೧೮ನೇ ಶತಮಾನದಲ್ಲಿ ಇತ್ತು. ವೃತ್ತಪತ್ರಿಕೆಯನ್ನು ಈ ಹೆಸರಿನಿಂದ ಕರೆಯುತ್ತಿದ್ದುದುಂಟು. ಸ್ಥಳಗಳ, ಪ್ರದೇಶಗಳ, ದೇಶಗಳ ವಿವರಣೆ ಇತಿಹಾಸ, ಅಂಕಿ-ಅಂಶ ಮುಂತಾದವನ್ನು ಸುಧೀರ್ಘವಾಗಿ ಒಳಗೊಂಡ ಕೋಶಸದೃಶ ಗ್ರಂಥಗಳನ್ನು ಭೌಗೋಳಿಕ ನಿಘಂಟು ಎಂದು ಕರೆಯುವುದುಂಟಾದರೂ ಮೇಲೆ ಹೇಳಿದ ಹೆಸರು ಹೆಚ್ಚು ವಾಡಿಕೆಯಲ್ಲಿದೆ. ವರ್ಣಾನುಕ್ರಮದಲ್ಲಿ ನದೀ ಪರ್ವತ ಗ್ರಾಮ, ನಗರ ಮುಂತಾದವುಗಳ ಬಗ್ಗೆ ಮಾಹಿತಿ ನೀಡುವ ಕೋಶವೆಂಬ ಈ ಶಬ್ದದ ಅರ್ಥ ಕ್ರಮೇಣ ವಿಸ್ತೃತವಾಗಿ ಯಾವುದಾದರೊಂದು

ದೇಶದ, ಪ್ರದೇಶದ, ವಿಭಾಗದ ರಾಜಕೀಯ, ಐತಿಹಾಸಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಔದ್ಯೋಗಿಕ ವಿಷಯಗಳ ಸಮಗ್ರ ವಿವರಣೆಗಳನ್ನು ತಿಳಿಸುವ ಗ್ರಂಥವೆಂದು ಇದು ಪ್ರಸಿದ್ಧಿ ಹೊಂದಿತು.

**೨.೬. ಪ್ರಪಂಚದ ಗ್ಯಾಸೆಟಿಯರ್‌ಗಳು**

ಪ್ರಾರಂಭದಲ್ಲಿ ಗ್ಯಾಸೆಟಿಯರ್‌ಗಳ ಕುರಿತು ಯಾವುದಾದರೊಂದು ಪ್ರದೇಶದ 'ಭೌಗೋಳಿಕ ಸೂಚಿ' ಎಂಬ ಅರ್ಥದಲ್ಲಿ ಈ ಶಬ್ದವನ್ನು ೧೭೦೪ರಲ್ಲಿ, 'ಲಾರೆನ್ಸ್ ಎಕಾರ್ಡ್' ಎಂಬುವನು ಬಳಸಿದ. ೬ನೇ ಶತಮಾನದ ಆರಂಭದಲ್ಲಿ 'ಬಿಜಾಂಚಿಯಮ್‌ನ ಸ್ಟೀವೆನ್' ಎಂಬಾತ ಈ ಬಗೆಯ ಕೃತಿಯನ್ನು ರಚಿಸಿದ್ದ. ಆದರೆ ದುರದೃಷ್ಟದಿಂದ ಈ ಗ್ರಂಥದ ಕೆಲವು ತುಣುಕುಗಳು ಮಾತ್ರ ದೊರೆತಿವೆ. ಈಗಿನ ಗ್ಯಾಸೆಟಿಯರ್‌ಗಳಿಗೆ ಹೋಲಿಸಬಹುದಾದ ಒಂದು ಕೃತಿ ಹೊರಬಂದದ್ದು ಕ್ರಿ.ಶ. ೧೬ನೇ ಶತಮಾನದಲ್ಲಿ. 'ಚಾರ್ಲ್ಸ್ ಸ್ಟೀವೆನ್ಸ್'ನಿಂದ ರಚಿತವಾಗಿ ಜಿನೀವದಿಂದ ಪ್ರಕಟವಾದ "ಡಿಕ್ಷನೇರಿಯಮ್ ಹಿಸ್ಟರಿಕೋ ಜಿಯಾಗ್ರಫಿಕಮ್"(೧೫೬೫). ಇದರ ತರುವಾಯ ಫೆರ್ರೈನ ಲೆಕ್ಸಿಕನ್ ಜಿಯಾಗ್ರಫಿಕಮ್(೧೬೨೭) "ಬಾದ್ರಾದನ ಜಿಯಾಗ್ರಫಿಯಾ ಆರ್ಡಿನೆ ಲಿಟರೇರಮ್ ಡಿಸ್‌ಪೊಸಿಟಾ" (೧೬೮೨), ಲೇ ಮಾರ್ಡಿನ್ಯೆರನ ಡಿಕ್ಷನೇರ ಜಿಯಾಗ್ರಫಿಕ್ ಹಿಸ್ಟರಿಕ್ ಅಟ್ ಕ್ರಿಟಿಕ್ (೧೭೨೬) ಮತ್ತು ಇವುಗಳ ಆಧಾರದ ಮೇಲೆ ರಚಿತವಾದ ಇತರ ಹಲವು ವಿಷಯ ಕೋಶಗಳು ಜರ್ಮನ್ ಭೂಗೋಳಶಾಸ್ತ್ರಜ್ಞ ಜಿ.ಎಚ್. ಹ್ಯಾಸೆಲನ "ಜಿಯಾಗ್ರಫಿಶ್ಚ್ ಸ್ಟ್ಯಾಟಿಸ್ಟಿಶ್ಯ ಹ್ಯಾಂಡ್ ವೊರ್ವರ್ ಬಕಾ(೧೮೧೭)" ಸಂಶೋಧನಾತ್ಮಕವಾದ ಮುಂದಿನ ಗ್ಯಾಸೆಟಿಯರ್‌ಗಳಿಗೆ ಮಾದರಿಯಾದ ಕೃತಿ.

ಕೆಲವು ಮುಖ್ಯವಾದ ಇಂಗ್ಲಿಷ್ ಮತ್ತು ಅಮೆರಿಕನ್ ಗೆಜೆಟಿಯರ್‌ಗಳೆಂದರೆ "ಕ್ರಟ್‌ವೆಲನ್ ಯುನಿವರ್ಸಲ್ ಗ್ಯಾಸೆಟಿಯರ್(೧೮೦೮)", "ದಿ ಎಡಿನ್ ಬರ್ಗಾ ಗ್ಯಾಸೆಟಿಯರ್(೧೮೧೭-೨೨)" "ಮ್ಯಾಕಕುಲಕ್‌ನ ಜಿಯಾಗ್ರಫಿಕಲ್ ಡಿಕ್ಷನರಿ (೧೮೫೧)", "ಬ್ಲಾಕಿಯ ಇಂಪೀರಿಯಲ್ ಗ್ಯಾಜೆಟೀರ್ (೧೮೫೦)" "ಲಿಪಿನ್‌ಕಾರ್ಟ್ ಪ್ರೊನೌಸ್ಸಿಂಗ್ ಗ್ಯಾಸೆಗ್ಯಾಜೆಟಿಯರ್ ಆಫ್ ದಿ ವರ್ಲ್ಡ್ (೧೮೫೫-೧೯೧೧) ಮತ್ತು "ಮೆಲಿಯಮ್ ವೆಬ್‌ಸ್ಟಾನ್ ಜಿಯಾಗ್ರಫಿಕಲ್ ಡಿಕ್ಷನರಿ (೧೯೪೯)", "ಡಿಕ್ಷನೇರ್ ಜಿಯಾಗ್ರಫಿಕ್ ಯುನಿವರ್ಸಲ್ (ಫ್ರೆಂಚ್) ರಿಟರ್‌ನ ಜಿಯಾಗ್ರಫಿ ಸ್ಟ್ಯಾಟಿಸ್ಟಿಕ್ (ಜರ್ಮಾನ್)", "ಗ್ಯಾರೋಲೋನ ಡಿಜಿಯೊನರಿಯೇ ಜಿಯಾಗ್ರಾಫಿಕೋ ಯುನಿವರ್ಸಲಿ (ಇಟಲಿ- ೧೮೯೮) ಮತ್ತು ಹಂಟರ್‌ನ 'ಇಂಪೀರಿಯಲ್ ಗ್ಯಾಜಿಟೀರ್ ಆಫ್ ಇಂಡಿಯಾ" ಇವು ಕೆಲವು ಗಮನಾರ್ಹ ಗ್ಯಾಸೆಟಿಯರ್‌ಗಳು. ಜಾನ್‌ಸ್ಟರ್‌ನ "ಡಿಕ್ಷನರಿ ಆಫ್ ಜಿಯಾಗ್ರಫಿ (೧೮೫೦)", ವಿವಿನ್‌ದ ಸೇಂಟ್ ಮಾರ್ಟಿನ್‌ನ ನೋವೆ "ಡಿಕ್ಷನ್ಯೆರೆ ಜಿಯಾಗ್ರಫಿಯೊ (೧೮೭೯-೧೯೦೦)", ಲಾಂಗ್‌ಮನ್ಸ್ "ಗ್ಯಾಸೆಟಿಯರ್ ಆಫ್ ದಿ ವರ್ಲ್ಡ್ (೧೮೯೫)", "ಕೆಂಟೆಯಾ ಜಿಯಾಗ್ರಫಿಕ್ಸ್ ವೊಟೇರ್‌ಬಕ್ (೧೯೨೧)", ಎವಾಲ್ಡ್ ಎಚ್.ಎ ಬಾನ್ಸೆಯ "ಲೆಕ್ಸಿಕನ್ ಡರ್ ಜಿಯಾಗ್ರಫಿಯೆ (೧೯೨೩)", ರೇನಾಲ್ಡ್‌ನ "ಕಾಂಟ್ರೆಹೆನ್ಸಿವ್ ಅಟ್ಲಾಸ್ ಮತ್ತು ಗ್ಯಾಸೆಟಿಯರ್ ಆಫ್ ದಿ ವರ್ಲ್ಡ್ (೧೯೨೫)" ಮುಂತಾದವು ಇತರ ಕೆಲವು ಪ್ರಸಿದ್ಧ ಗ್ಯಾಸೆಟಿಯರ್‌ಗಳು ಇವುಗಳಲ್ಲಿ ಅನೇಕ ಗ್ಯಾಸೆಟಿಯರ್‌ಗಳು ಹೊಸ ಆವೃತ್ತಿಗಳನ್ನು ಕಂಡಿವೆ. ಲಾಂಗ್‌ಮನ್ಸ್‌ನ "ಗ್ಯಾಸೆಟಿಯರ್ ಆಫ್ ದಿ ವರ್ಲ್ಡ್

ಎಂಬ ಕೃತಿಯನ್ನು ಲಂಡನ್ನಿನ ಟೈಮ್ಸ್ ಪತ್ರಿಕೆ ಪಡೆದು "ದಿ ಟೈಮ್ ಗ್ಯಾಸೆಟಿಯರ್" ಎಂದು ಪುನಃ ಪ್ರಕಟಿಸಿತು. ಇಟಲಿಯ 'ನ್ಯೂಮನ್', ರಷ್ಯಾದ 'ಸಮ್ಮೆನಾಟ್' ಮತ್ತು ಭಾರತದಲ್ಲಿ 'ಹಂಟರ್' ಪ್ರಖ್ಯಾತ ಗ್ಯಾಸೆಟಿಯರ್ ಲೇಖಕರಾಗಿದ್ದರು.[೪೮]

ಎಡ್ವರ್ಡ್ ಥರ್ಸ್ಟನ್ "ಗ್ಯಾಸೆಟಿಯರ್ (೧೮೪೪)" ಮತ್ತು ವಾಲ್ಟರ್ ಹ್ಯಾಮಿಲ್ಟನನ "ಈಸ್ಟ್ ಇಂಡಿಯಾ ಗ್ಯಾಜೆಟೀರ್(೧೮೬೫)" ಅವರ ಪ್ರಯತ್ನಗಳಿಂದ ಪ್ರಕಟವಾದವು. ಇನ್ನೊಂದು ಪ್ರಮುಖವಾದ ವಿಶ್ವದಾದ್ಯಂತ ಜನಪ್ರಿಯವಾದ ವಿಶ್ವಕೋಶ "ಕೋಲಂಬಿಯಾ ಲಿಪ್ಪಿನ್‌ಕಾಟ ವಿಶ್ವ ಭೂವಿವರ ಕೋಶ" (Columbia Lippincott Gazetteer of the world: Newyork: Columbia University Press ೧೯೫೨) ಅಂತಾರಾಷ್ಟ್ರೀಯ ಭೂ ವಿವರ ಕೋಶವಾದ ಇದರಲ್ಲಿ ಒಟ್ಟು ೧,೩೦,೦೦೦ ದಾಖಲೆಗಳಿವೆ. ಹೀಗಾಗಿ ಇದೊಂದು ಬೃಹತ್ ಗಾತ್ರದ ಹೆಚ್ಚು ಭಾರವಾದ ಕೋಶವಾಗಿದೆ. ಇದರ ವ್ಯಾಪ್ತಿ ಅಂತಾರಾಷ್ಟ್ರೀಯ ವಾಗಿದ್ದುದರಿಂದ ವಿಶ್ವದ ಪ್ರಮುಖ ಸ್ಥಳಗಳೆಲ್ಲವುಗಳ ಬಗ್ಗೆ ಮಾಹಿತಿಯನ್ನು ಈ ಗ್ರಂಥದಿಂದ ಪಡೆಯ ಬಹುದು.[೪೯]

ಹಳ್ಳಿಗಳ ಬಗೆಗಿನ ಸಂಕ್ಷಿಪ್ತ ಮಾಹಿತಿಯಿಂದ ನದಿಗಳವರೆಗೆ ದೀರ್ಘ ಲೇಖನಗಳು ಇದರಲ್ಲಿವೆ. ಪ್ರತಿಯೊಂದು ದಾಖಲೆಯಲ್ಲಿ ಉಚ್ಚಾರಣೆ ಇರುವ ಸ್ಥಳ, ವಿಸ್ತೀರ್ಣ, ಜನಸಂಖ್ಯೆ, ಭೌಗೋಳಿಕ ವಿವರಣೆ ಆರ್ಥಿಕ ಮತ್ತು ಐತಿಹಾಸಿಕ ಅಂಶಗಳನ್ನು ಕೊಡಲಾಗಿದೆ. ಇದರ ಪುರವಣಿ ೧೯೬೨ರಲ್ಲಿ ಪ್ರಕಟವಾಗಿದ್ದು ಇದರಲ್ಲಿ ೧೯೫೨ರಿಂದ ಆದ ಪ್ರಮುಖ ರಾಜಕೀಯ ಭೌಗೋಳಿಕ ಬದಲಾವಣೆಗಳ ಬಗ್ಗೆ ಮಾಹಿತಿ ನೀಡಲಾಗಿದೆ. ಒಟ್ಟಾರೆ ಇದೊಂದು ಉಪಯುಕ್ತವಾದ ಭೂವಿವರ ಕೋಶವಾಗಿದೆ. ಇವುಗಳೆಲ್ಲವೂ ಅಂತಾರಾಷ್ಟ್ರೀಯ ಮಟ್ಟದ ಗ್ಯಾಸೆಟಿಯರ್‌ಗಳಿಗೆ ಸಂಬಂಧಿಸಿದವುಗಳಾಗಿವೆ.

### ೨.೭ ಭಾರತದಲ್ಲಿ ಗ್ಯಾಸೆಟಿಯರ್‌ಗಳ ರಚನೆಯ ಸಂಪ್ರದಾಯ

ಭಾರತದಲ್ಲಿ ಗ್ಯಾಸೆಟಿಯರ್‌ಗಳ ರಚನೆಯ ಕೆಲಸವು ಈಸ್ಟ್ ಇಂಡಿಯಾ ಕಂಪೆನಿಯ ಕಾಲದಲ್ಲೇ ೧೮೪೩ರಲ್ಲಿ ಮುಂಬಯಿ ಇಲಾಖೆಯಲ್ಲಿ ಅಲ್ಲಿಯ ಜಿಲ್ಲೆಗಳ ಬಗ್ಗೆ ಅಂಕಿ ಅಂಶಗಳ ಸಹಿತವಾದ ವಿವರಗಳನ್ನು ಕೊಡುವ ಕೆಲಸ ಪ್ರಾರಂಭವಾಯಿತು. ಈ ಗ್ಯಾಸೆಟಿಯರ್ ಕಲ್ಪನೆ ಹುಟ್ಟಿ ಅದು ಅಸ್ತಿತ್ವಕ್ಕೆ ಬರಲು ನೂರು ವರ್ಷಗಳಿಗೂ ಹೆಚ್ಚು ಕಾಲ ಬೇಕಾಯಿತು. ಅದು ಎಂಥ ಕಠಿಣ ಹಾಗೂ ವ್ಯಾಪಕವಾದ ಕಾರ್ಯ ಎಂಬುದನ್ನು ಇಷ್ಟರಿಂದಲೇ ನಾವು ತಿಳಿಯಬಹುದು.

ಈಸ್ಟ್ ಇಂಡಿಯಾ ಕಂಪೆನಿ ಅಧಿಕಾರದಲ್ಲಿದ್ದಾಗಲೇ "We are of the opinion that a Statistic survey of the country would be attended with much ability: we recommend proper steps to be taken for the execution of the same" ಎಂದು ೧೮೦೭ರಲ್ಲಿ ಡೈರೆಕ್ಟರ್ ಬೋರ್ಡಿನ ನಿರ್ಣಯವಾಗಿತ್ತು. ಆದರೆ ಮುಂದಿನ ವರ್ಷಗಳವರೆಗೆ ಯಾವ ಪ್ರಗತಿಯೂ ಕಂಡುಬರಲಿಲ್ಲ. ೧೮೫೫ರಲ್ಲಿ ಇದರ ಮಹತ್ವವನ್ನು ಮನಗಂಡ ಕೆಲವು ವಿದ್ವಾಂಸರು ಮುಂದೆ ಬಾದು ವಿಷಯ ಸಂಗ್ರಹ ಮಾಡಿ

ಗ್ಯಾಸೆಟಿಯರ್‌ನ ಕೆಲವು ಸಂಪುಟಗಳನ್ನು ಪ್ರಕಟಿಸಲು ಯತ್ನಿಸಿದರು. ಪ್ರಕಟಣೆಗಳು ಹೊರಬಂದರೂ ನಿರ್ದಿಷ್ಟ ಯೋಜನೆ ಕೇಂದ್ರ ಸಂಸ್ಥೆಯ ನಿಯಂತ್ರಣ ಎಲ್ಲಕ್ಕೂ ಹೆಚ್ಚಾಗಿ ಸ್ಥಳೀಯ ಬೆಂಬಲದ ಅಭಾವದಿಂದ ಇದರ ಕೆಲಸವೂ ಮುಂದುವರಿಯಲಿಲ್ಲ.[೩೦]

೧೮೫೮ರಲ್ಲಿ ರಾಜಕೀಯ ಸೂತ್ರಗಳು ಬ್ರಿಟಿಷ್ ಚಕ್ರಾಧಿಪತ್ಯದ ಕೈ ಸೇರಿದಾಗ ಈ ಯೋಜನೆಗೆ ಮತ್ತೆ ಜೀವ ಬಂದಿತು, ಆಗ ಮಧ್ಯಪ್ರಾಂತ್ಯದ ಚೀಫ್ ಕಮೀಷನರ್‌ರಾಗಿದ್ದ 'ಸರ್ ರಿಚರ್ಡ್ ಟೆಂಪಲ್' ಅವರು ಈ ಕೆಲಸ ನಿರ್ವಹಿಸಲು ಮುಂದೆ ಬಂದರು. ೧೮೬೭ರಲ್ಲಿ ವೈಸ್‌ರಾಯರು ಚಕ್ರವರ್ತಿಗಳ ಆಜ್ಞೆಯ ಮೇರೆಗೆ ಮುಂಬಯಿ, ಮದ್ರಾಸ್, ವಾಯವ್ಯಪ್ರಾಂತ್ಯ ಹಾಗೂ ಜೋಧಪುರ, ಪಂಜಾಬ್, ಅಸ್ಸಾಮ್, ಮಧ್ಯಪ್ರಾಂತ್ಯ, ಬ್ರಿಟಿಷ್‌ಬರ್ಮಾ, ಬೆರಾರ್, ಹೈದರಾಬಾದ್, ಮೈಸೂರು, ಕೊಡಗು, ರಾಜಪುತಾನಾ, ಬಂಗಾಲ ಮುಂತಾದ ಪ್ರಾಂತ್ಯಗಳ ಗೆಜೆಟಿಯರ್‌ನ ರಚನೆಗಾಗಿ ಆದೇಶ ನೀಡಿದರು.

ಮನಸ್ಸಿದ್ದೋ ಇಲ್ಲದೆಯೋ ಎಲ್ಲ ಪ್ರಾಂತೀಯ ಸರಕಾರಗಳು ಮತ್ತೊಮ್ಮೆ ಕಾರ್ಯಪ್ರವೃತ್ತವಾದವು. ನಿಶ್ಚಿತ ಯೋಜನೆಯ ಹಾಗೂ ಹಣದ ಅಭಾವದಿಂದ ಯಾವ ಪ್ರಗತಿಯನ್ನೂ ಸಾಧಿಸಲಿಲ್ಲ. ಆದರೆ ಇಂಥ ಒಂದು ಯೋಜನೆ ಅಗತ್ಯವೆಂದು ಸಾರ್ವಜನಿಕರು, ಔದ್ಯೋಗಿಕ ಸಂಸ್ಥೆಗಳು ಸೂಚಿಸಿದವು. ಅದರ ಯಶಸ್ವಿಗಾಗಿ ಹಲವು ಮಾರ್ಗಗಳನ್ನು ಸೂಚಿಸಲಾಯಿತು. ಕೊನೆಗೆ ೧೮೬೯ರಲ್ಲಿ 'ವಿಲಿಯಮ್ ಹಂಟರ್' ಅವರು ಈ ಯೋಜನೆಗೆ ಕೇಂದ್ರ ಅಧಿಕಾರಿಯಾಗಿ ನಿಯೋಜಿತರಾದರು. ಕೂಡಲೇ ಎಲ್ಲ ಪ್ರಾಂತಗಳನ್ನು ಸಂದರ್ಶಿಸಿ ಅಲ್ಲಿ ಸಂಗ್ರಹಿತವಾದ ಅಂಕಿ-ಸಂಖ್ಯೆ ಇತರ ಐತಿಹಾಸಿಕ ಸಾಮಗ್ರಿಯನ್ನು ಕ್ರೋಢೀಕರಿಸಿದರು. ಇದುವರೆಗಿನ ಗೆಜೆಟಿಯರ್ ರಚನೆಯ ಕೆಲವು ಕಾರ್ಯವಿಫಲತೆಗೆ ಅವರು ಕಾರಣಗಳನ್ನು ಕಂಡುಹಿಡಿದರು.

ಅ. ಸರಕಾರ ಹಾಗೂ ಸಂಘಟನೆಯ ಕೊರತೆ

ಬ. ಕೇಂದ್ರ ನಿಯಂತ್ರಣದ ಅಭಾವ

ಈ ದೋಷಗಳನ್ನು ಗಮನಿಸಿ ಬ್ರಿಟಿಷ್ ಇಂಡಿಯದಲ್ಲಿಯ ೨೪೦ ಜಿಲ್ಲೆಗಳಲ್ಲಿ ಏಕರೂಪವಾಗಿ ಸ್ಥಾನಿಕ ವಿಷಯ ಸಂಗ್ರಹ ನಡೆಯಬೇಕೆಂದು ಅವರು ಆಜ್ಞೆ ಮಾಡಿದರು. ವಿಷಯ ಅಂಕಿ ಸಂಖ್ಯಾ ಪರಿಶೀಲನೆಯ ಬಗ್ಗೆ ಒಂದು ವ್ಯವಸ್ಥೆ ಏರ್ಪಟ್ಟಿತು. ಗೆಜೆಟಿಯರ್‌ನ ಉದ್ದೇಶ ಧೋರಣೆಗಳು ಸ್ಪಷ್ಟವಾಗಿ ನಿರೂಪಿಸಲ್ಪಟ್ಟವು. ಅದು ಆಡಳಿತಗಾರರಿಗೂ, ಸಾರ್ವಜನಿಕರಿಗೂ ಉಪಯುಕ್ತವಾಗಿರಬೇಕೆಂದು ನಿಶ್ಚಯಿಸಲಾಯಿತು. ಈ ಯೋಜನೆಯನ್ನು ಮನ್ನಿಸಿ ಅವರನ್ನು ಅದರ ಮೇಲ್ವಿಚಾರಣೆಗೆ ನಿಯೋಜಿಸಿ ವೈಸ್‌ರಾಯರು ಆಜ್ಞೆ ಹೊರಡಿಸಿದರು. ಈ ಅಧಿಕಾರದೊಂದಿಗೆ ಬಂಗಾಲ, ಅಸ್ಸಾವ್ ಗೆಜೆಟಿಯರ್‌ನ ಭಾರತದ ಮುಖ್ಯಾಧಿಕಾರಿಯೂ ಆಗಿ ಕೆಲಸ ಮಾಡತೊಡಗಿದರು. ಕೂಡಲೇ ಅವರು ಎಲ್ಲಾ ಪ್ರಾಂತ್ಯಗಳನ್ನು ಮತ್ತೊಮ್ಮೆ ಸಂದರ್ಶಿಸಿ ದಕ್ಷರಾದ ಪ್ರಾಂತೀಯ ಸಂಪಾದಕರನ್ನು ನಿಯಮಿಸಿ ಕಾರ್ಯೋನ್ಮುಖರಾದರು. ಆಯಾ ಪ್ರಾಂತ್ಯಗಳ ವೈಶಿಷ್ಟ್ಯ ಹಾಗೂ ಅಗತ್ಯಗಳನ್ನು ಲಕ್ಷಿಸಿ ಮೂಲ ನಿಯಮಗಳಲ್ಲಿ ಅಲ್ಪ ಸ್ವಲ್ಪ ಬದಲಾವಣೆಗಳನ್ನು ಮಾಡಲಾಯಿತೆಂದು ವಿವರಿಸಲಾಗುತ್ತದೆ.[೩೧]

ಅಂದರೆ ವಸಾಹತುಶಾಹಿ ಕಾಲಘಟ್ಟದಲ್ಲಿ ಭಾರತದಲ್ಲಿ ಪರಿಣಾಮಕಾರಿಯಾದ ಗ್ಯಾಸೆಟಿಯರ್ ರಚನೆಯ ಕೆಲಸವು ಅವಿಶ್ರಾಂತವಾದ ಜಯವನ್ನು ತಂದುಕೊಟ್ಟಿತು ಎನ್ನಲಾಗುತ್ತದೆ. ಈ ವಿಜಯಕ್ಕೆ ಸಂಬಂಧಿಸಿದಂತೆ ಪ್ರಮುಖವಾಗಿ ಕೆಲಸ ಮಾಡಿದವರೆಂದರೆ 'ವಿಲಿಯಂ ಫ್ರಾಂಕ್ ಲ್ಯಾಂಡ್', 'ಹ್ಯಾಗ್ ಕ್ಯಾಮರಾನ್', 'Dewispe Gloss', 'ಜೇಮ್ಸ್‌ರೆನಿಯಲ್' ಮುಂತಾದವರು ಪ್ರಮುಖವಾಗಿ ಕೆಲಸ ಮಾಡಿದ್ದಾರೆ. ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿಯ ಉತ್ತೇಜನದಿಂದ ಕೆಲವೊಂದು ವಿಷಯದ ಸಂಗ್ರಹ ಮಾಹಿತಿಯನ್ನು ಕಲೆಹಾಕಿದರು. ಪ್ರಮುಖರೆಂದರೆ 'ಕ್ಯಾಪ್ಟನ್ ಅಲೆಗ್ಸಾಂಡರ್ ರೀಡ್' ಮತ್ತು ಅವನ ಅಸಿಸ್ಟೆಂಟ್ ಜಾನ್ ಮದರ್ ಅವರು ಸಲಿಂ ಹಾಗೂ ಬಾರಾಮಹಲ್ ಜಿಲ್ಲೆಗೆ ಸಂಬಂಧಿಸಿದ ಮಾಹಿತಿ ಸಂಗ್ರಹವನ್ನು ೧೭೯೦ರಲ್ಲಿ ಮಾಡಿದರು. ಕಾಲೀನ್ ಮೆಕೆಂಜಿ ಹಾಗೂ ಡಾ. ಲ್ಯಾಡನ್(Leyden) ಇವರು ಪ್ರವಾಸ ಕಥನವನ್ನು ಒದಗಿಸಿದರು. ಅಲೆಗ್ಸಾಂಡರ್ ಹ್ಯಾಮಿಲ್ಟನ್, ವಿಕ್ಟರ್ (Victor Jacauemont, Bishop Heber) ಪ್ರಾನ್ಸಿಸ್ ಬುಕಾನನ್ ಇವರು ಒಂದು ದೇಶದ ಬಗ್ಗೆ ಸಮಗ್ರ ಮಾಹಿತಿಯನ್ನು ಒದಗಿಸಿದರು. ಇತಿಹಾಸಕ್ಕೆ ಸಂಬಂಧಿಸಿದಂತೆ ಪೌರಾತ್ಯವಾದಿಗಳಾದ ಪ್ರಿನ್ಸೆಸ್, ಮಾರ್ಕ್‌ವಿಲ್ಕ್ಸ್, ಕನ್ನಿಂಗ್‌ಹ್ಯಾಮ್, ವಿಲ್ಸನ್ ಗ್ರ್ಯಾಂಡ್‌ಡಫ್ ಮುಂತಾದವರು ಮಾಹಿತಿ ಒದಗಿಸಿದರು.

ವಿಲಿಯಮ್ Roxburgh ಇವರು ಒಂದು ಪ್ರದೇಶದ ಪ್ರಾಣಿ ಸಮೂಹದ ಬಗ್ಗೆ, John leslie ಮತ್ತು S.R.Tickells ಇವರು ಪ್ರಾಣಿ ಸಮೂಹದ ಪರಿಚಯವನ್ನು ನೀಡಿದರು. ಅಲ್ಲದೆ ಸಂಶೋಧನಾಸಕ್ತರು, ಸಾಹಸಿಗಳು, ಪ್ರವಾಸಿಗರು ಹಾಗೂ ಸ್ಥಳೀಯರು ಸಮಗ್ರವಾದ ಮಾಹಿತಿ ನೀಡಿದ್ದರಿಂದಾಗಿ ಗ್ಯಾಸೆಟಿಯರ್ ರಚನೆಗೆ ಚಾಲನೆ ದೊರಕಿತು.[೨] ೧೮೫೭ರಲ್ಲಿ 'ರಿಚಡ್ ಟೆಂಪಲ್' ಎಂಬಾತ ಮಧ್ಯಭಾರತದ ಜಿಲ್ಲೆ ಗ್ಯಾಸೆಟಿಯರ್‌ನ್ನು ರಚಿಸುವ ಕಾರ್ಯವನ್ನು ಕೈಗೊಂಡು ಮುಂಬಯಿ ಜಿಲ್ಲೆ ಗ್ಯಾಸೆಟಿಯರ್ ನಿರ್ಮಾಣ ಕಾರ್ಯವು ೧೮೭೪ರಲ್ಲಿ ಆರಂಭವಾಗಿ ೧೮೮೪ರಲ್ಲಿ ಪೂರ್ಣಗೊಂಡಿತು. ಮುಂದೆ ೨೭ ವರ್ಷ ಇವುಗಳ ಮುದ್ರಣಕಾರ್ಯ ನಡೆಯಿತು.

೧೮೬೯ರಲ್ಲಿ ವಿಲಿಯಮ್ ಹಂಟರ್‌ನ 'ಇಂಪೀರಿಯಲ್ ಗ್ಯಾಜೆಟಿಯರ್ ಆಫ್ ಇಂಡಿಯಾವನ್ನು ತಯಾರಿಸುವ ಬೃಹತ್ ಯೋಜನೆಯೊಂದನ್ನು ಸರ್ಕಾರಕ್ಕೆ ಸಲ್ಲಿಸಿದ ಈ ಯೋಜನೆಗೆ ೧೮೭೧ರಲ್ಲಿ ಮಾನ್ಯತೆ ದೊರೆಯಿತು. ೧೮೮೧ರಲ್ಲಿ ಇದರ ಒಂಬತ್ತು ಸಂಪುಟಗಳು ಪ್ರಕಟವಾದವು. ಇದರ ಪರಿಷ್ಕೃತ ಆವೃತ್ತಿಯ ೧೪ ಸಂಪುಟಗಳು ೧೮೮೫-೧೮೮೭ರಲ್ಲಿ ಹೊರಬಂದವು. ಇವುಗಳಲ್ಲಿ 'ದಿ ಇಂಡಿಯನ್ ಎಂಪೈರ್' ಎಂಬ ಸಂಪುಟವೂ ಸೇರಿದೆ. ಇಂಪೀರಿಯಲ್ ಗ್ಯಾಸೆಟಿಯರ್‌ನ್ನು ಭಾರತೀಯ ಜೀವನ ಮತ್ತು ಸಂಸ್ಕೃತಿಗಳ ಎಲ್ಲ ಅಂಶಗಳನ್ನೊಳಗೊಂಡ ವ್ಯಾಪಕ ಅಧ್ಯಯನಕ್ಕೆ ಅರ್ಹವಾದ, ಅಧಿಕೃತವಾದ ಗೆಜೆಟಿಯರ್ ಎಂದು ಪರಿಗಣಿಸಲಾಯಿತು. ಲಾರ್ಡ್‌ಕರ್ಜನ್ ಇಂಪೀರಿಯಲ್ ಗ್ಯಾಸೆಟಿಯರ್‌ಗಳ ಪುನರ್ ಮುದ್ರಣ ಕಾರ್ಯಕ್ಕೆ ಆಜ್ಞೆ ನೀಡಿದನು. ಹೊಸ ವಿಷಯಗಳನ್ನು ಸೇರಿಸಿ ೧೯೦೭-೧೯೦೯ರಲ್ಲಿ ೨೬ ಸಂಪುಟಗಳಲ್ಲಿ ಇವುಗಳನ್ನು ಪ್ರಕಟಿಸಲಾಯಿತು. ಮೊದಲ ೪ ಸಂಪುಟಗಳು ಹಂಟರ್‌ನ ಇಂಡಿಯನ್ ಎಂಪೈರ್‌ನ ಪರಿಷ್ಕೃತ ಪಾಠ.

ಮುಂದಿನ ೨೦ ಸಂಪುಟಗಳು ಅಕಾರಾದಿಯಲ್ಲಿವೆ. ಕೊನೆಯ ಎರಡು ಸಂಪುಟಗಳು ಸೂಚಿ ಹಾಗೂ ಭೂಪಟಗಳನ್ನೊಳಗೊಂಡಿವೆ. ಸ್ವಾತಂತ್ರ್ಯ ನಂತರ ಇಂಪೀರಿಯಲ್ ಗ್ಯಾಸೆಟಿಯರಿನ ಎರಡನೆಯ ಆವೃತ್ತಿಯ ಪುನರ್ ಮುದ್ರಣ ಹೊರಬಿದ್ದಿದೆ.[೯೩]

ವಾಲ್ಟರ್ ಹ್ಯಾಮಿಲ್ಟನ್ ಅವರು 'ಈಸ್ಟ್ ಇಂಡಿಯಾ ಗ್ಯಾಸೆಟಿಯರ್' ಅನ್ನು ೧೮೨೮ರಲ್ಲಿ ತಂದರು. Montgomens martisi ಅವರು Eastern India ಎಂಬ ಮೂರು ಸಂಪುಟಗಳುಳ್ಳ ಗ್ಯಾಸೆಟಿಯರ್‌ನ್ನು ೧೮೩೮ರಲ್ಲಿ ತಂದರು. ಎಡ್ವರ್ಡ್ ಥರ್ಸ್ಟನ್ ಅವರು "A Gazetteer of the territories under the government of the east india company and native states on the content of india" ಎಂಬ ಸಂಪುಟವನ್ನು ೧೮೫೪ರಲ್ಲಿ ತಂದರು. ಅನಂತರ ಅದನ್ನು ಒಂದು ಸಂಪುಟದಲ್ಲಿ ೧೮೫೮ರಲ್ಲಿ ಹೊರತಂದರು.[೯೪]

೧೮೯೭ರಲ್ಲಿ ಇಂಡಿಯನ್ ಸ್ಟೇಟ್ ಸೆಕ್ರೇಟರಿಯ ಆಜ್ಞೆಯ ಪ್ರಕಾರ ಎಲ್ಲಾ ಪ್ರಾಂತ್ಯಗಳ ಗ್ಯಾಸೆಟಿಯರ್‌ಗಳನ್ನು ಸಿದ್ಧಪಡಿಸುವ ಸೂಚನೆ ಬಂದಿದ್ದರಿಂದ ೧೮೭೪ರಲ್ಲಿ ಜೇಮ್ಸ್ ಕ್ಯಾಂಬೆಲ್‌ನ ನೇತೃತ್ವದಲ್ಲಿ ಈ ಕಾರ್ಯ ಆರಂಭವಾಗಿ ೧೮೮೪ರವರೆಗೆ ನಡೆಯಿತು. ೧೮೭೭-೧೯೦೪ರಲ್ಲಿ ನಡುವೆ ಬಾಂಬೆ ಗ್ಯಾಸೆಟಿಯರ್‌ನ ೩೩ ಸಂಪುಟಗಳು ಪ್ರಕಟಣೆಗೊಂಡವು.

ಇವುಗಳಲ್ಲಿ ೧೮ ಜಿಲ್ಲೆಗಳ ಜೊತೆಗೆ ಬರೋಡ, ಕೊಲ್ಹಾಪುರ ಮುಂತಾದ ಸಂಸ್ಥಾನಗಳು ಸಮಾವೇಶವಾಗಿವೆ. ಇದಕ್ಕೂ ಮೊದಲು ಕೊಲ್ಹಾಪುರದಲ್ಲಿ ರಾಜಪ್ರತಿನಿಧಿಯಾಗಿದ್ದ ಮೇಜರ್ ಗ್ರಹಮ್ 'ಕೊಲ್ಹಾಪುರ ಅಡ್ಮಿನಿಸ್ಟ್ರೇಷನ್ ರಿಪೋರ್ಟ್' ಎಂಬ ಗ್ಯಾಸೆಟಿಯರ್‌ನ್ನು ಸಿದ್ಧಪಡಿಸಿ ಪ್ರಕಟಿಸಿದ(೧೮೫೩-೫೪). ಈ ಗ್ಯಾಸೆಟಿಯರ್ ಬಹಳ ಸೊಗಸಾಗಿ ಇತರ ಗ್ಯಾಸೆಟಿಯರ್‌ಗಳಿಗೆ ಮಾದರಿಯಾಗಿರುವದು, ಇದು ರಾಜಕಾರ್ಯ ನಿರ್ವಹಣೆಗೆ ಬೇಕಾದ ಮಾಹಿತಿಗಳನ್ನೊಳಗೊಂಡಿರುತ್ತದೆ. ಬಾಂಬೆ ಗ್ಯಾಸೆಟಿಯರ್‌ಗಳು ಇದೇ ಸಂದರ್ಭದಲ್ಲಿ ಸಿದ್ಧವಾದವು ಎಂಬ ಮಾಹಿತಿ ಸಿಗುತ್ತದೆ.[೯೫] ಒಟ್ಟಿನಲ್ಲಿ ಭಾರತಕ್ಕೆ ಸಂಬಂಧಿಸಿದ ಗ್ಯಾಸೆಟಿಯರ್‌ಗಳು, ಪ್ರಾಂತ್ಯವಾರು ಹಾಗೂ ಜಿಲ್ಲಾ ಗ್ಯಾಸೆಟಿಯರ್‌ಗಳು, ಕೆರೆ ಮ್ಯಾನ್ಯುಯಲ್‌ಗಳು, ಸಂಖ್ಯಾಶಾಸ್ತ್ರಕ್ಕೆ ಸಂಬಂಧಿಸಿದ ಗ್ಯಾಸೆಟಿಯರ್‌ಗಳು ಹೀಗೆ ವಿವಿಧ ವಿಷಯಕ್ಕೆ ಸಂಬಂಧಿಸಿದಂತೆ ಸಂಪುಟಗಳು, ವರದಿಗಳು ರಚನೆಗೊಂಡಿದ್ದು, ಇದುವರೆಗೂ ಭಾರತಕ್ಕೆ ಸಂಬಂಧಿಸಿದಂತೆ ೫೦೦ ಸಂಪುಟಗಳಿಗಿಂತಲೂ ಹೆಚ್ಚು ಗ್ಯಾಸೆಟಿಯರ್‌ಗಳು ರಚನೆಗೊಂಡಿವೆ ಎಂದು ಹೇಳಬಹುದು.

### ೨.೮. ಕನ್ನಡ ಭೂಪ್ರದೇಶಗಳಿಗೆ ಸಂಬಂಧಿಸಿದ ವಿದೇಶಿಯರ ಗ್ಯಾಸೆಟಿಯರ್ ಬರಹಗಳು

ಕರ್ನಾಟಕಕ್ಕೆ ತನ್ನದೇ ಆದ ವಿಶಿಷ್ಟ ಗ್ಯಾಸೆಟಿಯರ್ ಸಂಪ್ರದಾಯವಿದೆ. ಬ್ರಿಟಿಷರು ತಮ್ಮ ವಶಕ್ಕೆ ಬಂದ ಯಾವುದೇ ಸೀಮೆಗಳ ಆಡಳಿತವನ್ನು ಪ್ರಾರಂಭಿಸುವುದಕ್ಕೆ ಅವುಗಳ ಭೂಗೋಳ, ಚರಿತ್ರೆ, ಜನಜೀವನ ಇತ್ಯಾದಿಗಳನ್ನು ಕುರಿತು ಪರಿಚಯ ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ.

ಟಿಪ್ಪುವಿನ ಪತನ(೧೭೯೯)ದ ತರುವಾಯ ಈ ಭಾಗದ ವಿವಿಧ ಭಾಗಗಳ ಅಧ್ಯಯನದ ಕಡೆಗೆ ಬ್ರಿಟಿಷರು ಗಮನ ಹರಿಸಿದರು. ಬಳಿಕ ಈ ಪ್ರದೇಶದ ಆಡಳಿತವನ್ನು ನಡೆಸಲು ಅಗತ್ಯವಾದ ಕಂದಾಯ ವ್ಯವಸ್ಥೆ,

ಆರ್ಥಿಕ ವಿವರಗಳು, ವಿವಿಧ ಸ್ವಾಭಾವಿಕ ಸಂಪನ್ಮೂಲಗಳು, ಜನಾಂಗಿಕ ವಿವರಗಳು ಮುಂತಾದವುಗಳ ಕುರಿತು ಮಾಹಿತಿ ಸಂಗ್ರಹಣೆಯ ಸಲುವಾಗಿ ಅವರು ವಿವಿಧ ರೀತಿಯ ಸರ್ವೇಕ್ಷಣೆ ಕಾರ್ಯಗಳನ್ನು ಕೈಗೊಂಡು ವರದಿ ತಯಾರಿಸಲು ಗಮನ ಹರಿಸಿದರು. ಈ ನಿಟ್ಟಿನಲ್ಲಿ ಕ್ರಿ.ಶ.೧೭೮೩ರಲ್ಲಿ ಪ್ರದೇಶದ ವೀಕ್ಷಣೆಯ ಅಧಿಕಾರಿಯೆಂದು ಮದ್ರಾಸ್ ಪ್ರಾಂತ್ಯದಲ್ಲಿ ಕೆಲಸಕ್ಕೆ ಸೇರಿದ ಕಾಲೀನ್ ಮೆಕೆಂಝಿ ಕೊನೆಗೆ ಭಾರತದೇಶದ ಪ್ರಥಮ ಸರ್ವೇಯರ್ ಜನರಲ್ ಆಗಿ ನಿವೃತ್ತವಾದನು. ೧೮ನೇ ಶತಮಾನದ ಅಂತ್ಯ ಹಾಗೂ ೧೯ನೇ ಶತಮಾನದ ಆದಿಭಾಗದಲ್ಲಿ ಈತನು ದಕ್ಷಿಣ ಭಾರತದ ಪ್ರಥಮ(೧೭೯೯-೨೮೦೭) ಸರ್ವೇ ಕಾರ್ಯ ನಿರ್ವಹಿಸಿದನು. ಈತನು ನೂತನವಾಗಿ ಜಯಿಸಿ ವಶಪಡಿಸಿಕೊಂಡ ಭೂ ಪ್ರದೇಶಗಳ ನಕ್ಷೆ ರಚಿಸಿದನು ಮತ್ತು ತ್ರಿಕೋಣಾತ್ಮಕ ಪರಿವೀಕ್ಷಣೆ ಮಾಡಿ ಭೂಮಿಯ ಮೇಲ್ಮೈ ಲಕ್ಷಣಗಳನ್ನು ಪರಿವೀಕ್ಷಿಸಿ ನಕ್ಷೆ ರಚಿಸಿದನು ಅಲ್ಲದೆ ಎಲ್ಲಾ ಕಡೆಯಲ್ಲೂ ಕಂಡ ಬರವಣಿಗೆಗಳು ಮತ್ತು ಐತಿಹಾಸಿಕ ವಸ್ತುಗಳ ಆಕರಗಳನ್ನು ಸಂಗ್ರಹಿಸಿದನು, ಸ್ಥಳೀಯ ಬ್ರಾಹ್ಮಣರ ಒಂದು ಗುಂಪನ್ನು ಕೆಲಸಕ್ಕೆ(ಮೈಸೂರಿನ ಲಕ್ಷ್ಮಣರಾಯ ಮತ್ತಿತರರು) ನೇಮಿಸಿ ಕೊಂಡರು. ಅವರಿಗೆ ತರಬೇತಿ ಕೊಟ್ಟು ಅವರನ್ನು ತನ್ನ ಸಂಶೋಧನಾ ಸಹಾಯಕರನ್ನಾಗಿ ನೇಮಿಸಿಕೊಂಡನು. ಅವರ ನೆರವಿನಿಂದ ಮೆಕೆಂಜೆಯು ದಕ್ಷಿಣ ಭಾರತದ ಶಾಸನ, ಹಸ್ತಪ್ರತಿ ಹಾಗೂ ಪುರಾತನ ವಸ್ತುಗಳನ್ನು, ಜೊತೆಗೆ ಐತಿಹ್ಯ, ಸ್ಥಳಪುರಾಣ ಮೊದಲಾದವುಗಳನ್ನು ಕಲೆ ಹಾಕಿದ್ದನು. ಮೈಸೂರಿನ 'ಸರ್ವೇ' ಕಾಲದಲ್ಲಿ ಈತನು ೧೭೦೦ ಶಿಲಾಲೇಖ ಮತ್ತು ತಾಮ್ರಶಾಸನಗಳನ್ನು ೮೦೧ ಹಸ್ತಪ್ರತಿಗಳನ್ನು ಸಂಗ್ರಹಿಸಿದನು. ಅವನು ಹಳೆಯ ಕಾವ್ಯ ಶಾಸನಾದಿಗಳನ್ನು ಓದಿ, ಶಾಸನದ ಮೇಲೆ ಬರೆದು ತೆಗೆಯಲು ಮತ್ತು ಅವುಗಳ ಅರ್ಥವನ್ನು ವಿವರಿಸಲು ದೇಶೀಯ ಪಂಡಿತರನ್ನು ನೇಮಿಸಿಕೊಂಡಿದ್ದನು.

ಇದೇ ಅವಧಿಯಲ್ಲಿ ಡಾ. ಫ್ರಾನ್ಸಿಸ್ ಬುಕಾನನ್ ಎಂಬ ವೈದ್ಯನನ್ನು ವೆಲ್ಲೆಸ್ಲಿಯ ನಿರ್ದೇಶನದ ಮೇರೆಗೆ ಟಿಪ್ಪುವಿನ ವಶದಲ್ಲಿದ್ದ ಕೆನರಾ, ಮಲಬಾರ್, ಮೈಸೂರು ಪ್ರದೇಶಗಳ ಸ್ವಾಭಾವಿಕ ಉತ್ಪನ್ನಗಳು, ವಾಣಿಜ್ಯ ಚಟುವಟಿಕೆ, ಗಣಿಗಾರಿಕೆ, ಜನರ ಸ್ಥಿತಿಗತಿ ಮುಂತಾದ ವಿಷಯಗಳ ಕುರಿತು ಅಧ್ಯಯನ ಮಾಡಲು ನಿಯುಕ್ತನಾದನು.[೯೬]

ಆ ಮೇರೆಗೆ ಏಪ್ರಿಲ್ ೨೩, ೧೮೦೦ರಂದು ಮದ್ರಾಸ್‌ನಿಂದ ಸರ್ವೇ ಕಾರ್ಯ ಆರಂಭಿಸಿದ ಬುಕಾನನ್ ಆರ್ಕಾಟು ಮಾರ್ಗವನ್ನು ಬಳಸಿ ಮೈಸೂರನ್ನು ತಲುಪಿದನು. ಶ್ರವಣಬೆಳಗೊಳ ಮೊದಲಾದ ಚಾರಿತ್ರಿಕ ಸ್ಥಳಗಳನ್ನು ಸಂದರ್ಶಿಸಿದನು. ಆನಂತರ ಮೈಸೂರು, ಕೊಡಗಿನ ಮಾರ್ಗವಾಗಿ ದಕ್ಷಿಣ ಕನ್ನಡವನ್ನು ಹಾದು ಮಲೆನಾಡು ಜಿಲ್ಲೆಯನ್ನು ಸೇರಿದನು. ಅಲ್ಲಿಂದ ಕೊಯಮತ್ತೂರು ಮಾರ್ಗವಾಗಿ ಹಾದು ಆನೆಮಲೆ ಗುಡ್ಡವನ್ನು ದಾಟಿ ಪಶ್ಚಿಮ ಕರಾವಳಿಯ ದಕ್ಷಿಣಭಾಗವನ್ನು ಬಳಸಿ ಜುಲೈ ೬, ೧೮೦೧ರಲ್ಲಿ ಪುನಃ ಮದ್ರಾಸನ್ನು ತಲುಪಿದನು.[೯೭]

ಬುಕಾನನ್, ಮೆಕೆಂಝಿಗಿಂತಲೂ ಮಿಗಿಲಾದ ಐತಿಹಾಸಿಕ ಶ್ರದ್ಧೆಯುಳ್ಳವನಾಗಿದ್ದು ತನಗೆ ದೊರೆತ ಶಾಸನ ಮತ್ತು ಕಡತಗಳಲ್ಲಿಯ ಚಾರಿತ್ರಿಕ ಅಂಶಗಳ ಸತ್ಯಾಸತ್ಯತೆಗಳನ್ನು ಒರೆಗೆ ಹಚ್ಚಿ ನೋಡುವ ಪ್ರವೃತ್ತಿ

ಹೊಂದಿದವನಾಗಿದ್ದನು. ಅಂತಿಮವಾಗಿ ಆತ ತನ್ನ ಸರ್ವೇಕ್ಷಣೆ, ಪರಿವೀಕ್ಷಣೆಯ ಕಾರ್ಯದಿಂದ ದೊರೆತ ಮಾಹಿತಿಗಳನ್ನು ಆಧರಿಸಿ ಅಮೂಲ್ಯ ಮಾಹಿತಿಯನ್ನೊಳಗೊಂಡ 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಅಂಡ್ ಮಲಬಾರ್ ಕೃತಿ'ಯನ್ನು ಮೂರು ಸಂಪುಟಗಳಲ್ಲಿ ೧೮೦೭ರಲ್ಲಿ ಪ್ರಕಟಿಸಿದನು. ಈ ಕೃತಿ ಇಂದಿಗೂ ಅತ್ಯಮೂಲ್ಯ ಗ್ರಂಥವಾಗಿದೆ.[೫೮] ನಂತರ ಮೈಸೂರು ಸಂಸ್ಥಾನದ ಸರ್ವೇಕ್ಷಣ ಕಾರ್ಯ ಕೈಗೊಂಡವನು ಡಾ. ಬೆಂಜಮಿನ್ ಹೈನೆ ಎಂಬುವನು. ಈತ ಮೈಸೂರು ಸಂಸ್ಥಾನದ ಸರ್ವೇಕ್ಷಣೆ ಕಾರ್ಯ ಕೈಗೊಂಡ ಮೊದಲ ಸರ್ಜನ್ ಮತ್ತು ನ್ಯಾಚುರಲಿಸ್ಟ್ ಈತ ಮೈಸೂರು ಸಂಸ್ಥಾನದ ವಿವಿಧ ಅಂಶಗಳ ಕುರಿತು ಮಾಹಿತಿಗಳನ್ನು ಸಂಗ್ರಹಿಸಿದ್ದನು. ಈ ಮಾಹಿತಿಗಳನ್ನೆಲ್ಲ ಒಗ್ಗೂಡಿಸಿ ''Tract, Historical and Statistical on India' ಶೀರ್ಷಿಕೆಯಡಿಯಲ್ಲಿ ೧೮೧೪ರಲ್ಲಿ ಲಂಡನ್ನಿನಲ್ಲಿ ಪ್ರಕಟಿಸಿದನು. ಈತನ ಅನಂತರ ಬೆಂಜಮಿನ್ ಟೇಲರ್ ಎಂಬುವನು ಮೈಸೂರಿನ ಸರ್ವೇಕ್ಷಣೆ ಕಾರ್ಯ ಕೈಗೊಂಡನು. ಹಾಗೆಯೇ ಮತ್ತೊಬ್ಬ ಇತಿಹಾಸಕಾರನಾದ ಕರ್ನಲ್ ಮಾರ್ಕ್‌ವಿಲ್ಸ್ ಈತನು ಮೈಸೂರಿಗೆ ಸಂಬಂಧಿಸಿದಂತೆ 'History of Mysore' ಎಂಬ ಎರಡು ಸಂಪುಟಗಳಲ್ಲಿ ೧೮೧೦ರಲ್ಲಿ ಪ್ರಕಟಿಸಿದನು.[೫೯]

ಡಾ. ಜಾರ್ಜ್ ಗ್ರಿಯರ್‌ಸನ್ 'Linguistic survey of India' ಎಂಬ ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ ಸರ್ವೇಕ್ಷಣೆ ಕಾರ್ಯ ಮಾಡಿ ಹಲವು ಸಂಪುಟಗಳನ್ನು ಹೊರತಂದನು. ಅಲ್ಲದೆ ಸರ್ ಅಲೆಕ್ಸ್ ಕನ್ನಿಂಗ್ ಹ್ಯಾಮ್, ಡಾ. ಜೇಮ್ಸ್ ಬರ್ಜೇಸ್, ಕೊಡಗು ಪ್ರಾಂತ್ಯಕ್ಕೆ ಸಂಬಂಧಿಸಿದಂತೆ Liecnt Connar ಹಾಗೂ ಕಿರ್ಕ್‌ಪ್ಯಾಟ್ರಿಕ್ ಇನ್ನಿತರ ಹಲವು ವಿದ್ವಾಂಸರು ಅನೇಕ ಕೃತಿಗಳನ್ನು ರಚಿಸಿದರು.[೬೦] ಕನ್ನಡನಾಡಿನ ಪ್ರತಿಯೊಂದು ಜಿಲ್ಲೆಯನ್ನು ಕುರಿತಾಗಿಯೂ ಸವಿಸ್ತಾರ ವರದಿಗಳನ್ನು ಬರೆದು ಗ್ರಂಥ ರೂಪದಲ್ಲಿ ಪ್ರಕಟಿಸಿದರು. ''Selection from the records'' ಎಂಬುದಾಗಿ ಇದೇ ರಾಜ್ಯದ ವಿಷಯವಾಗಿ ಕ್ರಿ.ಶ.೧೮೩೧ರಲ್ಲಿ ಹಳೇ ಮೈಸೂರು ಸರಕಾರವು ಬರೆಯಿಸಿದ್ದು ೧೮೬೪ರಲ್ಲಿ ಮುದ್ರಣವಾಯಿತು.[೬೧] ಈ ಗ್ರಂಥಗಳ ವರದಿಗಳೆಲ್ಲವೂ ಮುಂದೆ ಗ್ಯಾಸೆಟಿಯರ್ ಇತಿಹಾಸ ರಚನೆಗೆ ಸಹಾಯಕವಾಯಿತು.

ಕರ್ನಾಟಕ ಅದರಲ್ಲೂ ಕನ್ನಡ ಪ್ರಾಂತ್ಯಗಳಾದ ಮೈಸೂರು ಸಂಸ್ಥಾನ, ಹೈದರಾಬಾದ್ ಕರ್ನಾಟಕ, ಮುಂಬಯಿ ಕರ್ನಾಟಕ, ಮದ್ರಾಸ್ ಕರ್ನಾಟಕ ಹಾಗೂ ಕೊಡಗು(ಪ್ರತ್ಯೇಕ ಘಟಕ) ಕ್ಷೇತ್ರ ಬ್ರಿಟಿಷರ ವಶವಾದ ಮೇಲೆ ಅತ್ಯಂತ ಪರಿಶ್ರಮತೆಯುಳ್ಳ ಆಂಗ್ಲ ಹಾಗೂ ಯುರೋಪಿಯನ್ ಅಧಿಕಾರಿಗಳು ವಿವಿಧ ಇಲಾಖೆಗಳಿಗೆ ನೇಮಕಗೊಂಡು ಸಾರಸ್ವತ ಲೋಕಕ್ಕೆ ತಮ್ಮ ಅಮೂಲ್ಯ ಸೇವೆಯನ್ನು ಸಲ್ಲಿಸಿರುವರು. ಸಾರ್ವಜನಿಕ ಶಿಕ್ಷಣ ಇಲಾಖೆಯ ಪ್ರಥಮ ನಿರ್ದೇಶಕರಾಗಿದ್ದ ಬೆಂಜಮಿನ್ ಲೂಯಿರೈಸ್ ಅವರು ಸಂಪಾದಿಸಿದ 'ಮೈಸೂರು ಗ್ಯಾಸೆಟಿಯರ್' ಸಂಪುಟವನ್ನು ಎರಡು ಭಾಗಗಳಲ್ಲಿ ಹಾಗೂ 'ಕೂರ್ಗ್ ಗ್ಯಾಸೆಟಿಯರ್' ಸಂಪುಟವನ್ನು ೧೮೭೭ರಲ್ಲಿ ಪ್ರಕಟಿಸಿದ್ದು ದೇಶದಲ್ಲಿಯೇ ಉತ್ತಮ ಪ್ರಯತ್ನವೆಂದು ಪರಿಗಣಿಸಲ್ಪಟ್ಟಿದೆ. ನಂತರ ೧೮೮೧ರಲ್ಲಿ 'ಇಂಪೀರಿಯಲ್ ಗ್ಯಾಸೆಟಿಯರ್' ಸಂಪುಟಗಳನ್ನು ಸಂಪಾದಿಸಿದ ವಿಲಿಯಮ್ ವಿಲ್ಸನ್ ಹಂಟರ್ ಇವರು ತಮ್ಮ ಪ್ರಥಮ ಸಂಪುಟದ ಮುನ್ನುಡಿಯಲ್ಲಿ ಬಿ.ಎಲ್. ರೈಸ್ ಅವರ ಪರಿಪಕ್ವ ಸಂಪಾದಕತ್ವದ ಬಗ್ಗೆ ವೈಭವಯುತ ವಾಕ್ಯಗಳಲ್ಲಿ ಶ್ಲಾಘಿಸಿರುತ್ತಾರೆ. ತರುವಾಯ ಬಿ.ಎಲ್.ರೈಸ್ ಅವರೇ ೧೮೯೭ರಲ್ಲಿ 'ಮೈಸೂರು

ಗ್ಯಾಸೆಟಿಯರ್' ಸಂಪುಟವನ್ನು ಎರಡು ಭಾಗಗಳಾಗಿ ಪರಿಷ್ಕರಿಸಿ ಪುನಃ ಪ್ರಕಟಿಸಿದರು. ಮೈಸೂರು ಪ್ರಾಂತ್ಯಕ್ಕೆ ಪ್ರಥಮ ಬಾರಿಗೆ ಹೆಚ್. ವೆಲ್ಲೆಸ್ಲಿಯವರು ೧೮೬೯ರಲ್ಲಿಯೇ ಗ್ಯಾಸೆಟಿಯರ್ ಸಂಪುಟವನ್ನು ತಯಾರಿಸಿದ್ದರೆಂದು ರೈಸ್ ಅವರೇ ತಮ್ಮ ಪ್ರಥಮ ಸಂಪುಟದ ಮುನ್ನುಡಿಯಲ್ಲಿ ದಾಖಲಿಸಿರುತ್ತಾರೆ. ಆದರೆ ಈ ಸಂಪುಟವು ಇಲ್ಲಿಯವರೆಗೂ ದೊರೆತಿಲ್ಲ ಎಂಬ ಅಭಿಪ್ರಾಯವಿದೆ.[೬೨]

ಕೋಲಾರ ಜಿಲ್ಲೆಗೆ ಸಂಬಂಧಿಸಿದಂತೆ ಪ್ರಥಮ ಗ್ಯಾಸೆಟಿಯರ್ ಸಂಪುಟವನ್ನು ಸ್ಥಳೀಯರೇ ಆದ ಶ್ರೀ ಬಿ.ಕೃಷ್ಣಯ್ಯಂಗಾರ್ ಅವರು ೧೮೬೯ರಲ್ಲಿ ಹೊರತಂದರೆಂದು ತಿಳಿದುಬರುತ್ತದೆ. ಈ ಗ್ರಂಥದ ಪ್ರತಿಯನ್ನು ಪತ್ತೆ ಮಾಡಿ ಅದನ್ನು ಯಥಾವತ್ತಾಗಿ ಈ ಸಂಪುಟದೊಂದಿಗೆ ಪುರವಣಿಯಾಗಿ ನೀಡುವ ಮಹದಾಸೆಯನ್ನು ಇಲಾಖೆ ಹೊಂದಿತ್ತಾದರೂ ಅದನ್ನು ಪತ್ತೆ ಹಚ್ಚುವ ಎಲ್ಲಾ ಪ್ರಯತ್ನಗಳು ವಿಫಲವಾದ ಬಗ್ಗೆ ತಿಳಿದುಬರುತ್ತದೆ.[೬೩] ಹೀಗಾಗಿ ಇದರ ಲಭ್ಯತೆ ಇಲ್ಲ.

ಹಳೇ ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿದ ಇನ್ನಿತರ ಗ್ಯಾಸೆಟಿಯರ್‌ಗಳೆಂದರೆ ಮೇಜರ್ ಡಬ್ಲ್ಯು, ಹಿಲ್ ಅವರ 'ಹಾಸನ ಜಿಲ್ಲಾ ಗ್ಯಾಸೆಟಿಯರ್', ಕ್ಯಾಪ್ಟನ್ ಗೋರ್ಡ್‌ನ್ ಅವರು 'ಶಿವಮೊಗ್ಗ ಜಿಲ್ಲಾ ಗ್ಯಾಸೆಟಿಯರ'ನ್ನು ರಚಿಸಿದರು. ಮೇಜರ್ ಸಿ. ವೇಯರ್ಸ್ ಅವರು ತುಮಕೂರು ಜಿಲ್ಲೆಗೆ ಸಂಬಂಧಿಸಿದಂತೆ ರಚನೆ ಮಾಡಿದರೆ, ಚಿತ್ರದುರ್ಗಕ್ಕೆ ಸಂಬಂಧಿಸಿದಂತೆ ಮಿಸ್ಟರ್ ಕೃಷ್ಣರಾವ್ ಅವರು ರಚನೆ ಮಾಡಿದರು. ಈ ಸಂದರ್ಭದಲ್ಲಿ ಬೆಂಗಳೂರು ಹಾಗೂ ಕಡೂರು ಜಿಲ್ಲೆಗಳ ಗ್ಯಾಸೆಟಿಯರ್ ರಚನೆ ಕಾರ್ಯ ಕೈಗೊಂಡಿದ್ದರು. ಅವು ಪೂರ್ಣಗೊಳ್ಳಲಿಲ್ಲ.[೬೪]

ಕೂರ್ಗ್ ಪ್ರಾಂತ್ಯಕ್ಕೆ ಸಂಬಂಧಿಸಿದಂತೆ ಗ್ಯಾಸೆಟಿಯರ್ ಸಂಪುಟವನ್ನು ರೆವೆರೆಂಡ್ ಜಿ.ರಿಚ್ಚರ್ ಅವರು ೧೮೭೦ರಲ್ಲಿ ಪ್ರಕಟಿಸಿದ್ದರು. ಇದು ಕೂರ್ಗ್‌ಗೆ ಸಂಬಂಧಿಸಿದ ಮೊಟ್ಟಮೊದಲ ಗ್ಯಾಸೆಟಿಯರ್ ಆಗಿದೆ. ಬೆಳಗಾವಿ, ಬಿಜಾಪುರ, ಧಾರವಾಡ ಮತ್ತು ಕೆನರಾ(ಉತ್ತರ ಕನ್ನಡ) ಜಿಲ್ಲಾ ಗ್ಯಾಸೆಟಿಯರ್ ಸಂಪುಟವನ್ನು ಜೇಮ್ಸ್ ಎಂ. ಕ್ಯಾಂಬೆಲ್ ಅವರು ೧೮೮೩-೮೪ರ ಅವಧಿಯಲ್ಲಿ ಸಂಪಾದಿಸಿ ಪ್ರಕಟಿಸಿದರು. ದಕ್ಷಿಣ ಕನ್ನಡ ಜಿಲ್ಲೆಯ ಮ್ಯಾನ್ಯುಯಲ್ ಭಾಗ-೧(೧೮೯೪) ಮತ್ತು ಭಾಗ-೨(೧೮೯೫) ಸಂಪುಟಗಳನ್ನು ಜಾನ್‌ಸ್ಟರ‍್ರೋಕ್ ಮತ್ತು ಹೆರಾಲ್ಡ್ ಎ ಸ್ಟೂಯರ್ಟ್ ಅವರುಗಳು ಕ್ರಮವಾಗಿ ಸಂಪಾದಿಸಿದರು. ಬಳ್ಳಾರಿ ಮ್ಯಾನ್ಯುಯಲ್ ಸಂಪುಟವನ್ನು ಜಾನ್‌ಕೆಲ್‌ಸಲ್ ಅವರು ೧೮೭೨ರಲ್ಲಿ ಪ್ರಥಮ ಬಾರಿಗೆ ಸಂಪಾದಿಸಿ ಪ್ರಕಟಿಸಿದರು. ನಂತರ ಮ್ಯಾನ್ಯುಯಲ್‌ನ ಪರಿಷ್ಕೃತ ಸಂಪುಟವನ್ನು ವಿಲಿಯಂ ಫ್ರಾನ್ಸಿಸ್ ಅವರು ೧೯೦೪ರಲ್ಲಿ ಪ್ರಕಟಿಸಿದರು. ರಾವ್‌ಬಹದ್ದೂರ್ ಸಿ. ಹಯವದನರಾವ್ ಅವರು ೧೯೨೯-೩೦ರ ದಶಕದಲ್ಲಿ ಅತ್ಯಂತ ಪರಿಶ್ರಮತೆಯ ಪ್ರಯತ್ನವನ್ನು ಮಾಡಿ ಮೈಸೂರು ಪ್ರಾಂತ್ಯಕ್ಕೆ ಸಂಬಂಧಿಸಿದಂತೆ (ಐದು ಸಂಪುಟಗಳನ್ನು ೮ ಭಾಗಗಳಲ್ಲಿ) ಗ್ಯಾಸೆಟಿಯರ್‌ಗಳನ್ನು ಸಂಪಾದಿಸಿ ಪ್ರಕಟಿಸಿದರು.[೬೫] E.G.Lynn ಇವರು ಕ್ರಿ.ಶ ೧೮೪೪ರಲ್ಲಿ ಹೈದರಾಬಾದ್ ರಾಜ್ಯದ ಗ್ಯಾಸೆಟಿಯರ್‌ಗಳಲ್ಲಿ ಬೀದರ್, ರಾಯಚೂರು ಮತ್ತು ಗುಲ್ಬರ್ಗಾ ಜಿಲ್ಲೆಗಳನ್ನು ಕುರಿತು ವಿಸ್ತಾರವಾಗಿ ಪ್ರಸ್ತಾಪಿಸಿದರು.[೬೬] ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಎಂಬ ೧೩ನೇ ಸಂಪುಟದಲ್ಲಿ ಹೈದರಾಬಾದ್ ರಾಜ್ಯದ ಕುರಿತ ಮಾಹಿತಿಯೂ ಸಿಗುತ್ತದೆ.

ಮುಂಬಯಿ ಆಧಿಪತ್ಯಕ್ಕೆ ಸೇರಿದ್ದ ಕನ್ನಡ ಜಿಲ್ಲೆಗಳ ಪೈಕಿ ಬೆಳಗಾವಿ, ಉತ್ತರ ಕನ್ನಡ, ಬಿಜಾಪುರ ಮತ್ತು ಧಾರವಾಡವನ್ನು ಸೇರಿಸಿ ಅವುಗಳ ಗ್ಯಾಸೆಟಿಯರ್‌ಗಳನ್ನು ಕ್ರಿ.ಶ.೧೮೮೧ರಲ್ಲಿ ಕಲ್ಕತ್ತಾದಲ್ಲಿದ್ದ W.Rushtor ಇವರು ಬರೆದರು. ಮ್ಯಾಕ್ಲೀನ್ ಸಿ.ಡಿ. ಇವರು ಮದ್ರಾಸ್ ಪ್ರಾಂತ್ಯಕ್ಕೆ ಸಂಬಂಧಿಸಿದಂತೆ 'ಮ್ಯಾನ್ಯುಯಲ್ ಆಫ್ ದಿ ಅಡ್ಮಿನಿಸ್ಟ್ರೇಷನ್ ಆಫ್ ದಿ ಮದ್ರಾಸ್ ಪ್ರೆಸಿಡೆನ್ಸಿ' ಎಂಬ ಮೂರು ಸಂಪುಟಗಳನ್ನು ೧೮೮೫ರಲ್ಲಿ ರಚಿಸಿದರು. ಇದರಲ್ಲಿ ಎರಡು ಸಂಪುಟಗಳು ಮಾತ್ರ ಆಡಳಿತಕ್ಕೆ ಸಂಬಂಧಿಸಿದ್ದು ಮೂರನೇ ಸಂಪುಟ ಪದಸೂಚಿ ಸಂಪುಟವಾಗಿದೆ. ಇದು ಮದ್ರಾಸ್ ಪ್ರಾಂತ್ಯದ ೨೨ ಜಿಲ್ಲೆಗಳ ಕುರಿತು ವಿವರಿಸುತ್ತದೆ.

ಕ್ರಿ.ಶ. ೧೯೩೮ರಲ್ಲಿ ಜೆ.ಎಫ್. ಹಿಲ್ ಮತ್ತು ಕೆ.ಎನ್.ಕೃಷ್ಣಸ್ವಾಮಿ ಐಯ್ಯರ್ ಅವರ ಪ್ರಯತ್ನದಿಂದಾಗಿ ಮದ್ರಾಸ್ ಪ್ರಾಂತ್ಯಕ್ಕೆ ಸಂಬಂಧಿಸಿದಂತೆ ದಕ್ಷಿಣ ಕನ್ನಡ ಜಿಲ್ಲೆಯು ಅಂಕಿ-ಅಂಶಗಳ ಕೋಷ್ಟಕಗಳನ್ನೊಳಗೊಂಡ ಕಿರು ಸಂಪುಟದ ಗ್ಯಾಸೆಟಿಯರ್ ಪ್ರಕಟಗೊಳಿಸಿದರು. ೧೮೯೩ರಲ್ಲಿ ಧಾರವಾಡ, ಬೆಳಗಾವಿ, ಬಿಜಾಪುರ ಮತ್ತು ಕೆನರಾ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಗ್ಯಾಸೆಟಿಯರ್ ಸಂಪುಟಗಳನ್ನು ಸಂಕ್ಷಿಪ್ತಗೊಳಿಸಿ ವೆಂಕಟರಂಗೋಕಟ್ಟಿ ಯವರು ಕನ್ನಡ ಭಾಷೆಗೆ ಅನುವಾದಿಸಿ ಪ್ರಕಟಿಸಿದರು. ಇದೊಂದೇ ವಸಾಹತುಶಾಹಿ ಕಾಲಘಟ್ಟದಲ್ಲಿ ಕನ್ನಡದಿಂದ ಅನುವಾದಗೊಂಡ ಗ್ಯಾಸೆಟಿಯರ್ ಆಗಿದೆ. ಇವು ವಸಾಹತುಶಾಹಿಗಳ ಕಾಲದಲ್ಲಿ ಕನ್ನಡ ಭೂಪ್ರದೇಶಕ್ಕೆ ಸಂಬಂಧಿಸಿದಂತೆ ರಚನೆಗೊಂಡ ಗ್ಯಾಸೆಟಿಯರ್‌ಗಳಾಗಿವೆ.

**ಟಿಪ್ಪಣಿಗಳು**

೧. ಗೋವಿಂದರಾಜು ಸಿ.ಆರ್, ಕರ್ನಾಟಕ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ, ೨೦೦೬, ಪು.೧೭.

೨. ಬಸವಾರಾಧ್ಯ ಎನ್(ಪ್ರ.ಸಂ), ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ಎಂಟನೆಯ ಸಂಪುಟ, ೧೯೯೫, ಪು. ೭೮೧೨.

೩. ಶಿವಾರೆಡ್ಡಿ ಕೆ.ಸಿ, ಕನ್ನಡದ ಹಾಡುಪಾಡು, ೨೦೦೩, ಪು.೧೦.

೪. ಬಸವಾರಾಧ್ಯ ಎನ್(ಪ್ರ.ಸಂ), ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ಎಂಟನೆಯ ಸಂಪುಟ, ೧೯೯೫ ಪು. ೭೮೧೨.

೫. ರಾಜೇಂದ್ರಚೆನ್ನಿ, ದೇಶೀವಾದ, ೧೯೮೯, ಪು. ೧೯.

೬. ಡೆನ್ನಿಸ್ ಫರ್ನಾಂಡಿಸ್(ಮೂಲ), ಸಿರಾಜ್ ಅಹಮದ್ ಎಸ್ (ಅನು), 'ಯುರೋಪಿನ ಸಾಮ್ರಾಜ್ಯಶಾಹಿ ಯುಗ', ಚರಿತ್ರೆ ವಿಶ್ವಕೋಶ ಸಂ-೪, ವಿಜಯ್ ತಂಬಂಡ ಪೂಣಚ್ಚ(ಸಂ), ೨೦೦೧, ಪು.೬೮೮.

೭. ಶಿವಾರೆಡ್ಡಿ ಕೆ.ಸಿ, ಕನ್ನಡದ ಹಾಡುಪಾಡು, ೨೦೦೩, ಪು. ೧೧.

೮. ಗೋವಿಂದರಾಜು ಸಿ.ಆರ್, ಕರ್ನಾಟಕ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ, ೨೦೦೬, ಪು.೧೭.

೯. ಶಂಕರನಾರಾಯಣರಾವ್. ಎನ್.ಪಿ, ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು, ೨೦೦೮, ಪು. ೨೭, ೨೮.

೧೦. ಗೋಪಾಲರಾವ್ ಎಚ್.ಎಸ್, ಕರ್ನಾಟಕ ಏಕೀಕರಣ ಇತಿಹಾಸ, ೧೯೯೬ ಪು. ೩೮.

೧೧. ಡೆನ್ನಿಸ್ ಫರ್ನಾಂಡಿಸ್(ಮೂಲ), ಸಿರಾಜ್ ಅಹಮದ್(ಅನು), 'ಯುರೋಪಿನ ಸಾಮ್ರಾಜ್ಯಶಾಹಿ ಯುಗ', ಚರಿತ್ರೆ ವಿಶ್ವಕೋಶ ಸಂ-೪, ವಿಜಯ್ ತಂಬಂಡ ಪೂಣಚ್ಚ(ಸಂ), ೨೦೦೧, ಪು. ೬೯೦.

೧೨. ಗೋವಿಂದರಾಜು ಸಿ.ಆರ್. ಕರ್ನಾಟಕ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ, ೨೦೦೬, ಪು.೧೭.

೧೩. ನಿರಂಜನ ಪ್ರ.ಸಂ, ಜ್ಞಾನಗಂಗೋತ್ರಿ, ಕಿರಿಯರ ವಿಶ್ವಕೋಶ ಸಂ.೧, ಮನುಕುಲದ ಕಥೆ, ೧೯೭೦, ಪು. ೧೫೮.

೧೪. ನಿರಂಜನ ಪ್ರ.ಸಂ, ಜ್ಞಾನಗಂಗೋತ್ರಿ, ಕಿರಿಯರ ವಿಶ್ವಕೋಶ ಸಂ.೧, ೧೯೭೦.

೧೪. ಶಂಕರನಾರಾಯಣರಾವ್, ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು, ೨೦೦೮, ಪು. ೨೮, ೨೯.

೧೫. ಡೆನ್ನಿಸ್ ಫರ್ನಾಂಡಿಸ್(ಮೂಲ), ಸಿರಾಜ್‌ಅಹಮದ್.ಎಸ್(ಅನು), 'ಯುರೋಪಿನ ಸಾಮ್ರಾಜ್ಯಶಾಹಿ ಯುಗ', **ಚರಿತ್ರೆ ವಿಶ್ವಕೋಶ ಸಂ-೪**, ವಿಜಯ್ ತಂಬಂಡ ಪೂಣಚ್ಚ(ಸಂ), ೨೦೦೧, ಪು.೬೯೨.

೧೬. ಅನಂತರಾಮಯ್ಯ(ಅನು), ಸ್ವಾತಂತ್ರ್ಯದ ಹೋರಾಟ, ೧೯೭೨, ಪು. ೨.

೧೭. ಗೋಪಾಲರಾವ್ ಎಚ್.ಎಸ್, ಕರ್ನಾಟಕ ಏಕೀಕರಣ ಇತಿಹಾಸ, ೨೦೦೦, ಪು. ೩೮,೩೯.

೧೮. ಡೆನ್ನಿಸ್ ಫರ್ನಾಂಡಿಸ್(ಮೂಲ), ಸಿರಾಜ್‌ಅಹಮದ್.ಎಸ್(ಅನು), 'ಯುರೋಪಿನ ಸಾಮ್ರಾಜ್ಯಶಾಹಿ ಯುಗ', **ಚರಿತ್ರೆ ವಿಶ್ವಕೋಶ ಸಂ-೪**, ವಿಜಯ್ ತಂಬಂಡ ಪೂಣಚ್ಚ(ಸಂ), ೨೦೦೧, ಪು. ೬೯೩.

೧೯. ಗೋಪಾಲರಾವ್ ಎಚ್.ಎಸ್, ಕರ್ನಾಟಕ ಏಕೀಕರಣ ಇತಿಹಾಸ, ೨೦೦೦, ಪು. ೩೮.

೨೦. ಡೆನ್ನಿಸ್ ಫರ್ನಾಂಡಿಸ್(ಮೂಲ), ಸಿರಾಜ್‌ಅಹಮದ್.ಎಸ್(ಅನು), 'ಯುರೋಪಿನ ಸಾಮ್ರಾಜ್ಯಶಾಹಿ ಯುಗ', **ಚರಿತ್ರೆ ವಿಶ್ವಕೋಶ ಸಂ-೪**, ವಿಜಯ್ ತಂಬಂಡ ಪೂಣಚ್ಚ(ಸಂ), ೨೦೦೧, ಪು-೬೯೪.

೨೧. ಅದೇ, ಪು.೬೯೪.

೨೨. ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ೨೦೦೦, ಪು.೭.

೨೩. ಅದೇ. ಪು.೮.

೨೪. ಗೋಪಾಲರಾವ್ ಎಚ್.ಎಸ್., ಕರ್ನಾಟಕ ಏಕೀಕರಣ ಇತಿಹಾಸ, ೨೦೦೦, ಪು-೩೯-೪೦.

೨೫. ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ೨೦೦೦, ಪು-೮.

೨೬. ಮೋಹನ್‌ಕೃಷ್ಣ ರೈ ಕೆ, ವಸಾಹತುಶಾಹಿ ಮತ್ತು ನಗರೀಕರಣ, ೨೦೦೭, ಪು-೧೩.

೨೭. ಗೋವಿಂದರಾಜು ಸಿ.ಆರ್, ಕರ್ನಾಟಕ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ, ೨೦೦೬, ಪು.೨೨,೨೩.

೨೮. ಶ್ರೀನಿವಾಸಮೂರ್ತಿ ಕಾ.ವೆಂ, ಕನ್ನಡಪರ ಚಿಂತನೆ ಮತ್ತು ಪರಂಪರೆ, ೨೦೦೩, ಪು.೧೭೩-೧೭೪.

೨೯. ಸರದಾರ್ ಕೆ.ಎಂ, ಪಣಿಕ್ಕರ್(ಮೂಲ), ನರಗುಂದಕರ. ಎನ್.ಬಿ(ಅನು), ಭಾರತದ ಭೂ ರಾಜಕಾರಣ ೧೯೭೧, ಪು.೩.

೩೦. ನಾಯಕ ಹಾ.ಮಾ (ಪ್ರ.ಸಂ), ವಿಶ್ವಕೋಶ ಸಂ-೬, ೧೯೭೩, ಪು. ೫೭೪-೫೭೬.

೩೧. ನಾಗೇಗೌಡ ಎಚ್.ಎಲ್(ಸಂ), ಪ್ರವಾಸಿ ಕಂಡ ಇಂಡಿಯಾ, ಸಂ-೧, ೧೯೬೪, ಪು. xi, xiii.

೩೨. ಶ್ರೀಸಚ್ಚಿದಾನಂದ ಶಂಕರ ಭಾರತಿಸ್ವಾಮಿಗಳು(ಕನ್ನಡಾನುವಾದ) ಕೌಟಿಲ್ಯನ ಅರ್ಥಶಾಸ್ತ್ರ, ೧೯೬೩, ಪು.೧೦.

೩೩. ಸರದಾರ್ ಕೆ.ಎಂ. ಪಣಿಕ್ಕರ್(ಮೂಲ), ನರಗುಂದಕರ್. ಎಸ್.ಬಿ(ಅನು), ಭಾರತ ಭೂ ರಾಜಕಾರಣ, ೧೯೭೧, ಪು.೨-೩.

೩೪. ಮಲ್ಲೇಪುರಂ ಜಿ. ವೆಂಕಟೇಶ(ಸಂ), ಕೆಳದಿ ಬಸವರಾಜ ಸಂಕಲಿಸಿದ ಶಿವತತ್ತ್ವ ರತ್ನಾಕರ, ಸಂ-೧, ೧೯೯೯, ಪು.೧-೨.

೩೫. ಕಲಬುರ್ಗಿ ಎಂ.ಎಂ(ಪ್ರ.ಸಂ), ಮಾನಸೋಲ್ಲಾಸ, ೧೯೯೮, ಪು.೧೨, ೧೩, ೫೩, ೫೪.

೩೬. ವಿವೇಕ ರೈ ಬಿ.ಎಂ(ಸಂ), ಪ್ರವಾಸಿ ಕಂಡ ವಿಜಯನಗರ, ೨೦೦೫, ಪು.೧೨,೧೩, ೫೩, ೫೪.

೩೭. ನಾಗೇಗೌಡ ಎಚ್.ಎಲ್(ಸಂ), ಪ್ರವಾಸಿ ಕಂಡ ಇಂಡಿಯಾ, ೧೯೬೪, xi, xiii

೩೮. ನಾಯಕ ಹಾ.ಮಾ. ಪ್ರ.ಸಂ., ವಿಶ್ವಕೋಶ ಸಂ-೬, ೧೯೭೩, ಪು.೫೭೫-೫೭೬

೩೯. ಸೂರ್ಯನಾಥ ಯು ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂ-೧, ೧೯೮೪, ಪು.x

೪೦. ನಿರ್ಪಾಜೆ ಭೀಮಭಟ್ಟ(ಕನ್ನಡಕ್ಕೆ), ಕಲ್ಹಣನ ರಾಜತರಂಗಿಣಿ, ೧೯೯೪, (ಮುನ್ನುಡಿ).

೪೧. ಮಲ್ಲೇಪುರಂ ಜಿ. ವೆಂಕಟೇಶ(ಸಂ), ಕೆಳದಿ ಬಸವರಾಜ ಸಂಕಲಿಸಿದ ಶಿವತತ್ತ್ವ ರತ್ನಾಕರ, ಸಂ-೧, ೧೯೯೯, ಪು. x, xiii

೪೨. ಶ್ರೀನಿವಾಸಮೂರ್ತಿ ಕಾ.ವೆಂ, ಕನ್ನಡಪರ ಚಿಂತನೆ ಮತ್ತು ಪರಂಪರೆ, ೨೦೦೩, ಪು.೧೭೩-೧೭೪

೪೩. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂ-೧, ೧೯೮೪, ಪು.x

೪೪. ವರದರಾಜ ಹುಯಿಲಗೋಳ(ಅನು), ಭಾರತದ ರಾಜ್ಯ ಗ್ಯಾಸೆಟಿಯರ್, ಸಂ-೧, ೧೯೮೬, (ಮುನ್ನುಡಿ).

೪೫. ಪರಮೇಶ್ ಪಾಂಡೆ(ಮು.ಸಂ), ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರುಗಳ ಧೀಮಂತ ಹೆಜ್ಜೆ(ಗ್ಯಾಸೆಟಿಯರ್ ಇಲಾಖೆಯದ್ದು).

೪೬. ಗೆಜೆಟ್: ಬಗ್ಗೆ ಹೆಚ್ಚಿನ ಮಾಹಿತಿ: [ಗೆಜೆಟ್ ಬಗ್ಗೆ ತನ್ನದೇ ಆದ ಪೂರ್ವೇತಿಹಾಸವಿದೆ. ಹಿಂದೆ ವೆನಿಸ್ ನಗರದಲ್ಲಿ ಗೆಜೆಟ್ ಎಂಬ ಹೆಸರಿನ ಒಂದು ಸಣ್ಣ ನಾಣ್ಯ ಚಲಾವಣೆಯಲ್ಲಿತ್ತು. ೧೫೫೬ರಲ್ಲಿ 'ಗೆಜೆಟ್' ಎಂಬ ಹೆಸರಿನಿಂದಲೇ ಅಲ್ಲಿನ ಸರಕಾರ ಪ್ರಕೃತ ವಿಷಯಗಳಿಗೆ ಸಂಬಂಧಿಸಿದಂತೆ ಒಂದು ರೀತಿಯ ವೃತ್ತಪತ್ರಿಕೆ ಹೊರಡಿಸುತ್ತಿತ್ತು. ಒಂದು ಗೆಜೆಟ್ ನಾಣ್ಯಕ್ಕೆ ಪತ್ರಿಕೆಯನ್ನು ಮಾರಿದುದೇ ಪತ್ರಿಕೆಗೆ ಆ ಹೆಸರಿಡಲು ಕಾರಣ ಈಗಲೂ ವೃತ್ತಿಪತ್ರಿಕೆಗಳಿಗೆ ಸ್ಪ್ಯಾನಿಷ್ ಭಾಷೆಯಲ್ಲಿ 'ಗೆಜೆಸ್ಟ್', ಫ್ರೆಂಚ್ ಭಾಷೆಯಲ್ಲಿ 'ಗಜೆಟ' ಈ ಪದಗಳು ಬಳಕೆಯಲ್ಲಿವೆ. ೬೬೫ರಲ್ಲಿ ಇಂಗ್ಲೆಂಡಿನಲ್ಲಿ ಮೊದಲು ಪ್ರಕಟವಾದ ವೃತ್ತಪತ್ರಿಕೆ ದಿ ಆಕ್ಸ್‌ಫರ್ಡ್ ಗೆಜೆಟ್ ಮುಂದಿನ ವರ್ಷ ಲಂಡನ್ ಗೆಜೆಟ್ ಬ್ರಿಟಿಷ್ ಸರಕಾರದ ಅಧಿಕೃತ ಪತ್ರಿಕೆ ಎನಿಸಿಕೊಂಡಿತು. 'ಗೆಜೆಟ್' ಎಂದರೆ ಸುದ್ದಿಯ ಹಾಳೆ ಇಂಗ್ಲೆಂಡಿನಲ್ಲಿ ರಾಣಿ ಎಲಿಜಬೆತ್‌ಳ ಕಾಲದಲ್ಲಿ ಹೊರಡುತ್ತಿದ್ದ ಗೆಜೆಟ್‌ಗಳು ಹರಟೆ ಪೊಳ್ಳು ವದಂತಿ ಅನಧಿಕೃತ ಸುದ್ದಿ, ಸರಕಾರಿ ವಲಯಗಳ ಕಡೆಗಳಿಂದ ಬಂದ ಸುದ್ದಿಗಳ ಸಾರಾಂಶ, ಕಂಡು ಹಿಡಿಯುವಿಕೆ, ಅನ್ವೇಷಣೆಗಳ

ಸುದ್ದಿ, ಕ್ರೂರ ಅಪರಾಧಗಳು, ಮಾಯಮಂತ್ರಗಳ ವಿವರ ಮೊದಲಾದವನ್ನೆಲ್ಲ ಹೊಂದಿ ನಿಷ್ಕೃಷ್ಟವಲ್ಲದ ಸುದ್ದಿಗಳಿಗೆ ಹೆಸರಾಗಿದ್ದವು. ಆದರೆ ಇಂದು ಗೆಜೆಟ್ ಸರಕಾರದ ಅಧಿಕೃತ ಪ್ರಕಟಣೆ, ಗೆಜೆಟ್‌ನಲ್ಲಿ ಸರಕಾರದ ಮುಖ್ಯ ಆಜ್ಞೆಗಳನ್ನು ಪ್ರಕಟಿಸುತ್ತದೆ. ಭಾರತದಲ್ಲಿ ಸಂಸತ್ತು ಅಂಗೀಕರಿಸಿ ರಾಷ್ಟ್ರಾಧ್ಯಕ್ಷರ ಒಪ್ಪಿಗೆ ಪಡೆದ ಶಾಸನಗಳನ್ನು ಆಯಾ ರಾಜ್ಯದ ಗೆಜೆಟ್‌ನಲ್ಲಿಯೂ ಪ್ರಕಟಿಸುತ್ತಾರೆ. ಹಾಗೆ ಪ್ರಕಟವಾದೊಡನೆ ಅದು ಜಾರಿಗೆ ಬಂದಂತೆ. ಮುಖ್ಯವಾದ ಅಧಿಕಾರಿಗಳ ನೇಮಕ, ವರ್ಗ, ಇವುಗಳನ್ನು ಗೆಜೆಟ್‌ನಲ್ಲಿ ಪ್ರಕಟಿಸುತ್ತಾರೆ. ಗೆಜೆಟ್‌ನಲ್ಲಿ ಹಲವು ಭಾಗಗಳಿದ್ದು, ಖಾಲಿ ಇರುವ ಕೆಲಸಗಳ ವಿವರ ಸರ್ಕಾರ ಕಟ್ಟುವ ಕಟ್ಟಡಗಳು ಮತ್ತು ಇತರೇ ಕೆಲಸಗಳಿಗೆ ಸಂಬಂಧಿಸಿದಂತೆ ಅರ್ಜಿಗಳನ್ನು ಕಳುಹಿಸುವ ವಿವರ ಆ ಭಾಗಗಳು ಒಳಗೊಂಡಿರುತ್ತವೆ. ಗೆಜೆಟ್ ನಿಯತಕಾಲದ ಪ್ರಕಟಣೆ. ಸಾಮಾನ್ಯವಾಗಿ ವಾರಕ್ಕೊಂದು ಬಾರಿ ಪ್ರಕಟಿಸುತ್ತಾರೆ. ಮೈಸೂರು ವಿಶ್ವವಿದ್ಯಾನಿಲಯವು ಗೆಜೆಟ್ ಹೊರಡಿಸುತ್ತದೆ]. ಮಾಹಿತಿ ಮನುಕುಲದ ಕಥೇ ಪು.೨೫೩.

೪೬. ಅಶೋಕ ಯ ಅಸುಂಡಿ, ಕನ್ನಡದಲ್ಲಿ ಸಂದರ್ಭ ಗ್ರಂಥಗಳು, ೧೯೯೨, ಪು.೨೨೯-೨೩೦

೪೭. ಸರದಾರ್ ಕೆ.ಎಂ. ಪಣಿಕ್ಕರ್(ಮೂಲ), ನರಗುಂದಕರ ಎಸ್.ಬಿ(ಅನು), ಭಾರತದ ಭೂ ರಾಜಕಾರಣ, ೧೯೭೧, ಪು.೨.

೪೮. ನಾಯಕ. ಹಾ.ಮಾ(ಪ್ರ.ಸಂ), ವಿಶ್ವಕೋಶ, ಸಂ-೬, ೧೯೭೩, ಪು. ೫೭೪-೫೭೬.

೪೯. ಅಶೋಕ ಯು ಅಸುಂಡಿ, ಕನ್ನಡದಲ್ಲಿ ಸಂದರ್ಭ ಗ್ರಂಥಗಳು, ೧೯೯೨, ಪು. ೨೩೨-೨೩೩.

೫೦. ನಾಯಕ. ಹಾ.ಮಾ(ಪ್ರ.ಸಂ), ವಿಶ್ವಕೋಶ ಸಂ-೬, ೧೯೭೩, ಪು. ೫೭೫-೫೭೬.

೫೧. ವೆಂಕಟೇಶ ಸಾಂಗಲೀ, ಗೆಜೆಟಿಯರ್ ಜಿಲ್ಲೆಗಳ ಜಾತಕ, ಸುಧಾ ಬೆಳ್ಳಿ ಸಂಚಿಕೆ, ೧೯೯೦, ಪು.೨೬.

೫೨. ಸುರೇಂದ್ರರಾವ್ ಬಿ, 'ಗ್ಯಾಸೆಟಿಯರ್ ಇನ್ ಕಲೋನಿಯಲ್ ಸಬ್ಜಕ್ಟಿಫಿಕೇಶನ್ ಸ್ಟರ್ರೋಕಸ್ ಮ್ಯಾನ್ಯುಯಲ್ ಆಫ್ ಸೌತ್ ಕೆನರಾ', **ಪೊಲಿ ಕೆನರಾ ೬೦೦, ಮುಕುಂದಪ್ರಭು ಎಂ(ಪ್ರ.ಸಂ),** ೨೦೦೨, ಪು.೧೬-೧೭.

೫೩. ವೆಂಕಟೇಶ ಸಾಂಗಲೀ, ಗೆಜೆಟಿಯರ್ ಜಿಲ್ಲೆಗಳ ಜಾತಕ, ಸುಧಾ ಬೆಳ್ಳಿ ಸಂಚಿಕೆ, ೧೯೯೦, ಪು.೨೬.

೫೪. ಸುರೇಂದ್ರರಾವ್ ಬಿ, 'ಗ್ಯಾಸೆಟಿಯರ್ ಇನ್ ಕಲೋನಿಯಲ್ ಸಬ್ಜಕ್ಟಿಫಿಕೇಶನ್ ಸ್ಟರ್ರೋಕಸ್ ಮ್ಯಾನ್ಯುಯಲ್ ಆಫ್ ಸೌತ್ ಕೆನರಾ', **ಪೊಲಿ ಕೆನರಾ ೬೦೦,** ಮುಕುಂದಪ್ರಭು ಎಂ(ಪ್ರ.ಸಂ), ೨೦೦೨, ಪು.೧೬-೧೭.

೫೫. ನಾಯಕ ಹಾ.ಮಾ(ಪ್ರ.ಸಂ), ವಿಶ್ವಕೋಶ, ಸಂ.೬, ೧೯೭೩, ಪು. ೪೭೫.

೫೬. ಸೋಮಶೇಖರ್ ಜಿ.ಟಿ(ಸಂ), ಡಾ. ಮಾದೇಗೌಡ(ಮಾರ್ಗ), ಬಿ.ಎಲ್.ರೈಸ್: ಒಂದು ಅಧ್ಯಯನ (ಪಿಎಚ್.ಡಿ), ೨೦೦೯, ಪು.೧೧೩-೧೧೪.

೫೭. ಮುತ್ತಣ್ಣ ಐ.ಮಾ, ೧೯ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ ೧೯೯೬ ಪು.೧೩೩-೧೩೪.

೫೮. ಸೋಮಶೇಖರ್ ಜಿ.ಟಿ(ಸಂ), ಡಾ. ಮಾದೇಗೌಡ(ಮಾರ್ಗ), ಬಿ.ಎಲ್.ರೈಸ್: ಒಂದು ಅಧ್ಯಯನ (ಪಿಎಚ್.ಡಿ), ೨೦೦೯, ಪು. ೧೧೪.

೫೯. ರೈಸ್ ಬಿ.ಎಲ್, ಕೂರ್ಗ್ ಗ್ಯಾಸೆಟಿಯರ್, ೧೮೯೭ ಪು.viii.

೬೦. ಮುತ್ತಣ್ಣ ಐ.ಮಾ, ೧೯ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ, ೧೯೬೯, ಪು.೩೬೭.

೬೧. ಮೇಲಿನದೆ, ಪು. ೪೦೨.

೬೨. ಪರಮೇಶ್ ಪಾಂಡೆ(ಮು.ಸಂ), ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕದ ಗ್ಯಾಸೆಟಿಯರ್‌ಗಳ ಧೀಮಂತ ಹೆಜ್ಜೆ(ಗ್ಯಾಸೆಟಿಯರ್ ಇಲಾಖೆಯದ್ದು).

೬೩. ಚಿತ್ತರಂಜನ್ ಹೆಚ್(ಕ.ಆ.ಸೇ), ಕೋಲಾರ ಜಿಲ್ಲಾ ಗ್ಯಾಸೆಟಿಯರ್, ೨೦೦೫, (ಮುನ್ನುಡಿ).

೬೪. ರೈಸ್ ಬಿ.ಎಲ್, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೯೭, ಪು. viii.

೬೫. ಪರಮೇಶ್ ಪಾಂಡೆ(ಮು.ಸಂ), ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕದ ಗ್ಯಾಸೆಟಿಯರುಗಳ ಧೀಮಂತ ಹೆಜ್ಜೆ(ಗ್ಯಾಸೆಟಿಯರ್ ಇಲಾಖೆಯದ್ದು).

೬೬. ಮುತ್ತಣ್ಣ ಐ.ಮಾ, ೧೯ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ, ೧೯೬೯, ಪು.೪೦೨.

# ಅಧ್ಯಾಯ ಮೂರು

## ಸಮಾಜ ಮತ್ತು ಗ್ಯಾಸೆಟಿಯರ್‌ಗಳ ರಾಚನಿಕ ನೆಲೆಗಳು

೩.೧. ಸಮಾಜದ ಅರ್ಥ ಮತ್ತು ವ್ಯಾಖ್ಯೆಗಳು

೩.೨. ಮುಂಬಯಿ ಕರ್ನಾಟಕ

- ೩.೨.೧. ಮುಂಬಯಿ ಕರ್ನಾಟಕದ ಜನಸಂಖ್ಯೆ
- ೩.೨.೨ ಮುಂಬಯಿ ಕರ್ನಾಟಕದ ಜಾತಿ ವ್ಯವಸ್ಥೆ
- ೩.೨.೩. ಮುಂಬಯಿ ಕರ್ನಾಟಕದ ಭಾಷೆ
- ೩.೨.೪. ಮುಂಬಯಿ ಕರ್ನಾಟಕದ ವಸತಿ ವ್ಯವಸ್ಥೆ
- ೩.೨.೫. ಮುಂಬಯಿ ಕರ್ನಾಟಕದ ಉಡುಗೆ-ತೊಡುಗೆಗಳು
- ೩.೨.೬. ಮುಂಬಯಿ ಕರ್ನಾಟಕದ ಆಹಾರ ಪದ್ಧತಿ
- ೩.೨.೭. ಮುಂಬಯಿ ಕರ್ನಾಟಕದ ಸಾಮಾಜಿಕ ವ್ಯವಸ್ಥೆ
- ೩.೨.೮. ಮುಂಬಯಿ ಕರ್ನಾಟಕದ ಧಾರ್ಮಿಕ ಆಚರಣೆಗಳು
- ೩.೨.೯. ಮುಂಬಯಿ ಕರ್ನಾಟಕದ ಶವಸಂಸ್ಕಾರ ಪದ್ಧತಿ

೩.೩. ಮೈಸೂರು ಸಂಸ್ಥಾನ

- ೩.೩.೧. ಮೈಸೂರು ಸಂಸ್ಥಾನದ ಜನಸಂಖ್ಯೆ
- ೩.೩.೨. ಮೈಸೂರು ಸಂಸ್ಥಾನದ ಜಾತಿ ವ್ಯವಸ್ಥೆ
- ೩.೩.೩. ಮೈಸೂರು ಸಂಸ್ಥಾನದ ಭಾಷೆ
- ೩.೩.೪. ಮೈಸೂರು ಸಂಸ್ಥಾನದ ವಸತಿ ವ್ಯವಸ್ಥೆ
- ೩.೩.೫. ಮೈಸೂರು ಸಂಸ್ಥಾನದ ಉಡುಗೆ-ತೊಡುಗೆಗಳು
- ೩.೩.೬. ಮೈಸೂರು ಸಂಸ್ಥಾನದ ಆಹಾರ ಪದ್ಧತಿ

# ಸಮಾಜ ಮತ್ತು ಗ್ಯಾಸೆಟಿಯರ್‌ಗಳ ರಾಚನಿಕ ನೆಲೆಗಳು

## ೩.೧. ಸಮಾಜದ ಅರ್ಥ ಮತ್ತು ವ್ಯಾಖ್ಯೆಗಳು

ಪ್ರಾಚೀನ ಕಾಲದಲ್ಲಿ ಮಾನವ ದಿನನಿತ್ಯದ ಆಹಾರಕ್ಕಾಗಿ ಕಾಡು-ಮೇಡುಗಳನ್ನು ಸುತ್ತಾಡಿ ಗೆಡ್ಡೆ-ಗೆಣಸು, ಪ್ರಾಣಿ-ಪಕ್ಷಿ, ಹಸಿಮಾಂಸ ಇತ್ಯಾದಿಗಳನ್ನು ಆಹಾರವಾಗಿ ಬಳಸುತ್ತಿದ್ದನು. ಬೇಟೆ ಮತ್ತು ಆಹಾರ ಸಂಗ್ರಹಣೆಯ ಸಲುವಾಗಿ ಅವರು ತಮ್ಮ ಸಮೂಹಗಳ ಜೊತೆಗೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ವಲಸೆ ಹೋಗುತ್ತಿದ್ದರು. ಬಹುತೇಕ ಜೀವನ ಈ ಕಾಲದಲ್ಲಿ ಮಾನವನ ಅಸ್ತವ್ಯಸ್ತವಾಗಿತ್ತು. ಭೂಮಿಯನ್ನು ಉತ್ತಿ-ಬಿತ್ತಿ ಬೆಳೆಯುವ ವ್ಯವಸಾಯಕ್ರಮ ಮತ್ತು ಪಶುಪಾಲನೆ ರೂಢಿಗೆ ಬಂದ ಮೇಲೆ ಒಟ್ಟಾಗಿ ಜೀವಿಸುತ್ತಾ ತಮ್ಮ ಸಾಮಾನ್ಯ ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವುದಕೋಸ್ಕರ ಒಗ್ಗಟ್ಟಾಗಿ ಬಾಳುವ ವ್ಯವಸ್ಥೆಗೆ ಸಮಾಜವೆಂದು ಕರೆಯಲಾಗುತ್ತದೆ.

ಸಮಾಜವೆಂದರೆ ಪರಸ್ಪರ ವಿವಿಧ ಬಗೆಯ ಕುಟುಂಬ, ಕುಲವೃಂದ ಸಂಬಂಧವುಳ್ಳ ಜನತೆಯ ಸಮುದಾಯದ ಒಂದು ಆಂತರಿಕ ವ್ಯವಸ್ಥೆ. ವಿಶಾಲಾರ್ಥದಲ್ಲಿ ನೋಡಿದಾಗ ಕೋತಿ, ನಾಯಿ, ಜಿಂಕೆ, ಕಾಗೆ ಇತ್ಯಾದಿ ಆಹಾರ ಪಾನೀಯಗಳ ಬಗೆಯ ಅನ್ಯೋನ್ಯ ಸಂಬಂಧಗಳು ಪ್ರಾಣಿ-ಪಕ್ಷಿಗಳಲ್ಲಿಯೂ ಇರುವುದನ್ನು ಕಾಣುತ್ತೇವೆ. ಇವು ಆಯಾ ಜೀವಿಗಳಿಗೆ ಒಂದು ಬಗೆಯ ಒಗ್ಗಟ್ಟು ಅಥವಾ ಏಕರೂಪಮುಖತೆಯ ಸಂಕೇತವೆನ್ನಬಹುದು. ಆದರೆ ಮಾನವ ಸಮುದಾಯದಲ್ಲಿ ಈ ಬಗೆಯ ಏಕತೆ ಅಥವಾ ಒಗ್ಗಟ್ಟು ಅವರವರ ನಡುವೆ ಏರ್ಪಟ್ಟ ವಾಸ್ತವ ನೆಲೆಯ ಆಂತರಿಕವಾದ, ಗಾಢ-ನಿಕಟ ಸಂಬಂಧಗಳನ್ನು ಅವಲಂಬಿಸಿರುತ್ತದೆ. ಸಂಬಂಧಗಳು ಮಾನವ ಸಮುದಾಯದಲ್ಲಿ ಗಟ್ಟಿಗೊಂಡಷ್ಟು ಇತರೆ ಪ್ರಾಣಿ-ಪಕ್ಷಿ, ಸಮುದಾಯದಲ್ಲಿ ಸಾಧ್ಯವಿಲ್ಲ ಎನ್ನುವುದು ಮೇಲುನೋಟಕ್ಕೆ ಎದ್ದು ಕಾಣುವ ಸಂಗತಿ. ಪರಸ್ಪರ ಸಂವಹನಕ್ಕೆ ಸೃಷ್ಟಿಸಿಕೊಂಡ ಮಾನವ ತನ್ನ ವಿವಿಧ ಕಾರ್ಯಚಟುವಟಿಕೆಗಳನ್ನು ಏಕಸೂತ್ರದ ನೀತಿ-ನಿಯಮಗಳ ಕಟ್ಟುಪಾಡಿಗೆ ತಂದು ತನ್ನ ಸಂರಚನೆಯನ್ನು ಉತ್ತಮಗೊಳಿಸುತ್ತಾ ನಡೆದುಬಂದು ವ್ಯವಸ್ಥೆಯನ್ನು ಕೆಲವು ನೀತಿ-ಸೂತ್ರ-ಶಿಸ್ತುಗಳಿಗೆ ಒಳಪಟ್ಟ ಸುಸಂಘಟಿತ ಸಮುದಾಯವನ್ನು ನಾವು ಸಮಾಜ ಎಂದು ಹೇಳುತ್ತೇವೆ.[೧]

ಒಟ್ಟಿನಲ್ಲಿ ಮಾನವನು ಸಮಾಜಜೀವಿ. ಸಮಾಜವಿಲ್ಲದೆ ಒಂಟಿಯಾಗಿ ಜೀವಿಸಲು ಅವರು ಇಚ್ಛಿಸುವುದಿಲ್ಲ. ಮಾನವ ಸಮಾಜವೆಂಬ ಚೌಕಟ್ಟಿನ ಹೊರತಾಗಿ 'ಮಾನವ ವ್ಯಕ್ತಿತ್ವ'ವೆಂಬುದು ರೂಪುಗೊಳ್ಳುವುದೇ ಇಲ್ಲ. ನಮ್ಮ ಸಮೂಹ ಜೀವನಕ್ಕೆ ಸಂಬಂಧಿಸಿದ ಸಮಸ್ತ ವ್ಯವಹಾರಗಳ ಮೇಲೆ ಸಮಾಜದ ಪ್ರಭಾವಿ ಮುದ್ರೆಯಿದೆ. ನಾವು ಸಮಾಜದ ಭಾಗವಷ್ಟೇ ಅಲ್ಲ, ಸಮಾಜವು ಕೂಡ ನಮ್ಮ ಜೀವಿತದ ಒಂದು ಭಾಗ. ವ್ಯಕ್ತಿ ಮತ್ತು ಸಮಾಜ ಪರಸ್ಪರ ಅವಿಭಜನೀಯ.

ಪೀಟರ್ ಬರ್ಗರ್ ಹೇಳುವಂತೆ "ಸಮಾಜವು ನಮ್ಮ ಹುಟ್ಟಿಗೂ ಪೂರ್ವದಲ್ಲಿದ್ದು ನಮ್ಮ ಸಾವಿನ ನಂತರವೂ ಮುಂದುವರಿಯಲಿದೆ. ಅದು ನಮ್ಮ ಜೀವನಕ್ಕೊಂದು ಉದ್ದೇಶವನ್ನು, ಅರ್ಥವನ್ನು, ದಿಕ್ಕನ್ನು ಕೊಡುವುದು.

'ಸಮಾಜ' ಎಂಬ ಕನ್ನಡ ಪದಕ್ಕೆ ಇಂಗ್ಲಿಷ್ ಸರಿಸಮಾನ ಅರ್ಥದ ಪದವಾದ ಸೊಸೈಟಿ(Society) ಎಂಬುದು ಸೋಶಿಯಸ್(Socious) ಎಂಬ ಲ್ಯಾಟಿನ್ ಶಬ್ದದಿಂದ ವ್ಯುತ್ಪತ್ತಿ ಹೊಂದಿದೆ. 'ಸೋಶಿಯಸ್' ಎಂದರೆ ಒಡನಾಡಿತನ(Fellowshipor Companionship) ಎಂದರ್ಥ. ಒಡನಾಡಿಗಳ ಒಡನಾಟದಿಂದ ಒಟ್ಟುಗೂಡಿರುವ ವ್ಯವಸ್ಥೆಯೇ ಸಮಾಜ. 'ಸಮಾಜ' ಎಂಬ ಮೂಲ ಕಲ್ಪನೆಗಳ ಬಗ್ಗೆ ಸಮಾಜಶಾಸ್ತ್ರಜ್ಞರಲ್ಲಿ ಪೂರ್ಣ ಒಮ್ಮತವಿಲ್ಲ. ಅದನ್ನು ಹಲವರು ಹಲವು ಬಗೆಗಳಲ್ಲಿ ವ್ಯಾಖ್ಯಾನಿಸಿದ್ದಾರೆ. ಅಂತಹ ಕೆಲವು ವ್ಯಾಖ್ಯಾನಗಳು ಈ ಮುಂದಿನಂತಿವೆ.

**ಸಮಾಜದ ವ್ಯಾಖ್ಯೆಗಳು**

**ಮೆಕೈವರ್ ಮತ್ತು ಫೇಜ್:** ಇವರ ಪ್ರಕಾರ ಸಮಾಜವೆಂಬುದು ಹಲವಾರು ಆಚರಣೆಗಳು ಮತ್ತು ಕ್ರಮವಿಧಾನಗಳ ಅಧಿಕಾರ ಮತ್ತು ಪರಸ್ಪರ ಸಹಾಯಗಳ ಹಲವಾರು ಸಮೂಹಗಳ ಮತ್ತು ವಿಂಗಡಣೆಗಳ ಮಾನವ ವರ್ತನೆಯ ಬಗೆಗಿನ ನಿಯಂತ್ರಣಗಳ ಹಾಗೂ ಸ್ವಾತಂತ್ರ್ಯಗಳನ್ನೊಳಗೊಂಡ ಒಂದು ವ್ಯವಸ್ಥೆಯಾಗಿದೆ. ಸದಾ ಪರಿವರ್ತನೀಯವಾದ ಈ ಸಂಕೀರ್ಣ ವ್ಯವಸ್ಥೆಯನ್ನು ನಾವು 'ಸಮಾಜ'ವೆಂದು ಕರೆಯುತ್ತೇವೆ.

**ಮೆಕೈವರ್ ಮತ್ತು ಫೇಜ್ ಅವರ ಸರಳ ವ್ಯಾಖ್ಯೆ:** ಸಮಾಜವೆಂಬುದು ಸಾಮಾಜಿಕ ಸಂಬಂಧಗಳ ಒಂದು ಬಲೆ.

**ಕೊಲಿನ್ಸ್ ಡಿಕ್ಷನರಿ ಆಫ್ ಸೋಶಿಯಾಲಜಿ:** ಮಾನವ ಸಂಬಂಧಗಳ ಒಪ್ಪಂದವನ್ನು ಸಮಾಜ ಎನ್ನಬಹುದು.

**ಲ್ಯಾವೆಯರ್:** ಸಮಾಜ ಎಂಬ ಪದವು ಒಂದು ಸಮೂಹವನ್ನು ಸೂಚಿಸುವುದಿಲ್ಲ. ಆದರೆ ಜನರ ಮಧ್ಯೆ ಮತ್ತು ಅವರ ನಡುವೆ ಏರ್ಪಡಬಹುದಾದ ಅಂತಃಕ್ರಿಯೆಗಳ ಸಂಕೀರ್ಣ ಮಾದರಿಯನ್ನು ಅದು ಪ್ರತಿನಿಧಿಸುವುದು.

**ಐಯನ್ ರಾಬರ್ಟ್‌ಸನ್:** ಒಂದು ಸಾಮಾನ್ಯ ಸಂಸ್ಕೃತಿಯಲ್ಲಿ ಸಹಭಾಗಿಗಳಾಗಿ ಒಂದು ಭೂಭಾಗವನ್ನು ಹಂಚಿಕೊಂಡು ವಾಸಿಸುತ್ತಾ ಪರಸ್ಪರ ಒಡನಾಟದಲ್ಲಿರುವ ಜನಸಮೂಹವನ್ನು 'ಸಮಾಜ' ಎನ್ನಬಹುದು.[೨]

ಇಲ್ಲಿ ವ್ಯಕ್ತಿಗಳ ವ್ಯವಸ್ಥಿತ ಸಮೂಹಕ್ಕೆ ಸಮಾಜ ಪದ ಅನ್ವಯಿಸುತ್ತದೆ. ಇಂಥ ಒಂದು ಸಮಾಜದಲ್ಲಿ ವಿವಿಧ ಅಂಗಗಳಿರುತ್ತವೆ. ಕುಟುಂಬ, ಗುಂಪು, ವರ್ಗ, ವಯೋಗುಂಪು, ಸ್ತ್ರೀ-ಪುರುಷರ ಪ್ರಮಾಣ, ಗ್ರಾಮೀಣ ಪಟ್ಟಣಗಳ ಜನಸಂಖ್ಯೆ, ಭಾಷೆ, ಸಾಕ್ಷರತೆ, ಧರ್ಮಗಳು, ಸಂಸ್ಥೆಗಳು, ಮತಗಳು, ಜಾತಿ, ಬುಡಕಟ್ಟುಗಳು, ಸಾಮಾಜಿಕ ಜೀವನ, ಹಬ್ಬಗಳು, ಜಾತ್ರೆಗಳು ಇತ್ಯಾದಿ ವಿಚಾರಗಳು ಸಮಾಜದಲ್ಲಿ ಸಮಾವೇಶಗೊಂಡಿರುತ್ತವೆ. ಇಂಥ ಒಂದು ಸಮಾಜವನ್ನು ವಸಾಹತುಶಾಹಿ ಕಾಲಘಟ್ಟದಲ್ಲಿ ನೋಡುವುದು ಪ್ರಮುಖವಾಗಿರುತ್ತದೆ. ಏಕೆಂದರೆ ಈ ಕಾಲಘಟ್ಟವು ಮಹತ್ವವಾದದ್ದು, ಇದೊಂದು ಪರಿವರ್ತನೆಯ ಕಾಲಘಟ್ಟ. ಅಂದರೆ ಭಾರತ ಕರ್ನಾಟಕದೊಂದಿಗೆ ಹೊಸದೊಂದು ಸಂಸ್ಕೃತಿಯ ಆಗಮನದ ಆರಂಭವೆನ್ನಬಹುದು. ಇಲ್ಲಿ ತಮ್ಮ ಸಂಸ್ಕೃತಿಯೊಂದಿಗೆ, ಸ್ಥಳೀಯರೊಂದಿಗೆ ಅವರು ಯಾವ ರೀತಿ ಗ್ರಹಿಸಿ ತಮ್ಮ ದಾಖಲೆಗಳಲ್ಲಿ ಬರೆದಿರುವರೆಂಬುದು ಮುಖ್ಯವಾಗಿರುತ್ತದೆ. ಅಲ್ಲದೆ ಪ್ರಾಂತ್ಯಗಳನ್ನು ವಿವಿಧ ರೀತಿ ವಿಭಜನೆ ಮಾಡಿ, ಆಳ್ವಿಕೆ ನಡೆಸಿರುವುದು ಅವರ ಒಂದು ವೈಖರಿ. ವಸಾಹತುಶಾಹಿಗಳು ಬಂದಾಗ ಇಲ್ಲಿನ ಸಂಸ್ಕೃತಿ ಯಾವ ರೀತಿ ಭಿನ್ನತೆ ಹೊಂದಿತ್ತು? ಹೇಗೆ ಮುಖ್ಯವಾಗಿತ್ತು ಎಂಬುದನ್ನು ತಿಳಿಯುವುದು ಪ್ರಸ್ತುತವಾದದ್ದು. ಕನ್ನಡ ಭೂಪ್ರದೇಶದ ವಿಚಾರ ಬಂದಾಗ ಪ್ರಧಾನವಾಗಿ ಐದು ಪ್ರಾಂತ್ಯಗಳ ಮೂಲಕ ಚರ್ಚಿಸುವುದು ಸುಲಭವಾದದ್ದು. ಮುಖ್ಯವಾಗಿ ಮುಂಬಯಿ ಕರ್ನಾಟಕ, ಮೈಸೂರು ಸಂಸ್ಥಾನ, ಮದ್ರಾಸ್ ಕರ್ನಾಟಕ, ಹೈದರಾಬಾದ್ ಕರ್ನಾಟಕ ಹಾಗೂ ಕೊಡಗು ಪ್ರಾಂತ್ಯಗಳು. ಈ ಐದು ಪ್ರಾಂತ್ಯಗಳ ಮೂಲಕ ಅಂದಿನ ಸಮಾಜವನ್ನು ಕುರಿತು ಅರಿಯುವುದು ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

### ೩.೨ ಮುಂಬಯಿ ಕರ್ನಾಟಕ

ವಸಾಹತುಶಾಹಿ ಕಾಲಘಟ್ಟದಲ್ಲಿ ಐದು ಪ್ರಮುಖ ಪ್ರಾಂತ್ಯಗಳಲ್ಲಿ ಮುಂಬಯಿ ಕರ್ನಾಟಕ ಸಹ ಒಂದು. ಈ ಪ್ರದೇಶದ ವ್ಯಾಪ್ತಿಗೆ ಬೆಳಗಾವಿ, ಬಿಜಾಪುರ, ಧಾರವಾಡ ಮತ್ತು ಉತ್ತರಕನ್ನಡ ಜಿಲ್ಲೆಗಳು ಸೇರ್ಪಡೆಯಾಗಿದ್ದವು. ಇವುಗಳ ಜೊತೆಗೆ ಜಮಖಂಡಿ, ಮುಧೋಳ, ಸಾಂಗ್ಲಿ, ರಾಯದುರ್ಗ ಮೊದಲಾದ ಸಣ್ಣಪುಟ್ಟ ಸಂಸ್ಥಾನಗಳೂ ಸೇರಿಕೊಂಡಿದ್ದವು. ಕ್ರಿ.ಶ. ೧೮೧೮ರವರೆಗೂ ಪೇಶ್ವೆಗಳ ಆಳ್ವಿಕೆಗೆ ಒಳಪಟ್ಟಿದ್ದ ಈ ಭಾಗ ಮರಾಠಿಮಯವಾಗಿ ಹೋಗಿತ್ತು.[೩] ಈ ಮುಂಬೈಕರ್ನಾಟಕ ಘಟಕಕ್ಕೆ ಮುಖ್ಯವಾಗಿ ರಚನೆಗೊಂಡ ಗ್ಯಾಸೆಟಿಯರ್‌ಗಳೆಂದರೆ ಧಾರವಾಡ ಜಿಲ್ಲಾ ಗ್ಯಾಸೆಟಿಯರ್(೧೮೮೪), ಬೆಳಗಾಂ ಜಿಲ್ಲಾ ಗ್ಯಾಸೆಟಿಯರ್ (೧೮೭೪), ಬಿಜಾಪುರ ಜಿಲ್ಲಾ ಗ್ಯಾಸೆಟಿಯರ್(೧೮೮೪) ಹಾಗೂ ಕೆನರಾ ಜಿಲ್ಲಾ ಗ್ಯಾಸೆಟಿಯರ್(೧೮೮೩) ಎಂಬ ಈ ನಾಲ್ಕು ಕನ್ನಡ ಭೂಪ್ರದೇಶಕ್ಕೆ ಸಂಬಂಧಿಸಿದಂತೆ ಜೇಮ್ಸ್ ಎಂ. ಕ್ಯಾಂಬೆಲ್ ಅವರು ರಚನೆ ಮಾಡಿದರು. ೧೮೯೩ರಲ್ಲಿ ಧಾರವಾಡ, ಬೆಳಗಾವಿ, ವಿಜಾಪುರ ಮತ್ತು ಕೆನರಾ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಜೇಮ್ಸ್ ಎಂ. ಕ್ಯಾಂಬೆಲ್ ಅವರ ಗ್ಯಾಸೆಟಿಯರ್‌ಗಳನ್ನು ಸಂಕ್ಷಿಪ್ತಗೊಳಿಸಿ ವೆಂಕಟರಗೋಕಟ್ಟಿಯವರು

ಕನ್ನಡ ಭಾಷೆಗೆ ಅನುವಾದಿಸಿ ಪ್ರಕಟಿಸಿದರು. ಇಡೀ ವಸಾಹತುಶಾಹಿ ಕಾಲಘಟ್ಟದ ಕನ್ನಡ ಭೂಪ್ರದೇಶಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ಅನುವಾದಗೊಂಡ ಏಕೈಕ ಕೃತಿ ಇದಾಗಿದೆ.[೪] ಅದೇ ರೀತಿ ಈ ಮುಂಬಯಿ ಆಧಿಪತ್ಯಕ್ಕೆ ಸೇರಿದ್ದ ಕನ್ನಡ ಜಿಲ್ಲೆಗಳ ಪೈಕಿ ಬೆಳಗಾವಿ, ಉತ್ತರಕನ್ನಡ, ವಿಜಾಪುರ ಮತ್ತು ಧಾರವಾಡ ಅವುಗಳ ಗ್ಯಾಸೆಟಿಯರ್‌ಗಳನ್ನು ಕ್ರಿ.ಶ. ೧೮೪೧ರಲ್ಲಿ ಕಲ್ಕತ್ತಾದಲ್ಲಿದ್ದ W. Rushter ಅವರು ಬರೆದರು. ಈ ರೀತಿ ರಚನೆಗೊಂಡ ಗ್ಯಾಸೆಟಿಯರ್‌ಗಳ ಮೂಲಕ ಅಂದಿನ ಸಮಾಜವನ್ನು ನೋಡಬೇಕಾಗುತ್ತದೆ. ಈ ಗ್ಯಾಸೆಟಿಯರ್‌ನಲ್ಲಿ ಸಮಾಜದ ಬಗ್ಗೆ ತಿಳಿಯಬೇಕಾದರೆ ಜಾತಿವ್ಯವಸ್ಥೆ, ಕುಟುಂಬ ಪದ್ಧತಿ, ಜನಸಂಖ್ಯೆ, ಭಾಷೆ, ಆಹಾರ, ಉಡುಗೆ-ತೊಡುಗೆಗಳು, ಧಾರ್ಮಿಕ ಆಚರಣೆಗಳು, ಕಸುಬುಗಳು ಇತ್ಯಾದಿಗಳನ್ನು ಒಳಗೊಂಡಿರುವುದೇ ಒಂದು ಸಮಾಜದ ಲಕ್ಷಣ. ಈ ಸಮಾಜದ ಲಕ್ಷಣವನ್ನು ವಸಾಹತುಶಾಹಿಯ ಸಂದರ್ಭದಲ್ಲಿ ರಚನೆಗೊಂಡ ಗ್ಯಾಸೆಟಿಯರ್‌ಗಳ ಮೂಲಕ ನೋಡುವುದಾಗಿದೆ.

**೩.೨.೧. ಮುಂಬಯಿ ಕರ್ನಾಟಕದ ಜನಸಂಖ್ಯೆ**

ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳಿಗೆ ಸಂಬಂಧಿಸಿದಂತೆ ಒಟ್ಟು ಜನಸಂಖ್ಯೆಯು ೨೮,೦೭,೨೫೪ರಷ್ಟು ಇತ್ತು. ಅಂದರೆ ೧೪೮.೮ ಚದರ ಮೈಲಿಗೆ ಗಂಡಸರ ಸಂಖ್ಯೆ ೧೪,೨೩,೭೭೭ರಷ್ಟು, ಹೆಂಗಸರು ೧೩,೯೩,೪೭೭ ರಷ್ಟು ಜನರಿದ್ದರು. ಅಂದರೆ ಶೇಕಡಾವಾರು ಗಂಡಸರು ನೂರರಲ್ಲಿ ೫೦.೭೬ರಷ್ಟು ಇದ್ದರು. ಹೆಂಗಸರು ೪೯.೨೫ರಷ್ಟು ಇದ್ದರು. ಇದರಲ್ಲಿ ಹಿಂದೂಗಳು ಬೆಳಗಾಂನಲ್ಲಿ ೯೧.೫೮%ರಷ್ಟು, ಬಿಜಾಪುರದಲ್ಲಿ ೯೨.೮೯%ರಷ್ಟು, ಧಾರವಾಡದಲ್ಲಿ ೮೮.೩೩%ರಷ್ಟು, ಕೆನರಾದಲ್ಲಿ ೯೦.೭೯%ರಷ್ಟು ಇದ್ದುದರಿಂದಾಗಿ ಒಟ್ಟು ಜನಸಂಖ್ಯೆಯಲ್ಲಿ ನಾಲ್ಕು ಜಿಲ್ಲೆಗಳಿಗೆ ಸಂಬಂಧಿಸಿದಂತೆ ಹಿಂದೂಗಳ ಸಂಖ್ಯೆ ೯೦.೦೨%ರಷ್ಟು ಇತ್ತು. ಹೀಗಾಗಿ ಮುಂಬಯಿ ಕರ್ನಾಟಕದಲ್ಲಿ ಹಿಂದೂಗಳ ಜನಸಂಖ್ಯೆಯು ಅಧಿಕವಾಗಿತ್ತು ಎಂಬುದಾಗಿ ತಿಳಿಯಬಹುದು. ಮುಸಲ್ಮಾನರು ೨೬,೦೩,೩೨ ಅಥವಾ ನೂರರಲ್ಲಿ ೮.೫೭%ರಷ್ಟು, ಕ್ರಿಶ್ಚಿಯನ್ನರು ೨೩,೮೧೨ ಅಥವಾ ನೂರರಲ್ಲಿ ೧.೧೩%ರಷ್ಟು, ಯಹೂದಿಯರು ೧.೩೨%ರಷ್ಟು, ಪಾರ್ಸಿಗಳು ೧.೩೮%ರಷ್ಟು, ಇತರರು ೧೫%ರಷ್ಟು ಇದ್ದುದರಿಂದಾಗಿ ೧೮೭೨ನೇ ವರ್ಷದ ಒಟ್ಟು ಜನಸಂಖ್ಯೆಯ ೩೧,೩೩,೯೨೧ರಷ್ಟು ಇದ್ದಿತು. ಇವರು ಚದರ ಮೈಲಿಗೆ ೧೬೬.೧೯ರಷ್ಟು ಇದ್ದರು. ಇವುಗಳಲ್ಲಿ ಹಿಂದೂಗಳು ೨೮,೩೨,೫೫೧ ಅಥವಾ ೯೦.೧೫%ರಷ್ಟು, ಮುಸಲ್ಮಾನರು ೨,೯೫,೨೦೧ ಅಥವಾ ೮.೮೪%ರಷ್ಟು, ಕ್ರಿಶ್ಚಿಯನ್ನರು ೨೦,೭೬೨% ಅಥವಾ ೧.೩%ರಷ್ಟು, ಯಹೂದಿಯರು ೧೯೨%, ಪಾರ್ಸಿಯನ್ನರು ೧೦೩%, ಇತರರು ೧ರಂತೆ ಇದ್ದರು.

ಹೀಗಾಗಿ ೧೮೭೬-೭೭ರಲ್ಲಿ ಬರ ಬಂದಿದ್ದರಿಂದಾಗಿ ಜನರು ಸತ್ತದ್ದರಿಂದಲೂ ಈ ಸಂದರ್ಭದಲ್ಲಿ ಪರಸ್ಥಳಕ್ಕೆ ವಲಸೆ ಹೋಗಿದ್ದರಿಂದಲೂ ಹಾಗೂ ಇನ್ನಿತರೇ ಕಾರಣದಿಂದಲೂ ಈ ಹತ್ತು ವರ್ಷಗಳಲ್ಲಿ ಇಲ್ಲಿನ ಸಂಖ್ಯೆಯು ೩,೪೨,೦೮೧ ಜನರಂತೆ ಅಂದರೆ ನೂರರಲ್ಲಿ ೧೧.೭೪%ರಷ್ಟು ಜನರು ಕಡಿಮೆ ಯಾದರೆಂತಲೂ ತಿಳಿದುಬರುತ್ತದೆ. ಅಲ್ಲದೆ ಇಲ್ಲಿಗೆ ಅನೇಕ ಜನರು ಇನ್ನಿತರ ಪರಸ್ಥಳದಿಂದ ಬಂದರೆಂತಲೂ

ತಿಳಿದುಬರುತ್ತದೆ. ನಾಲ್ಕು ಜಿಲ್ಲೆಗಳಿಗೆ ಸಂಬಂಧಿಸಿದಂತೆ ನೋಡುವುದಾದರೆ ಒಟ್ಟು ಜನಸಂಖ್ಯೆ ೨೬,೦೫,೦೪೨ ಅಥವಾ ನೂರರಲ್ಲಿ ೯೨.೩೯%ರಷ್ಟು ಇತ್ತು. ಇದರಲ್ಲಿ ಗಂಡಸರು ೧೩,೩೧,೪೮೯, ಹೆಂಗಸರು ೧೨,೭೩,೫೫೩ರಂತೆ ಇದ್ದರು. ಅನೇಕ ಕಡೆಗಳಿಂದ ಇಲ್ಲಿ ಬಂದವರ ಮಾಹಿತಿಯು ಈ ರೀತಿ ಇದೆ. ದಕ್ಷಿಣ ಮಹಾರಾಷ್ಟ್ರದ ಸಂಸ್ಥಾನಗಳಿಂದ ಬಂದವರು ೫೭,೬೦೭, ಮೈಸೂರು ೧೫,೩೪೨, ಗೋವಾ ಪ್ರಾಂತ್ಯದಿಂದ ೮,೮೨೫, ಕೆನರಾ ಜಿಲ್ಲೆಯಿಂದ ೫,೧೧೫, ಮದ್ರಾಸ್ ಇಲಾಖೆಯಿಂದ ಬಂದವರು ೨೦,೩೮೧, ಕೊಲ್ಲಾಪುರ ಸಂಸ್ಥಾನದಿಂದ ೨೫,೭೫೫, ನಿಜಾಮ ರಾಜ್ಯದಿಂದ ೪೪,೨೬೯, ಸೊಲ್ಲಾಪುರದ ಜಿಲ್ಲೆಯಿಂದ ೬,೯೧೭ ಜನರಂತೆ, ಸಾತಾರ ಜಿಲ್ಲೆಯಿಂದ ೯,೯೧೨, ಪುಣೆ ಜಿಲ್ಲೆಯಿಂದ ೧,೩೮೩, ಅಹಮ್ಮದ್‌ನಗರ ಜಿಲ್ಲೆಯಿಂದ ೩೪೧, ನಾಸಿಕ ಜಿಲ್ಲೆಯಿಂದ ೬೬, ಖಾನಪುರ ಜಿಲ್ಲೆಯಿಂದ ೧೯೯, ಮುಂಬಯಿಯಿಂದ ೧೦೫೨, ಗುಜರಾತ್‌ದಿಂದ ೧,೪೯೨, ಬೇರೆ ಪ್ರದೇಶದಿಂದ ೪,೧೧೦ರಂತೆ ಜನರು ಬಂದರೆಂದು ಮಾಹಿತಿಯು ಸಿಗುತ್ತದೆ. ನಾಲ್ಕು ಜಿಲ್ಲೆಗಳಿಗೆ ಸಂಬಂಧಿಸಿದಂತೆ ಇವರ ಸಂಖ್ಯೆ ಇರುತ್ತದೆ. ಹೀಗಾಗಿ ಈ ನಾಲ್ಕು ಜಿಲ್ಲೆಗಳಲ್ಲಿ ಹಿಂದೂ ಜನರು ಹೆಚ್ಚಿನ ಸಂಖ್ಯೆಯನ್ನು ಹೊಂದಿದ್ದಾರೆ. ಅನಂತರ ಸಂಖ್ಯೆ ಮುಸಲ್ಮಾನದಾಗಿರುತ್ತದೆ. ಕ್ರಿಶ್ಚಿಯನ್ನರು ನಂತರ, ಉಳಿದವರು ಕಡಿಮೆ ಸಂಖ್ಯೆ ಹೊಂದಿರುವ ಜಾತಿಗಳಾಗಿದ್ದಾರೆ ಎಂಬುದಾಗಿ ಮಾಹಿತಿ ಸಿಗುತ್ತದೆ.[*]

**೩.೨.೨. ಮುಂಬಯಿ ಕರ್ನಾಟಕದ ಜಾತಿ ವ್ಯವಸ್ಥೆ**

ಮುಂಬಯಿ ಇಲಾಖೆಗೆ ಸೇರಿದ ಈ ಭಾಗದಲ್ಲಿ ಜಾತಿವ್ಯವಸ್ಥೆಯು ಪ್ರಧಾನವಾಗಿತ್ತು. ಪ್ರಾಚೀನ ಕಾಲದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳನ್ನು, ಈ ವರ್ಣವ್ಯವಸ್ಥೆಯ ಆಧಾರದ ಮೇಲೆ ಜಾತಿಗಳನ್ನು ಗುರುತಿಸಲಾಗಿದೆ. ಜಾತಿವ್ಯವಸ್ಥೆಯು ಕರ್ನಾಟಕ ಅಲ್ಲದೇ ಭಾರತ ಮತ್ತು ಇತರ ರಾಜ್ಯಗಳಲ್ಲಿಯೂ ಇತ್ತು, ಈಗಲೂ ಇದೆ. ಗ್ಯಾಸೆಟಿಯರ್ ಮೂಲಕ ನೋಡುವುದಾದರೆ ಬ್ರಿಟಿಷರ ಕಾಲದಲ್ಲಿಯೂ ವಿವಿಧತೆಯ ನಡುವೆ ಏಕತೆಯನ್ನು ಒಳಗೊಂಡಿರುವ ಭಾರತದಲ್ಲಿ ವರ್ಣವ್ಯವಸ್ಥೆಯ ಮೂಲಕ, ಶ್ರೇಣಿವರ್ಗದ ಮೂಲಕ, ವೃತ್ತಿ ಆಧಾರದ ಮೇಲೆ ಜಾತಿವ್ಯವಸ್ಥೆಯನ್ನು ಗುರುತಿಸಲಾಗುತ್ತದೆ. ಮುಖ್ಯವಾಗಿ:

೧. ಬ್ರಾಹ್ಮಣರು

೨. ಲೇಖಕರು

೩. ಲಿಂಗವಂತರು

೪. ವರ್ತಕರು(ವ್ಯಾಪಾರ ಜಾತಿಗಳು)

೫. ಒಕ್ಕಲುತನದ ಜಾತಿಗಳು

೬. ಕೈಗಾರಿಕೆಯಿಂದ ಒಡವೆಗಳನ್ನು ಹುಟ್ಟಿಸುವ ಜಾತಿಗಳು

೭. ಪಶುಗಳನ್ನು ಸಾಕಿ ಜೀವಿಸುವ ಜಾತಿಗಳು

೮. ನೃತ್ಯಗಾಯನ ವಾದ್ಯಗಳಿಂದ ಜೀವಿಸುವ ಜಾತಿಗಳು

೯. ಊಳಿಗದ ಜಾತಿಗಳು, ವಾಹಕರ ಜಾತಿಗಳು

೧೦. ಕೂಲಿಕಾರರೂ ಕಿರುಕುಳ ಜಾತಿಗಳು, ತಿರುಕರ ಜಾತಿಗಳು

೧೧. ನೀಚ ಜಾತಿಗಳು

೧೨. ಮುಸಲ್ಮಾನರು

೧೩. ದೇಶೀ ಕ್ರಿಶ್ಚಿಯನ್ನರು[೭]

ಎಂದು ಪ್ರಧಾನವಾಗಿ ಇಲ್ಲಿ ಕುಲಕಸುಬುಗಳಿಂದ ಜಾತಿಗಳನ್ನು ಗುರುತಿಸಲಾಗಿದ್ದು, ಇವುಗಳನ್ನು ವೃತ್ತಿಗಳನ್ನಾಧರಿಸಿ ವಿಂಗಡಿಸಿದ್ದು, ಇವುಗಳಲ್ಲಿ ಅನೇಕ ಜಾತಿಗಳು, ಒಳಪಂಗಡಗಳನ್ನು ಗುರುತಿಸಬಹುದು.

೧. ಬ್ರಾಹ್ಮಣರು: ಮುಂಬಯಿ ಕರ್ನಾಟಕದಲ್ಲಿ ಬ್ರಾಹ್ಮಣ ಜಾತಿ ಅತ್ಯಂತ ಉನ್ನತ ಹಾಗೂ ಪ್ರಧಾನವಾಗಿತ್ತು ಎಂಬುದು ಎಲ್ಲಾ ಗ್ಯಾಸೆಟಿಯರ್‌ನಲ್ಲಿ ಸ್ಪಷ್ಟ ಮಾಹಿತಿ ಇದೆ. ಬ್ರಾಹ್ಮಣರಲ್ಲಿಯೇ ಒಟ್ಟು ೨೬ ಪ್ರಧಾನ ಜಾತಿಗಳಿವೆ. ಅಲ್ಲದೆ, ಒಳಪಂಗಡಗಳಿವೆ. ಮುಖ್ಯವಾಗಿ ಕೆನರಾದಲ್ಲಿ ಒಟ್ಟು ೧೬ ಪ್ರಧಾನ ಜಾತಿಗಳನ್ನು ಗುರುತಿಸಲಾಗಿದೆ. ಬೆಳಗಾಂನಲ್ಲಿ ಒಟ್ಟು ಒಂಬತ್ತು ಪ್ರಧಾನ ಜಾತಿಗಳನ್ನಾಗಿ ಗುರುತಿಸಲಾಗಿದೆ. ಧಾರವಾಡದ ಪ್ರಧಾನ ಬ್ರಾಹ್ಮಣ ವರ್ಗ ಒಟ್ಟು ಹನ್ನೊಂದು ಆಗಿರುತ್ತದೆ. ಬಿಜಾಪುರದಲ್ಲಿಯೇ ಬ್ರಾಹ್ಮಣರು ಒಟ್ಟು ಏಳು ವರ್ಗಗಳಿವೆ. ಪ್ರಧಾನವಾಗಿ ಆ ಬ್ರಾಹ್ಮಣ ವರ್ಗಗಳೆಂದರೆ ದೇಶಸ್ಥರು, ಗೋಳಕರರು, ಕನೋಜರು, ಕಣ್ವರರು, ಕರಾಡಸ್ಥರು, ಕೊಂಕಣಸ್ಥರು, ಶೇಣವೇರು(ಸಾರಸ್ವತರು), ಸರ್ವರಿಯರು, ಸವ್ವಾಶೇರು, ಶ್ರೀವೈಷ್ಣವರು(ರಾಮಾನುಜರು), ತೆಲುಗು ಬ್ರಾಹ್ಮಣರು, ತಿರಗುಳರು, ಗುಜರಾತಿ ಬ್ರಾಹ್ಮಣರು, ಮಾರವಾಡಿ ಬ್ರಾಹ್ಮಣರು, ವಿದುರರು, ಹೈಗರು(ಹವಿಗರು), ಕೋಟ ಬ್ರಾಹ್ಮಣರು, ಜೋಯಿಸರು, ಸಕಳಾಪುರಿಗಳು, ಆಂಧ್ರರು, ಶಿವಳ್ಳಿಗಳು, ಸಾಷ್ಟೀಕರರು(ಕೊಂಕಣಿಗರು), ಕುಶಸ್ಥಳಿಗಳು, ಬಾರದೇಶಕರರು, ಕುಡಾಲದೇಶಕರರು, ಪೇಡನೇಕರರು ಎಂದು ಒಟ್ಟು ಮುಂಬಯಿ ಕರ್ನಾಟಕದಲ್ಲಿ ಬ್ರಾಹ್ಮಣ ವರ್ಗಗಳಾಗಿವೆ. ಇದಲ್ಲದೆ ಇವುಗಳಲ್ಲಿ ಹಲವು ಒಳಪಂಗಡಗಳಿವೆ. ಹೆಚ್ಚಾಗಿ ಕೆನರಾ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯಲ್ಲಿ ಬ್ರಾಹ್ಮಣ ವರ್ಗದವರಿದ್ದಾರೆ. ಮುಂಬಯಿನ ಕೆಲವೊಂದು ಜಿಲ್ಲೆಯಲ್ಲಿ ಎಲ್ಲಾ ಕಡೆ ನೆಲೆಸಿದ್ದಾರೆ. ಕೆಲವೊಂದು ವರ್ಗವು ಕೆಲವೊಂದು ಜಿಲ್ಲೆಗೆ ಸೀಮಿತವಾಗಿದೆ.

೨. ಲೇಖಕರು: ಇಲ್ಲಿನ ಮತ್ತೊಂದು ಪ್ರತ್ಯೇಕ ಜಾತಿ ಎಂದರೆ ಲೇಖಕರು. ಈ ವರ್ಗದಲ್ಲಿ ಪ್ರಮುಖವಾಗಿ ಮೂರು ಜಾತಿಗಳು ಬರುತ್ತವೆ. ಕಾಯಸ್ಥ ಪರಭುಗಳು, ಮುದ್ಲಿಯಾರರು, ನಾಯಡುಗಳು ಎಂಬ ಮೂರು ಜಾತಿಗಳಿವೆ. ಇವರೆಲ್ಲರೂ ಮುಖ್ಯವಾಗಿ ಬೆಳಗಾವಿ ಜಿಲ್ಲೆಯಲ್ಲಿ ಮಾತ್ರ ಕಂಡುಬರುತ್ತಾರೆ. ಇವರ ಮೂಲ ಮದ್ರಾಸ್‌ನಿಂದ ಬಂದವರೆಂದು ಕರೆಯಲಾಗುತ್ತದೆ.[೮]

೩. ಲಿಂಗವಂತರು: ಲಿಂಗವಂತರಲ್ಲಿ ಪ್ರಧಾನವಾಗಿ ಜಂಗಮರು, ಶೀಲವಂತರು, ಬಣಜಿಗರು, ಪಂಚಮಸಾಲಿಯವರು, ಜೈನರು ಎಂದು ಪ್ರಧಾನವಾಗಿ ವರ್ಗಗಳಿವೆ. ಧೂಳಪಾವಡವರು ಎಂದು ಒಟ್ಟು ೩೧ ವೊಳವೋದಗಳಿವೆ[೯] ಆದರೆ ಧಾರವಾಡ ಜಿಲ್ಲೆಯಲ್ಲಿ ಲಿಂಗವಂತರನ್ನು ಮುಖ್ಯವಾಗಿ ಮೂರು ವರ್ಗಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ:

| | | |
|---|---|---|
| **ಶುದ್ಧ ಲಿಂಗವಂತರು** | **ದತ್ತು ಸ್ವೀಕಾರ ಲಿಂಗವಂತರು** | **ಅರ್ಧಭಾಗ ಲಿಂಗವಂತರು** |
| ಐಯ್ಯರು ಅಥವಾ ಜಂಗಮರು | ಆದಿ ಬಣಜಿಗರು | ಅಗಸರು(ಪುರೋಹಿತರು) |
| ಬಣಜಿಗರು | ಬಸವಿಸತರು | ಅಂಬಿಗರು |
| ಧೂಳ್‌ಪಾವಡದವರು | ಬಿಲೆಜಂಗಮರು(ಈಗ ಇಲ್ಲ) | ದೇವಾಂಗರು |
| ಬಣಜಿಗರು | ಚೆಲುವಾದಿಗಳು | ದೋರರು |
| ಧೂಳ್ ಪಾವಡದವರು | ಗಾಣಿಗಾರರು | ಹಸಲರು(Haslars) |
| ಪಂಚಮಸಾಲಿಗರು | ಹೂಗಾರರು(Hugar) | ಇಲಗೇರರು |
| ಶೀಲವಂತರು | ಕೂಡುವ ಒಕ್ಕಲಿಗರು | ನಾಡಿಗಾರರು(ಕುರುಬರ ಗುರುಗಳು) |
| | ಕುಂಬಾರರು | ಸಾದರರು |
| | ಲೋಕಬಲಿಕರು | ಸಮಗಾರರು |
| | ಮಾಲವರರು | ಸಾಲಿಗರು |
| | ಮಾತ್ರಪತಿಗಳು | |
| | ನಾಗಲಿಕರರು | |
| | ನಿಲಾರರು | |
| | ಪಟ್ವಾ ಸಾಲಿಗಳು | |
| | ಶೀವ ಶೀಮಪಿಗಾರರು | |

ಎಂದು ಪ್ರಧಾನವಾಗಿ ಅಲ್ಲದೆ ಒಳಪಂಗಡಗಳಿವೆ ಎಂಬುದನ್ನು ಜೇಮ್ಸ್ ಎಂ. ಕ್ಯಾಂಬೆಲ್ ಅವರು ಧಾರವಾಡ ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ಉಲ್ಲೆಖಿಸಿದ್ದಾರೆ.

**೪. ವರ್ತಕರು(ವ್ಯಾಪಾರ ಜಾತಿಗಳು):** ಯಾವುದೇ ರೀತಿಯ ವ್ಯಾಪಾರ ಮಾಡಿ ಜೀವಿಸುವ ಜಾತಿಯನ್ನು ವರ್ತಕರು ಎಂದು ಕರೆಯುತ್ತಾರೆ. ಇಡೀ ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳನ್ನು ಒಳಗೊಂಡು ಇರುವಂತಹ ವರ್ತಕ ಜಾತಿಗಳನ್ನು ಈ ರೀತಿ ನೋಡಬಹುದು. ಆದಿಬಣಜಿಗರು, ಗುರ್ಜರರು, ಜೈನರು, ಲಾಡರು, ಇಲ್ಲವೆ ದಕ್ಷಿಣ ಗುಜ್ಜರು, ಲವಾಣರು ಇಲ್ಲವೆ ಲಂಬಾಡಿಗಳು, ಬಣಜಿಗರು(ಲೋಕಬಣಜಿಗರು ಸಹಿತ) ಮಾರವಾಡಿಗಳು, ನಾರ್ವೇಕರರು, ಬಾರೇಕರರು, ಶೀಲವಂತರು, ತೆಲುಗು ಬಣಜಿಗರು, ತೆಲುಗು ಒಷ್ಟಮರು, ಕೋಮಟಿಗರು ಇಲ್ಲವೆ ವೈಶ್ಯರು, ಭಾಟಿಯರು, ಕಾಲವಾಡಿಗಳು, ಭಾವಕುಳೆಯರು ಕನ್ನಡ ವೈಶ್ಯರು, ಮಲ್ಲವರು, ಲೋಹಾಣರು, ಪೆಡನೇಕರ ವೈಶ್ಯರು, ಅಗಲವಾಲರು, ಶೆಟ್ಟಿಯರು, ಚಟ್ಟೇರು, ಕುರುವಿನ ಶೆಟ್ಟಿಗಳು, ಮಾಲಗಾರರು ಎಂದು ವಿಂಗಡಿಸಲಾಗಿದೆ. ಇಲ್ಲಿ ಒಟ್ಟು ೨೫ ಜಾತಿಗಳನ್ನು ಗುರುತಿಸಲಾಗಿದ್ದು, ಇದರಲ್ಲಿ ಒಳಪಂಗಡಗಳೂ ಸಹ ಬರುತ್ತವೆ.[೧೦]

**೫. ಒಕ್ಕಲುತನದ ಜಾತಿಗಳು:** ಕೃಷಿ, ತೋಟಗಾರಿಕೆ, ಬೇಸಾಯ ಮೂಲಕ ರೈತರನ್ನು ನೋಡಬಹುದು. ಮಾನವನಿಗೆ ಬೇಕಾದ ಆಹಾರೋತ್ಪಾದನೆ ವಸ್ತುಗಳಾದ ತರಕಾರಿ, ದವಸಧಾನ್ಯಗಳು, ಹಣ್ಣು, ಸಾಂಬಾರ್

ಪದಾರ್ಥ, ಹೂವು ಇತ್ಯಾದಿಗಳನ್ನು ಬೆಳೆಸುವ ಕಾಯಕ ಕೈಗೊಂಡವರೇ ಕೃಷಿಕರು. ಇಡೀ ಮುಂಬಯಿ ಕರ್ನಾಟಕದಲ್ಲಿ ಇವರನ್ನು ನೋಡುವುದಾದರೆ ಕಾಮಾಠಿಗಳು, ಕುಡವೊಕ್ಕಲಿಗರು, ರಡ್ಡೇರು, ಸಾದರು, ಛತ್ರೇರು, ಹಣಬರು, ಕುಲಮರು, ಕುಣಬಿಗಳು, ಮುಷ್ಟಿಗೇರು, ಒಷ್ಟಮರ, ರಾವಳರು, ಹಂಡೆಯವರು, ಕಬ್ಬೇರು, ಹಾಲ್ಲಕ್ಕಿ ಒಕ್ಕಲಿಗರು, ಗಾವವೊಕ್ಕಲ, ಕರವೊಕ್ಕಲ, ಕೊಂಕಣಿ, ಮಹಾರಾಷ್ಟ್ರರು, ತೋಕ್ರಿನಾಡೋರು, ಶೇರೋಗಾರರು, ಪಡತಿಗಳು, ಉಪ್ಪುನಾಡೋರು, ಸೂದಿರರು, ಸತಾರಕರು, ಕಾಮತಿಗಳು, ಹಬ್ಬುಗಳು, ಅತ್ತೆವೊಕ್ಕಲಿಗರು, ನೊಣಬರು, ಶೀಲಂಗಿಗಳು, ಗೊಂಗಡಿಕಾರರು, ಕೊಟವೊಕ್ಕಲಿಗರು, ತಿಗಳರು, ಬುಣಗಾರರು, ಪದಮಸಾಳಿಗಳು, ಕೊಂಕಣಿ ಪಂಚಮಸಾಲಿಗರು, ಕೆನರಾದ ಜೈನರು ಎಂದು ಜಾತಿಗಳನ್ನು ವಿಂಗಡಿಸಿದ್ದಾರೆ.[೯೮] ಕೆನರಾ ಜಿಲ್ಲೆಯಲ್ಲಿ ಒಕ್ಕಲಿಗ ವೃತ್ತಿಯನ್ನು ಕೈಗೊಂಡ ಜಾತಿಗಳು ಹೆಚ್ಚಾಗಿವೆ. ಒಟ್ಟು ಇಲ್ಲಿಯೇ ೨೬ ಜಾತಿಗಳು ಇವೆ. ಅಲ್ಲದೆ ಇವರಲ್ಲಿಯೇ ಅನೇಕ ಒಳಪಂಗಡಗಳು ಇವೆ.[೯೨]

ಕಸುಬುಗಾರರು(Craftsmen) ಶಿಲ್ಪಿ: ಜನರ ಅಗತ್ಯಗಳಿಗೆ ಬೇಕಾದಂತಹ ಗೃಹೋಪಯೋಗಿ ವಸ್ತುಗಳನ್ನು ತಯಾರಿಸುವವರನ್ನು ಶಿಲ್ಪಿಗಳೆಂದು ಕರೆಯಬಹುದಾಗಿದೆ. ಮುಂಬಯಿ ಇಲಾಖೆಯ ನಾಲ್ಕು ಜಿಲ್ಲೆಗಳಿಗೆ ಸಂಬಂಧಿಸಿದಂತೆ ಪ್ರಮುಖ ವರ್ಗಗಳೆಂದರೆ: ಪಾಂಚಾಳರು, ಬಡಗಿಗಳು, ಕಮ್ಮಾರರು, ಕುಂಬಾರರು, ಸೊನ್ನಗಾರರು, ಉಪ್ಪಾರರು(ಗೌಂಡಿ), ಶಿಂಪಿಗರು, ಜೀನಗಾರರು, ಮೇದಾರರು, ಕಾಸಾರರು, ಕಂಚುಗಾರರು(ಓತಾರಿ), ನೀಲಗಾರರು(ನಾಗರಿಕರು ಸಹಿತ), ಗುಡಿಕಾರರು, ಬಳೆಗಾರರು, ಕಲ್ಲುಕುಟಿಕರು (ವಡ್ಡರು), ಬೈಲುಗಂಬಾರರು, ಘಿಸಾತಿಗರು, ಲೋಹರರು, ಅಕ್ಕಸಾಲಿಗರು ಇದಲ್ಲದೆ ಇವುಗಳಲ್ಲಿ ಇನ್ನೂ ಅನೇಕ ಒಳಪಂಗಡಗಳಿವೆ.

**೬. ಕೈಗಾರಿಕೆ ಒಡವೆಗಳನ್ನು ತಯಾರಿಸುವ ಜಾತಿಗಳು:** ಇವರಲ್ಲಿ ನೇಕಾರರು(ಸಾಳಿ) ಪಡಸಾಳಿ, ಪದಮಸಾಳಿ ಎಂದು ಎರಡು ವಿಧಗಳಿವೆ. ಗಾಣಿಗರು, ಹವಕಾರರು(ದೇವಾಂಗರು) ಜಾಡರು, ಪಟವೇಗಾರರು, ಕುರುವಿಶೆಟ್ಟಿಗಳು, ಚಿಕ್ಕಕುರುವಿನವರು, ಹಂಡೇವಬೇರರು, ಲೋಗಾರರು(ಮಿಟಗಾವಡಿಗಳು), ಬಣ್ಣಗಾರರು, ಶಿವಾಚಾರಿಗಳು, ಶಿವಜೋಗಿಗಳು, ಉಪ್ಪಾರರು ಇವರಲ್ಲಿಯೂ ಸಹ ಅನೇಕ ಒಳಪಂಗಡಗಳಿವೆ. ಈ ಜಾತಿಗಳ ಪೂರ್ವದಲ್ಲಿ ಇವರು ಬಟ್ಟೆ ನೇಯುವುದು, ಬಟ್ಟೆಗೆ ಬಣ್ಣ ಹಾಕುವುದು, ಗಾಣದಲ್ಲಿ ಎಣ್ಣೆ ತೆಗೆಯುವವರು ಪಿಂಗಾಣಿ ಸಾಮಾನು ಮಾಡುವರು. ಲೋಹದ ಸಾಮಾನು ಮಾಡುವುದು ಇತ್ಯಾದಿ ಇವರ ಹೊರೆಯಾಗಿರುತ್ತದೆ. ಇದಲ್ಲದೆ ಇವರಲ್ಲಿಯೇ ಒಳಜಾತಿಗಳು ಇವೆ. ಜಾಡರು ಇದರಲ್ಲಿಯೇ ೧೮ ಒಳಜಾತಿಗಳಿವೆ. ಗೊಲ್ಲರು, ಕುರುಬರು ಈ ವೃತ್ತಿಯನ್ನು ಕೈಗೊಂಡವರು. ಉತ್ತರಕನ್ನಡ ಜಿಲ್ಲೆಯಲ್ಲಿ ಹೆಚ್ಚು ಇದ್ದಾರೆ. ಅಲ್ಲದೆ ಇನ್ನಿತರ ಬೇರೆ ಬೇರೆ ವೃತ್ತಿಯನ್ನು ಒಳಗೊಂಡವರು ಸಹ ಇವರಲ್ಲಿ ಸೇರಿಸಬಹುದು.[೯೩]

**೭. ಪಶುಗಳನ್ನು ಸಾಕಿ ಜೀವಿಸುವ ಜಾತಿಗಳು:** ಪ್ರಮುಖವಾಗಿ ಪಶುಗಳನ್ನು ಸಾಕಿ ಜೀವಿಸುವ ಜಾತಿಗಳು ಮುಖ್ಯವಾಗಿ ಕುರುಬರು, ಗೌಳಿಗರು, ಗೊಲ್ಲರು, ದನಗಾರರು. ಕುರುಬರು ಕುರಿಗಳನ್ನು ಸಾಕಿ ಜೀವಿಸುವವರು. ಇವರು ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ.[೯೪] ಪ್ರಾಣಿಗಳ ಉತ್ಪನ್ನದಿಂದ ಅಂದರೆ ಹಾಲು, ಬೆಣ್ಣೆ, ತುಪ್ಪ, ಮೊಸರು ಮಾರಾಟ ಮಾಡಿ ಜೀವಿಸುವವರು.

ಮೀನು ಬಲೆಗಾರರ ಜಾತಿಗಳು: ಹೆಸರೇ ಸೂಚಿಸುವಂತೆ ಮೀನು ಹಿಡಿಯುವುದು, ನಾವೆ ನಡೆಸುವುದು ಇತ್ಯಾದಿ. ನೀರಿಗೆ ಸಂಬಂಧಿಸಿದಂತೆ ವೃತ್ತಿಗಳನ್ನು ಕೈಗೊಂಡವರನ್ನು ಮೀನು ಬಲೆಗಾರರು ಎನ್ನುವರು. ಮುಖ್ಯವಾಗಿ ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ಇರುವಂತಹ ಮೀನು ಬಲೆಗಾರರ ಜಾತಿಗಳಾವುವೆಂದರೆ: ಅಂಬಿಗರು, ಗಭಿತರು, ಹರಕಂತರು, ಖಾಂದೇಕಾವೀ, ಕೊಂಗಣಿಕಾವೀ, ಕೇಳುಗಳು, ಮೋಗೇರು, ಪಾಗಿಗಳು, ಕಬ್ಬಲಿಗೇರು, ಕಬ್ಬೇರು, ಬೋಯಿಗಳು. ಹರಕಂತರು, ಅಂಬಿಗರು ಮಾತ್ರ ಧಾರವಾಡ ಕೆನರಾ ಜಿಲ್ಲೆಯಲ್ಲಿ ಕಂಡುಬರುತ್ತಾರೆ. ಗಭಿತರು, ಕಬ್ಬಲಿಗೇರು, ಬೆಳಗಾವಿ, ಬಿಜಾಪುರದಲ್ಲಿ ಕಂಡುಬರುತ್ತಾರೆ. ಇನ್ನು ಉಳಿದ ಎಲ್ಲಾ ವರ್ಗಗಳು ಹೆಚ್ಚಾಗಿ ಕಂಡುಬರುವುದು ಕೆನರಾ ಜಿಲ್ಲೆಯಲ್ಲಿ ಮಾತ್ರ ಎಂದು ಹೇಳಬಹುದು.[೨೫]

**೮. ನೃತ್ಯಗಾಯನ ವಾದ್ಯಗಳಿಂದ ಜೀವಿಸುವ ಜಾತಿಗಳು:** ನೃತ್ಯಕಲೆಗೆ ಮೀಸಲಾದ ಜಾತಿಯವರು ಮುಖ್ಯವಾಗಿ ಕಲಾವಂತರು. ಇವರು ವಂಶಪರಂಪರೆಯಾಗಿ ಕಾಲಿಗೆ ಗೆಜ್ಜೆಕಟ್ಟಿಕೊಂಡು ಸಮಾಜದೊಳಗೆ ಕುಣಿಯುವ ಕೆಲಸವನ್ನು ಮಾಡುವವರಾಗಿದ್ದಾರೆ. ಮುಖ್ಯವಾಗಿ ಕನ್ನಡಿಗರು, ಮಹಾರಾಷ್ಟ್ರದವರು, ಕೊಂಕಣಿಗರು, ತೆಲುಗರು ಹಾಗೂ ಮುಸಲ್ಮಾನರ ಈ ಜಾತಿಗಳಲ್ಲಿ ಜನರು ಈ ವೃತ್ತಿ ಮಾಡುವರು. ಅಲ್ಲದೆ ಸಯಾಯಿಗಳು, ದೇವಳಿಗಳು ಪ್ರಾರಂಭದಲ್ಲಿಯೇ ದೇವರಿಗೆ ಅರ್ಪಿಸಿದ ಮಕ್ಕಳಾಗಿರುತ್ತಾರೆ. ಬಸವಿಗಳು, ಸೂಳೆಗಳು ಅಥವಾ ಕಸಬಿಣಿಗಳು ಇವರು ಜಾಂಕರ್ಮ(ವೇಶ್ಯೆ) ವೃತ್ತಿ ಮಾಡುವರು. ಘಡಶಿಗಳು 'ಸಪ್ಪಳಿಗರು' ಹಳ್ಳೇರು ಇವರು ಬಜಂತ್ರಿಗಳನ್ನು ದೇವಸ್ಥಾನದಲ್ಲಿ ಊದುವ ಕೆಲಸ ಮಾಡುವರು ಎಂಬುದಾಗಿ ತಿಳಿದುಬರುತ್ತದೆ.[೨೬]

**೯. ಊಳಿಗದ ಜಾತಿಗಳು, ವಾಹಕ ಜಾತಿಗಳು:** ಪ್ರಮುಖವಾಗಿ ಬೋಯಿಗಳು, ಅಗಸರು, ನಾದಿನರು, ಅಡಬಟಕಿಗಳು, ದೇವಳಿಗಳು, ಪಡಿಯಾರರು, ಬಂದಿಗಳು, ವಾಹಕರು(ಕೊರಚರು, ಕೊರಮರು ಎರಡು ವಿಧ) ಇವರಲ್ಲಿ ಒಳಪ್ರಭೇದಗಳುಂಟು. ಇವರ ಮುಖ್ಯ ಹೊರೆ ಎಂದರೆ ಪಲ್ಲಕ್ಕಿ ಹೊರುವ, ಮೀನು ಹಿಡಿಯುವ, ಸುಣ್ಣಬಣ್ಣ ಬಳಿಯುವ, ವಸ್ತ್ರ ಸ್ವಚ್ಛ ಮಾಡುವ, ಹಾದರ ನಡೆಸುವ ಇತ್ಯಾದಿ ಕೆಲಸ ಮಾಡುವುದು ಅಲ್ಲದೇ ಊರೂರು ಸುತ್ತುವುದು.[೨೭]

**೧೦. ಕೂಲಿಕಾರರು ಕಿರುಕುಳ ಜಾತಿಗಳು, ತಿರುಕರ ಜಾತಿಗಳು:** ಪ್ರಾಚೀನ ಕಾಲದಿಂದಲೂ ಸಹ ಸಮಾಜವ್ಯವಸ್ಥೆಯಲ್ಲಿ ಜಾತಿಪದ್ಧತಿ ಇತ್ತು. ವಿದ್ಯೆ, ಜ್ಞಾನಗಳ ಒಡೆಯರಾಗಿ ಬ್ರಾಹ್ಮಣರನ್ನು, ಯುದ್ಧಕ್ಕೆ ಕ್ಷತ್ರಿಯರನ್ನು, ವ್ಯಾಪಾರ-ವಾಣಿಜ್ಯಕ್ಕೆ ವೈಶ್ಯರು, ಸಾಮಾಜಿಕ ವ್ಯವಸ್ಥೆಯ ಕೊನೆಯಲ್ಲಿರುವ ದಲಿತರನ್ನು ಅತ್ಯಂತ ಹೊಲಸು ಕೆಲಸ ಮಾಡುವ ಗುಲಾಮರನ್ನಾಗಿ ಮಾಡಲಾಗಿದೆ. ಇವರು ಎಲ್ಲಾ ಹಕ್ಕುಗಳಿಂದಲೂ ವರ್ಜಿತರು. ಇವರಿಗೆ ಅನೇಕ ರೀತಿಯ ಹಿಂಸೆ ಅವಮಾನಗಳನ್ನು ಮಾಡಲಾಗುತ್ತಿದೆ. ಜ್ಞಾನದಿಂದ, ಆಚರಣೆಗಳಿಂದ ಸಂಪತ್ತು ಮತ್ತು ವಿದ್ಯೆಗಳಿಂದ ದಲಿತರನ್ನು ದೂರ ಇಡಲಾಗಿದೆ.[೨೮] ಇಂತಹ ವರ್ಗಕ್ಕೆ ಸೇರುವವರೇ ಕೂಲಿಕಾರರು, ಕಿರುಕುಳ ಜಾತಿಗಳು ಹಾಗೂ ತಿರುಕರ ಜಾತಿಗಳು. ಕೂಲಿಕಾರರು ಕಿರುಕುಳ

ಜಾತಿಯವರಲ್ಲಿ ಪ್ರಧಾನವಾಗಿ ಬರುವ ವೃತ್ತಿಗಳನ್ನು ಸೇರಿಸಿ ಹೆಸರಿಸಬಹುದಾದ ಜಾತಿ ಎಂದರೆ ಬೇಡರು, ಬೈಲ್ಪಾರರು, ದೇಶಾವರರು, ಡೊಂಬರು, ಕೈಕಾಡಿಗಳು, ಕೊರಮರು, ರಾವೇಶಿಗಳು, ವಡ್ಡರು, ಕಸಾಯಿಗಳು, ಕಾತಕಲಿಗಳು, ಶಿಕಾರಿಗಾರರು ಎಂದು ವಿಭಾಗಿಸಬಹುದು. ಇವಿಷ್ಟು ಜಾತಿಗಳು ಮುಂಬಯಿ ಕರ್ನಾಟಕದಲ್ಲಿ ಸಂಬಂಧಿಸಿದಂತೆ ನಾಲ್ಕು ಜಿಲ್ಲೆಗಳನ್ನು ಒಳಗೊಂಡಿರುವಂತಹವು. 

ತಿರುಕರ ಜಾತಿಗಳು: ಕೆಳಸ್ತರದ ವೃತ್ತಿ ಕೈಗೊಂಡ ಮತ್ತೊಂದು ಮುಂಬಯಿ ಕರ್ನಾಟಕದಲ್ಲಿಯೇ ಅತ್ಯಂತ ಕೆಳವರ್ಗದ ಜಾತಿಗಳೆಂದೇ ಗುರುತಿಸಲ್ಪಟ್ಟವರು ತಿರುಕರ ಜಾತಿಗಳು. ಅಂದರೆ ಭಿಕ್ಷುಕ ವೃತ್ತಿ ಕೈಗೊಂಡವರು. ಆ ಜಾತಿಗಳೆಂದರೆ ದಾಸರು, ದಂಡಿನ ದಾಸರು, ಭಾವರು ಬುಡಬುಡಕಿಗಳು, ಗೊಂದಲಿಗರು, ಹೊಲೆದಾಸರು, ಜೋಗೇರು, ಗೋಸಾವಿಗಳು, ಬಾಗಡಿಗಳು, ಕಾನಪುಟೆಗಳು, ಕಾಬಾಲಿಗಾರರು, ಪಿಚಾಚಿಗಳು, ವಾಸುದೇವರು, ಬೈರಾಗಿಗಳು, ಹೆಳವರು, ಸತಾನಿಗಳು, ವಗ್ಗಯ್ಯಗಳು ಇವುಗಳಲ್ಲಿ ಕೆಲವೊಂದು ಒಳಜಾತಿಗಳು ಅಥವಾ ಒಳಭೇದಗಳು ಒಳಗೊಂಡಿರುತ್ತದೆ.[೧೯] ಈ ವರ್ಗವು ಹೆಚ್ಚಾಗಿ ದೇವರ ಹೆಸರಿನಲ್ಲಿ ಭಿಕ್ಷೆ ಬೇಡುವರು. ಮುಖ್ಯ ಕುಲದೇವತೆಗಳು ವೆಂಕಟರಮಣ, ಹನುಮಂತನ ಹೆಸರಿನಲ್ಲಿ ಮೂರು ನಾಮ ಹಚ್ಚಿಕೊಂಡು ಕರದೀಪ, ಶಂಖ, ಜಾಗಟೆಗಳನ್ನು ಹಿಡಿದುಕೊಂಡು ಮನೆಮನೆಗೆ ಹೋಗಿ ಭಿಕ್ಷೆ ಬೇಡುವರು. ಈಗಲೂ ಸಹ ಈ ಪದ್ಧತಿಯು ಇದೆ. ಅನುಕೂಲಸ್ಥರಲ್ಲೂ ಧಾರ್ಮಿಕ ಆಚರಣೆಯ ನೆಪದಲ್ಲಿ ಈ ಪದ್ಧತಿಯು ಮುಂದುವರಿದಿದೆ.[೨೦] ಅಲ್ಲದೆ ಗೊಂದಲಿಗರು ಸಂಬಾಳ ಚೌಡಕಿಗಳನ್ನು ಬಾರಿಸುತ್ತ ಭವಾನಿಯ ಹಾಡುಗಳನ್ನು ಹಾಡುತ್ತ ಭಿಕ್ಷೆ ಬೇಡುವರು. ಹೊಲೆದಾಸರು, ಜೋಗತಿಗಳು, ಯಲ್ಲಮ್ಮನ ಜೋಗತಿಗಳಂತೆ ಬುಟ್ಟಿಗೆ ಸೀರೆಸುತ್ತಿ ಅದರೊಳಗೆ ಮರಗವ್ವನ ಮೂರ್ತಿಯನ್ನಿಟ್ಟುಕೊಂಡು ಭಿಕ್ಷೆ ಬೇಡುತ್ತಾರೆ. ಜೋಗೇರು ಜೋಗಿಗಳು ಜನಿವಾರ ಹಾಕುವರು, ಕೆಲವರು ಗಡ್ಡ ಬೆಳೆಸುವರು, ಭಿಕ್ಷೆಗೆ ಹೊರಡುವಾಗ ಹಳದಿ ಮುಂಡಾಸ, ಉದ್ದಂಗಿ, ಕೊರಳಲ್ಲಿ ಮಣಿಗಳ ಮಾಲೆ, ಕಿವಿಗಳಲ್ಲಿ, ಬಳೆಗಳಲ್ಲಿ ಮುದ್ರೆಗಳೆಂಬ ಮುರುವುಗಳು, ಒಂದು ಕೈಯಲ್ಲಿ ತ್ರಿಶೂಲ ಇನ್ನೊಂದು ಕೈಯಲ್ಲಿ ಕುಂಬಳ ಸೊಟ್ಟದ ಭಿಕ್ಷೆಪಾತ್ರೆ, ಹೆಗಲ ಮೇಲೆ ಜೋಳಿಗಿ, ಚಿಗರಿಕೊಂಬು ಇಷ್ಟು ಸಾಹಿತ್ಯಗಳೊಂದಿಗೆ ಹೊರಡುವರು ಬೈರಾಗಿಗಳು ತೀರ್ಥಯಾತ್ರೆಯನ್ನು ಮಾಡುತ್ತಾ ತಿರುಗುವರು. ಒಟ್ಟಿನಲ್ಲಿ ದೇವರ ಹೆಸರಿನಲ್ಲಿ ವಿವಿಧ ವೇಷಗಳನ್ನು ಹಾಕಿಕೊಂಡು ಭಿಕ್ಷೆ ಬೇಡುವುದೇ ಈ ವರ್ಗದ ವೃತ್ತಿ ಎನ್ನಬಹುದು. ಕೆಲವೊಬ್ಬರು ಮಾತ್ರ ಕೂಲಿ ಅಥವಾ ವ್ಯವಸಾಯ ಮಾಡುವರು. ಅಲ್ಲದೆ, ಇವರಲ್ಲಿಯೇ ಒಳಪಂಗಡಗಳು ಸಾಕಷ್ಟು ಇದ್ದವು. ಇವರು ಹೆಚ್ಚಾಗಿ ಕೂಲಿಕಾರರು, ಬೇಟೆಯಾಡುವುದು, ದಾರಿಹೋಕರನ್ನು ಸುಲಿಯುವುದು, ದರೋಡೆ, ಕಳ್ಳತನ ಮಾಡುವುದು ಮುಖ್ಯವಾಗಿ ಈ ಸಂದರ್ಭಕ್ಕೆ ಬೇಡರನ್ನು ಕಳ್ಳರೆಂದೇ ಬ್ರಿಟಿಷರು ಗುರುತಿಸುತ್ತಿದ್ದರು. ಇವು ಕಸರತ್ತು ಮಾಡುವ ಜಾತಿಗಳಾಗಿದ್ದವು. ಮುಖ್ಯವಾಗಿ ಡೊಂಬರು, ಸಣ್ಣಮಟ್ಟದ ವ್ಯಾಪಾರ ಮಾಡುವ ಕಳ್ಳತನ, ಭಿಕ್ಷೆ ಬೇಡುವುದು, ಗಾಯನ, ನರ್ತನ, ವೇಶ್ಯೆತನ, ಕೆಲವೊಂದು ಜಾತಿಯವರು ಮಾಡುವರು. ಭಜನೆ ಮಾಡುವುದು, ಸನ್ಯಾಸಿ ಭರಿಸುವುದು, ಕಲ್ಲುಕಟ್ಟುವ, ಕೆರೆ, ಬಾವಿ, ಕಾಲುವೆ ಮುಂತಾದವುಗಳನ್ನು ಅಗಿಯುವುದು, ಶರೆ ಮಾಡುವುದು, ಕೂಲಿ, ಕಬ್ಬಿಣದ ವಸ್ತು ಸಾಣೆ ಹಿಡಿಯುವ ಕೆಲಸ ಮಾಡುವುದು ಮುಂತಾದ ವೃತ್ತಿಗಳನ್ನು ಕೈಗೊಂಡವರೇ ಕೂಲಿಕಾರರು, ಕಿರುಕುಳ ಜಾತಿಗಳೆನ್ನುವರು.

೧೧. ನೀಚಜಾತಿಗಳು: ನೀಚಜಾತಿಗಳು ಎಂದರೆ ಸಮಾಜದಲ್ಲಿ ಇವರು ಅತ್ಯಂತ ಕೆಳಸ್ತರದ ವೃತ್ತಿಯನ್ನು ಕೈಗೊಂಡವರು. ಅವರೆಂದರೆ: ಹೊಲೆಯರು, ಮಾದಿಗರು, ಡೋರರು, ಸಮಗಾರರು, ಭಂಗಿಗಳು, ಚಲವಾದಿಗಳು, ಕೋಟೆಗಾರರು, ಮಸಲರು, ಅಗೇರು, ಬಾಕದರು, ಬುಟ್ಟಲರು, ಹಸಳರು, ಕೊರಗಾರರು, ಕಂಗಾರಿಗಳು, ಮುಕ್ರಿಗಳು ಹುಲಸಾಯ ಎಂಬ ಜಾತಿಗಳುಂಟು. ಅಲ್ಲದೆ ಇವರಲ್ಲಿ ಹಲವು ಒಳಪಂಗಡ ಗಳುಂಟು. ಇವರ ಮುಖ್ಯ ಹೊರೆ ಎಂದರೆ ಊರು ಕಾಯುವುದು, ಹೊಲಗಳ ಮೇರೆಯನ್ನು ಗೊತ್ತು ಮಾಡುವುದು, ಸರ್ಕಾರಿ ಚಾವಡಿಗಳಲ್ಲಿ ಕಸಗುಡಿಸುವುದು, ಸಮಾರಂಭಗಳಲ್ಲಿ ಹಲಗೆಗಳನ್ನು ಬಾರಿಸುವುದು, ಕೊಂಬುಕಹಳೆ ಊದುವವರು, ಚರ್ಮಕ್ಕೆ ಕರೆಹಾಸುವುದು, ಚರ್ಮದ ಕೆಲಸ ಮಾಡುವುದು, ಓಣಿಗಳನ್ನು ಉಡುಗುವುದು, ಸಿಂಧಿಯ ಬುಟ್ಟಿಗಳನ್ನು ಹೆಣೆದು ಮಾರುವರು. ದೀವಟಿಗೆ ಹಿಡಿಯುವುದು, ಉಪ್ಪು ಮಾರುವರು, ಭಿಕ್ಷೆ ಬೇಡುವುದು ಇಲ್ಲಿ ಇತ್ಯಾದಿ ಕೆಲಸ ಮಾಡುವವರಾಗಿದ್ದಾರೆ. ಅತ್ಯಂತ ಕೆಳಮಟ್ಟದ ಉದ್ಯೋಗ ವೃತ್ತಿ ಕೈಗೊಂಡಿರುವುದರಿಂದ ಇವರನ್ನು ನೀಚರೆಂದೇ ಗುರುತಿಸುತ್ತಾರೆ. ಈ ಮೇಲಿನ ಎಲ್ಲಾ ಜಾತಿಗಳು ಹಿಂದೂಧರ್ಮದವರೆಂದು ಗುರುತಿಸಲ್ಪಟ್ಟರೂ, ಈ ಜಾತಿಗಳೆಲ್ಲವು ವರ್ಗಗಳ ಆಧಾರದ ಮೇಲೆ ವಿಂಗಡಣೆಗೊಂಡಿವೆ. ಹಿಂದುಗಳಲ್ಲದೆ ಇನ್ನೂ ಕೆಲವೊಂದು ಜಾತಿಗಳಿದ್ದವು.

೧೨. ಮುಸಲ್ಮಾನರು: ಮುಸಲ್ಮಾನರಲ್ಲಿ ಮುಖ್ಯವಾದ ಧರ್ಮದಲ್ಲಿ ಸುನ್ನೀ, ಶಿಯಾ ಎಂಬ ಮುಖ್ಯ ಪಂಥಗಳಿರುತ್ತವೆ. ಮುಖ್ಯವಾಗಿ ಮುಸಲ್ಮಾನರಲ್ಲಿ ಸಾಕಲ್ಯ ಜಾತಿಗಳೆಂತಲೂ, ಸ್ವಾತಂತ್ರ್ಯ ಜಾತಿಗಳೆಂತಲೂ ಎರಡು ಮುಖ್ಯ ವರ್ಗಗಳನ್ನು ಮಾಡಬಹುದು. ಮೊದಲನೇ ವರ್ಗದಲ್ಲಿ ಸೈಯ್ಯದ್, ಶೇಖ, ಮೊಗಲ, ಪಠಾಣ ಎಂಬ ನಾಲ್ಕು ಪ್ರಧಾನ ಜಾತಿಗಳಿವೆ. ಇದರಲ್ಲಿಯೇ ಸಾಧಾರಣ ಜಾತಿಗಳು, ಸಾದಾಗಾರರು, ಅತ್ತಾರರು, ಮಾಣೆಯಾರ, ಕಾಗದಿಗಳು, ಕಲಾಯಿಗಾರರು, ನಾಲಬಂದರು, ಬೇಡಾರರು, ಹಕೀಮರು, ಮಹಾವತರು, ಸಾರವಾನರು ಎಂಬ ಹತ್ತು ವಿಶೇಷ ಜಾತಿಗಳು ಬರುತ್ತವೆ. ಸ್ವಾತಂತ್ರ್ಯ ಜಾತಿಗಳಲ್ಲಿ ಮುಖ್ಯವಾಗಿ ಬೊಹೊರಿಗಳು, ಗೈರಮಹಡಿಗಳು, ನವಾಯತರು, ಸೌದಾಗಾರರು, ಮೆಹಮನ್ನರೂ, ಮೇಮಿೂನರು ಪಟಾಯಿಗಾರರು, ಗೌಕಸಾಬರು, ಕಾಕರರು, ಲಬ್ಬೇರು, ಮುಕೇರಿಗಳು, ಛಪ್ಪರ್‌ಬಂದರು, ಜಾಟರು, ಬಾಗವಾನರು, ಬಕರಕಸಾಬರು, ಭುಡಭುಡಕಿಗಳು, ಗೌಂಡಿಗರು, ಝಾರೇಕರಿಗಳು ಅಥವಾ ಧೂಳಬೋಯಿ ಗಳು, ಪಿಂಜಾರರು, ಓಕ್ಕಲಗಾರರು, ಪಖಾಲಿಗಳು, ಹಜಾಮರು, ಬಟ್ಯಾರರು, ಕಂಬಾರರು, ಫೆಂಡಾರಿಗಳು, ತಾಂಬೋಳಿಗಳು, ಭೋಜಗಾರರು, ಧೋಬಿಗಳು, ಲಾಡಕಾಸಾಬರು, ಮಾಪಿಳ್ಳೆಯರು, ಗುಲಾಮರು, ಸಿದ್ದಿಗಳು, ಕಸಬಿಣಿಗಳು, ನಗಾರ್ಚಿಗಳು, ತಾಸಾಚಿಗಳು, ಧವೇಶಿಗಳು, ಗಾರುಡಿಗರು, ಹಲಾಲಖೋರರು ಅಥವಾ ಭಂಗಿಗಳು ಎಂದು ಮೂವತ್ತೆಂಟು ಜಾತಿಗಳು ಕಂಡುಬರುತ್ತವೆ. ಇವರಲ್ಲಿ ಹೆಚ್ಚಿನದಾಗಿ ಮತಾಂತರವಾಗಿ ರುವವರು ಹೆಚ್ಚಾಗಿ ಇದ್ದಾರೆ ಎಂದು ಹೇಳಬಹುದು.[೨೧]

೧೩. ದೇಶೀ ಕ್ರಿಶ್ಚಿಯನ್ನರು: ಇವರು ಬೇರೆ ದೇಶದಿಂದ ಬಂದು ಇಲ್ಲಿಯೇ ನೆಲೆಸಿರುವಂತಹ ಜನವರ್ಗ ವಾಗಿದ್ದಾರೆ. ಕ್ರಿಶ್ಚಿಯನ್ನರಲ್ಲಿ ಕ್ಯಾಥೋಲಿಕ್‌ರೆಂದು, ಪ್ರಾಟೆಸ್ಟೆಂಟ್‌ರೆಂದು ಎರಡು ಮುಖ್ಯ ವರ್ಗಗಳಿವೆ.

ಕ್ಯಾಥೋಲಿಕ್‌ರಲ್ಲಿ ಗೋಮಂತಕದ ಕ್ಯಾಥೋಲಿಕ್‌ರೆಂತಲೂ, ಮದ್ರಾಸಿನ ಕ್ಯಾಥೋಲಿಕ್‌ರೆಂತಲೂ ಎರಡು ಒಳಪಂಗಡಗಳಿವೆ. ದೇಶಿ ಪ್ರಾಟೆಸ್ಟೆಂಟ್ ಕ್ರಿಶ್ಚಿಯನ್ನರು ಇವರಲ್ಲಿ ತುರ್ಕ ಬಾಬಿಯೆಂಬ ಕುಲಗಳ ಸೊನ್ನಗಾರರು, ಪಾರ್ಸಿಗಳು, ಬೆನಿ ಇಝುರಾಯಲರು ಅಥವಾ ಯಹೂದಿಯರು ಹಾಗೂ ಬೆನಯಿ ಜನರು ಎಂಬ ಪ್ರಭೇದಗಳಿವೆ. ಕ್ಯಾಥೋಲಿಕ್‌ರು ಹಾಗೂ ಪ್ರಾಟೆಸ್ಟೆಂಟ್‌ರು ಇವರಿಬ್ಬರಲ್ಲಿ ಕ್ಯಾಥೋಲಿಕ್‌ರು ಕೆನರಾ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ. ಪ್ರಾಟೆಸ್ಟೆಂಟರು ಕೆನರಾ ಜಿಲ್ಲೆಯಲ್ಲಿ ಇಲ್ಲ. ಒಟ್ಟಿನಲ್ಲಿ ನಾಲ್ಕು ಜಿಲ್ಲೆಗಳ ಕ್ಯಾಥೋಲಿಕ್‌ರ ಸಂಖ್ಯೆ ೧೮೪೨೨, ಪ್ರಾಟೆಸ್ಟೆಂಟರ ಸಂಖ್ಯೆ ೯೫೦ ಆಗಿರುತ್ತದೆ.[೨೨] ಒಟ್ಟಿನಲ್ಲಿ ಈ ಜಾತಿ ಜಾತಿವ್ಯವಸ್ಥೆಯೇ ಹಿಂದೂಗಳ ಜಾತಿಯನ್ನು ತೆಗೆದುಕೊಂಡರೆ ಪದೇ ಪದೇ ಒಂದೇ ಜಾತಿಯವರು ಮತ್ತೊಂದು ಉದ್ಯೋಗದಲ್ಲಿ ತೊಡಗಿಕೊಂಡಿದ್ದು, ಅಲ್ಲಿಯೂ ಸಹ ಅದೇ ಜಾತಿಯಿಂದಲೇ ಗುರುತಿಸಲಾಗುತ್ತದೆ.

ಮುಂಬಯಿ ಕರ್ನಾಟಕ ನಾಲ್ಕು ಜಿಲ್ಲೆಗಳಲ್ಲಿ ಹೆಚ್ಚಾಗಿ ಇರುವಂತಹ ಜಿಲ್ಲೆಗಳ ಜನಸಂಖ್ಯೆಯು ವಿಜಾಪುರದಲ್ಲಿ ೧೦.೫೦% ಇದ್ದರೆ, ಬೆಳಗಾವಿ-೭.೬೬%, ಧಾರವಾಡ-೧೧.೪೯%, ಕೆನರಾ-೫.೭೩% ಇದ್ದರೂ ಒಟ್ಟು ಮುಂಬಯಿ ಕರ್ನಾಟಕದಲ್ಲಿ ಅಧಿಕ ಜನಸಂಖ್ಯೆಯು ಧಾರವಾಡ ಜಿಲ್ಲೆಯಲ್ಲಿ ಹೆಚ್ಚಾಗಿತ್ತೆಂದು ತಿಳಿಯಬಹುದು.[೨೩]

**೩.೨.೩. ಮುಂಬಯಿ ಕರ್ನಾಟಕದ ಭಾಷೆ**

ಭಾರತವು ಅನೇಕ ಭಾಷೆಗಳನ್ನು ಹೊಂದಿರುವ ರಾಷ್ಟ್ರ. ೧೯೬೧ರ ಜನಗಣತಿಯ ಮಾಹಿತಿಯ ಮೇರೆಗೆ ಮಾತೃ ಭಾಷೆಗಳಾಗಿ ನಮೂದಿಸಿರುವ ಭಾಷೆಗಳ ಸಂಖ್ಯೆ ೧೯೫೨. ಕರ್ನಾಟಕವನ್ನು ತೆಗೆದುಕೊಂಡರೆ ಇಲ್ಲಿ ೨೨ ಭಾಷೆಗಳನ್ನು ಮಾತೃ ಭಾಷೆಗಳನ್ನಾಗಿ ಹೊಂದಿರುವ ಜನರು ವಾಸಿಸುತ್ತಿದ್ದಾರೆ.[೨೪] ವಸಾಹತು ಕಾಲದ ಮುಂಬಯಿ ಕರ್ನಾಟಕದಲ್ಲಿ ಇದು ಕನ್ನಡ ಪ್ರದೇಶವಾದರೂ ಸಹ ಹಲವು ಆಡಳಿತ ಭಾಷೆಗಳನ್ನು ಒಳಗೊಂಡಿತ್ತು. ಮುಖ್ಯವಾಗಿ ನೋಡುವುದಾದರೆ ಭಾಷೆಗಳ ಸಂಬಂಧದಿಂದ ಜನರ ಪ್ರಮಾಣವನ್ನು ಗಮನಿಸಿದರೆ ಕನ್ನಡ ಭಾಷೆಯವರು ಪುರುಷರು ೧೦೨೬೧೬೫ + ಮಹಿಳೆಯರು ೧೦೧೬೭೮೨ = ೨೦೪೩೬೪೭ ಅಥವಾ ನೂರರಲ್ಲಿ ೧೪.೬, ಗುಜರಾತಿ ೪೭೬೨, ಮಾರವಾಡಿ ೩೨೩, ಹಿಂದಿ ೧೦೧೪೪, ಮಲಿಯಾಳಿ ೩೧೩, ಕೊಂಕಣಿ ೧೦೬೦, ತುಳು ೯೫, ತಮಿಳು ೨೮೦೫, ಕೊಡಗು ೨೬, ಇಂಗ್ಲಿಷ್ ೧೫೫೫, ಅರಬ್ಬೀ ೫೬, ಜೈನರು ೨೧, ಪಾರ್ಸಿ ೯೪, ಪಂಜಾಬಿ ೫೫, ಜರ್ಮನ್ ೨೯, ಫ್ರೆಂಚ್ ೩.[೨೫] ಮುಂಬಯಿ ಕರ್ನಾಟಕದ ಮುಖ್ಯವಾದ ಭಾಷೆ ಕನ್ನಡ. ಇಲ್ಲಿ ಪ್ರಮುಖವಾಗಿ ಕೆನರಾ ಹಾಗೂ ಮೈಸೂರು ಮತ್ತು ಬಳ್ಳಾರಿ ಭಾಷೆಯನ್ನು ಮಿಶ್ರಣ ಮಾಡಿ ಮಾತನಾಡುತ್ತಾರೆ. ಕೆಲವೊಂದು ಪದಗಳು ಅರ್ಥವಾಗುವುದಿಲ್ಲ. ೧೮೩೬ರ ಅಫೀಶಿಯಲ್ ರೆಕಾರ್ಡ್, ಪ್ರತ್ಯೇಕ ಪತ್ರವ್ಯವಹಾರ ಮತ್ತು ಪ್ರವಾಸಿಗರ ದಾಖಲೆಗಳಲ್ಲಿ ಮರಾಠಿ ಪ್ರಧಾನ ಭಾಷೆಯಾಗಿತ್ತು. ಏಕೆಂದರೆ ೧೭೨೦-೧೮೧೭ರವರೆಗೆ ಇದು ಪೇಶ್ವೆಯವರ ಆಡಳಿತಕ್ಕೆ ಒಳಪಟ್ಟಿತ್ತು. ೧೮೩೬ರಲ್ಲಿ ಸರ್ಕಾರದ ಆಜ್ಞೆಯಂತೆ ಸಾರ್ವಜನಿಕ ಪತ್ರವ್ಯವಹಾರ ಕನ್ನಡದಲ್ಲಿರಬೇಕೆಂದು ಆದೇಶಿಸಿದಾಗ ಮರಾಠಿ ಭಾಷೆಯ ಉಪಯೋಗವು ಕಡಿಮೆ ಯಾಗಲಾರಂಭಿಸಿತು. ಸಾರ್ವಜನಿಕವಾಗಿ ಮರಾಠಿ ಪದಗಳ ಪ್ರಯೋಗವು ಕಡಿಮೆಯಾಯಿತು. ಸರ್ಕಾರಿ ಆದೇಶದಂತೆ ಜನರು ಹಳ್ಳಿಯ ರೈತಾಪಿವರ್ಗದವರು ದಿನಗೂಲಿ ಕಾರ್ಮಿಕರು

ಮಾತನಾಡುವ ಭಾಷೆ ಕನ್ನಡ. ವಕ್ರವಾದ ಅಡ್ಡಾದಿಡ್ಡವಾದ ಅಸ್ಪಷ್ಟವಾದ ಕನ್ನಡ ಮಾತನಾಡುತ್ತಿದ್ದರು. ಕೆಲವೊಂದು ಪದಗಳನ್ನು ಮೈಸೂರು, ಬಳ್ಳಾರಿ, ಕಡಪ ಮುಂತಾದ ಕಡೆ ಉತ್ತಮವಾಗಿ ಬಳಸಿ ಸಾಂದರ್ಭಿಕವಾಗಿ ಬಳಸಿದ ಫಲಿತಾಂಶ ಸಿಗುತ್ತಿತ್ತು. ಮತ್ತೆ ರೈತಾಪಿ ವರ್ಗದವರು, ಕಾರ್ಮಿಕ ವರ್ಗದವರು ಇತರರು ಕನ್ನಡದ ತಿಂಗಳು, ವರ್ಷ ಇತ್ಯಾದಿ ಪದಗಳನ್ನು ಕನ್ನಡದಲ್ಲೇ ಬಳಸುತ್ತಿದ್ದರು. ಹಿಂದೂಸ್ತಾನಿಯನ್ನು ಮುಸಲ್ಮಾನರು ಹಾಗೂ ರಜಪೂತರು ಬಳಸುತ್ತಾರೆ.[೨೬]

ಕೆನರಾ, ಧಾರವಾಡ, ಬಿಜಾಪುರ ಈ ಮೂರು ಜಿಲ್ಲೆಗಳಲ್ಲೂ ಸಹ ಕನ್ನಡ ಭಾಷೆ ಮಾತನಾಡುವವರ ಸಂಖ್ಯೆ ಅಧಿಕವಾಗಿದೆ. ಆದರೆ ಬೆಳಗಾಂನಲ್ಲಿ ಮಾತ್ರ ಮರಾಠಿ ಮಾತನಾಡುವವರ ಸಂಖ್ಯೆ ಅಧಿಕವಾಗಿದೆ. ಜೊತೆಗೆ ಮುಸಲ್ಮಾನರು, ಕ್ರಿಶ್ಚಿಯನ್ನರು ಸಹ ಹಿಂದೂಸ್ತಾನಿ, ತಮಿಳು ಹಾಗೂ ಮರಾಠಿ ಮಾತನಾಡುತ್ತಾರೆ. ಆದರೆ ಕನ್ನಡ ಮರಾಠಿ ಭಾಷೆಯನ್ನು ಮಿಶ್ರಣ ಮಾಡಿ ಮಾತನಾಡುತ್ತಾರೆ. ಜೊತೆಗೆ ಹಳ್ಳಿಯ ಮುಸಲ್ಮಾನರು ಅಚ್ಚಕನ್ನಡಿಗರೆಂದು ಹೇಳಬಹುದು. ಬೆಳಗಾಂನ ಶಾಲೆಗಳಲ್ಲಿ ಕನ್ನಡದ ಬಳಕೆ ಹೆಚ್ಚಿರಲಿಲ್ಲವೆಂದು ಹೇಳಬಹುದು. ಅಲ್ಲಿನ ಭಾಷೆ ಮರಾಠಿಮಯವಾಗಿತ್ತು.[೨೭]

**೩.೨.೪. ಮುಂಬಯಿ ಕರ್ನಾಟಕದ ವಸತಿ ವ್ಯವಸ್ಥೆ**

೧೮೮೧ರ ಸುಮಾರಿನಲ್ಲಿರುವಂತೆ ಮುಂಬಯಿ ಕರ್ನಾಟಕದಲ್ಲಿ ಒಟ್ಟಿಗೆ ೬,೨೪,೭೨೩ ಮನೆಗಳು ಇದ್ದವು. ಅವುಗಳಲ್ಲಿ ೪,೯೯,೩೨೧ ಮನೆಗಳು ಒಕ್ಕಲಾಗಿದ್ದವು. ೧,೨೫,೪೦೨ ಮನೆ ಹಾಳು ಬಿದ್ದಿದ್ದವು ಎಂದು ವಿವರವಿದೆ. ಒಟ್ಟು ಮನೆಗಳಲ್ಲಿ ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳ ವಿವರಗಳೆಂದರೆ:

| ಜಿಲ್ಲೆಗಳು | ಒಟ್ಟು ಮನೆಗಳು | ಒಕ್ಕಲಾದ ಮನೆಗಳು | ಹಾಳುಬಿದ್ದ ಮನೆಗಳು |
|---|---|---|---|
| ಧಾರವಾಡ | ೨,೦೬,೪೧೯ | ೧,೬೧,೧೫೦ | ೪೫,೨೬೯ |
| ಬೆಳಗಾವಿ | ೧,೮೮,೯೯೪ | ೧,೫೪,೮೦೬ | ೩೩,೮೮೮ |
| ಬಿಜಾಪುರ | ೧,೫೪,೬೧೬ | ೧,೧೪,೫೩೩ | ೪೦,೦೮೬ |
| ಕೆನರಾ | ೭೪,೯೯೧ | ೬೮,೮೩೨ | ೬,೧೫೯ |

ಈ ಕರ್ನಾಟಕದ ಭಾಗದಲ್ಲಿ ಮನೆಗಳ ಪ್ರಮಾಣವು ಒಂದು ಚದರ ಮೈಲಿಗೆ ೧೩೨.೫೩. ಒಕ್ಕಲಾದ ಮನೆಗಳ ಜನಸಂಖ್ಯೆಯು ಸರಾಸರಿ ಪ್ರತಿಯೊಂದು ಮನೆಗೆ ೫.೫೪. ಪೂರ್ವದಲ್ಲಿ ದೇಶದೊಳಗೆ ಬಂದೋಬಸ್ತು ಇಲ್ಲದ್ದರಿಂದಲೂ ತಿಂದುಂಡು ಸೌಖ್ಯವಾದದ್ದನ್ನು ಕಂಡರೆ ಹೆಚ್ಚು ತೆರಿಗೆ ಕಟ್ಟುವರೆಂಬ ಅಂಜಿಕೆಯಿಂದಲೂ ಮನೆಗಳಿಗೆ ದೊಡ್ಡ ದೊಡ್ಡ ಕಿಟಕಿಗಳನ್ನು, ಬಾಗಿಲುಗಳನ್ನು ಹಚ್ಚಿದರೆ ಕಳ್ಳರ ಕಾಟ ತಪ್ಪಿಸುವುದು. ಕಷ್ಟ ವಾಗುವುದೆಂಬ ಭಯದಿಂದಲೂ ಶ್ರೀಮಂತರು ಸಹ ತೀರ ಕಷ್ಟತರದ ಮನೆಗಳನ್ನು ಕಟ್ಟುತ್ತಿದ್ದರು ಮತ್ತು ಮನೆಗಳಿಗೆ ಸಣ್ಣ ಬಾಗಿಲುಗಳನ್ನು ಹಚ್ಚುತ್ತಿದ್ದರು. ಮನೆಯೊಳಗೆ ಹವೆ, ಬೆಳಕು ಬರಲಿಕ್ಕೆ ಮಾರ್ಗವೆಂದರೆ ಈ ಸಣ್ಣ ಬಾಗಿಲುಗಳು. ಕೆಲವು ಕಡೆಯಲ್ಲಿ ಮಾಳಿಗೆಯಲ್ಲಿ ಬೆಳಕಂಡಿಗಳನ್ನು ಬಿಡುತ್ತಿದ್ದರು. ಹಿಂದೂ ಜನರ ಮನೆಗಳು ಒಳಭಾಗದಲ್ಲಿ ಒಮ್ಮೆಲೆ ಕಾಣುವಂತೆ ಕಟ್ಟಿರುತ್ತಾರೆ. ಆದರೆ ಮುಸಲ್ಮಾನರ ಮನೆಗಳು

ಹಾಗೆ ಕಟ್ಟಿರುವುದಿಲ್ಲ. ಹೊರಗಿನಿಂದ ಅವರ ಮನೆಯ ಒಳಭಾಗಗಳು ಕಾಣುವಂತೆ ಇರುವುದಿಲ್ಲ. ಇತ್ತಲಾಗಿ ಇಪ್ಪತ್ತು, ಮೂವತ್ತು ವರುಷಗಳಿಂದ ಸುಧಾರಿಸುತ್ತ ನಡೆದಿವೆ ಎನ್ನಲಾಗುತ್ತದೆ.[೫೮] ಮುಖ್ಯವಾಗಿ ಪೂರ್ವದ ಕಾಲದಲ್ಲಿ ಸ್ಥಾಪನೆಗೊಳ್ಳದ/ನೆಲೆಗೊಳ್ಳದ ರಾಜ್ಯಗಳಿದ್ದವು. ಈ ದೇಶದಲ್ಲಿ ಜೊತೆಗೆ ಯಾವುದೇ ಸಂದರ್ಭದಲ್ಲಿ ಸಾಮರ್ಥ್ಯದಿಂದ ಮನೆಗಳನ್ನು ನಾಶಗೊಳಿಸಲಾಗುತ್ತಿತ್ತು. ಈ ಹೆದರಿಕೆಯಿಂದ ಆಕರ್ಷಕವಾಗಿ ಕಟ್ಟಿದ್ದರೆ ಹೆಚ್ಚಿನ ತೆರಿಗೆ ಸಂಗ್ರಹಿಸುವ ಭಯದಿಂದ ಕಟ್ಟುತ್ತಿರಲಿಲ್ಲ. ಜೊತೆಗೆ ಇಲ್ಲಿ ಪಹರೆ ಕಾಯುವುದು ತುಂಬ ಕಷ್ಟದಾಯಕವಾಗಿತ್ತು. ಜೊತೆಗೆ ಮನೆಯ ದೊಡ್ಡದಾದ ಕಿಟಕಿಗಳನ್ನು, ಬಾಗಿಲುಗಳನ್ನು ದರೋಡೆಕೋರರ ಭಯದಿಂದ ನಿರ್ಮಿಸುತ್ತಿರಲಿಲ್ಲ. ಆದರೂ ಸಹ ಮನೆಗಳು ಸುಸ್ಥಿತಿಯಲ್ಲಿದ್ದು, ನಯವಿಲ್ಲದ ಗೋಡೆಗಳನ್ನು ಒಳಗೊಂಡಿತ್ತು. ಮನುಷ್ಯ ಒಳಗೆ ಬರಬೇಕಾದರೆ ದೇಹವನ್ನು ಬಾಗಿಸಬೇಕಿತ್ತು. ಬಯಲು ಆದಂತಹ ಗೋಡೆಗಳಿದ್ದವು. ಮನೆಯ ಒಳಗೆ ಬೆಳಕು ಹಾಗೂ ಗಾಳಿ ಮಾತ್ರ ಬಾಗಿಲಿನ ಮೂಲಕ ಬರಬೇಕಿತ್ತು, ಇಲ್ಲದಿದ್ದರೆ ಮೇಲ್ಛಾವಣಿಯಿಂದ ಸ್ವಲ್ಪ ಬಯಲಾಗಿ ಇರುತ್ತಿತ್ತು. ಇದಲ್ಲದೆ ಪ್ರತ್ಯೇಕವಾದ ಅಡುಗೆಮನೆ ಇರಲಿಲ್ಲ. ಅಡುಗೆ ತಯಾರಿಸಬೇಕಾದರೆ ಅಥವಾ ಬಿಸಿ ನೀರು ಕಾಯಿಸುವಾಗ ಇಡೀ ಮನೆ ಪೂರ್ತಿ ಹೊಗೆಯಿಂದ ತುಂಬಿರುತ್ತಿತ್ತು. ಅಲ್ಲಿ ನಿಲ್ಲಲೂ ಸಹ ಸಾಧ್ಯವಾಗುತ್ತಿರಲಿಲ್ಲ, ಇಬ್ಬರಲ್ಲಿ ಒಬ್ಬರು ಮಾತ್ರ ನೆಲದ ಮೇಲೆ ಕುಳಿತುಕೊಳ್ಳಬೇಕಾಗುತ್ತಿತ್ತು. ಇವೆಲ್ಲವೂ ಸಾಮಾನ್ಯರ ಮನೆಗಳ ಲಕ್ಷಣವಾಗಿತ್ತು. ಆದರೆ ಧಾರವಾಡದಲ್ಲಿ ಮುಖ್ಯವಾಗಿ ಪಟ್ಟಣದಲ್ಲಿ Never(ನೆವರ್) ಮನೆಗಳು ದೊಡ್ಡದಾಗಿರುತ್ತವೆ. ಮನೆಯಲ್ಲಿ ಹೊಗೆ ಹೋಗಲು ಹೊಗೆನಳಿಗೆ ಇರುತ್ತದೆ. ಪ್ರತ್ಯೇಕವಾಗಿ ಕಾಲುವೆ ವ್ಯವಸ್ಥೆ ಇರುತ್ತದೆ. ಸ್ನಾನಕ್ಕೆ, ಅಡುಗೆಮನೆಗೆ ಸಂಬಂಧಿಸಿದಂತೆ ಬಾಗಿಲುಗಳಿರುತ್ತವೆ ಎಂದು ತಿಳಿದುಬರುತ್ತದೆ.[೫೯]

ಪ್ರಮುಖವಾಗಿ ಅನುಕೂಲಸ್ಥರು ಕಟ್ಟಿರುವಂತಹ ಹಿಂದೂಗಳ ಮನೆಗಳೆಂದರೆ ಪ್ರವೇಶದ್ವಾರದ ಮುಂದೆ ನಡುವಿನ ಭಾಗ ಅದರ ಪಕ್ಕದಲ್ಲಿ ಒಂದು ಕಡೆ ಕೋಣೆಗಳಿರುತ್ತವೆ, ಮತ್ತೊಂದು ಕಡೆ ಸತ್ಕಾರ ಕೂಟದ ಕೊಠಡಿ ಇರುತ್ತದೆ. ಮುಖ್ಯವಾಗಿ ಪ್ರತ್ಯೇಕ ದೇವರಕೋಣೆ, ಮಲಗುವ ಕೊಠಡಿ, ಅಡುಗೆ ಮಾಡುವ ಕೋಣೆ, ಊಟ ಮಾಡುವ ಕೋಣೆಗಳೆಂದು ಪ್ರತ್ಯೇಕವಾಗಿರುತ್ತವೆ. ಅಲ್ಲದೆ ಪಕ್ಕದಲ್ಲಿ ಸ್ನಾನದ ಕೋಣೆ ಇರುತ್ತದೆ. ಜೊತೆಗೆ ಅಶ್ವಶಾಲೆ, ದನದ ಕೊಠಡಿ ಹೀಗೆ ಪ್ರಾಣಿಗಳಿಗೆ ಪ್ರತ್ಯೇಕವಾಗಿ ಕೋಣೆ ಇರುತ್ತದೆ.[೬೦]

ಮಾಳಿಗೆ ಮನೆಗಳಿರುತ್ತವೆ. ಸಣ್ಣದಾದ ಅಂಗಳ ಮತ್ತು ಮುಂಭಾಗ ಅಂಗಳ ಮಧ್ಯಭಾಗದಲ್ಲಿ ಮೇಲ್ಛಾವಣೆ ತೆಗೆದುಕೊಂಡಿದ್ದು ಗಾಳಿ, ಬೆಳಕು ಬರುವಂತೆ ಇರುತ್ತದೆ. ಕೆಸರಾದ ಭಾಗದಲ್ಲಿ ತುಳಸಿಗಿಡವನ್ನು ಹಾಕಿರುತ್ತಾರೆ.[೬೧]

ಎರಡು ಅಂತಸ್ತಿನ ಮಾಳಿಗೆ ಮನೆಗಳಿರುತ್ತವೆ. ಇವುಗಳನ್ನು ಕಲ್ಲಿನಿಂದ ಅಥವಾ ಮಣ್ಣಿನಿಂದ ಗೋಡೆ ಕಟ್ಟಿರುತ್ತಾರೆ. ಮೇಲ್ಛಾವಣಿ ಹೆಂಚಿನದಾಗಿರುತ್ತದೆ.[೬೨] ಹೆಚ್ಚಾಗಿ ದೊಡ್ಡದಾದ ಹಾಗೂ ಶ್ರೀಮಂತರ ಮನೆಗಳೆಂದರೆ ಎರಡು ಅಥವಾ ಮೂರು ಅಂತಸ್ತಿನಿಂದ ಕೂಡಿರುತ್ತದೆ. ಮೇಲ್ಛಾವಣೆ ಹೆಂಚಿನದ್ದು ಹಾಗೂ ಕಲ್ಲಿನಗೋಡೆ ಹೊಂದಿರುತ್ತದೆ. ಹೊರಗೋಡೆಗೆಯನ್ನು ಕೆಮ್ಮಣ್ಣಿ(ಜೇಡಿಮಣ್ಣು)ನಿಂದ ಮುಚ್ಚಿರುತ್ತಾರೆ. ಜೊತೆಗೆ ಕೆಂಪು,

ಬಿಳಿ ಬಣ್ಣದಿಂದ ಪಟ್ಟಿ ಬಳಿದಿರುತ್ತಾರೆ. ಒಳ ಅಂಚಿನಲ್ಲಿ ದೇವರ ಅಸಾಧಾರಣ ಶಕ್ತಿಯ ಚಿತ್ರ ರಚಿಸುತ್ತಾರೆ. ಪ್ರತಿಯೊಂದು ಬ್ರಾಹ್ಮಣರ ಮನೆಗಳಿಗೆ ಹಿಂಭಾಗ ಮತ್ತು ಮುಂಭಾಗವಿರುತ್ತದೆ. ಜೊತೆಗೆ ಅಡುಗೆಮನೆ, ಚಿಕ್ಕವರ ಕೋಣೆಗಳು, ಮಲಗಲು ಎರಡು-ಮೂರು ಕೊಠಡಿಗಳು ದೊಡ್ಡದಾದ ಹಾಲ್ ಮುಂಭಾಗದ ವರಾಂಡವು ದೊಡ್ಡದಾಗಿದ್ದು, ಸಂಜೆ ಹೊತ್ತು ಮನೆಯ ಸದಸ್ಯರು ಕುಳಿತು ಮಾತನಾಡುತ್ತಾರೆ. ಮಧ್ಯದಲ್ಲಿ ತುಳಸಿ ಗಿಡವಿರುತ್ತದೆ. ಪ್ರಾಣಿಗಳ ಕೊಠಡಿಗಳಿರುತ್ತವೆ. ಇವುಗಳನ್ನು ಪ್ರತಿದಿನವೂ ಕ್ಲೀನ್ ಮಾಡುತ್ತಾರೆ.[೩೩] ಸಾಮಾನ್ಯವಾಗಿ ಒಂದು ಕುಟುಂಬದಲ್ಲಿ ೫೦ ಅಥವಾ ೧೦೦ ಜನ ಸದಸ್ಯರಿರುತ್ತಾರೆ. ಹೆಚ್ಚಾಗಿ ಮನೆಗಳಲ್ಲಿ ನಾಯಿ, ಹಸುಗಳನ್ನು, ಎಮ್ಮೆ, ಎತ್ತು, ಕುದುರೆ, ಕತ್ತೆ ಸಾಕುತ್ತಾರೆ. ಇವರು ತಾವು ಸಾಕಿದ ಪ್ರಾಣಿಗಳನ್ನು ಮಾರಾಟ ಮಾಡುವುದು ಅಥವಾ ತಿನ್ನುವುದು ಅಪರಾಧ[೩೪] ಎಂದು ಭಾವಿಸುತ್ತಾರೆ. ಬಿಜಾಪುರ, ಬೆಳಗಾಂ ಹಾಗೂ ಧಾರವಾಡಗಳಲ್ಲಿ ಸೂರ್ಯನ ಶಾಖದಿಂದ ಒಣಗಿಸಿದ ಇಟ್ಟಿಗೆಗಳನ್ನು ಬಳಸುತ್ತಾರೆ. ಕೆಲವೊಬ್ಬರು ಕಲ್ಲಿನಿಂದ ಹಾಗೂ ಕೆಲವರು ಮಣ್ಣಿನ ಗೋಡೆಗಳನ್ನು ನಿರ್ಮಿಸಿಕೊಂಡಿರುವುದನ್ನು ಕಾಣಬಹುದು. ಕೆಲವೊಬ್ಬರು ಕಟ್ ಮಾಡಿದ ಕಲ್ಲು ಹಾಗೂ ಇಟ್ಟಿಗೆ, ಸಿಮೆಂಟ್‌ಗಳಿಂದ ಗೋಡೆಗಳನ್ನು ನಿರ್ಮಿಸುತ್ತಿದ್ದರು. ಜೊತೆಗೆ ಮರಮುಟ್ಟುಗಳನ್ನು ಬಾಗಿಲುಗಳಿಗೆ ಜೋಡಿಸುತ್ತಿದ್ದರು.[೩೫]

ಆದರೆ ಕೆನರಾದಲ್ಲಿ ಮಾತ್ರ ಗೋಡೆಗಳನ್ನು ಕೇವಲ ಮಣ್ಣು ಅಥವಾ ಕಲ್ಲಿನ ಗೋಡೆ ನಿರ್ಮಿಸುತ್ತಿದ್ದ ಬಗ್ಗೆ ತಿಳಿದುಬರುತ್ತದೆ. ಅತಿಹೆಚ್ಚಿನ ಎತ್ತರ ಎಂದರೆ ಏಳು ಅಡಿಯಿಂದ ಐದು ಅಡಿಯವರೆಗೆ ಗೋಡೆಯನ್ನು ಕಟ್ಟುತ್ತಿದ್ದರು.[೩೬]

**ಮುಸಲ್ಮಾನರ ಮನೆಗಳು:** ಇವರ ಮನೆಗಳ ಕಟ್ಟಡದಲ್ಲಿ ಹಿಂದೂ ಮನೆಗಳಿಂದ ವಿಂಗಡಿಸುವ ಪ್ರಕ್ರಿಯೆಯೇನೂ ಬಹುತರ ಇರುವುದಿಲ್ಲ. ಗೋಶಾವುಳ್ಳ ಹೆಂಗಸರಿರುವ ಮನೆಗಳಲ್ಲಿ ಅವರ ಕೋಣೆಗಳು ಪರರ ದೃಷ್ಟಿಗೆ ಬೀಳದ ಹಾಗೆ ಒಳಗೆ ಇರುತ್ತದೆ. ಹೊರಗೋಡೆಗಳನ್ನು ಬರೀ ಸುಣ್ಣದಿಂದ ಸಾರಿಸುವ, ಇಲ್ಲವೆ ಅವಕ್ಕೆ ಸುಣ್ಣದ ಶಿಡಕುಗಳನ್ನು ಕೊಡುವರು. ಹೆಬ್ಬಾಗಿಲಿಗೆ ಪರದೆಯನ್ನು ಕಟ್ಟುವ ನಡಾವಳಿಯು ಬಹುಜನರಲ್ಲಿ ಇರುತ್ತದೆ. ಉತ್ತಮ ಸ್ಥಿತಿಯಲ್ಲಿರುವವರಿಗೆ ಮೂರು ಮಾಳಿಗೆ ಮನೆಗಳಿರುತ್ತವೆ. ಕಲ್ಲು ಸಿಮೆಂಟು ಗೋಡೆಗಳನ್ನು ನಿರ್ಮಿಸಿರುತ್ತಾರೆ. ಮೇಲ್ಛಾವಣಿ ಹೆಂಚಿನದಾಗಿರುತ್ತದೆ. ಅಲ್ಲದೆ ಸಾಕಷ್ಟು ಕೋಣೆಗಳನ್ನು ಒಳಗೊಂಡ ಮನೆಗಳಿರುತ್ತವೆ. ಶ್ರೀಮಂತರಾದವರು ಒಬ್ಬರು ಅಥವಾ ಇಬ್ಬರಿಗಿಂತ ಹೆಚ್ಚಿನ ನೌಕರರನ್ನು ಮನೆಕೆಲಸಕ್ಕೆ ಇಟ್ಟುಕೊಳ್ಳುತ್ತಾರೆ. ಜೊತೆಗೆ ಇವರಿಗೆ ಕುದುರೆ ಸಾಕುವ ಹುಚ್ಚು ಹೆಚ್ಚು, ಇದರಿಂದಾಗಿ ಕುದುರೆ ಚಾಕರನನ್ನು ಇಟ್ಟುಕೊಂಡಿರುತ್ತಾರೆ. ಒಟ್ಟಿನಲ್ಲಿ ಹಿಂದೂ ಮನೆಗಳಿಗೂ, ಮುಸ್ಲಿಂ ಮನೆಗಳಿರುವ ವ್ಯತ್ಯಾಸಗಳೆಂದರೆ ಹಿಂದೂ ಮನೆಗಳು ಒಳಗಿನ ವ್ಯವಸ್ಥೆಯು, ಹೊರಗೆ ಕಾಣುವಂತೆ ಕಟ್ಟಿರುತ್ತಾರೆ. ಮುಸ್ಲಿಮರು ಮನೆಯ ಜನರಾಗಲಿ ಅಥವಾ ಒಳಗಿನ ವ್ಯವಸ್ಥೆಯಾಗಲಿ ಕಾಣುವುದಿಲ್ಲವಷ್ಟೆ.[೩೭]

ಒಟ್ಟಿನಲ್ಲಿ ಮನೆಗೆ ಹಿತ್ತಾಳೆ, ತಾಮ್ರದ ವಸ್ತುಗಳನ್ನು ಅಡುಗೆ ಮಾಡಲು ಬಳಸುತ್ತಾರೆ. ನೀರು ಕುಡಿಯಲು ಲೋಟಗಳು ದೊಡ್ಡದಾದ ಬುಟ್ಟಿಗಳು, ದವಸಧಾನ್ಯ ಸಂಗ್ರಹಿಸುತ್ತಾರೆ. ಜಮಖಾನೆ(ರತ್ನಗಂಬಳಿ)

ಹಾಸಿಗೆಗಳನ್ನು ಬಳಸುತ್ತಿದ್ದರು. ಶ್ರೀಮಂತರ ಮನೆಗಳಲ್ಲಿ ನೌಕರರು ಇರುತ್ತಿದ್ದರು. ಮನೆಗಳಲ್ಲಿ ಸಾಕುವ ಪ್ರಾಣಿಗಳೆಂದರೆ ಎತ್ತುಗಳು, ಹಸುಗಳು, ಎಮ್ಮೆಗಳು ಸಾಕುತ್ತಿದ್ದರು. ಬೆಕ್ಕುಗಳು, ನಾಯಿಗಳನ್ನು ಜೊತೆಗೆ ಅಪರೂಪವಾಗಿ ಒಂದು ಅಥವಾ ಎರಡು ಕೋತಿಗಳು, ಮೊಲಗಳು, ಗಿಳಿಗಳು ಹೀಗೆ ಕೆಲವೊಂದು ಮುದ್ದಿನ ಪ್ರಾಣಿಗಳನ್ನು ಸಾಕಿರುತ್ತಾರೆ. ಕ್ರಿಶ್ಚಿಯನ್ ಮನೆಗಳೂ ಸಹ ಹಿಂದೂ ಮನೆಗಳಂತೆ ಇರುತ್ತವೆ.[೩೮]

**೩.೨.೫. ಮುಂಬಯಿ ಕರ್ನಾಟಕದ ಉಡುಗೆ-ತೊಡುಗೆಗಳು**

ಆದಿಮಾನವ ಹಿಂದೆ ಗಿಡದ ತೊಗಟೆ, ಎಲೆ, ಪ್ರಾಣಿಗಳ ಚರ್ಮವನ್ನು ಬಟ್ಟೆಯನ್ನಾಗಿ ಸಸ್ಯ, ಹೂವು, ಕಾಯಿಗಳನ್ನು ಆಭರಣಗಳನ್ನಾಗಿ ಬಳಸಿಕೊಂಡು ತಮ್ಮ ಸೌಂದರ್ಯ ಪ್ರಜ್ಞೆಯನ್ನು ಪ್ರದರ್ಶಿಸಿದ್ದರೆಂದು ತಿಳಿದುಬರುತ್ತದೆ. ಕಾಡುಮಾನವ ವಿಕಾಸಗೊಳ್ಳುತ್ತಾ ನಾಡುಮಾನವನಾದಂತೆ ಈ ಕಾಲದಲ್ಲಿ ಅವನ ಸೌಂದರ್ಯಪ್ರಜ್ಞೆ ವೃದ್ಧಿಸುತ್ತಾ ಬಂದಂತೆಯೇ ಜನರು ತಮ್ಮ ಮನೆ ಅಂದವಾಗಿರಬೇಕು ತಾನು ಮಾಡುವ ಊಟ ರುಚಿಯಾಗಿರಬೇಕು. ಹಾಗೆಯೇ ತಾನು ಹಾಕುವ ಉಡುಗೆ-ತೊಡುಗೆ ಸುಂದರವಾಗಿರಬೇಕು ಎಂಬ ಇತ್ಯಾದಿ ಸೌಂದರ್ಯಾಕಾಂಕ್ಷೆಗಳು ಆತನಲ್ಲಿ ಮೂಡಿವೆ. "Eat for you, dress for others" ಎಂಬ ಗಾದೆಯಂತೆ ನಮ್ಮ ಜನರು ತಮ್ಮ ಮನಸ್ಸಿಗೆ ಹಿಡಿಸದಿದ್ದರೂ ಬೇರೆಯವರು ತಮ್ಮನ್ನು ನೋಡಲೂ ತಾನು ಅಂದವಾಗಿ ಕಾಣಬೇಕೆಂದು ಈ ಜನರ ಇಚ್ಛೆಯಾಗಿರುತ್ತದೆ. ಇಂದು ಈ ಆಲಂಕಾರಿಕ ಕಲೆ ಮಾನವನ ಪ್ರಕ್ರಿಯೆಯಲ್ಲಿ ಒಂದಾಗಿದೆ.

ಇಲ್ಲಿ ಮುಖ್ಯವಾಗಿ ಮಾನವನಿಗೆ ಗಾಳಿ, ನೀರು, ಆಹಾರ ಅವಶ್ಯಕವಾಗಿದ್ದಂತೆ ಉಡುಗೆಯೂ ಕೂಡ ಅಷ್ಟೇ ಅವಶ್ಯಕ. ಒಬ್ಬ ಮನುಷ್ಯನ ಗುಣ, ನಡತೆಗಳನ್ನು ಅವನು ಧರಿಸಿದ ಉಡುಗೆಗಳಿಂದ ಗುರುತಿಸಬಹುದು. ಉಡುಗೆಗಳು ಅವನ ಸಾಮಾಜಿಕ, ಆರ್ಥಿಕ ಸ್ಥಿತಿಯನ್ನು ಪ್ರತಿನಿಧಿಸುತ್ತದೆ. ಈ ಉಡುಗೆಗಳು ಪ್ರಾದೇಶಿಕವಾಗಿ ವೈವಿಧ್ಯತೆಯನ್ನು ಪಡೆದುಕೊಂಡಿದೆ. ಯಾವುದೇ ಒಬ್ಬ ವ್ಯಕ್ತಿ ತೊಡುವ ಬಟ್ಟೆ ಮಾಡಿಕೊಳ್ಳುವ ಅಲಂಕಾರ ಹಾಕಿಕೊಳ್ಳುವ ಒಡವೆಗಳು ಅವನ ಸೌಂದರ್ಯಪ್ರಜ್ಞೆಯ ಅಭಿವ್ಯಕ್ತಿಗಳಾಗಿವೆ. ಉಡುಗೆಗಳು ಅವನ ಮಾನಸಿಕ ಸಂತೋಷ ಮತ್ತು ಸುಖವನ್ನು ಹೇಳುತ್ತವೆ. ಆದರೂ ಸಾಮಾಜಿಕ, ರಾಜಕೀಯ, ಧಾರ್ಮಿಕ ಮೌಲ್ಯಗಳು ಬದಲಾಗುತ್ತವೆ. ಇದು ಉಡುಗೆಗಳಿಗೂ ಅನ್ವಯಿಸುತ್ತದೆ. ವಿಶೇಷವಾಗಿ ಆಯಾಯ ಜನಾಂಗಗಳು ನಡೆಸುವ, ಅವರದೇ ಆದ ಹಬ್ಬ, ಜಾತ್ರೆ, ವಿವಾಹ ಮೊದಲಾದವುಗಳಲ್ಲಿ ತೊಡುವ ಉಡುಗೆಗಳಲ್ಲಿ ಮಾತ್ರ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಆದರೆ ಒಂದೇ ಭೌಗೋಳಿಕ ಪರಿಸರದಲ್ಲಿ ನೆಲೆಸಿದ ಜನರು ಆ ಪ್ರದೇಶಕ್ಕೆ ಹೊಂದಿಕೊಳ್ಳುವ ಉಡುಗೆ-ತೊಡುಗೆಗಳನ್ನು ಧರಿಸುತ್ತಾರೆ.[೩೯] ಜೊತೆಗೆ ಅವರ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿಯೂ, ಅಭಿರುಚಿಗೆ ಅನುಗುಣವಾಗಿಯೂ ಅವರ ಉಡುಪುಗಳನ್ನು ಧರಿಸುತ್ತಾರೆ. ಕಾಲ ಮುಂದುವರೆದಂತೆ ಮಾನವನ ಪ್ರತಿಯೊಂದು ವಿಷಯದಲ್ಲಿ ಆಧುನಿಕತೆ ನೆಲೆಗೊಂಡಂತೆ ಉಡುಪಿನಲ್ಲಿಯೂ ಅದು ಪ್ರತಿನಿಧಿಸುತ್ತದೆ. ಒಬ್ಬ ವ್ಯಕ್ತಿಯ ಉಡುಗೆ-ತೊಡುಗೆಗಳೆಂದರೆ ಒಬ್ಬ ವ್ಯಕ್ತಿಯು ಧರಿಸುವ ಉಡುಪುಗಳಲ್ಲದೆ ಆಭರಣಗಳು, ಇತರೆ ವಸ್ತುಗಳೆಲ್ಲವೂ ವೇಷಭೂಷಣದಲ್ಲಿ ಸೇರಿಕೊಂಡಿರುತ್ತದೆ. ವಸಾಹತುಶಾಹಿ

ಕಾಲಘಟ್ಟದಲ್ಲಿ ಮುಂಬಯಿ ಕರ್ನಾಟಕ ಜಿಲ್ಲೆಗಳಲ್ಲಿನ ಜನರ ವೇಷಭೂಷಣಗಳಿಂದ ಅವರ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳನ್ನು ತಿಳಿಯಬಹುದಾಗಿದೆ. ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳಾದ ಬೆಳಗಾಂ, ಬಿಜಾಪುರ, ಧಾರವಾಡ ಮತ್ತು ಕೆನರಾ ಇಲ್ಲಿ ಹೆಚ್ಚಾಗಿ ಒಂದೇ ರೀತಿಯ ಉಡುಪುಗಳನ್ನು ಧರಿಸುವುದನ್ನು ಕಾಣಬಹುದು. ಇಲ್ಲಿ ಗಂಡಸರು ಪಂಚೆ ತೊಡುವರು. ಮೈಯಲ್ಲಿ ಒಂದು ಗಿಡ್ಡಂಗಿ, ಮೈಮೇಲೆ ಒಂದು ಧೋತ್ರ, ತಲೆಯ ಮೇಲೆ ರುಮಾಲು, ಕಾಲಲ್ಲಿ ಚಪ್ಪಲಿ ಮೆಟ್ಟುವುದು ಅಪರೂಪ. ಹೆಂಗಸರು ಸೀರೆ, ಕುಪ್ಪಸಗಳನ್ನು ಉಡುವರು. ಸೀರೆ ಉಡುವ ವಿಧಾನದಲ್ಲಿ ವ್ಯತ್ಯಾಸವನ್ನು ಕಾಣಬಹುದಾಗಿದೆ(ಹೈಗ). ಹೆಂಗಸರು ಘಟ್ಟದ ಮೇಲೂ ಕಿರಿಸೆರಗನ್ನು ತೆಗೆದು ಅದನ್ನು ಕೊರಳಲ್ಲಿ ಕಟ್ಟಿಕೊಂಡು ದಾರಕ್ಕೆ ಸಿಗಿಸುವುದು. ಘಟ್ಟದ ಮೇಲೂ ಹೆಂಗಸರು ಕೆಳಗೆ ಕಚ್ಚೆ ಹಾಕುವುದಿಲ್ಲವೆಂದು ತಿಳಿದುಬರುತ್ತದೆ.

ಲಮಾಣಿಯರ ಹೆಂಗಸರು ಗುಜರಾತಿ ಹೆಂಗಸರಂತೆ ಕುಪ್ಪಸದ ಗಂಟು ಬೆನ್ನಿನ ಮೇಲೆ ಹಾಕಿ ಬಲಗೈ ಸೆರಗು ಹೊದ್ದುಕೊಳ್ಳುವರು. ಆನೆ ದಂತದಿಂದ ತಯಾರಿಸಿದ ಬಳೆಗಳನ್ನು ಮೊಳಕೈವರೆಗೆ ಹಾಕಿಕೊಳ್ಳುವರು. ನಾರ್ವೇಕರರು ಹೆಂಗಸರು ಕಚ್ಚೆ ಹಾಕಿಕೊಳ್ಳುವರು. ಕುಂಕುಮ ಹಚ್ಚಿಕೊಳ್ಳುವರು. ಮಾರವಾಡಿ ಹೆಂಗಸರಂತೆ ಕುಪ್ಪಸ ತೊಟ್ಟುಕೊಂಡು ಬಲಭಾಗದ ಮೇಲೆ ಸೆರಗು ಹೊದ್ದುಕೊಳ್ಳುತ್ತಾರೆ. ಕಾಲವಾಡಿಗಳು ಬಳೆ ಇಟ್ಟುಕೊಳ್ಳುವರು. ಕುಂಕುಮ ಹಚ್ಚಿಕೊಳ್ಳುವರು. ಆದರೆ ಮಂಗಳಸೂತ್ರ ಕಟ್ಟಿಕೊಳ್ಳುವುದಿಲ್ಲ, ಕೆಲವು ಹೆಂಗಸರು ಸೀರೆ ಉಟ್ಟುಕೊಂಡು ಎದೆಯ ಮೇಲೆ ಬೇರೆಯ ಸಣ್ಣ ಅಂಚಿಯನ್ನು ಕಟ್ಟಿಕೊಳ್ಳುತ್ತಾರೆ.

ಮಾರವಾಡಿ ಹೆಂಗಸರು ಪರಿಕರವನ್ನುಟ್ಟುಕೊಂಡು ಬಲಗೈ ಸೆರಗು ಹೊದ್ದುಕೊಳ್ಳುವರು. ಕುಪ್ಪಸದ ಗಂಟು ಬೆನ್ನಿನ ಮೇಲೆ ಇವರು ಮೊಣಕೈವರೆಗೆ ಆನೆ ದಂತದಿಂದ ತಯಾರಿಸಿದ ಬಳೆಗಳನ್ನು ಇಟ್ಟುಕೊಳ್ಳುವರು. ಕುಂಬಾರರು, ವಡ್ಡರು, ಕುರುಬರು, ಕಬ್ಬಲಿಗೇರು, ಕಲಾವಂತರು, ದೇಶಾವಳರು ಮುಂತಾದ ಜಾತಿಯವರು ಸೀರೆಗೆ ಕಚ್ಚೆಯನ್ನು ಹಾಕುವರು. ಕೆಲವೊಂದು ಪಂಗಡದವರು ಕಚ್ಚೆ ಹಾಕುವುದಿಲ್ಲ.

ಐಗಳು ಹೆಂಗಸರು ಶೀಲಂಗಿಗಳು, ವಡ್ಡರು, ಭಂಡಾರಿಗಳು(ಕೆನರಾದವರೂ ಮಾತ್ರ) ಕೊಮಾರಪೈಕರು, ಕೊರಚರು, ಫುಡಶಿಗಳು, ಸಪ್ಪಳಿಗರು, ಕೈಕಾಡಿಗಳು, ಬಾಗಡಿಗಳು, ಅಗೇರು, ಕೊರಗಾರರು ಇತರೇ ಹೆಂಗಸರು ಕುಪ್ಪಸ ತೊಡುವುದಿಲ್ಲ, ಕುಪ್ಪಸ ಹಾಕದೆ ಇರುವ ಹೆಂಗಸರು ಹೆಚ್ಚಾಗಿ ಕೊರಳಿಗೆ ಕರಿಮಣಿಗಳ ಸರಗಳು ಇತರೆ ಮಣಿಗಳ ಸರಗಳನ್ನು ಹೆಚ್ಚಾಗಿ ಹಾಕಿಕೊಂಡು ಅದರ ಮೂಲಕ ಎದೆಯನ್ನು ಮುಚ್ಚಿಕೊಳ್ಳುತ್ತಾರೆ. ಒಟ್ಟಿನಲ್ಲಿ ಯುವತಿಯರು ಅಥವಾ ಉತ್ತಮ ಕುಲದವರು ಸ್ವಜಾತಿಯ ಅಭಿಮಾನವುಳ್ಳವರು, ಬ್ರಾಹ್ಮಣ ಹೆಂಗಸರಂತೆ ಕುಂಕುಮ ಹಚ್ಚಿಕೊಂಡು, ಕಚ್ಚೆ ಹಾಕಿ ಸೀರೆ ಉಟ್ಟುಕೊಳ್ಳುವರು. ಆದರೆ ಬಹುತರ ಯುವತಿಯರು ಬುರಕ ಬಿಟ್ಟು ಹೊರಬರುವುದಿಲ್ಲ ಎನ್ನಲಾಗುತ್ತದೆ. ಅಂದರೆ ತಲೆಯನ್ನು ಸೆರಗಿನಿಂದ ಮುಚ್ಚಿಕೊಳ್ಳುವುದು, ಉಳಿದವರು ಒಕ್ಕಲಿಗರ ಹೆಂಗಸರಂತೆ ಕುಂಕುಮ, ಕಚ್ಚೆಗಳಿಲ್ಲದೆ ವರ್ತಿಸುವರು.[೨೦]

ಪ್ರಮುಖವಾಗಿ ಮಹಿಳೆಯು ಧರಿಸುವ ಆಭರಣಗಳೆಂದರೆ ಕುತ್ತಿಗೆಗೆ ಹಲವು ರೀತಿಯ ಆಭರಣಗಳನ್ನು ಧರಿಸುತ್ತಾಳೆ. ಇದರಲ್ಲಿ ಪ್ರಮುಖವಾದ ಆಭರಣ 'ಮಂಗಲಸೂತ್ರ'. ವರನು ವಧುವಿಗೆ ಮದುವೆ ಸಂದರ್ಭದಲ್ಲಿ ಕಟ್ಟುವ ತಾಳಿ. ಬೇರೆ ಆಭರಣಗಳೆಂದರೆ ನೆಕ್ಲೇಸ್, ಚಂದ್ರಹಾರದ ಸರ, ಕಂಠಿ ವಜ್ರಹಾರ,

ಪದಕಸರ, ಪಾವಲಿ, ತೊಡಸ, ಪಟ್ಟ ಇತ್ಯಾದಿ ಸರಗಳನ್ನು ಧರಿಸುತ್ತಾಳೆ. ಕಿವಿಗಳಿಗೆ ಭುಗುಡಿ, ಬೆಂಡಾಲಿ, ಕರುನಾಪುಲ್ (Karnaphuls) ಮೂಗಿಗೆ ಮೂಗುತಿ ಅಥವಾ ನತ್ತು, ಕಡಗ, ಪಾವಲಿ ತೊಡಗ, ಸರಪಳಿಗಳು, ಕಾಲ್ಗೆಜ್ಜೆ, ಕಾಲುಂಗುರ, ಬಳೆಗಳನ್ನು ಹಾಕಿಕೊಳ್ಳುತ್ತಾರೆ. ಇವುಗಳನ್ನು ಹೆಚ್ಚಾಗಿ ಬ್ರಾಹ್ಮಣ ಹೆಂಗಸರು ಮುಖ್ಯವಾಗಿ ಬಂಗಾರದ ಮತ್ತು ಬೆಳ್ಳಿಯ ಆಭರಣಗಳನ್ನು ಧರಿಸುವುದು ಹೆಚ್ಚು. ಅಲ್ಲದೆ ಹಬ್ಬ ವಿಶೇಷ ಸಂದರ್ಭದಲ್ಲಿ ತಲೆಗೆ ಅಲಂಕರಿಸಿಕೊಂಡು ನಾನಾ ವಿಧದ ಹೂವುಗಳನ್ನು ಮುಡಿಯುತ್ತಾರೆ.[೪೧] ಮುಖ್ಯವಾಗಿ ಸಂಪಿಗೆ, ಸೇವಂತಿ, ಮಲ್ಲಿಗೆ, ಜಾಜಿ ಮತ್ತು ಗೊರಟೆ ಹೂವು ಕೆನರಾದಲ್ಲಿ ಪ್ರಮುಖವಾಗಿ ಹೆಣ್ಣುಮಕ್ಕಳು ಮುಡಿಯುತ್ತಾರೆ. ಮುಖ್ಯವಾಗಿ ಮದುವೆಯ ಸಂದರ್ಭದಲ್ಲಿ ಮದುವಣಗಿತ್ತಿಯ ಸೀರೆಯು ನೀಲಿ ಅಥವಾ ಗಾಢಕೆಂಪು ಜೊತೆಗೆ ಹಳದಿಬಣ್ಣದಿಂದ ಕೂಡಿದ್ದಾಗಿರುತ್ತದೆ. ವಿಧವೆಯು ಯಾವುದೇ ಆಭರಣಗಳನ್ನು ಧರಿಸುವುದಿಲ್ಲ. ಕೆಂಪುಬಣ್ಣದ ಸೀರೆಯಿಂದ ತಲೆಯವರೆಗೆ ಮುಚ್ಚಿಕೊಂಡಿರುತ್ತಾಳೆ. ಕೆಲವೊಂದು ಕಡೆ ಬಿಳಿಬಣ್ಣದ ಸೀರೆಯನ್ನು ಧರಿಸುವರು.[೪೨]

ಬ್ರಾಹ್ಮಣರು ಗಾಜಿನ ಬಳೆ ಅಶುದ್ಧ ಎಂದು ಭಾವಿಸುತ್ತಾರೆ. ಆದರೆ ಸಾಮಾನ್ಯ ಮಹಿಳೆಯರು ಗಾಜಿನ ಬಳೆಗಳನ್ನು ಧರಿಸುತ್ತಾರೆ. ಕಣ್ಣಿಗೆ ಕಾಡಿಗೆ ಹಚ್ಚುತ್ತಾಳೆ. ಪುರುಷರು ಮತ್ತು ಮಹಿಳೆಯರು ಹಬ್ಬದ ವಿಶೇಷ ಸಂದರ್ಭದಲ್ಲಿ ಒಳ್ಳೆಯ ಬಟ್ಟೆಗಳನ್ನು ಧರಿಸುತ್ತಾರೆ. ಸಾಮಾನ್ಯರು ಮುಖ್ಯವಾಗಿ ಬೆಳ್ಳಿ, ಬಂಗಾರದ ಆಭರಣಗಳು ಧರಿಸುವುದು ಕಡಿಮೆ. ಆದರೆ ಅವರು ಹಿತ್ತಾಳೆ, ಕಂಚಿನ ಗಾಜಿನ ಮಣಿಗಳ ಆಭರಣಗಳನ್ನು ಧರಿಸುವುದು ಹೆಚ್ಚು.[೪೩]

ಪ್ರಮುಖವಾಗಿ ತಮ್ಮ ಒಂದು ಆಭರಣಗಳಿಂದಲೇ ಪ್ರತ್ಯೇಕವಾಗಿ ಗುರುತಿಸುವ ಜನಾಂಗದವರೆಂದರೆ ರಜಪೂತ ಮಹಿಳೆಯರು. ಇವರ ಮುಖ್ಯ ಕುರುಹು, ಆಕೆಯ ನತ್ತು, ಅದು ಎರಡು ಇಂಚಿನ ವ್ಯಾಸಕ್ಕಿಂತ ಸಣ್ಣದು ಇರುವುದೇ ಇಲ್ಲ. ಕೆಲವರು ಆರು ಇಂಚು ಇಲ್ಲವೇ ಒಂದು ಫೂಟ್ ವ್ಯಾಸವುಳ್ಳ ನತ್ತನ್ನು ಮೂಗಿಗೆ ಇಟ್ಟುಕೊಳ್ಳುವರು. ಅದರ ಭಾರವನ್ನು ಎತ್ತಿ ಹಿಡಿಯುವುದಕೋಸ್ಕರ ಅದಕ್ಕೆ ಚಿನ್ನದ ಸರವನ್ನು(ಸರ್ಪಣಿ) ಹಚ್ಚಿ ಅದನ್ನು ಕೂದಲಿಗೆ, ಇಲ್ಲವೆ ಕಿವಿಗೆ ಸಿಗಿಸುವರು.[೪೪]

ಮುಸಲ್ಮಾನರು ತಮ್ಮದೇ ಆದ ಭಿನ್ನವಾದ ಉಡುಪುಗಳಿಂದ ಗುರುತಿಸಿಕೊಳ್ಳುತ್ತಾರೆ. ಅವರು ಮುಂಡಾಸ ಹಾಕುವರು. ಬಹುಜನರು ಇಜಾರುಗಳನ್ನು, ಉದ್ದಂಗಿಗಳನ್ನು ಹಾಕುವರು. ಮಿಕ್ಕವರು ಜಾತಿಗಳ ಜನರು ಧೋತ್ರ ತೊಟ್ಟು ರುಮಾಲು, ಗಿಡ್ಡಂಗಿಗಳನ್ನು ಹಾಕಿಕೊಳ್ಳುವರು. ಕೆಲವರು ತಲೆಗೆ ಸಣ್ಣ ಟೊಪ್ಪಿಗೆಗಳನ್ನು ಹಾಕುವರು. ಮುಸಲ್ಮಾನರು ಯಾವತ್ತೂ ತಲೆಯನ್ನು ಪೂರಾ ಬೋಳಿಸಿಕೊಂಡು ಬಹುತರ ಗಡ್ಡ ಬಿಡುವರು. ಬಹುತರರು ಮತ್ತು ಹೆಂಗಸರು ಸೀರೆಯನ್ನು ಕಚ್ಚೆ ಹಾಕದೇ ಉಟ್ಟ(ಕುಪ್ಪಸ) ತೊಡುವರು. ಸಾಮಾನ್ಯವಾಗಿ ಸೀರೆಯು ಎಂಟು ಮೊಳ ಉದ್ದವಾಗಿ ಧರಿಸುತ್ತಾರೆ. ವಿಶೇಷ ಸಂದರ್ಭದ ಸಮಾರಂಭದಲ್ಲಿ ಹೆಚ್ಚಾಗಿ ರೇಷ್ಮೆ ಬಟ್ಟೆಯನ್ನು ಧರಿಸುತ್ತಾರೆ. ಅಲ್ಲದೆ ಈ ಬಟ್ಟೆಗಳಿಗೆ ಕಸೂತಿ ಕೆಲಸವನ್ನು ಮಾಡಿದ ಸೀರೆಯನ್ನು ಧರಿಸುತ್ತಾರೆ. ಇದಕ್ಕೆ 'ಪೀತಾಂಬರ' ಎಂದು ಕರೆಯುತ್ತಾರೆ. ತಮ್ಮ ಅಂತಸ್ತಿಗೆ ತಕ್ಕಂತೆ ಬಟ್ಟೆಗಳು ಉನ್ನತ ಮಟ್ಟದ್ದಾಗಿರುತ್ತವೆ.[೪೫]

ತಲೆಗೆ ರುಮಾಲು, ಸಿಲ್ಕ್ ಧೋತ್ರ, ಪ್ರತಿಯೊಂದು ಉಡುಪು ಸಹ ರೇಷ್ಮೆಯದಾಗಿರುತ್ತದೆ. ಜೊತೆಗೆ ಕರವಸ್ತ್ರವೂ ಸಹ ರೇಷ್ಮೆಯದಾಗಿರುತ್ತದೆ. ಸಾಮಾನ್ಯವಾಗಿ ಬಣ್ಣಬಣ್ಣದ ಬಟ್ಟೆಯನ್ನು ಧರಿಸುತ್ತಾರೆ. ಈ ಸಮುದಾಯದ ಮಹಿಳೆಯರು ಮರಾಠಿ ಮಹಿಳೆಯರಂತೆ ಸೀರೆ ಧರಿಸುತ್ತಾರೆ.[೪೬]

ಮುಸಲ್ಮಾನರ ಉತ್ತಮ ಕುಲದ ಹೆಂಗಸರು ಪರರದೃಷ್ಟಿಗೆ ಬೀಳುವುದಿಲ್ಲ, ಮನೆ ಬಿಟ್ಟು ಹೋಗುವುದಿಲ್ಲ. ಹೋಗುವುದೇ ಅವಶ್ಯವಾದರೆ ಬಿಳೇಬಣ್ಣದ ಹಚ್ಚಡದ(ಬಟ್ಟೆಯ) ಬುರಿಕೆ(ಗೋಶಾ) ಹಾಕಿಕೊಂಡು ಗದ್ದಲವಿಲ್ಲದಂತ ಓಣಿಗಳಲ್ಲಿ ಹಾದುಹೋಗುತ್ತಾರೆ. ಈಗಲೂ ಸಹ ಬುರ್ಕಾ ಹಾಕಿಕೊಂಡು ಹೋಗುತ್ತಾರೆ. ಆದರೆ ಕಪ್ಪುಬಣ್ಣದ್ದು, ಇವರ ಕೈಯಲ್ಲಿ ಬಳೆಗಳಿರುತ್ತವೆ. ಆದರೆ ಹಣೆಯ ಮೇಲೆ ಹಚ್ಚೆಬೊಟ್ಟು, ಕುಂಕುಮ ಏನೂ ಇರುವುದಿಲ್ಲ. ಕೊರಳಲ್ಲಿ ಕರಿಮಣಿಗಳ ಸರವನ್ನು ಕಟ್ಟುವರು. ಬೆಳ್ಳಿ, ಬಂಗಾರದ ಮುಂತಾದ ಆಭರಣಗಳನ್ನು ಹಾಕಿಕೊಳ್ಳುವರು. ಶ್ರೀಮಂತರ ಆಭರಣಗಳು ವಾಡಿಕೆಯಾಗಿ ಹಿಂದೂ ಹೆಂಗಸರ ಆಭರಣಗಳಂತೆಯೇ ಇರುತ್ತವೆ. ಆದರೆ ಇವರು ಹಿಂದೂಗಳಂತೆ ತಲೆಯಲ್ಲಿ ಅಲಂಕಾರ ಮಾಡಿಕೊಳ್ಳುವುದಿಲ್ಲ ಎಂದು ತಿಳಿದುಬರುತ್ತದೆ.[೪೭] ಇವರು ಕಟ್ಟಿಗೆಯ ಶೂಗಳನ್ನು ಬಳಸುತ್ತಾರೆ.[೪೮] ಶ್ರೀಮಂತರಿಂದ ಸಾಮಾನ್ಯರವರೆಗೆ ಇರುವ ವರ್ಷದ ಬಟ್ಟೆಯ ಖರ್ಚುಗಳ ವಿವರವಿದೆ. ಇದರಲ್ಲಿ ತಮ್ಮ ಅಂತಸ್ತಿಗೆ ತಕ್ಕಂತೆ ಖರ್ಚು ಮಾಡುತ್ತಾರೆ.

ಮತ್ತೊಂದು ಪ್ರತ್ಯೇಕವಾದ ಜಾತಿ ಎಂದರೆ ಕ್ರಿಶ್ಚಿಯನ್ನರು. ಇವರಲ್ಲಿ ಪುರುಷರು ತಲೆಗೆ ರುಮಾಲನ್ನು ಸುತ್ತಿಕೊಳ್ಳುತ್ತಾರೆ. ಇದಕ್ಕೆ ಎಂಟು ಅಥವಾ ಹತ್ತು ಮೀಟರ್ ಉದ್ದವಿರುತ್ತದೆ. ಇದು ಬಂಗಾರದ ಲೇಸನ್ನು ಹೊಂದಿರುತ್ತದೆ. ಇದನ್ನು ಮದ್ರಾಸಿನಿಂದ ತರುತ್ತಾರೆ ಎಂದು ಹೇಳುತ್ತಾರೆ. ಮಧ್ಯಮ ವರ್ಗದವರು ಮುಂಬಯಿ ಕೈಗಾರಿಕೆಯಿಂದ ತಯಾರಿಸಿದ ಬಟ್ಟೆಯನ್ನು ಧರಿಸುತ್ತಾರೆ. ಕೆಳವರ್ಗದ ಕ್ರಿಶ್ಚಿಯನ್ನರು ಸ್ಥಳೀಯವಾಗಿ ಕೈಮಗ್ಗದಿಂದ ತಯಾರಿಸಿದ ಬಟ್ಟೆಯನ್ನು ಧರಿಸುತ್ತಾರೆ. ಸಾಮಾನ್ಯ ವರ್ಗದವರನ್ನು ನೋಡುವುದಾದರೆ ಇವರು ಬಡವರು, ಲಂಗೋಟಿ ಅಥವಾ ಧೋತ್ರ ಹಾಗೂ ತಲೆಗೆ ರುಮಾಲು, ಕಂಬಳಿಗಳಿರುತ್ತವೆ. ಹಿಂದೂ ಮಹಿಳೆಯರಂತೆ ಸೀರೆ, ರವಿಕೆ ಧರಿಸುತ್ತಾರೆ. ಪುರುಷರು ಸಹ ಕಡಿಮೆ ಪ್ರಮಾಣದಲ್ಲಿ ಆಭರಣಗಳನ್ನು ಧರಿಸುತ್ತಿದ್ದರು. ಕಿವಿ, ಬೆರಳುಗಳಿಗೆ ಉಂಗುರವನ್ನು ಧರಿಸುತ್ತಿದ್ದರು. ಅವರ ಮಹಿಳೆಯರು ಸಹ ಕಡಿಮೆ ಆಭರಣ ಧರಿಸುತ್ತಿದ್ದರು.[೪೯] ಹೆಂಗಸರು ಕೊಂಕಣದ ಹಿಂದೂ ಹೆಂಗಸಿನಂತೆ ತಲೆಯಲ್ಲಿ ಹೂ ಮುಡಿದುಕೊಂಡು ಅಲಂಕರಿಸಿಕೊಳ್ಳುವುದು.[೫೦] ಈ ಮೂಲಕವಾಗಿ ತಮ್ಮ ಅಂತಸ್ತಿಗೆ ತಕ್ಕಂತೆ ಆಭರಣಗಳನ್ನು ಹಾಗೂ ಉಡುಪುಗಳನ್ನು ಧರಿಸುತ್ತಿದ್ದರೆಂಬುದು ಸ್ಪಷ್ಟ. ಬ್ರಾಹ್ಮಣರು, ಲಿಂಗವಂತರು, ಒಕ್ಕಲಿಗರು ಹಾಗೂ ಮಾರವಾಡಿಗಳು, ರಜಪೂತರು ಹೆಚ್ಚಾಗಿ ಉತ್ತಮ ಸ್ಥಿತಿಯಲ್ಲಿರುವುದು ಸ್ಪಷ್ಟವಾಗುತ್ತದೆ. ಕೆಳವರ್ಗದ ಜನರ ಸ್ಥಿತಿಯೂ ತುಂಬಾ ಶೋಚನೀಯವಾಗಿರುವುದು ಕಾಣಬಹುದಾಗಿದೆ.

**೩.೨.೬. ಮುಂಬಯಿ ಕರ್ನಾಟಕದ ಆಹಾರ ಪದ್ಧತಿ**

ಈ ಜಗದಲ್ಲಿ ಎಲ್ಲಾರು ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ಎಂದು ಪುರಂದರದಾಸರು ತಮ್ಮ ಕೀರ್ತನೆಯಲ್ಲಿ ಅತ್ಯಂತ ಸೊಗಸಾಗಿ ಹೇಳಿದ್ದಾರೆ. ಅದೇ ರೀತಿ ಸರ್ವಜ್ಞನು ಅನ್ನ ದೇವರ ಮುಂದೆ ಇನ್ನು ದೇವರು ಉಂಟೆ; ಅನ್ನವಿರುವತನಕ ಪ್ರಾಣವು ಜಗದೊಳು ನನ್ನದೇ ದೈವ ಸರ್ವಜ್ಞ ಎಂದು ಹೇಳಿದ್ದಾನೆ.

ಜನರು ವಾಸಿಸುತ್ತಿರುವ ಭೌಗೋಳಿಕ ಪರಿಸರಕ್ಕನುಗುಣವಾಗಿ ಅಡುಗೆ ಪದ್ಧತಿಯು ಇರುತ್ತದೆ. ಎಲ್ಲಾ ಕಡೆಯೂ ಒಂದೇ ರೀತಿಯ ಅಡುಗೆ ಪದ್ಧತಿ ಇರಲು ಸಾಧ್ಯವಿಲ್ಲ. ಈ ಕಾರಣದಿಂದಾಗಿ ಬಯಲುಸೀಮೆ, ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಕರಾವಳಿಗಳ ಊಟೋಪಚಾರಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಆಹಾರ, ಪಾನೀಯಗಳು ಮಾನವನಿಂದ ಮಾನವನಿಗೆ, ಜನಾಂಗದಿಂದ ಜನಾಂಗಕ್ಕೆ, ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ಭಿನ್ನವಾಗುತ್ತಾ ಸಾಗುತ್ತದೆ. ವಸ್ತುಸ್ಥಿತಿ ಹೀಗಿರುವುದರಿಂದಲೇ ಆಹಾರ, ಪಾನೀಯ ಪದ್ಧತಿಗಳ ಸಂಸ್ಕೃತಿಯ ಪುನರ್‌ರಚನೆಯಾಗುತ್ತದೆ. ಆದ್ದರಿಂದ ಒಂದು ಜನಾಂಗದಲ್ಲಿಯೇ ಅವರು ನೆಲೆಸಿರುವ ಪ್ರದೇಶಕ್ಕೆ ಅನುಗುಣವಾಗಿ ಊಟೋಪಚಾರಗಳಲ್ಲಿ ವ್ಯತ್ಯಾಸಗಳು ಉಂಟಾಗುತ್ತವೆ.[೫೧]

ಮುಂಬಯಿ ಕರ್ನಾಟಕದಲ್ಲಿಯೂ ಸಹ ವಿಶೇಷವಾಗಿ ಆಹಾರ ಪದ್ಧತಿಯು ಇರುವುದನ್ನು ಕಾಣಬಹುದು. ಕರ್ನಾಟಕದ ಎಲ್ಲಾ ಕಡೆಯೂ ಸಹ ಅನ್ನ ಪ್ರತಿಯೊಬ್ಬರ ಆಹಾರವಾಗಿದೆ. ಇದಲ್ಲದೆ ಪ್ರಮುಖವಾದ ಆಹಾರ ಪದಾರ್ಥಗಳೆಂದರೆ ಹಿಟ್ಟಿನರೊಟ್ಟಿ, ದ್ವಿದಳಧಾನ್ಯಗಳಲ್ಲಿ ಸಾರು, ಪಲ್ಯ, ಬೆಣ್ಣೆ, ಮೊಸರು, ಹಾಲು, ಹೋಳಿಗೆ, ಮಾಂಸಾಹಾರ, ಸಸ್ಯಾಹಾರಗಳನ್ನು ಉಪಯೋಗಿಸುತ್ತಿದ್ದರು.

ವಿಶೇಷವಾಗಿ ಬ್ರಾಹ್ಮಣರು ಆಹಾರ ಮಾಡುವುದರಲ್ಲಿ ಹಾಗೂ ತಿನ್ನುವುದರಲ್ಲಿ ಹೆಸರುವಾಸಿಯಾಗಿದ್ದಾರೆ. ಬ್ರಾಹ್ಮಣರ ಒಟ್ಟು ಸಮುದಾಯಗಳಲ್ಲಿ ಅಕ್ಕಿ, ಜೋಳ, ಬೇಳೆ ವಿಧವಿಧದ ಶಾಖಾಹಾರಗಳು, ಕೆಲವರು ಮೀನುಗಳನ್ನು ತಿನ್ನುತ್ತಾರೆ. ಗಂಜಿ ಕುಡಿಯುವ ಪದ್ಧತಿಯೂ ಇದೆ, ಜೊತೆಗೆ ಚಿತ್ರಾನ್ನ, ವಾಂಗಿಬಾತ್‌ನಲ್ಲಿ ಹೆಸರಾಗಿದ್ದಾರೆ. ಅಲ್ಲದೇ ದೋಸೆ, ಪಾಯಸ, ಪಕ್ವಾನ್ನಗಳು, ಮಜ್ಜಿಗೆ, ಮೊಸರು ಇವುಗಳ ಮೇಲೆ ಬ್ರಾಹ್ಮಣರಿಗೆ ಪ್ರೀತಿ ಬಹಳ ಎನ್ನಲಾಗುತ್ತದೆ. ವೈಷ್ಣವ, ಬ್ರಾಹ್ಮಣಗಳು ಮಾಡುವ ಪಕ್ವಾನ್ನಗಳು ಬಹುತರ ಒಂದೇ ಇರುತ್ತದೆ. ಶುಭಕಾರ್ಯಗಳಲ್ಲಿ ಕುಕ್ಕಡಿಗಳನ್ನು ಮಾತ್ರ ಮಾಡಕೂಡದು. ಇವರು ಊಟಕ್ಕೆ ಬಡಿಸುವಾಗ ಮೊದಲು ಉಪ್ಪು, ಕಡೆಗೆ ತುಪ್ಪ ಬಡಿಸುತ್ತಾರೆ. ಆದರೆ ಅಶುಭಕಾರ್ಯಗಳಲ್ಲಿ ಮೊದಲು ತುಪ್ಪವನ್ನು ಬಡಿಸುವರು. ಉಪ್ಪು ಬಡಿಸುವುದೋ ಉದ್ದು ಮಾಂಸದ ಪ್ರತಿನಿಧಿಯೆಂದು ತಿಳಿಯುವ ಶುಭಕಾರ್ಯಗಳಲ್ಲಿ ಉದ್ದಿನ ಪದಾರ್ಥಗಳು ಇಲ್ಲದಿದ್ದರೂ ಸಾಗುವುದು. ಆದರೆ ಅಶುಭ ಕಾರ್ಯಗಳಿಗೆ ಅವು ಅವಶ್ಯಕವಾಗಿ ಇರಬೇಕು. ಅಡುಗೆಯು ಸಿದ್ಧವಾದ ಬಳಿಕ ಮೊದಲು ವಿಷ್ಣುವಿಗೆ ನೈವೇದ್ಯ ತೋರಿಸಿ ಆಮೇಲೆ ಇತರೇ ದೇವತೆಗಳಿಗೆ ತೋರಿಸುವರು. ವೈದಿಕರು ಊಟಕ್ಕೆ ಕೂತ ಬಳಿಕ ಗೃಹಸ್ಥರು ಕೂಡುವ ಸಂಪ್ರದಾಯ ಉಂಟು. ಯಾವನೊಬ್ಬ ಗೃಹಸ್ಥ ಮೊದಲು ಊಟಕ್ಕೆ ಕೂತರೆ ವೈದಿಕರೆಲ್ಲರೂ ತಮಗೆ ಅಪಮಾನವಾಯಿತೆಂದು ತಿಳಿದು ಒಮ್ಮೆಲೆ ಹೊರಟುಹೋಗುತ್ತಾರೆ.[೫೨]

ಬೆಳಗಾಂ, ಉತ್ತರ ಕನ್ನಡ, ಧಾರವಾಡ, ಬಿಜಾಪುರ ಈ ನಾಲ್ಕು ಜಿಲ್ಲೆಗಳಲ್ಲಿಯೂ ಸಹ ಒಂದೇ ರೀತಿಯ ಆಹಾರಪದ್ಧತಿ ಸ್ವಲ್ಪಮಟ್ಟಿಗೆ ಇದೆ. ಅಂದರೆ ಹೆಚ್ಚಿನ ಮಟ್ಟದಲ್ಲಿ ಮಾಂಸಾಹಾರಿಗಳು ಸಿಗುತ್ತಾರೆ. ಬ್ರಾಹ್ಮಣರು ಹಾಗೂ ಲಿಂಗವಂತರು ಮಾತ್ರ ಸಸ್ಯಾಹಾರಿಗಳು. ಇದರಲ್ಲಿಯೂ ಕೆಲವೊಬ್ಬರು ಮಾಂಸಾಹಾರಿಗಳಿದ್ದಾರೆ. ಧಾರವಾಡ, ಬಿಜಾಪುರ ಹಾಗೂ ಬೆಳಗಾಂನಲ್ಲಿ ರೊಟ್ಟಿಯನ್ನು ಹೆಚ್ಚಾಗಿ ಬಳಸುತ್ತಾರೆ.

ಆದರೆ ಕೆನರಾ ಪ್ರದೇಶದಲ್ಲಿ ರೊಟ್ಟಿಯ ಬಳಕೆ ಕಡಿಮೆ. ಆದರೆ ಪ್ರತಿದಿನ ಅನ್ನ ಹಾಗೂ ಮೀನು ಹೆಚ್ಚಾಗಿ ಸೇವಿಸುತ್ತಾರೆ. ತೀರ ಪ್ರದೇಶವಾದುದರಿಂದ ಮೀನನ್ನು ಹೆಚ್ಚಾಗಿ ತಿನ್ನುತ್ತಾರೆ. ಇಲ್ಲಿಯೂ ಸಹ ಸಿಹಿ ಪದಾರ್ಥಗಳೆಂದರೆ ಕಡುಬು, ಬೂಂದಿ-ಲಾಡು, ಅನ್ನದ ಪಾಯಸ ಹೆಚ್ಚಾಗಿ ಮಾಡುತ್ತಾರೆ. ಹಾಲಿನ ಕೀರು[೯೩] ಹೆಚ್ಚಾಗಿ ಮಾಡುತ್ತಾರೆ. ಹಾಲು ಅಕ್ಕಿ, ತೆಂಗಿನ ಹಾಲು, ಜೇನು ಬೆಲ್ಲ ಹಾಕಿ ಮಾಡಿದ ಕೀರು ಹೆಚ್ಚು ವಿಶೇಷವಾಗಿರುತ್ತದೆ. ಅಲ್ಲದೆ ಗೋಧಿ ಚಪಾತಿ, ರಾಗಿಯ ಉಪಯೋಗವು ಇಲ್ಲಿದೆ. ರೊಟ್ಟಿ ಮಾಡುವುದು ಕಡಿಮೆ. ಈ ಪ್ರದೇಶದಲ್ಲಿ ಪ್ರಾಣಿಗಳಾದ ಮೀನು ಬಿಟ್ಟರೆ, ಕುರಿಮಾಂಸ ನಂತರ ದನದ ಮಾಂಸ, ಜಿಂಕೆ ಇನ್ನಿತರೇ ಪ್ರಾಣಿಗಳನ್ನು ತಿನ್ನಲು ಉಪಯೋಗಿಸುತ್ತಾರೆ. ಒಟ್ಟಿನಲ್ಲಿ ಕೆನರಾ ಪ್ರದೇಶದಲ್ಲಿ ಹೋಳಿಗೆ ಉಪಯೋಗ ಕಡಿಮೆ. ಯಥಾಪ್ರಕಾರ ತರಕಾರಿಗಳು, ಮೀನು, ಮಾಂಸಾಹಾರ, ಅನ್ನ, ಚಿತ್ರಾನ್ನ, ವಾಂಗಿಬಾತ್, ವಡೆ, ದೋಸೆ, ಉದ್ದಿನ ವಡೆ ಸಾಮಾನ್ಯ ಆಹಾರವಾಗಿದ್ದವು. ಕೆಲವೊಮ್ಮೆ ಹಬ್ಬ, ಸಮಾರಂಭಗಳಲ್ಲಿ ಮದ್ಯ ಸೇವಿಸುವ ಅಭ್ಯಾಸವು ಕೆಲವು ಕಡೆ ಕಂಡುಬರುತ್ತದೆ.

ಬೆಳಗಾಂ, ಧಾರವಾಡ, ಬಿಜಾಪುರದ ಆಹಾರದಲ್ಲಿ ಒಂದೇ ರೀತಿಯ ಆಹಾರವನ್ನು ಕಾಣಬಹುದು. ಇಲ್ಲಿ ಹೆಚ್ಚಾಗಿ ರೊಟ್ಟಿ ಬಳಸುತ್ತಾರೆ. ಇಲ್ಲಿನ ಪ್ರತಿದಿನದ ಆಹಾರ ಅನ್ನ, ಹಿಟ್ಟಿನ ರೊಟ್ಟಿ, ದ್ವಿದಳಧಾನ್ಯಗಳ ಸಾರು ಅಥವಾ ಪಲ್ಯ, ಬೆಣ್ಣೆ, ಮೊಸರು, ಹಾಲು, ತರಕಾರಿಗಳ ಉಪಯೋಗ ಇರುತ್ತದೆ.[೯೪] ಜೊತೆಗೆ ಮಾಂಸಾಹಾರವಿರುತ್ತದೆ. ಮಟನ್, ಮೀನು ಇರುತ್ತದೆ. ಕೆಲವೊಂದು ಜನರು ಜಿಂಕೆ, ಹಸು ಇನ್ನಿತರ ಕಾಡುಪ್ರಾಣಿಗಳ ಆಹಾರವನ್ನು ಸೇವಿಸುತ್ತಾರೆ.[೯೫] ಹಬ್ಬಹರಿದಿನಗಳಲ್ಲಿ, ವಿಶೇಷ ದಿನಗಳಲ್ಲಿನ ಮುಖ್ಯವಾಗಿ ಹೋಳಿಗೆ, ಅನ್ನ, ಚಪಾತಿ, ಮಾಂಸದ ಆಹಾರವನ್ನು ತಯಾರಿಸುತ್ತಾರೆ. ಪಾಯಸ ತಯಾರಿಸಿದ್ದರೂ ಸಹ ಇಲ್ಲಿ ಹೆಚ್ಚಾಗಿ ಹೋಳಿಗೆಗೆ ವಿಶೇಷವಾದ ಸ್ಥಾನವಿದೆ. ಈಗಲೂ ಸಹ ಬೇಳೆಹೋಳಿಗೆ ಮಾಡುವುದರಲ್ಲಿ ಪ್ರಮುಖ ಸ್ಥಾನವಿದೆ.[೯೬]

ಕೆಲವೊಬ್ಬರು ವಿಶೇಷ ದಿನಗಳಲ್ಲಿ ಅನ್ನ ಮಾಡುವುದರಿಂದ ಆರ್ಥಿಕವಾಗಿ ದುರ್ಬಲರು ಎಂಬುದನ್ನು ಸೂಚಿಸುತ್ತದೆ. ಹಿಟ್ಟಿನ ರೊಟ್ಟಿ ಮಾಡುವುದರಿಂದಾಗಿ ಇಲ್ಲಿ ಜೋಳ, ಸಜ್ಜೆ, ನವಣೆಯು ಹೆಚ್ಚಾಗಿ ಬೆಳೆಯುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಮುಂಬಯಿ ಕರ್ನಾಟಕದ ಕೆನರಾ ಜಿಲ್ಲೆ ಬಿಟ್ಟರೆ ಉಳಿದ ಮೂರು ಜಿಲ್ಲೆಗಳಲ್ಲಿ ಆಹಾರ ಪದ್ಧತಿ ಒಂದೇ ರೀತಿ ಇರುವುದು ಸ್ಪಷ್ಟವಾಗುತ್ತದೆ. ಹಿಂದೂಗಳಲ್ಲದೆ ಮುಸಲ್ಮಾನರಲ್ಲಿ ಆಹಾರಪದ್ಧತಿಯು ಸ್ವಲ್ಪಮಟ್ಟಿಗೆ ವ್ಯತ್ಯಾಸವಿರುವುದು ಕಂಡುಬರುತ್ತದೆ. ಬಿರಿಯಾನಿ ಎಂದರೆ ಈರುಳ್ಳಿ, ಹಸಿಮೆಣಸಿನಕಾಯಿ, ಬೆಳ್ಳುಳ್ಳಿ, ಶುಂಠಿ, ಮಟನ್, ಬೆಣ್ಣೆ, ಅಕ್ಕಿ, ಉಪ್ಪು, ಮೆಣಸು ಇನ್ನಿತರೇ ಪದಾರ್ಥಗಳನ್ನು ಉಪಯೋಗಿಸಿಕೊಂಡು ಮಾಡುವ ಕಾರವಾದ ಆಹಾರ ಪದಾರ್ಥ.

ಜರ್ದಾ ಇದೊಂದು ಸಿಹಿಯಾದ ಆಹಾರ. ಇದನ್ನು ಅಕ್ಕಿ, Clarified, ಬೆಣ್ಣೆ, ಸಕ್ಕರೆ, ಬಾದಾಮಿ Safforon ಮತ್ತು Spices ಇವುಗಳನ್ನು ಸೇರಿಸಿ ಮಾಡುತ್ತಾರೆ. ರಂಜಾನ್, ಬಕ್ರೀದ್, ಮೊಹರಂ ಹಬ್ಬಗಳು ಹಾಗೂ ವಿಶೇಷ ಸಂದರ್ಭದಲ್ಲಿ ಈ ಆಹಾರ ತಯಾರಿಸುತ್ತಾರೆ. ಕೋಳಿ, ಮೊಟ್ಟೆ, ಕುರಿ ಮಾಂಸ, ಮೀನು

ಉಪಯೋಗಿಸುತ್ತಾರೆ. ಒಣಮೀನು ಹಾಗೂ ಹಸಿಮೀನು ಉಪಯೋಗಿಸುತ್ತಾರೆ. ಶ್ರೀಮಂತರು ಹಾಗೂ ಸಾಮಾನ್ಯರು ಗೋಧಿ ಉಪಯೋಗಿಸುತ್ತಾರೆ. ಹೆಚ್ಚಿನ ಮುಸಲ್ಮಾನರು ಟೀ, ಕಾಫಿ ಉಪಯೋಗಿಸುತ್ತಾರೆ. ಶ್ರೀಮಂತರು ಬ್ರೆಡ್ ಸಹ ಉಪಯೋಗಿಸುತ್ತಾರೆ. ಬೆಳಿಗ್ಗೆ ಹೊತ್ತು ಟೀ ಕುಡಿಯುವ ಬಗ್ಗೆ ಮಾಹಿತಿ ಇದೆ.[೫೭] ಜೊತೆಗೆ ಪ್ರತಿದಿನವೂ ಇವರಿಗೆ ಮಾಂಸಾಹಾರ ಇರಲೇಬೇಕು ಎಂಬುದು ತಿಳಿದುಬರುತ್ತದೆ.[೫೮]

ಕ್ರಿಶ್ಚಿಯನ್ನರ ಮುಖ್ಯವಾದ ಆಹಾರ ಅನ್ನ, ಮೀನು, ತರಕಾರಿಗಳು. ಪ್ರತಿದಿನ ಮೂರು ಹೊತ್ತು ಊಟ ಮಾಡುತ್ತಾರೆ. ಅನ್ನದ ಗಂಜಿ ಹಾಗೂ ಮಾವಿನ ಹಣ್ಣಿನ ಸೀಕರಣೆ, ಉಪ್ಪಿನಕಾಯಿ ಅಥವಾ ಫ್ರೈ ಮಾಡಿದ ಮೀನು ತಿನ್ನುತ್ತಾರೆ. ಮಧ್ಯಾಹ್ನ ತರಕಾರಿ ಸಾಂಬಾರ್, ಮಾಂಸದ ಸಾರು ತಿನ್ನುತ್ತಾರೆ. ರಾತ್ರಿಯೂ ಸಹ ಇದೇ ರೀತಿ ಮಾಡುತ್ತಾರೆ. ಕೆಲವೊಬ್ಬರು ಶ್ರೀಮಂತರು ಟೀ, ಕಾಫಿಯನ್ನು ಸಂಜೆ ಮತ್ತು ಬೆಳಗ್ಗೆ ಸೇವಿಸುತ್ತಾರೆ. ಅನ್ನ ಹಾಗೂ ಗೋಧಿ ಹಿಟ್ಟಿನ ರೊಟ್ಟಿ ಪ್ರತಿದಿನದ ಆಹಾರವಾಗಿದೆ.[೫೯] ಒಟ್ಟಿನಲ್ಲಿ ಕೆನರಾದಲ್ಲಿ ಅನ್ನ, ಮೀನು, ಪಾಯಸ ಪ್ರಮುಖವಾದ ಆಹಾರವಾದರೆ ಬಿಜಾಪುರ, ಬೆಳಗಾಂ, ಧಾರವಾಡದಲ್ಲಿ ಅನ್ನ, ರೊಟ್ಟಿ, ಹೋಳಿಗೆ ಪ್ರಮುಖವಾದ ವಿಶೇಷ ದಿನದ ಆಹಾರವಾಗಿತ್ತು. ಕೆನರಾದ ಆಹಾರ ಪದ್ಧತಿಯಲ್ಲಿ ವ್ಯತ್ಯಾಸವಿರುವುದು ಗಮನಿಸಬಹುದು. ಬ್ರಾಹ್ಮಣರು, ಲಿಂಗವಂತರು ಕೆಲವೊಬ್ಬರು ಈರುಳ್ಳಿ, ಬೆಳ್ಳುಳ್ಳಿ ತಿನ್ನುವುದಿಲ್ಲ[೬೦] ಎಂಬುದು ವಿಶೇಷವಾದದ್ದು.

**೩.೨.೭ ಮುಂಬಯಿ ಕರ್ನಾಟಕದ ಸಾಮಾಜಿಕ ವ್ಯವಸ್ಥೆ**

ಸಂಸ್ಕಾರ ವಿಧಿಗಳು: ಹುಟ್ಟಿನಿಂದ ಸಾಯುವವರೆಗೆ ಪ್ರಚಲಿತವಿರುವ ಸಂಸ್ಕಾರಗಳಲ್ಲಿ ಮದುವೆ, ಹೋಮ(ಮೈನೆರೆಯುವುದು) ಬಸುರಿ ಬಯಕೆ, ಬಾಣಂತಿ, ಹೆಸರಿಡುವುದು, ಜೌಳ(ಕೂದಲು ತೆಗೆಸುವುದು), ಸಾವು ಇವು ಮುಖ್ಯವಾಗಿದೆ. ಈ ಸಂಸ್ಕಾರಗಳ ಆಚರಣಾ ವಿಧಿಗಳು ಎಲ್ಲಾ ಕಾಲಘಟ್ಟಗಳಲ್ಲಿಯೂ ಒಂದೇ ಬಗೆಯಲ್ಲಿ ಇದ್ದಂತಿಲ್ಲ. ಅವು ಬೇರೆ ಬೇರೆ ಕಾಲಗಳಲ್ಲಿ ವಿವಿಧ ಗುಂಪುಗಳೊಂದಿಗೆ ಸಂಘರ್ಷ[೬೧] ಸಂಪರ್ಕ ಸಹಕಾರ ವೇರ್ಪಟ್ಟು ಕೊಡುಕೊಳ್ಳುವಿಕೆ ನಡೆದು ಮಾರ್ಪಾಡುಗಳಾಗಿ ಸಂಕೀರ್ಣಗೊಂಡಿದೆ.

ಪ್ರಾಚೀನ ಕಾಲದಿಂದಲೂ ಸಹ ಮದುವೆ ಎಂಬ ಸಂಪ್ರದಾಯವು ಬಾಲ್ಯವಿವಾಹವೆಂದು ಹೇಳಬಹುದು. ವಸಾಹತುಶಾಹಿ ಅಂದರೆ ಆಧುನಿಕ ಕಾಲಘಟ್ಟದಲ್ಲೂ ಸಹ ಬಾಲ್ಯವಿವಾಹ ಪದ್ಧತಿ ಸಂಪ್ರದಾಯಗಳು ಇದ್ದವು. ಮುಂಬಯಿ ಕರ್ನಾಟಕದಲ್ಲಿಯೂ ಸಹ ಬಾಲ್ಯವಿವಾಹ ಪದ್ಧತಿ ಇರುವುದನ್ನು ಎಲ್ಲಾ ಸಮುದಾಯ ಜಾತಿಗಳಲ್ಲಿ ಕಾಣಬಹುದಾಗಿದೆ. ಮುಖ್ಯವಾಗಿ ಹಿಂದೂ-ಮುಸಲ್ಮಾನರು, ಕ್ರಿಶ್ಚಿಯನ್ನರು ಇತರರೂ ಸಹ ಇದೇ ಪದ್ಧತಿ ಇಲ್ಲಿ ಅನುಸರಿಸುತ್ತಿದ್ದರು. ಇಲ್ಲಿ ವಯಸ್ಸಿನ ನಿಗದಿ ಎಂದರೆ ಪ್ರತಿಯೊಂದು ಸಮುದಾಯದಲ್ಲಿಯೂ ಸಹ ಗಂಡಿನ ಮದುವೆ ವಯಸ್ಸು ೯ ವರ್ಷದಿಂದ ಪ್ರಾರಂಭವಾಗಿ ೨೫ ಮತ್ತು ೩೦ ವರ್ಷದ ಒಳಗೆ ಮದುವೆ ಆಗಲಿಕ್ಕೇ ಬೇಕು. ಹೆಣ್ಣುಮಕ್ಕಳ ಲಗ್ನವು ಎಲ್ಲಾ ಸಮುದಾಯದಲ್ಲೂ ಐದರಿಂದ ಹದಿನೈದು ವರ್ಷ ಅಥವಾ ಹೆಚ್ಚು ಎಂದರೆ ಹದಿನೆಂಟು ವರ್ಷ ಜಾಸ್ತಿಯಾಗುತ್ತಿತ್ತು, ಇಲ್ಲದಿದ್ದರೆ ಕೂಸು ಇರುವಾಗಲೇ ವಿವಾಹ ನಿಶ್ಚಯಿಸಿ ೫ ವರ್ಷದಿಂದ ೧೫ ವರ್ಷಕ್ಕೆ ಆಗುವುದುಂಟು.[೬೨]

ಹೆಣ್ಣುಮಕ್ಕಳ ಲಗ್ನವು ನೆರೆಯುವ ಪೂರ್ವದಲ್ಲಿಯೂ ನೆರೆದ ಬಳಿಕ ಆಗುತ್ತದೆ. ಪ್ರಾರಂಭದಿಂದಲೂ ಸಹ ಮದುವೆಯ ಹೆಣ್ಣು-ಗಂಡುಗಳಿಗೆ ತಮ್ಮ ಜೀವನ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವಿರಲಿಲ್ಲ, ಆ ಸ್ವಾತಂತ್ರ್ಯ ಕುಟುಂಬದ ಹಿರಿಯರದಾಗಿತ್ತು. ಕೆಲವೊಮ್ಮೆ ವಧುವರರು ಪರಸ್ಪರ ನೋಡದೆ ಮದುವೆಯಾಗುವ ಪ್ರಸಂಗಗಳು ಇರುತ್ತಿದ್ದವು. ಗಂಡಿನ ಮನೆಯ ಯಜಮಾನ ತನ್ನ ಅಂತಸ್ತಿಗೆ ತಕ್ಕ ಮನೆತನದ ಹೆಣ್ಣಿನ ಕುಲ, ಬೆಡಗುಗಳನ್ನು ತನ್ನ ಹಿತೈಷಿಗಳಿಂದ ಕೇಳಿ ತಿಳಿದು ತನಗೆ ಒಪ್ಪಿಗೆಯಾದಲ್ಲಿ ಇಷ್ಟಮಿತ್ರರನ್ನು ಕರೆದುಕೊಂಡು ಒಳ್ಳೆಯ ಮುಹೂರ್ತವನ್ನು ನೋಡಿ, ಹೆಣ್ಣು ಕೇಳಲು ಹೆಣ್ಣಿನ ಮನೆಗೆ ಹೋಗುತ್ತಾನೆ. ಹೆಣ್ಣಿನವರೂ ಗಂಡಿನ ವಿಚಾರವಾಗಿ ತಮ್ಮ ಆಪ್ತರಲ್ಲಿ ವಿಚಾರಿಸಿ ತಿಳಿದು ತಮ್ಮ ಒಪ್ಪಿಗೆಯನ್ನು ತಿಳಿಸುತ್ತಾರೆ. ಆಮೇಲೆ ಹೆಣ್ಣಿನ ಮನೆಯಲ್ಲಿ ವಧು-ವರರ ಮನೆಯ ಆಪ್ತೇಷ್ಟರೆಲ್ಲ ನೆರೆದು ಮದುವೆಯ ಕೊಡುಕೊಳ್ಳುವ ವ್ಯವಹಾರ ಹಾಗೂ ಮದುವೆಯ ದಿನಾಂಕವನ್ನು ನಿಶ್ಚಯಿಸುತ್ತಾರೆ.[೬೩]

ಹುಡುಗನ ತಂದೆ-ತಾಯಿಗಳು ಹುಡುಗಿಯನ್ನು ನೋಡಿ ಅನಂತರ ತಮಗೆ ಗೊತ್ತಿರುವ ಪುರೋಹಿತರ ಬಳಿ ಹೋಗಿ ಹುಡುಗ-ಹುಡುಗಿಯ ಜನ್ಮಕುಂಡಲಿ ತೆಗೆದು ಅವರ ಜಾತಕ ಕೂಡಿಬಂದರೆ ಒಪ್ಪಿಕೊಳ್ಳುತ್ತಾರೆ. ಮದುವೆಯ ಕೊಡುಕೊಳ್ಳುವ ವ್ಯವಹಾರವನ್ನು ಹಾಗೂ ತೆಗೆದುಕೊಳ್ಳುವ ವಿಚಾರ ಮಾತನಾಡುತ್ತಾರೆ. ಒಳ್ಳೆಯ ದಿನ ನೋಡಿ ಮದುವೆಯ ಮುಹೂರ್ತವನ್ನು ನಿಗದಿಪಡಿಸುತ್ತಾರೆ.[೬೪] ಬ್ರಾಹ್ಮಣರಲ್ಲಿ ಮದುವೆಯು ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿ ಅಥವಾ ಕೆಲವು ಜಾತಿಗಳಲ್ಲಿ ಮೊದಲೇ ನಿಶ್ಚಯಿಸಿದಂತೆ ಗಂಡಿನ ಮನೆಯಲ್ಲಾಗಲಿ ನಡೆಸುವುದು ಸಂಪ್ರದಾಯವಾಗಿದೆ. ವೀಳ್ಯದ ಶಾಸ್ತ್ರ ಅಥವಾ ನಿಶ್ಚಿತಾರ್ಥಗಳಲ್ಲಿ ಮದುವೆಯ ಪ್ರಸ್ತಾಪ ನಿಶ್ಚಿತರೂಪ ತಾಳುತ್ತದೆ. ಬ್ರಾಹ್ಮಣರಲ್ಲಿ ಹಾಗೂ ವೈದಿಕ ಸಂಪ್ರದಾಯವನ್ನನುಸರಿಸುವ ಜಾತಿಗಳಲ್ಲಿ ವರಪೂಜೆ. ವರ ಮತ್ತು ವರನ ತಂದೆ-ತಾಯಿಗಳನ್ನು ಗೌರವದಿಂದ ಬರಮಾಡಿಕೊಳ್ಳುವುದು ನಾಂದಿ(ವಧುವರರ ಪೂರ್ವಜರನ್ನು ಆಹ್ವಾನಿಸುವುದು) ಕಂಕಣಧಾರಣ ವಧುವರರಿಗೆ ಅಕ್ಷತೆ ಹಾಕುವುದು, ಗುರುಹಿರಿಯರಿಂದ ಆಶೀರ್ವದಿಸಿದಾಗ ಮಂಗಳಸೂತ್ರವನ್ನು ಕಟ್ಟುವುದು ಪೂಜಹೋಮ(ಅಗ್ನಿಹೋಮದಲ್ಲಿ ಭತ್ತದ ಅರಳನ್ನು ಅರ್ಪಿಸುವುದು) ಮತ್ತು ಸಪ್ತಪದಿ ವಧುವರರು ಪವಿತ್ರ ಅಗ್ನಿಕುಂಡದ ಸುತ್ತಲೂ ಏಳು ಹೆಜ್ಜೆಗಳನ್ನು ಹಾಕುವುದು ವಿವಾಹ ಧಾರ್ಮಿಕ ವಿಧಿಗಳಲ್ಲಿ ಮುಖ್ಯವಾದುವು. ಹೈಗಬ್ರಾಹ್ಮಣರಲ್ಲಿ ಇತರ ಬ್ರಾಹ್ಮಣರಂತೆ ೧೬ ಸಂಸ್ಕಾರಗಳು ನಡೆಯುತ್ತವೆ. ಕನ್ಯಾವಿಕ್ರಯದ ನಡಾವಳಿ ಇವರಲ್ಲಿ ವಿಶೇಷ. ಘನವಂತರು ವರದಕ್ಷಿಣೆಯನ್ನು ಕೊಡುವರು. ಬ್ರಾಹ್ಮಣರಲ್ಲಿ ಹೆಚ್ಚಾಗಿ ನಾಲ್ಕು ದಿನಗಳ ಮಟ್ಟಿಗೆ ಮದುವೆ ಕಾರ್ಯ ನಡೆಯುತ್ತದೆ. ಮದುವೆ ಸಂದರ್ಭವನ್ನು ದೊಡ್ಡದಾದ ಹಾಲ್‌ನಲ್ಲಿ ಎತ್ತರವಾದ ಪೀಠದಲ್ಲಿ ಮಾಡುತ್ತಾರೆ. ಇವುಗಳನ್ನು ಮಾವಿನ ಎಲೆಗಳಿಂದ ತಳಿರುತೋರಣಗಳಿಂದ ಅಲಂಕರಿಸಿರುತ್ತಾರೆ. ಮೊದಲು ಚಪ್ಪರಕ್ಕೆ ಪೂಜೆ ಮಾಡಿದ ನಂತರ ಮದುವೆ ಕಾರ್ಯ ಪ್ರಾರಂಭಿಸುತ್ತಾರೆ.

ದೇಶದೊಳಗೆ ಋಗ್ವೇದಿಗಳ ಸಂಖ್ಯೆಯು ಬಹಳ ಇದ್ದು ಅದು ಅಪಸ್ತಂಬದ ಕೂಡ ಲಗ್ನ ವ್ಯವಹಾರವನ್ನು ಮಾಡುತ್ತಾರೆ. ಇವರೆಡೂ ಶಾಖೆಯವರು ಸೋದರಳಿಯಂದಿರಿಗೆ ತಮ್ಮ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಟ್ಟರೆ ಪುಣ್ಯ ಬರುತ್ತದೆಂದು ತಿಳಿಯುವರು. ಒಮ್ಮೊಮ್ಮೆ ಸೋದರಮಾವನು ತನ್ನ ಸೋದರಸೊಸೆ

ಯನ್ನು ಲಗ್ನವಾಗುತ್ತಾನೆ. ಶ್ವೇತ ಮತ್ತು ಕೃಷ್ಣ ಯಜುರ್ವೇದಿಯರ ಪರಸ್ಪರ ಲಗ್ನ ಸಂಬಂಧವಾಗುವುದಿಲ್ಲ. ಮಾಧ್ಯಂದಿನರು ದೇಶಸ್ಥರೊಳಗೆ ಕಡಿಮೆ ಸಂಖ್ಯೆಯ ಬ್ರಾಹ್ಮಣರು ಋಗ್ವೇದಿಗಳಂತೆ ಇವರು ತಮ್ಮ ಹೆಣ್ಣುಮಕ್ಕಳನ್ನು ಸೋದರಳಿಯಂದಿರಿಗೆ ಲಗ್ನ ಮಾಡಿಕೊಡುವುದಿಲ್ಲ. ದೇಶಸ್ಥರು ಮಿತವ್ಯಯಿಗಳಲ್ಲಿ ಮನಸ್ಸಿಗೆ ಬಂದಂತೆ ಖರ್ಚು ಮಾಡುವರು. ಧಾರವಾಡದ ದೇಶಸ್ತರು ಲಗ್ನದ ಮೂರನೇ ದಿವಸ ಮೆರವಣಿಗೆಯಲ್ಲಿ ಮಧುಮಗನನ್ನು ಕುದುರೆಯ ಮೇಲೆ ಕುಳ್ಳಿರಿಸಿ ಮಧುಮಗಳನ್ನು ಪಲ್ಲಕ್ಕಿಯಲ್ಲಿ ಕೂಡಿಸುವರು. ಅವರಿಬ್ಬರಿಗೆ ಮುಸಲ್ಮಾನರಂತೆ ಮುಸುಕು ಹಾಕಿ ಮಧುಮಗನ ಕೈಯಲ್ಲಿ ಕತ್ತಿಢಾಲುಗಳನ್ನು ಕೊಡುವರು. ಮಧುಮಗಳಿಗೆ ಬುರಕಿ ಹಾಕುವರು. ಜೊತೆಗೆ ವಿವಾಹದ ಆಚರಣೆ, ಭಿನ್ನತೆಯನ್ನು ಕಾಣಬಹುದು. ಹೇಗೆಂದರೆ ಹೈಗದ ಬ್ರಾಹ್ಮಣರಲ್ಲಿ ಲಗ್ನದ ಮೂರನೇ ದಿವಸ ವಧುವರರು ಸಮಾರಂಭದಿಂದ ಕೆರೆಯ ದಂಡಿಗೆ ಹೋಗಿ ನೀರೊಳಗೆ ಅಕ್ಕಿಕಾಳು ಚೆಲ್ಲಿ ಮೀನುಗಳು ಅವನ್ನು ತಿನ್ನಲಿಕ್ಕೆ ಬಂದ ಕೂಡಲೇ ಪಂಚೆಯಲ್ಲಿ ಅದನ್ನು ಹಿಡಿಯುವರು. ತರುವಾಯ ಒಂದೇ ಮೀನನ್ನಿಟ್ಟುಕೊಂಡು ಅದರ ಮೈಮಲವನ್ನು ಇಬ್ಬರೂ ಹಣೆಗೆ ಹಚ್ಚಿಕೊಂಡು ಮನೆಗೆ ಹೋಗುವರು.[೬೯]

ಲಿಂಗಾಯತರು ನೆರವೇರಿಸುವ ಮದುವೆಗಳಲ್ಲಿ ಹೋಮಕ್ಕೆ ಅವಕಾಶವಿರುವುದಿಲ್ಲ. ಇದಕ್ಕೆ ಬದಲಾಗಿ ಪಂಚಕಳಶದ ಪ್ರತಿಷ್ಠಾಪನೆ, ಸುರಿಗೆ ಸುತ್ತುವುದು, ಅರಿಶಿನಧಾರಣೆ ಮುಂತಾದ ಧಾರ್ಮಿಕ ವಿಧಿಗಳನ್ನು ಆಚರಿಸುತ್ತಾರೆ. ಲಿಂಗವಂತರ ಮೂರು ಜಾತಿಗಳಲ್ಲಿ(ಪಂಚಮರು, ಶೀಲವಂತರು, ಜಂಗಮರು) ಪಂಚಮಸಾಲಿ ಯವರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಇದೇ ಮೇರೆಗೆ ಕೆಳಗಿನ ಜಾತಿಯವರ ಹೆಣ್ಣನ್ನು ಮೇಲಿನ ಜಾತಿಯವರು ಮಾಡಿಕೊಳ್ಳಬಹುದು. ಆ ಹೆಣ್ಣಿಗೆ ದೀಕ್ಷೆಯನ್ನು ಮಾತ್ರ ಕೊಡಬೇಕಾಗುತ್ತದೆ. ಆದರೆ ಶೀಲವಂತರು ತಮ್ಮ ಹೆಣ್ಣುಮಕ್ಕಳನ್ನು ಜಂಗಮರಿಗೆ ಬಹುತೇಕ ಕೊಡುವುದಿಲ್ಲವೆಂದು ತೋರುತ್ತದೆ. ಮೇಲಿನ ಜಾತಿಯವರು ತಮ್ಮ ಹೆಣ್ಣುಮಕ್ಕಳನ್ನು ಪಂಚಮಸಾಲಿಯವರಿಗೆ ಕೊಡುವ ನಡಾವಳಿಯುಂಟು. ಜಂಗಮರು ಪಂಚಮಸಾಲಿಯವರ ಹೆಣ್ಣು ಮಾಡಿಕೊಳ್ಳುವುದು ಅಪರೂಪ. ಮತ್ತೊಂದು ತೆಲುಗು ಬಾಜಿಗರ ಪದ್ಧತಿ ಎಂದರೆ ಲಗ್ನದಲ್ಲಿ ಭೋರ ಜಗುಲಿಯ ಎಡಬಲದಲ್ಲಿ ಹೊಸ ಗಡಿಗೆಗಳ ಅಡಕಲು ಏರಿಸಿ ಇಡುವರು, ಸಸಿಗಳನ್ನು ಹಾಕಿಡುವರು. ನಾಲ್ಕನೇ ದಿವಸ ಆ ಅಡಕಲುಗಳಲ್ಲಿಯ ಗಡಿಗೆಗಳನ್ನು ತೆಗೆದು ಅವುಗಳಲ್ಲಿ ನೀರು ತುಂಬಿ ಕೆಲವೊಂದರೊಳಗೆ ಉಂಗುರವನ್ನಾಗಲಿ, ನತ್ತನ್ನಾಗಲಿ ಹಾಕಿ ಮಧುಮಕ್ಕಳನ್ನು ಹುಡುಕಲಿಕ್ಕೆ ಹಚ್ಚುವರು. ಇದಕ್ಕೆ ನಾಗಾವಳಿಯೆನ್ನುವರು. ಅಲಂಕಾರವನ್ನು ಹುಡುಕಿ ತೆಗೆದವರು ಮುಂದೆ ಮನೆಯ ಹಿರಿತನವನ್ನು ಪಡೆಯಲೆಂಬುದು ಇವರ ನಂಬಿಕೆಯಾಗಿದೆ. ಭೋವೆಯರು ತಮ್ಮ ಲಗ್ನಕಾರ್ಯಕ್ಕೆ ಪೋರ್ಕರ್ಣ ರೆಂಬ ಬ್ರಾಹ್ಮಣರನ್ನು ಮುಂಬಯಿಯಿಂದ ಕರೆಯುವರು. ಅಗಲವಾಲರು ಇವರ ಲಗ್ನಕಾರ್ಯದಲ್ಲಿ ವಿಶೇಷ ವೆಂದರೆ ಒಂದು ಕಂಬ ನಡಿಸಿ ಅದರ ಮುಂದೆ ಗೋಧಿ ಹರವಿ, ಲಗ್ನದ ಪೂರ್ವ ದಿವಸ ಆ ಗೋಧಿಯ ಮೇಲೆ ನೀರಿನ ಪಾತ್ರೆಯನ್ನಿಟ್ಟು ಅದರ ಮೇಲೆ ಒಂದು ದೀಪ ಹಚ್ಚಿ ಇಡುವರು. ಮಧುಮಕ್ಕಳು ಲಗ್ನದ ಕಾರ್ಯಕ್ಕೆ ಆ ದೀಪದೆದುರಿಗೆ ಕೂಡುವರು.

ರಜಪೂತರ ಪದ್ಧತಿಯು ವಿಶೇಷವಾದುದಾಗಿದೆ. ಲಗ್ನದ ಕಾಲಕ್ಕೆ ಮಧುಮಗನು ಒಂದು ಕಂಬಕ್ಕೆ ಏಳು ಪ್ರದಕ್ಷಿಣೆಗಳನ್ನು ಹಾಕಿ ನಿಂತ ಬಳಿಕ ಹೆಣ್ಣಿನ ತಂದೆಯು ಇವನ ದುರಾಚಾರಗಳೇನಾದರೂ ನಿಮಗೆ ಗೊತ್ತುಂಟೋ ಎಂದು ನೆರೆದ ಜನರಿಗೆ ಕೇಳುವನು. ಏನೂ ಇಲ್ಲವೆಂದು ಅವರು ಉತ್ತರ ಹೇಳಿದ ಬಳಿಕ ಲಗ್ನದ ಸಮಾರಂಭವಾಗುವುದು. ಮಾಕ್ಲರು, ಬ್ರಾಹ್ಮಣರನ್ನು ಲಗ್ನಕಾರ್ಯಕ್ಕೆ ಕರೆಯುವರು. ಮಧುಮಗನನ್ನು ಆಸ್ತಿಕಲ್ಲಿನ ಮೇಲೆ ಮಧುಮಗಳನ್ನು ಬುಟ್ಟಿಯೊಳಗೆ ಜೋಳ ಹಾಕಿ ಆ ಜೋಳದ ಮೇಲೆ ನಿಲ್ಲಿಸಿ ನಡುವೆ ನಾಂದಿ ಬರೆದ ಅಂತಃಪಟ ಹಿಡಿದು ಅಕ್ಕಿಕಾಳು ಹಾಕುವರು. ಕಬ್ಬೇರು ಎನ್ನುವವರು ಲಗ್ನದಲ್ಲಿ ವಧುವರರ ನಡುವೆ ಅಂತಃಪಟ ಹಿಡಿದು ಅಕ್ಕಿಕಾಳಿಗೆ ಬದಲಾಗಿ ಜೋಳದ ಕಾಳುಗಳನ್ನು ಅವರ ಮೇಲೆ ಚೆಲ್ಲುವರು.[೬೬]

ಬುಡಕಟ್ಟು ಸಮುದಾಯದ ಹಾಲಕ್ಕಿ ಒಕ್ಕಲಿಗರು ತಮ್ಮ ವಿವಾಹದ ಸಮಾರಂಭದ ಯಾವ ಸಂಸ್ಕಾರಕ್ಕೂ ಬ್ರಾಹ್ಮಣರನ್ನು ಕರೆಯುವುದಿಲ್ಲ. ಹೆಣ್ಣುಮಕ್ಕಳು ನೆರೆದ ಬಳಿಕ ವಿವಾಹ ಮಾಡುವರು. ಲಗ್ನದ ಮೊದಲ ದಿವಸ ಬೆಳಗ್ಗೆ ಮಧುಮಕ್ಕಳಿಗೆ ಅರಿಶಿಣ ಹಚ್ಚುವರು. ಈ ದಿವಸ ಮಧುಮಕ್ಕಳು ಅವರ ತಂದೆ-ತಾಯಿಗಳು ಸಂಜೆಯತನಕ ಉಪವಾಸ ಮಾಡಿ ಕುಲದೇವರ ಪೂಜೆ ಮಾಡಿ ಊಟ ಹಾಕುವರು. ಮೂರು ತಾಸು ರಾತ್ರಿಯಾದ ಬಳಿಕ ಮಧುಮಗನು ಲಗ್ನಕ್ಕೆ ಹೊರಡುವನು. ಅವನ ಸಂಗಡ ಅವರ ಮನೆಯವರೂ, ಬಳಗದವರೂ ಸಮಾರಂಭದಿಂದ ದೀವಟಿಗೆಯ ಬೆಳಕಿನಲ್ಲಿ ನಡೆಯುವರು.

ಕಳಸಗಿತ್ತಿಯು ಕಳಸ ತಕ್ಕೊಂಡು ಹೊರಡುವಳು. ಮಧುಮಗನ ಬಳಗದವನೊಬ್ಬನು ಬೆತ್ತದ್ದೊಂದು ಪೆಟ್ಟಿಗೆಯಲ್ಲಿ ಮೂರು ಸೀರೆಗಳು, ಕುಂಕುಮ, ಕಾಡಿಗೆ, ಕರಡಿಗೆಗಳು, ಹಣಿಗೆ ಹೂಗಳು, ಮಂಗಳಸೂತ್ರ, ವಸ್ತ್ರಗಳು ಇಷ್ಟೆಲ್ಲ ಹಾಕಿಕೊಂಡು ಅದನ್ನು ತಕ್ಕೊಂಡು ನಡೆಯುವನು. ಮಧುಮಗನು ಸಮೀಪಕ್ಕೆ ಬಂದನೆಂದರೆ ಹೆಣ್ಣಿನ ತಂದೆಯು ಎದುರಿಗೆ ಹೋಗಿ ಅವನ ಕಾಲು ತೊಳೆದು ತುಳಸಿಗೆ ನಮಸ್ಕಾರ ಮಾಡಿಸಿ ಮನೆಯೊಳಗೆ ಕರೆದುಕೊಂಡು ಹೋಗುವನು, ಆಗ ಮಧುಮಗನು ಮಧುಮಗಳಿಗೆ ಒಂದು ಸೀರೆಯನ್ನು ಕೊಟ್ಟು ಹೊರಗೆ ಬಂದು ಹಂದರದೊಳಗೆ ನಿಲ್ಲಿಸಿ ಅತ್ತಿ ಟೊಂಗೆಗಳ ಮಂಟಪದ ಬಳಿಯಲ್ಲಿ ಒಂದು ಮಣೆಯ ಮೇಲೆ ಕೂರುತ್ತಾನೆ. ಮಧುಮಗಳು ಆ ಹೊಸ ಸೀರೆಯನ್ನುಟ್ಟುಕೊಂಡು ಬಂದು ಮಧುಮಗನ ಬಳಿಯಲ್ಲಿ ಬೇರೊಂದು ಮಣೆಯ ಮೇಲೆ ಕೂಡುವಳು. ತರುವಾಯ ಮುತ್ತೈದೆಯರು ಇಬ್ಬರ ಕೈಗೂ ಅರಿಶಿಣ ಹಚ್ಚಿ ಸ್ನಾನದ ನಂತರ ಇಬ್ಬರೂ ಎದ್ದು ಅತ್ತಿ ಟೊಂಗೆಗಳ ಮಂಟಪದೊಳಗೆ ಹಾದು ಅದಕ್ಕೆ ಮೂರು ಪ್ರದಕ್ಷಿಣೆಗಳನ್ನು ಹಾಕಿ ಬಳಿಯಲ್ಲಿ ಒಂದು ಮಂಚದ ಹತ್ತಿರ ಎದುರುಬದುರಾಗಿ ನಿಲ್ಲುವರು. ಬಳಿಕ ಇಬ್ಬರ ನಡುವೆ ಅಂತಃಪಟ ಹಿಡಿದ ಕೂಡಲೇ ಮಧುಮಗಳ ತಂದೆ-ತಾಯಿಯವರು ಆಕೆಯ ಬಲಗೈಯನ್ನು ಮಧುಮಗನ ಬಲಗೈಯಿಂದ ಹಿಡಿಸಿ ಅವರಿಬ್ಬರ ಕೈಮೇಲೆ ಆಕಳ ಹಾಲು ಎರಚುವರು. ತರುವಾಯ ಅಂತಃಪಟ ತೆಗೆದು ಇಬ್ಬರನ್ನು ಮಂಚದ ಮೇಲೆ ಕೂಡಿಸಿದ ಬಳಿಕ ನೆರೆದ ಜನರು ನಿಮಗೆ ಕಲ್ಯಾಣವಾಗಲೆಂದು ನುಡಿದು ಇಬ್ಬರ ಮೇಲೆ ಅಕ್ಕಿಕಾಳು ತೂರುವರು. ಅದೇ ಕಾಲಕ್ಕೆ ಮಧುಮಗನು ಹೆಂಡತಿಯ ಕೊರಳಲ್ಲಿ ಮಂಗಳಸೂತ್ರ ಕಟ್ಟಿ ಮತ್ತೊಂದು ಸೀರೆ ಕೊಡುವನು. ಇದೇ ಸಂದರ್ಭದಲ್ಲಿ ಹಣೆಗೆ ಕಾಡಿಗೆ, ಆಭರಣಗಳು, ಹೂಗಳು ಇವನ್ನೆಲ್ಲ ಕೊಡುತ್ತಾರೆ. ಬಳಿಕ ಮುತ್ತೈದೆಯರು ಆರತಿ ಮಾಡಿದ ನಂತರ ಮಧುಮಗಳ ಸೋದರಮಾವನು ಆ ಗಂಡ-

ಹೆಂಡಿರ ಸೆರಗುಗಳಿಗೆ ಗಂಟುಹಾಕಿ ಮನೆಯೊಳಗೆ ದೇವರಿಗೆ ನಮಸ್ಕಾರ ಮಾಡಲಿಕ್ಕೆ ಅವರನ್ನು ಕರೆದುಕೊಂಡು ಹೋಗುವನು. ಕೊನೆಗೆ ಮಧುಮಕ್ಕಳು ಬೇರೆ-ಬೇರೆ ತಟ್ಟೆಗಳಲ್ಲಿ ಭೋಜನ ಮಾಡುವರು. ಇದೇ ಪದ್ಧತಿಯನ್ನು ಹಿಂದೂ ಸಂಪ್ರದಾಯದಲ್ಲಿ ಅನುಸರಿಸುತ್ತಾರೆ. ಸ್ವಲ್ಪಮಟ್ಟಿಗೆ ಬದಲಾವಣೆಗಳಿರುತ್ತವೆ. ಕೆಲವೊಂದು ಧರ್ಮದಲ್ಲಿ ಬ್ರಾಹ್ಮಣ ಪುರೋಹಿತರನ್ನು ಅಥವಾ ಜಂಗಮರನ್ನು ಕರೆಸುವರು. ಆಮೇಲೆ ಕೆಲವರು ಊರ ದೇವರಿಗೆ ದರ್ಶನ ಮಾಡಿಸುತ್ತಾರೆ. ಅನಂತರ ಎತ್ತಿನ ಮೇಲೆ ಮೆರವಣಿಗೆ ಮಾಡಿಸುತ್ತಾರೆ.[೬೭]

ಹೆಚ್ಚಾಗಿ ಮದುವೆ ಸಂದರ್ಭದಲ್ಲಿ ವಧುವರರಿಗೆ ಹೂವಿನ ಮಾಲೆ ಒಬ್ಬರಿಗೊಬ್ಬರು ಹಾಕಿಕೊಳ್ಳುತ್ತಾರೆ. ಐದುಜನ ಮುತ್ತೈದೆಯರು ಅರಿಶಿನಹಚ್ಚಿ ಬಿಸಿ ನೀರಿನಿಂದ ಸ್ನಾನ ಮಾಡಿಸುತ್ತಾರೆ. ಕೆಲವೊಬ್ಬರು ಮುಹೂರ್ತದ ಸಂದರ್ಭದಲ್ಲಿ ಬಿಳಿಬಣ್ಣದ ಸೀರೆ, ರವಿಕೆ ಧರಿಸಿದರೆ ಪುರುಷನು ಬಿಳಿಬಣ್ಣದ ಅಂಗಿ ಮತ್ತು ಧೋತ್ರವನ್ನು ಧರಿಸುತ್ತಾನೆ.[೬೮]

ಕೆಲವೊಬ್ಬರು ಕಂಬಳಿ ಮೇಲೆ ಅಕ್ಕಿಯಿಂದ ಚಿತ್ರ ಬರೆದು ಅದರ ಮೇಲೆ ಇಬ್ಬರನ್ನು ಕೂರಿಸುತ್ತಾರೆ. ಶಾಸ್ತ್ರ ಮಾಡುತ್ತಾರೆ.[೬೯] ಅನುಕೂಲಸ್ಥರು ನಾಲ್ಕು ಅಥವಾ ಐದು ದಿನಗಳ ಕಾಲ ಮದುವೆ ಮಾಡಿಸುತ್ತಾರೆ. ಹೆಚ್ಚಾಗಿ ಅತಿ ಬಡವರು ಮಾತ್ರ ಒಂದು ದಿನದಲ್ಲಿ ಮದುವೆಯನ್ನು ಮುಗಿಸುತ್ತಾರೆ.[೭೦] ಅತಿ ಸರಳ ವಿವಾಹವನ್ನು ಪಿಚಾವೆಯರು(Mangs-Madigers) ಕೇವಲ ಒಂದೇ ದಿನ ನಡೆಸುತ್ತಾರೆ. ಅಲ್ಲದೆ ವಡ್ಡರ ವಿವಾಹವು ಸರಳವಾಗಿರುತ್ತದೆ. ಲಗ್ನಕ್ಕೆ ಮಂಗಳಸೂತ್ರ, ಬಳೆ, ಹೂ, ಕುಬಸ, ಬಾಸಿಂಗ ಇವು ಬೇಕಾಗುವುದಿಲ್ಲ. ಲಗ್ನವಾದ ಬಳಿಕ ಮಧುಮಕ್ಕಳು ಗುಡಿಯಿಂದ ಮನೆಗೆ ಬರುವಾಗ ಐದು ಮನೆಗಳಿಗೆ ಹೋಗಿ ಹಿರಿಯರಿಗೆ ನಮಸ್ಕಾರ ಮಾಡಬೇಕು ಅಷ್ಟೆ.[೭೧] ಲಗ್ನದ ಖರ್ಚು ಹೆಚ್ಚಾಗಿ (£ ೮) ಲೆಕ್ಕದಂತೆ ೮೦ರಿಂದ ಪ್ರಾರಂಭವಾಗಿ (£ ೨೫) ೨೫೦ರ ಮಟ್ಟಿಗೆ ಖರ್ಚು ಹಿಡಿಯುತ್ತದೆ. ಹೆಚ್ಚಾಗಿ ಎಲ್ಲರೂ ೧೦೦ ರೂಪಾಯಿಯನ್ನು ಖರ್ಚು ಮಾಡುವುದು ಜಾಸ್ತಿ[೭೨]

ಹಿಂದೂಗಳಲ್ಲಿ ಅನೇಕ ಜಾತಿಗಳಲ್ಲಿ ಪುನರ್‌ವಿವಾಹಕ್ಕೆ ಅನುಮೋದನೆ ಇದೆ. ಪಾರಂಪರಿಕವಾಗಿ ಕೆಲವು ಜಾತಿಗಳಲ್ಲಿ ಮಾತ್ರ ವಿವಾಹ ವಿಚ್ಛೇದನಕ್ಕೆ ಅವಕಾಶವಿಲ್ಲ. ಈ ರೀತಿಯ ವಿವಾಹಕ್ಕೆ 'ಉಡಿಕೆ' ಎಂದೇ ಕರೆಯುತ್ತಾರೆ. ಹೆಚ್ಚಾಗಿ ಬ್ರಾಹ್ಮಣರು, ಲಿಂಗವಂತರು ಹಾಗೂ ಜೈನರಲ್ಲಿ ವಿಧವಾ ವಿವಾಹ ಪದ್ಧತಿ ಇಲ್ಲವೆಂದು ಹೇಳಬಹುದು. ಹಿಂದೂಗಳಲ್ಲಿ ವಿಧವೆಯರ, ವಿಧುರರ ವಿವಾಹ ನಡೆಯುತ್ತದೆ. ಕೊಮರ ಪೈಕರಲ್ಲಿ ವಿಧವೆ ಲಗ್ನ ಮಾಡಿಕೊಳ್ಳಬಹುದು. ಗಂಡಸಾಗಲಿ, ಹೆಂಗಸಾಗಲಿ ಮೂರನೇ ಸಾರಿ ಯಾರನ್ನಾದರೂ ಲಗ್ನ ಮಾಡಿಕೊಳ್ಳುವರು. ಆದರೆ ಅವರು ಬೇಗ ಸಾಯುತ್ತಾರೆ ಎನ್ನುವ ನಂಬಿಕೆ ಇದೆ. ಆದ್ದರಿಂದ ಗಂಡಸು ಮೂರನೇ ಲಗ್ನವನ್ನು ಬಾಳೆಗಿಡದ ಜೊತೆ ಮಾಡಿಕೊಂಡು ಲಗ್ನವಾದ ಕೂಡಲೆ ಅದನ್ನು ಕಡಿದು ಚೆಲ್ಲುವನು. ಹೆಂಗಸು ಮೂರನೇ ಲಗ್ನವನ್ನು ಗಂಡು ಕೋಳಿ ಜೊತೆ ಮಾಡಿಕೊಂಡು ಕೂಡಲೆ ಚೂರಿಯಿಂದ ಅದರ ಕುತ್ತಿಗೆ ಕೊಯ್ದು ಚೆಲ್ಲುವಳು. ಕೊರಚರಲ್ಲಿ ಏಳು ಸಾರಿ ವಿಧವೆಯರು ಲಗ್ನ ಮಾಡಿಕೊಳ್ಳಬಹುದು. ಒಟ್ಟಿನಲ್ಲಿ ವಿಧುರಾ-ವಿಧವಾ ವಿವಾಹಕ್ಕೆ ಹೆಚ್ಚಿನ ಅಡ್ಡಿಗಳು ಇರಲಿಲ್ಲ. ಕೆಲವೊಬ್ಬರು ಕಲಾವಂತರು, ದಾಸರು, ಇತರೇ ಹೆಂಗಸರು, ವೇಶ್ಯೆವೃತ್ತಿಯನ್ನು ಮಾಡಿಕೊಂಡು ಜೀವಿಸುವರೆಂದು ತಿಳಿಯುತ್ತದೆ.[೭೩]

ಮುಸ್ಲಿಮರ ವಿವಾಹವು ಇಲ್ಲಿ ಕಾಣಸಿಗುತ್ತದೆ. ಮುಂಬಯಿ ಕರ್ನಾಟಕದ ಧಾರವಾಡ ಗ್ಯಾಸೆಟಿಯರ್‌ನಲ್ಲಿ ಮುಸ್ಲಿಮರ ಬಗ್ಗೆ ಮಾಹಿತಿ ಸಿಗುವುದಿಲ್ಲ. ಮುಸ್ಲಿಮರಲ್ಲಿ ವಿವಾಹವು ಒಂದು ಸಾಮಾಜಿಕ ಒಪ್ಪಂದವಾಗಿದ್ದು ವಿಧಿವತ್ತಾಗಿ ನಡೆಯುತ್ತದೆ. ಇವರಲ್ಲಿ ಮದುವೆಯು ಐದು ದಿನಗಳವರೆಗೆ ನಡೆಯುತ್ತದೆ. ಹುಡುಗಿಯು ವಯಸ್ಸಿಗೆ ಬಂದಾಗ, ಹುಡುಗನಿಗೆ ೧೬ರಿಂದ ೨೫ ವರ್ಷದೊಳಗೆ ಆಗಬೇಕು. ಹುಡುಗಿಗೆ ವಧುದಕ್ಷಿಣೆಯನ್ನು ಕೊಟ್ಟು ವಿವಾಹ ಮಾಡುತ್ತಾರೆ. ಇದನ್ನೇ 'ಮಹಾರ್' ಎಂದು ಕರೆಯುತ್ತಾರೆ. ಮದುವೆಯ ದಿನ ಮಧುಮಗನಿಗೆ ವಿವಾಹದ ಬಟ್ಟೆಯನ್ನು ತೊಡಿಸಿ ರುಮಾಲಿನಿಂದ ಇಳಿಬಿಟ್ಟ 'ಸ್ನೇಹರಾ' ಅಥವಾ 'ಹೂಮಾಲೆ'ಗಳಿಂದ ಮುಖವನ್ನು ಮುಚ್ಚುವಂತೆ ಮಾಡುವರು. ಅನಂತರ ಮಧುಮಗನನ್ನು ಬಂಧು ಮಿತ್ರರೊಂದಿಗೆ ಮೆರವಣಿಗೆಯಲ್ಲಿ ಮದುವೆ ಮಂಟಪಕ್ಕೆ ಕರೆತರುವರು. ಮದುವೆ ಮಂಟಪದಲ್ಲಿ ಗಂಡುಹೆಣ್ಣಿನ ಎರಡು ಕಡೆಯವರು ಕುಳಿತುಕೊಂಡ ಮೇಲೆ ವಿವಾಹ ವಿಧಿಗಳು ಆರಂಭವಾಗುವವು. ಇವರಲ್ಲಿ ಬಾಜಿಯು ಪುರೋಹಿತರಂತೆ ಕೆಲಸ ಮಾಡುವರು. ವರನು ವಧುವಿಗೆ ವಿಶಿಷ್ಟ ಉಡುಗೊರೆ ಅಥವಾ ಮಹಾರ್‌ನ್ನು ಕೊಡುವನು ಆಗ ಬಾಜಿಯು 'ನಿಕಾ' ಎನ್ನುತ್ತಾರೆ. ಹಿಂದೂಗಳ ಸಂಪ್ರದಾಯದಂತೆ ಲಜ್ಜಾ(ಕರಿಮಣಿ) ಉಪಯೋಗಿಸುತ್ತಾರೆ. ಆದರೆ ಇದನ್ನು ವರನಿಗೆ ಬದಲಾಗಿ ವಿವಾಹಿತ ಹಿರಿಯ ಮಹಿಳೆಯೊಬ್ಬಳು ವಧುವಿನ ಕುತ್ತಿಗೆಗೆ ಕಟ್ಟುವಳು. ಇವರ ವಿವಾಹದ ಮುಖ್ಯ ಅಂಶಗಳೆಂದರೆ ಸಾಕ್ಷಿದಾರರ ರುಜುವಾತು, ಮದುವೆಯ ನಿಶ್ಚಯಗಳು ಮದುವೆಯಾದ ನಂತರ ಮೊದಲನೇ ಶುಕ್ರವಾರ ಹುಡುಗನು, ಹುಡುಗಿಯ ಮನೆಗೆ ಔತಣಕ್ಕೆ ಹೋಗುತ್ತಾನೆ. ನಂತರ ಮುಂದಿನ ಮೂರು ಶುಕ್ರವಾರಗಳು ಹತ್ತಿರದ ಸಂಬಂಧಿಕರಲ್ಲಿ ಔತಣಕ್ಕೆ ಆಮಂತ್ರಿತನಾಗುತ್ತಾನೆ. ಇದನ್ನು ಚಾರ್(ಜುಮ್ಮ) ಎನ್ನುತ್ತಾರೆ.[೭೪]

ಕ್ರೈಸ್ತರಲ್ಲಿ ಹೆಣ್ಣುಮಕ್ಕಳ ಲಗ್ನವು ಹನ್ನೆರಡು ವರ್ಷ ತುಂಬಿದ ಬಳಿಕ, ಗಂಡುಮಕ್ಕಳ ಲಗ್ನವನ್ನು ಹದಿನಾರು ವರ್ಷ ತುಂಬಿದ ಬಳಿಕ ಮಾಡುವರು. ಇದರ ಪೂರ್ವದಲ್ಲಿ ಮಾಡಬೇಕಾದರೆ ಧರ್ಮ ಗುರುವಿನ ಅಪ್ಪಣೆ ಬೇಕು. ಲಗ್ನದ ಮಾತುಕತೆಗಳು ಗೊತ್ತಾದ ಬಳಿಕ ಮಧುಮಕ್ಕಳಿಬ್ಬರು ಚರ್ಚೆಗೆ ಹೋಗುವರು. ಧರ್ಮೋಪದೇಶಕನು ವಧುವರರ ಒಪ್ಪಿಗೆಯನ್ನು ಬೇರೆ ಬೇರೆಯಾಗಿ ಪಡೆದು, ಎಲ್ಲರ ಸಮಕ್ಷಮ ಕೇಳಿಕೊಂಡು ಈ ಲಗ್ನಕ್ಕೆ ಯಾರದಾದರೂ ಅಡ್ಡಿ ಇದ್ದರೆ ಅವರು ತಿಳಿಸಬೇಕೆಂದು ಅಲ್ಲಿ ಕೂಡಿದ ಜನರಿಗೆ ಕೂಗಿ ಹೇಳುವನು. ಈ ಪ್ರಕಾರ ಮೂರು ರವಿವಾರಗಳಲ್ಲಿ ಚರ್ಚ್‌ನಲ್ಲಿ ಲಗ್ನವು ಪ್ರಸಿದ್ಧವಾದ ಬಳಿಕ ಲಗ್ನದ ದಿವಸವು ಗೊತ್ತಾಗುತ್ತದೆ. ಆ ದಿವಸ ಮಧುಮಕ್ಕಳ ತಂದೆ-ತಾಯಿ ಮುಂತಾದ ಬಳಗದವರನ್ನು, ಸ್ನೇಹಿತರನ್ನು ಒಳಗೊಂಡು ಶೃಂಗಾರದ ವಸ್ತ್ರಾಲಂಕಾರಗಳನ್ನು ಧರಿಸಿಕೊಂಡು ಲಗ್ನ ಮಾಡಿಕೊಳ್ಳಲು ಚರ್ಚ್‌ಗೆ ಹೋಗುವರು. ಅಲ್ಲಿ ಧರ್ಮೋಪದೇಶಕನು ಮತ್ತೊಮ್ಮೆ ಅವರ ಸಮ್ಮತಿಯನ್ನು ಸಂಭಾವಿತರ ಸಮಕ್ಷಮ ಕೇಳಿ ಅವರ ಒಪ್ಪಿಗೆಯನ್ನು ರಿಜಿಸ್ಟರ್‌ನಲ್ಲಿ ಬರೆದು ಇಡುವರು. ಬಳಿಕ ಅವರು ವಧುವರರ ಬಲಗೈಗಳನ್ನು ತನ್ನ ಕೈಯಲ್ಲಿ ಜೋಡಿಸಿ ಹಿಡಿದು ದೇವರು ಅವನ ಮಗ ಪವಿತ್ರ ಆತ್ಮ ಇವರ ಹೆಸರಿನಿಂದ ನಾನು ನಿಮ್ಮ ಲಗ್ನ ಸಂಬಂಧವನ್ನು ಜೋಡಿಸುತ್ತೇನೆ ಎಂದು ನುಡಿದು ಇಬ್ಬರ ಕೈಗಳ ಮೇಲೆ ಪವಿತ್ರ ತೀರ್ಥವನ್ನು ಹಾಕುವನು.

ಬಳಿಕ ಮಧುಮಕ್ಕಳು ಒಂದೊಂದು ಉಂಗುರವನ್ನು ಧರ್ಮೋಪದೇಶಕನ ಕೈಯಲ್ಲಿ ಕೊಡುವನು. ಅವುಗಳ ಮೇಲೆ ಅವನು ಪವಿತ್ರ ತೀರ್ಥವನ್ನು ಹಾಕಿ ಆಶೀರ್ವಾದ ಮಾಡುವನು. ಬಳಿಕ ಮಧುಮಗಳು ತನ್ನ ಉಂಗುರವನ್ನು ಮಧುಮಗಳ ಎಡಗೈ ಅನಾಮಿಕೆಯಲ್ಲಿ ಇಡಿಸುವನು ಇದೇ ಲಗ್ನದ ಮುಖ್ಯ ಸಂಸ್ಕಾರವು. ಇದಾದ ಬಳಿಕ ದೇವರ ಪ್ರಾರ್ಥನೆಯಾಗುವವರೆಗೆ ಚರ್ಚ್‌ನಲ್ಲಿ ನಿಂತು ಮಧುಮಕ್ಕಳು ಮರಳಿ ಮಧುಮಗಳ ಮನೆಗೆ ಹೋಗುವರು. ಆದರೆ ಇಷ್ಟಕ್ಕೆ ಲಗ್ನದ ವಿಧಿಯು ತೀರಲಿಲ್ಲ. ಮನೆಗೆ ಹೋದ ಬಳಿಕ ಮಧುಮಕ್ಕಳಿಗೆ ಮುತ್ತೈದೆಯರು ಎರೆಯುವ, ಹೂವುಮುಡಿಸುವ ನಡಾವಳಿ, ಮಧುಮಗಳಿಗೆ ಮಂಗಳಸೂತ್ರ ಕಟ್ಟುವರು. ಕಾಸು ಒಪ್ಪಿಸುವುದು, ಮೆರವಣಿಗೆ ಇವೆಲ್ಲ ಹಿಂದೂ ಜನರಂತೆ ನಾಲ್ಕೈದು ದಿವಸ ನಡೆಯುತ್ತದೆ. ಮಂಗಳಸೂತ್ರವನ್ನು ಮಧುಮಗನ ತಾಯಿ ಕಟ್ಟುವಳು. ದೈವವುಳ್ಳವರು ನೂರಿನ್ನೂರು ಬೆಲೆಬಾಳುವ ಚಿನ್ನದ ಮಂಗಳಸೂತ್ರ ಕಟ್ಟುವರು. ಆ ಸರದ ನಡುವೆ ಹಿಂದೂ ಪದ್ಧತಿಯ ಮಂಗಳಸೂತ್ರವನ್ನು ಹಾಕದೆ ಕ್ರೂಸದ (†) ಆಕಾರದಂಥ ಚಿನ್ನದ ಪದಕವನ್ನು ಹಾಕುವರು. ಬಡವರು, ಒಕ್ಕಲಿಗರು ಗುಳದಾಳಿಯಂಥ ಚಿನ್ನದ ಗುಂಡು ಕರಿಮಣಿಯೊಳಗೆ ಪೋಣಿಸಿ ಕಟ್ಟುವರು. ಕಟ್ಟಿಕೊಳ್ಳುವರು.[೭೯] ಆದರೆ ಅತಿ ಚಿಕ್ಕ ವಯಸ್ಸಿಗೆ ವಿವಾಹವಾಗುತ್ತಿದ್ದರಿಂದಾಗಿ ಬೇಗನೆ ವಿಧುರ-ವಿಧವೆಯರಾಗುತ್ತಿದ್ದರು ಎಂಬುದನ್ನು ಸಹ ನಾಲ್ಕು ಜಿಲ್ಲೆಗಳ ಬಗ್ಗೆ ಕೋಷ್ಟಕದ ಮೂಲಕ ಮಾಹಿತಿ ನೀಡಲಾಗಿದೆ.

**ಮೈನೆರೆಯುವುದು:** ಹುಡುಗಿಯ ಮೊದಲ ಸಲ ಋತುಮತಿಯಾದಾಗ(ಮೈನೆರೆದಾಗ) ಕೆಲವೊಂದು ಶಾಸ್ತ್ರ ಸಂಪ್ರದಾಯಗಳನ್ನು ಮಾಡುತ್ತಾರೆ. ಅದೇ ರೀತಿ ಮುಂಬಯಿ ಕರ್ನಾಟಕದಲ್ಲಿಯೂ ಸಹ ಈ ಆಚರಣೆಗಳನ್ನು ಅಳವಡಿಸಿಕೊಂಡಿದ್ದರು. ಸಾಮಾನ್ಯವಾಗಿ ಹುಡುಗಿಯರು ೧೪-೧೫ನೇ ವರ್ಷಕ್ಕೆ ವಯಸ್ಸಿಗೆ ಬರುವುದು ಸಹಜ. ಆಗ ಅವಳು ಅಶುದ್ಧಳಾದಳೆಂದು ಭಾವಿಸಲಾಗುತ್ತದೆ. ಆಗ ಕೆಲವೊಂದು ವರ್ಗಗಳು ಅವಳನ್ನು ಪ್ರತ್ಯೇಕವಾದ ಕೋಣೆಯಲ್ಲಿ ಕೂರಿಸುತ್ತಾರೆ. ಆರನೇ ದಿನ ಸ್ನಾನ ಮಾಡಿಸಿ ಹೊಸ ಸೀರೆ, ಕುಪ್ಪಸ, ಆಭರಣಗಳನ್ನು, ಹೂಗಳನ್ನು ಮುಡಿಸುತ್ತಾರೆ, ಜೊತೆಗೆ ಊಟ ಹಾಕಿಸುತ್ತಾರೆ. ಆದರೆ ಅತ್ತೆ ಒಕ್ಕಲಿಗರು ಕನ್ನಿಕೆಯ ಮೈನೆರೆದಾಗ ಒಂದು ತಿಂಗಳ ಮೇಲೆ ನಾಲ್ಕು ದಿವಸಗಳಿಗೊಮ್ಮೆ ಹೊರಗಿಡುವರು. ಹೊಲೆಯರ ಆಚರಣೆಗಳೆಂದರೆ ಹುಡುಗಿಯನ್ನು ಮೂರು ದಿನಗಳ ಕಾಲ ಹೊರಗೆ ಕೂರಿಸುತ್ತಾರೆ. ಈ ಸಂದರ್ಭದಲ್ಲಿ ಸಿಹಿ ಪದಾರ್ಥವನ್ನು ಆಹಾರವಾಗಿ ನೀಡುತ್ತಾರೆ. ನಾಲ್ಕನೇ ದಿನವು Babhul ಮರವನ್ನು ಬಲಗೈಯಿಂದ ಮುಟ್ಟಬೇಕು ಅನಂತರ ಮನೆಗೆ ಬಂದು ಸ್ನಾನ ಮಾಡಿದಾಗ ಶುದ್ಧಳಾದಳೆಂದು ಅರ್ಥ.[೮೦]

Shenvis ಬ್ರಾಹ್ಮಣರು ಹೆಣ್ಣುಮಕ್ಕಳು ಮೈನೆರೆದಾಗ ಸಾಮಾನ್ಯವಾಗಿ ಗಂಡನ ಮನೆಯವರಿಗೆ ಸುದ್ದಿ ಮುಟ್ಟಿಸುತ್ತಾರೆ. ಏಕೆಂದರೆ ಈಗಾಗಲೇ ಹುಡುಗಿಗೆ ಮದುವೆಯಾಗಿರುತ್ತದೆ. ಆಗ ಆ ಕಡೆಯಿಂದ ಮಧುಮಗನ ಸಂಬಂಧಿಕರು, ಸ್ನೇಹಿತರೆಲ್ಲರೂ ಬರುತ್ತಾರೆ. ಜೊತೆಗೆ ಇವರು ಹುಡುಗಿಗೆ ಸೀರೆ, ಕುಪ್ಪಸ, ಸಿಹಿ ಪದಾರ್ಥಗಳನ್ನು ತಂದಿರುತ್ತಾರೆ. ನಾಲ್ಕು ದಿನಗಳವರೆಗೆ ಹುಡುಗಿಯನ್ನು ಮನೆಯಿಂದ ಹೊರಗಡೆ ಪ್ರತ್ಯೇಕ ಕೋಣೆ ಮಾಡಿ ಕೂರಿಸುತ್ತಾರೆ. ಈ ಸಂದರ್ಭದಲ್ಲಿ ಮನೆಯು ಅಶುದ್ಧವಾಯಿತೆಂದು ತಿಳಿಯಲಾಗುತ್ತದೆ. ಐದನೇ ದಿನವು

ಇವರ ಸಂಬಂಧಿಕರು ಹುಡುಗಿಗೆ ಸ್ನಾನ ಮಾಡಿಸಿ, ಅಲಂಕರಿಸಿ ಮನೆಯನ್ನು ಶುದ್ಧ ಮಾಡಿ ಹುಡುಗಿಯನ್ನು ಕೂರಿಸಿ ಆರತಿ ಮಾಡುತ್ತಾರೆ.[೯೩]

**ಬಾಣಂತಿ(ಗರ್ಭಾವಸ್ಥೆ ಮತ್ತು ಜನನ)**

ಹೆಣ್ಣು ಗರ್ಭಾವಸ್ಥೆಯಲ್ಲಿದ್ದಾಗ ಹಾಗೂ ಮಗು ಜನನವಾದಾಗ ಅನೇಕ ಧಾರ್ಮಿಕ ಸಂಪ್ರದಾಯಗಳನ್ನು ಆಚರಿಸುವುದು ಸಾಮಾನ್ಯವಾಗಿ ಎಲ್ಲಾ ಸಮುದಾಯಗಳಲ್ಲೂ ರೂಢಿಯಲ್ಲಿವೆ. ಗ್ರಹಣ ಕಾಲದಲ್ಲಿ ಗರ್ಭಿಣಿಯರು ಹೊರಗೆ ಬರಬಾರದೆಂಬ ನಂಬಿಕೆ ಮತ್ತು ಅವರಿಗೆ ಇರಬಹುದಾದ ತಿಂಡಿ-ತಿನಿಸುಗಳ ಬಯಕೆಗಳನ್ನು ಪೂರೈಸುವುದು ರೂಢಿಯಲ್ಲಿದೆ. ಹಿಂದೂಗಳಲ್ಲಿ ಮೊದಲನೇ ಸಲ ಗರ್ಭಿಣಿಯಾದಾಗ ಮೂರನೇ ತಿಂಗಳಲ್ಲಿ ಕಳ್ಳಕುಪ್ಪಸಶಾಸ್ತ್ರ, ಏಳು ಅಥವಾ ಎಂಟನೇ ತಿಂಗಳಲ್ಲಿ ಬಳೆ ತೊಡಿಸುವ ಹಾಗೂ ಹಸಿರು ಸೀರೆ ಉಡುಗೊರೆಯ ಶಾಸ್ತ್ರ ಮಾಡುವುದು(ಸೀಮಂತ) ರೂಢಿಯಲ್ಲಿದೆ. ಸಾಮಾನ್ಯವಾಗಿ ಮೊದಲನೇ ಹೆರಿಗೆಗೆ ತವರು ಮನೆಗೆ ಹೋಗುವುದು ಎಲ್ಲಾ ಹಿಂದೂಗಳ ಸಂಪ್ರದಾಯದಲ್ಲಿ ಇದೆ. ಸಾಮಾನ್ಯವಾಗಿ ಹಡೆದ ದಿವಸದಿಂದ ಹನ್ನೊಂದು ಹಾಗೂ ಹದಿಮೂರು ದಿನಗಳ ನಂತರ ಮಗುವಿಗೆ ನಾಮಕರಣ ಮಾಡುವರು.[೯೪]

ಶೇಣವೇರು ಬ್ರಾಹ್ಮಣರು ಹಡೆದ ದಿವಸದಿಂದ ಆರನೇ ದಿವಸ ರಾತ್ರಿಯಲ್ಲಿ ಷಷ್ಠಿ ಪೂಜೆಯನ್ನು ಮಾಡುವರು. ಒಂದು ಕಳಶವನ್ನು ಪೂಜಿಸಿ ಆ ದಿವಸ ರಾತ್ರಿ ಬ್ರಹ್ಮನು ಮುಪ್ಪಿನ ಹೆಂಗಸಿನ ರೂಪದಲ್ಲಿ ಕೂಸಿನ ಹಣೆಬರಹವನ್ನು ಬರೆಯಲಿಕ್ಕೆ ಬರುತ್ತಾನೆಂದು ನೆನೆಸಿ, ಆ ಕಳಶದ ಹತ್ತಿರ ಒಂದು ಬಿಳಿ ಕಾಗದ, ಮಸಿ, ಲೆಕ್ಕಣಿಕೆ ಚೂರಿಗಳನ್ನು ಇಡುವರು ಮತ್ತು ಮನೆಯೊಳಗಿನ ಗಂಡಸರು ಕೆಲವು ಧರ್ಮ ಸಂಬಂಧದ ಪುಸ್ತಕಗಳನ್ನು ಓದುತ್ತಾ ಕೂಡುವರು. ಹೆಂಗಸರು ಬಿಂದಿಗೆಗಳನ್ನು ಊದುತ್ತ ಫುಗಾಡಿ ಹಾಕಿ ರಾತ್ರಿಯನ್ನು ಕಳೆಯುವರು. ಕೂಸು ಹುಟ್ಟಿದ ಮುಹೂರ್ತವು ಮಧ್ಯಮವಿದ್ದರೆ ತಂದೆ, ಮಗನ ಮುಖ(ಮಾರೆ)ವನ್ನು ನೋಡುವ ಪೂರ್ವದಲ್ಲಿ ಅದರ ನೆರಳನ್ನು ತುಪ್ಪದೊಳಗೆ ನೋಡಬೇಕು.

ಮುಹೂರ್ತವು ಬಹಳ ಕೆಟ್ಟದಿದ್ದರೆ ಕೂಸನ್ನು ಆಕಳ ಹೊಟ್ಟೆಬುಡಕ್ಕೆ ಹಾಯಿಸಿ ನೆರೆಮನೆಯಲ್ಲಿ ಕೆಲವು ಹೊತ್ತು ಕಳೆದು ಮನೆಗೆ ಬರುವುದು. ವಿಶೇಷವಾಗಿ ತಂದೆ-ತಾಯಿಗಳಿಗೆ ಅನಿಷ್ಟವಾದಂಥ ಮುಹೂರ್ತದಲ್ಲಿ ಕೂಸು ಹುಟ್ಟಿದರೆ ಅದನ್ನು ಪರರಿಗೆ ಸಾಕಲಿಕ್ಕೆ ಕೊಟ್ಟುಬಿಡುವರು. ಕುಣಬಿಗಳು ಹೀಗೆ ಮಾಡುವರು. ಹಡೆದ ನಾಲ್ಕನೇ ದಿವಸ ಅಗಸನನ್ನು ಕರೆದು ಅವನ ಕೈಯಿಂದ ಮನೆಗೂ, ಮನೆಯ ಯಜಮಾನರಿಗೆ ಬೂದಿ ಕೂಡಿದ ನೀರು ಸಿಡಿಸಿಕೊಂಡು ಶುದ್ಧ ಮಾಡಿ ಐದನೇ ದಿನ ಮರದೊಳಗೆ ಅಕ್ಕಿ ಹರವಿ ತೆಂಗಿನಕಾಯಿ, ವೀಳ್ಯದೆಲೆಗಳನ್ನು ಇಟ್ಟು ಬಳಿಕ ಬಾಣಂತಿಯು ಅದಕ್ಕೆ ನಮಸ್ಕಾರ ಮಾಡಿ ಆ ಮರದೊಳಗೆ ಕೂಸನ್ನು ನಾಲ್ಕಾರು ಸಾರಿ ಎತ್ತೆತ್ತಿ ತಾಯಿಯ ತೊಡೆಯ ಮೇಲೆ ಹಾಕಿದ ನಂತರ ಆ ಕೂಸಿಗೆ ಹೆಸರಿಡುವರು. ಮರದೊಳಗಿನ ಅಕ್ಕಿಯನ್ನು ಜೋಗಿಗಳಿಗೆ ಕೊಟ್ಟು, ಕರಿಮಣಿಗಳನ್ನು ಕೊಂಡು ಕೂಸಿನ ಕೊರಳಿಗೆ ಕಟ್ಟುವರು. ಹಾಲಕ್ಕಿ ಒಕ್ಕಲಿಗರಲ್ಲಿ ಬಾಣಂತಿಯು ಶುದ್ಧಳಾದಾಗಲೂ ಹನ್ನೆರಡನೇ ದಿವಸ ಹೊತ್ತು ಮುಳುಗಿದ ಬಳಿಕ

ಸಮೀಪದಲ್ಲಿದ್ದ ಬಾವಿಗೆ ಹೋಗಿ ಮೂರು ಕೊಡ ನೀರು ಜಗ್ಗಿ ಒಂದು ತೆಂಗಿನಮರಕ್ಕೆ ಹಾಕಿ ನಾಲ್ಕನೇ ಕೊಡವನ್ನು ಜಗ್ಗಿ ತಂದು ಅಡಿಗೆ ನೀರಿನ ಹರವಿಯಲ್ಲಿ ಸುರುವಳು. ನೀರು ಜಗ್ಗುವ ಪೂರ್ವದಲ್ಲಿ ಬಾವಿಯೊಳಗೆ ಅಕ್ಕಿಕಾಳು ಎರಡು ಅಡಿಗೆ ಉರಿಯುವ ತೆಂಗಿನ ನಾರು ಇವನ್ನು ಬಂದಾರ ಹಿಂದೊಂದು ಚೆಲ್ಲಿ ಬಾವಿಗೆ ಆರತಿ ಬೆಳಗುವಳು. ಸಂಜೆಯಾದ ಬಳಿಕ ಮನೆ ಹಿರಿಯ ಮನುಷ್ಯಳು ಕೂಸನ್ನು ತೊಟ್ಟಿಲೊಳಗೆ ಹಾಕಿ ಹೆಸರಿಡುವರು. ಕೂಸುಗಳಿಗೆ ಹಲ್ಲು ಬರುವಾಗ ಮೇಲಿನ ಹಲ್ಲು ಮೊದಲು ಮೂಡಿದರೆ, ಸೋದರಮಾವನಿಗೂ, ಚಿಕ್ಕಮಾವನಿಗೂ ಒಳಿತಲ್ಲ. ಹೀಗಾಗಿ ಕೂಸಿನ ಮುಖಕ್ಕೆ ಮೇಲೆ ಅರಿವೆ(ಬಟ್ಟೆ) ಹೊಚ್ಚಿ ಅದರ ಹಣೆಗೆ ಸೂಜಿ ಚುಚ್ಚಿ ರಕ್ತ ತೆಗೆಯುವರು. ಮಕ್ಕಳು ಹೆಣ್ಣಾಗಲಿ, ಗಂಡಾಗಲಿ ಮೂರು ವರ್ಷದವರಾದರೆಂದರೆ ಅವುಗಳ ತಲೆಕೂದಲು ತೆಗೆಯುವರು ಇದಕ್ಕೆ 'ಜವಳ' ಎನ್ನುವರು. ಹೆಣ್ಣುಮಕ್ಕಳ ಕೂದಲನ್ನು ಬಾಳೆಗಿಡದ ಬೊಡ್ಡೆಗೆ, ಗಂಡುಮಕ್ಕಳ ಕೂದಲನ್ನು ಹಲಸಿನ ಮರದ ಬೊಡ್ಡೆಗೆ ಚೆಲ್ಲುವರು.

ಮುಸಲ್ಮಾನರು ಹಿಂದೂ ಸಂಪ್ರದಾಯದಂತೆ ಮಾಡುವರು. ಕೂಸು ಹುಟ್ಟಿದ ಬಳಿಕ ಹದಿನಾಲ್ಕು ದಿವಸದೊಳಗೆ ಅಕೀಕವೆಂಬ ವಿಧಿಯನ್ನು ನಾಲ್ಕು ವರ್ಷ, ನಾಲ್ಕು ತಿಂಗಳು, ನಾಲ್ಕು ದಿನಗಳು ಆದ ದಿವಸ ಬಿಸ್ಮಿಲ್ಲಾ ಎಂಬ ಧರ್ಮ ಸ್ವೀಕಾರದ ವಿಧಿಯನ್ನು ಜನರು ಮಾಡುವರು. ಆದರೆ ಬಡಜನರು, ಶಕ್ತಿ ಇಲ್ಲದವರು, ಈ ವಿಧಿಯನ್ನು ಮಾಡುವುದಿಲ್ಲ. ಹದಿನಾಲ್ಕನೇ ದಿವಸ ಅಥವಾ ಒಂದು ವರ್ಷದ ನಂತರ ಮಗುವಿನ ಕೂದಲನ್ನು ತೆಗೆಸುವರು. ಕ್ರಿಶ್ಚಿಯನ್‌ರು ಹಿಂದೂಗಳಂತೆ ಮಾಡುವರು. ಆದರೆ ಹೆಸರನ್ನು ಧರ್ಮೋಪದೇಶಕನು ಚರ್ಚ್‌ನಲ್ಲಿ ಇಡುವನು. ಚರ್ಚ್‌ನಲ್ಲಿ ಕೆಲವು ಸಂಸ್ಕಾರ ನಡೆದ ನಂತರ ಮನೆಗೆ ಬಂದು ಕೂಸಿನ ಪರಿವಾರದವರು, ಬಳಗದವರಿಗೂ, ಸ್ನೇಹಿತರಿಗೂ, ಊಟ ಹಾಕುವರು ಇಲ್ಲವೇ ಮಿಠಾಯಿಯನ್ನು ಹಂಚುವರು.[೮೫]

### ೩.೨.೮. ಮುಂಬಯಿ ಕರ್ನಾಟಕದ ಧಾರ್ಮಿಕ ಆಚರಣೆಗಳು

ಹಿಂದೂಗಳಲ್ಲಿ ಅನೇಕ ದೇವರುಗಳನ್ನು ಪೂಜಿಸುತ್ತಾರೆ. ಅನೇಕ ಹಬ್ಬಗಳನ್ನು ಆಚರಿಸುವುದರಿಂದ ಹಿಂದೂಗಳು ಬಹುದೇವೋಪಾಸಕರಾಗಿದ್ದಾರೆ ಎನ್ನಬಹುದು. ಇಲ್ಲಿ ಬ್ರಾಹ್ಮಣರು ವೆಂಕಟರಮಣ, ಶಿವ-ಪಾರ್ವತಿ, ಗಣಪತಿ, ಕೃಷ್ಣ, ದುರ್ಗಾ, ರೇಣುಕಾ ಮುಂತಾದ ದೇವರುಗಳನ್ನು ಪೂಜಿಸುವರು. ಲಿಂಗವಂತರು ಮಲ್ಲಿಕಾರ್ಜುನ, ಶಿವ, ಸುಬ್ರಹ್ಮಣ್ಯ, ವೀರಭದ್ರ ಮತ್ತು ಯಲ್ಲಮ್ಮ ದೇವರುಗಳನ್ನು ಪೂಜಿಸುತ್ತಾರೆ. ಕೆಳವರ್ಗದ ಹಿಂದೂಗಳು ಸ್ಥಳೀಯವಾಗಿ ಹಾಗೂ ಹಳ್ಳಿಯ ದೇವರುಗಳಾದ ಬಸಪ್ಪ, ಭದ್ರಪ್ಪ, ದ್ಯಾಮವ್ವ, ಹುಲಿಗೆವ್ವ, ಖಂಡೋಬ, ಯಲ್ಲಮ್ಮ, ಹನುಮಂತ, ಅಂಬಾಬಾಯಿ, ದುರ್ಗಾ, ನಿಮಿಷಾಂಬದೇವಿ, ಕಾಳಮ್ಮ, ಮಾರಿಕಾಂಬ, ಬನಶಂಕರಿ, ಮೈಲಾರದೇವ, ಕಾಮಾಕ್ಷಿ, ತುಳಜಾಭವಾನಿ, ಹೊನ್ನಮ್ಮ, ಶಿರಸಂಗಿ, ಮಹಾಲಕ್ಷ್ಮಿ,[೮೬] ಪಚ್ಚವಿ(Pachavi) ಜ್ಯೋತಿಬಾ, ಮಾರುತಿ ಮುಂತಾದ ದೇವರಗಳನ್ನು ಪೂಜಿಸುತ್ತಾರೆ. ಕೆಲವೊಬ್ಬರು ಮನೆಯಲ್ಲಿ ಜುಟ್ಟಿಲ್ಲದ ತೆಂಗಿನಕಾಯಿಯನ್ನು ಪೂರ್ವಜರ ಮೂರ್ತಿಯೆಂದು ಪರಿಗಣಿಸುತ್ತಾರೆ. ಇದಕ್ಕೆ ಹಾಲಕ್ಕಿ ಒಕ್ಕಲಿಗರಲ್ಲಿ 'ಬಲೀಂದ್ರ' ಎಂಬ ಹೆಸರು, ಕುಮಾರ ಪೈಕರಲ್ಲಿ 'ಮಾಳ ಪುರುಷ'ನೆಂಬ

ಹೆಸರು ಇರುತ್ತದೆ. ಇದನ್ನು ಭಕ್ತಿಯಿಂದ ಪೂಜಿಸುವರು.[೬೭] ಹಿಂದೂಗಳು ವಿಗ್ರಹಗಳನ್ನು ಬಂಗಾರ, ಬೆಳ್ಳಿ, ಕಂಚು, ತಾಮ್ರ, ಕಲ್ಲು, ಹಿತ್ತಾಳೆಗಳಿಂದ ಕೂಡಿದ ಮೂರ್ತಿಗಳನ್ನಿಟ್ಟು ಪೂಜಿಸುತ್ತಾರೆ. ಲಿಂಗವಂತರು ದುಂಡನೆಯ ಕುತ್ತಿಗೆಯುಳ್ಳ ಲಿಂಗವನ್ನು ಪ್ರತಿದಿನವೂ ಊಟ ಮಾಡುವುದಕ್ಕಿಂತ ಮುಂಚೆ ಪೂಜಿಸುತ್ತಾರೆ.[೬೮]

ಮುಸಲ್ಮಾನರು ಹಾಗೂ ಕ್ರಿಶ್ಚಿಯನ್ನರು ಮಾತ್ರ ಏಕದೇವೋಪಾಸಕರಾಗಿದ್ದಾರೆ. ಮುಸಲ್ಮಾನರು 'ಅಲ್ಲಾ'ನನ್ನು ಪೂಜಿಸಿದ್ದರೆ, ಕ್ರಿಶ್ಚಿಯನ್ನರು 'ಯೇಸು'ವನ್ನು ಪೂಜಿಸುತ್ತಾರೆ. ಮುಸಲ್ಮಾನರ ಹಬ್ಬಗಳಲ್ಲಿ ರಂಜಾನ್, ಬಕ್ರೀದ್ ಪ್ರಮುಖ ಹಬ್ಬಗಳು. ಈ ಹಬ್ಬಗಳಲ್ಲಿ ಖುರಾನ್ ಓದುವವರು. ತಪ್ಪದೇ ಎಲ್ಲರೂ ಮಸೀದಿಗೆ ಹೋಗಿ ಪ್ರಾರ್ಥನೆ ಸಲ್ಲಿಸುವರು. ಕ್ರಿಶ್ಚಿಯನ್ನರು ಕ್ರಿಸ್‌ಮಸ್, ಗುಡ್‌ಫ್ರೈಡೆ ಹಬ್ಬಗಳನ್ನು ಆಚರಿಸುತ್ತಾರೆ. ಪ್ರತಿದಿನವೂ ಐದು ಬಾರಿ ಪ್ರಾರ್ಥನೆ ಮಾಡುವರು ಹಾಗೂ ಚರ್ಚ್‌ಗೆ ಹೋಗಿ ಗೀತೆಗಳನ್ನು ಹಾಡುವರು.[೬೯]

ಮುಂಬಯಿ ಕರ್ನಾಟಕದ ಹಿಂದೂಗಳಲ್ಲಿ ವೈಷ್ಣವರು ಮುಖ್ಯಸ್ಥರಾಗಿದ್ದಾರೆ. ವೈಷ್ಣವರೊಳಗೆ ಹಬ್ಬಗಳು ಬಹಳ. ಇವರ ಮುಖ್ಯವಾದ ಹಬ್ಬಗಳೆಂದರೆ: ಯುಗಾದಿ, ರಾಮನವಮಿ(ಚೈತ್ರಶುದ್ಧ ನವಮಿ. ಈ ದಿವಸ ರಾಮನು ಹುಟ್ಟಿದ್ದರಿಂದ ವೈಷ್ಣವರು ಹಬ್ಬ ಮಾಡುವರು). ನಾಗರಪಂಚಮಿ(ಶ್ರಾವಣಶುದ್ಧ ಪಂಚಮಿ) ಗೋಕುಲಾಷ್ಟಮಿ, ನವರಾತ್ರಿ(ದಸರಾ), ಮಕರಸಂಕ್ರಾಂತಿ, ಮಹಾಶಿವರಾತ್ರಿ(ಮಾಘವರ್ಯ ಚತುರ್ದಶಿ) ಈ ದಿವಸ ಸ್ಮಾರ್ತರು ಉಪವಾಸ ಮಾಡುತ್ತಾರೆ. ಜೊತೆಗೆ ವೈಷ್ಣವರು ಇವುಗಳಲ್ಲದೆ ವೈಷ್ಣವರ ಪೂರ್ಣ ಉಪವಾಸದ ದಿವಸಗಳು ಹಿರಿಯರ ಶ್ರಾದ್ಧದ ದಿವಸಗಳು ತಮ್ಮ ಸ್ವಾಮಿಯ ಮೃತ್ಯುತಿಥಿ, ಪಕ್ಷಮಾಸ ಇವೆಲ್ಲಾ ಅರ್ಧ ಉಪವಾಸದ ದಿವಸಗಳಾಗಿವೆ. ವೈಷ್ಣವರು ಮಾಡುವ ಅನೇಕ ವ್ರತಗಳಲ್ಲಿ ಏಕಾಂತ ಮೌನವ್ರತ, ಚಂದ್ರಾಯಣ ವ್ರತ,[೭೦] ಭೀಷ್ಮಪಂಚಕ.

ಹೆಚ್ಚಾಗಿ ಬ್ರಾಹ್ಮಣರು, ಲಿಂಗವಂತರು ಪೂಜೆ-ಪುನಸ್ಕಾರ ಮಾಡುವುದು ಹೆಚ್ಚು. ಉಳಿದವರು ಹಬ್ಬಗಳನ್ನು, ವ್ರತಗಳನ್ನು ಮಾಡುವರು. ಆದರೆ ಇವರಷ್ಟಲ್ಲ.

ವೈಷ್ಣವ ಬ್ರಾಹ್ಮಣರು ವೆಂಕಟರಮಣನನ್ನು ಪೂಜಿಸುವರು. ಮನೆಯಲ್ಲಿ ಯಾರಿಗಾದರೂ ಕಾಯಿಲೆ ಬಿದ್ದಾಗ ಪಾರು ಮಾಡಿದರೆ ನಾನು ನನ್ನ ತಲೆಯ ಮೇಲಿನ ಕೂದಲನ್ನು ಅರ್ಪಿಸುವೆನು ಎಂದು ತಿರುಪತಿಯ ವೆಂಕಟರಮಣನಿಗೆ ಹರಕೆ ಹೊರುವುದುಂಟು. ಇವರಲ್ಲದೆ ಇತರ ವರ್ಗದವರು ಹರಕೆ ಹೊರುವರು. ಈಗಲೂ ಸಹ ಈ ಪದ್ಧತಿ ಆಚರಣೆಯಲ್ಲಿರುವುದನ್ನು ಕಾಣಬಹುದು. ಇವರು ತೀರ್ಥಯಾತ್ರೆಗಳಿಗೆ ಹೋಗುವ ಪದ್ಧತಿ ಇತ್ತು. ಈಗಲೂ ಸಹ ಯಾತ್ರೆಗಳಿಗೆ ಹೋಗುವ ಪದ್ಧತಿಗಳಿವೆ. ಮುಖ್ಯವಾಗಿ ಅಂದು ಪ್ರಸಿದ್ಧವಾದ ಯಾತ್ರಾಸ್ಥಳಗಳೆಂದರೆ ಉತ್ತರ ಆರ್ಕಾಟ್‌ದಲ್ಲಿರುವ ತಿರುಪತಿಯ ವೆಂಕಟರಮಣ, ಮದ್ರಾಸ್ ಇಲಾಖೆ ಯೊಳಗಿನ ಅಹೋಬಲ ನರಸಿಂಹದೇವರು, ಮಂಗಳೂರು ಜಿಲ್ಲೆಯಲ್ಲಿರುವ ಉಡುಪಿಯ ಕೃಷ್ಣ ದೇವರು, ಕಂಚಿಯ ವರದರಾಜ, ಕುಲಸ್ತ್ರೀಯ ಕಲ್ಹಸ್ತೇಶ್ವರ, ರಾಮೇಶ್ವರದ ಶ್ರೀರಾಮ, ಶ್ರೀರಂಗಪಟ್ಟಣದ ರಂಗನಾಥ, ನಿಜಾಮರ ರಾಜ್ಯದ ತುಳುಜಾಪುರದ ಅಂಬಾಭವಾನಿ(ತುಳಜಾಭವಾನಿ), ಮುಂಬಯಿ ಇಲಾಖೆ ಯಲ್ಲಿ ಉತ್ತರ

ಕೆನಡಾ ಜಿಲ್ಲೆಯಲ್ಲಿ ಗೋಕರ್ಣದ ಮಹಾಬಲೇಶ್ವರ, ಕೊಲ್ಲಾಪುರದ ಮಹಾಲಕ್ಷ್ಮಿ, ಪಂಡರಾಪುರದ ವಿಠೋಬಾ, ಬಾದಾಮಿಯ ಬನಶಂಕರಿ, ನಾಸಿಕದ ಶ್ರೀರಾಮ, ದ್ವಾರಕೆಯ ಕೃಷ್ಣ, ಬಂಗಾಲದ ಇಲಾಖೆಯಲ್ಲಿ ಕಾಶಿಯ ವಿಶ್ವೇಶ್ವರ, ಬಿಂದುಮಾಧವ, ಗೋಕುಲದ ಕೃಷ್ಣ, ವೃಂದಾವನದ ಕೃಷ್ಣ, ಬದರಿನಾರಾಯಣ, ಗಯೆಯ ವಿಷ್ಣುಪಾದ, ಜೈನರು ಮೈಸೂರು ಸೀಮೆಯಲ್ಲಿರುವ ಶ್ರವಣಬೆಳಗೊಳವೆಂಬ ಗ್ರಾಮಕ್ಕೆ ಭೇಟಿ ನೀಡುವರು. ಸವದತ್ತಿಯ ಯಲ್ಲಮ್ಮ, ಬಳ್ಳಾರಿ ಜಿಲ್ಲೆಯ ಹೊಸಪೇಟೆ ಬಳಿ ಇರುವ ಹುಲಿಗಿ ಗ್ರಾಮದ ಹುಲಿಗೆಮ್ಮ ಈ ಎಲ್ಲಾ ಪ್ರದೇಶಗಳು ಯಾತ್ರಾ ಸ್ಥಳಗಳಾಗಿದ್ದು, ಅಂದು ಹೆಚ್ಚಿನ ಜನರು ಈ ದೇವರುಗಳಿಗೆ ನಡೆದು ಕೊಳ್ಳುತ್ತಿದ್ದರು. ಈಗಲೂ ಸಹ ಈ ಸ್ಥಳಗಳು ಅಷ್ಟೇ ಮಹತ್ವ ಪಡೆದ ಯಾತ್ರಾ ಸ್ಥಳಗಳಾಗಿವೆ. ಜಾತ್ರೆಗಳಲ್ಲಿ ಜನರು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ವೈಶಾಖ ಮಾಸದಲ್ಲಿ ಸಿಡಿ ಆಡುವ ಜಾತ್ರೆಯಾಗುತ್ತದೆ. ಆದರೆ ಸಿಡಿ ಆಡಲಿಕ್ಕೆ ಸರ್ಕಾರದವರ ಅಪ್ಪಣೆ ಇಲ್ಲವೆಂದು ಬ್ರಿಟಿಷ್ ಸರ್ಕಾರದ ಪೂರ್ವದಲ್ಲಿ ಬಹಳ ನಡೆಯುತ್ತಿತ್ತೆಂದು ತಿಳಿದುಬರುತ್ತದೆ. ಈ ಸಿಡಿಯು ಹಲವು ಪ್ರದೇಶಗಳಲ್ಲಿ ಈಗಲೂ ಸಹ ಆಚರಣೆಯಲ್ಲಿದೆ. ಇಂದೂ ಸಹ ಸರ್ಕಾರವು(ಪಶುಬಲಿ, ಸಿಡಿ ಆಡುವುದು ಬೆತ್ತಲೆ ಸೇವೆ, ದೇವದಾಸಿ, ಬಸವಿ) ಇದನ್ನು ನಿಷೇಧಿಸಿದ್ದರೂ ಸಹ ಅದು ಆಚರಣೆಯಲ್ಲಿದೆ. ಒಟ್ಟಿನಲ್ಲಿ ಸಾಕಷ್ಟು ಜನರು ದೇವರನ್ನು ನಂಬುವಂತೆ ಭೂತ-ಪಿಶಾಚಿ, ಮಂತ್ರ-ತಂತ್ರಗಳ ಮೇಲೆ ಎಲ್ಲಾ ಜನಾಂಗದವರು ನಂಬುತ್ತಿದ್ದರೆಂಬ ಬಗ್ಗೆ ತಿಳಿಯಬಹುದಾಗಿದೆ.[೮೧]

ಆದರೂ ಸಹ ಈ ಜಾತಿಯವರಿಗೆ ಇಂಥ ದೇವರುಗಳೆಂದು ಹೇಳಲು ಬರುವುದಿಲ್ಲ. ಕೆಲವೊಬ್ಬರು ಬ್ರಾಹ್ಮಣರು, ಲಿಂಗವಂತರು ಆರಾಧಿಸುವ ದೇವರನ್ನು ಆರಾಧಿಸುತ್ತಿದ್ದರು. ಆದರೂ ಹೆಚ್ಚಾಗಿ ಸಾಮಾನ್ಯ ಜನವರ್ಗವು ಹಳ್ಳಿಯ ಅಥವಾ ಗ್ರಾಮದೇವರನ್ನೇ ಪೂಜಿಸುತ್ತಾರೆನ್ನಬಹುದು.

**೩.೨.೯. ಮುಂಬಯಿ ಕರ್ನಾಟಕದ ಶವಸಂಸ್ಕಾರ ಪದ್ಧತಿ**

ಮೃತದೇಹಕ್ಕೆ ನಡೆಸುವ ಸಂಸ್ಕಾರ, ವಿಧಿಗಳು, ವಿವಿಧ ಜಾತಿ, ಧರ್ಮಗಳಿಗೆ ಅನುಗುಣವಾಗಿ ವಿಭಿನ್ನವಾಗಿರುತ್ತದೆ. ವೈದಿಕ ಪದ್ಧತಿಯನ್ನು ಅನುಸರಿಸುವವರು ಸಾಮಾನ್ಯವಾಗಿ ಒಂದೇ ರೀತಿಯ ಕ್ರಮ ಆಚರಣೆಗಳನ್ನು ಅನುಸರಿಸಿದರೆ, ಹಿಂದುಳಿದ ವರ್ಗದ ವಿವಿಧ ಜಾತಿಗಳು ಅವರದೇ ಆದ ಕೆಲವೊಂದು ಕ್ರಮಗಳನ್ನು ಅನುಸರಿಸುವುದನ್ನು ಗಮನಿಸಬಹುದಾಗಿದೆ. ಆದರೂ ವ್ಯಕ್ತಿಯು ಸಾವಿಗೆ ಸನಿಹವಾದ ಹೊತ್ತಿಗೆ ಆತನ ಬಾಯಿಗೆ ನೀರು ಬಿಡುವುದು, ಉಸಿರು ಹೋದ ತಕ್ಷಣ ಕಾಲುಗಳನ್ನು ಮಡಿಸುವುದು, ಅಂಗಳಲ್ಲಿ ಬೆಂಕಿ ಹಾಕುವುದು, ಶವಕ್ಕೆ ಸ್ನಾನ ಮಾಡಿಸಿ ಹೊಸ ಬಿಳಿಬಟ್ಟೆ ತೊಡಿಸಿ ಗೂಟಕ್ಕೆ ಬಡಿಯುವರು. ನಂತರ ಶವವನ್ನು ಚಟ್ಟದಲ್ಲಿ ಸ್ಮಶಾನಕ್ಕೆ ತೆಗೆದುಕೊಂಡು ಹೋಗುವುದು. ಗುಂಡಿಯಲ್ಲಿ ಹೂತ ಮೇಲೆ ಅಥವಾ ಅಗ್ನಿ ಸಂಸ್ಕಾರ ಮಾಡಿದ ಮೇಲೆ ದಾರಿಯಲ್ಲಿ ನೀರು ಮುಟ್ಟುವುದು ಅಥವಾ ಮನೆಯಲ್ಲಿ ಸ್ನಾನ ಮಾಡುವುದು. ಮೂರನೇ ದಿನಕ್ಕೆ ಕೂಳು ಹಾಕುವುದು, ೧೧ನೆಯ ದಿನಕ್ಕೆ ತಿಥಿ ಮಾಡುವುದು ಇತ್ಯಾದಿಗಳು ಎಲ್ಲಾ ಜಾತಿಗಳಲ್ಲಿ ಸಾಮಾನ್ಯವಾಗಿರುವ ಶವಸಂಸ್ಕಾರದ ಮುಖ್ಯ ವಿಧಿಗಳಾಗಿವೆ. ವೈದಿಕ ಸಂಪ್ರದಾಯದಲ್ಲಿ ತಿಂಗಳ ತಿಥಿ ಹಾಗೂ ಪ್ರತಿ ವರ್ಷ ವಾರ್ಷಿಕ ಶ್ರಾದ್ಧಗಳು ನಡೆಯುತ್ತವೆ.[೮೨] ಆದರೆ ಆಚರಣೆಗಳಲ್ಲಿ ಭಿನ್ನತೆಯನ್ನು ಗುರುತಿಸ

ಬಹುದಾಗಿದೆ. ದೇಶಸ್ಥರು(ಬ್ರಾಹ್ಮಣರು) ಹೆಣವನ್ನು ಸುಡುತ್ತಾರೆ. ಆದರೆ ಸನ್ಯಾಸ ದೀಕ್ಷೆ ಪಡೆದುಕೊಂಡವರ ಹೆಣಗಳನ್ನು ಮೂರು ವರುಷದೊಳಗಿನ ಕೂಸುಗಳನ್ನು ಹುಗಿಯುವರು. ಜನನ-ಮರಣಗಳಾದ ಮೇಲೆ ಹತ್ತು ದಿವಸದವರೆಗೆ ಸೂತಕದಲ್ಲಿ ದೇವರ ಪೂಜೆ, ಆಚರಣೆಗಳನ್ನು ಮಾಡುವುದಿಲ್ಲ. ಅಕ್ಷತೆ ಹಚ್ಚಿಕೊಳ್ಳದೇ ಬರಿ ಗೋಪಿಚಂದನವನ್ನು ಅಂಗಾಂಗಗಳಿಗೆ ಧರಿಸುವರು. ಹೆಂಗಸರು ಅರಿಶಿಣ, ಕುಂಕುಮಗಳನ್ನು ಹಚ್ಚಿಕೊಳ್ಳುವುದಿಲ್ಲ. ಮೃಷ್ಟಾನ್ನ ಭೋಜನವನ್ನು ಮಾಡುವುದಿಲ್ಲ. ಓಣಿಯೊಳಗೆ ಯಾರಾದರೂ ಸತ್ತರೆ ಹೆಣವನ್ನು ಒಯ್ಯುವವರೆಗೆ ಓಣಿಯೊಳಗಿನವರ್ಯಾರೊಬ್ಬರೂ ಊಟ ಮಾಡುವುದಿಲ್ಲ. ದೇಶಸ್ಥರೊಳಗೆ ಹೆಣ ಹೊರುವುದಕ್ಕೆ ಬಹಳ ಹಿಂದೆ-ಮುಂದೆ ನೋಡುತ್ತಾರೆ. ಬಡವರ ಮನೆಯಲ್ಲಿ ಯಾರಾದರೂ ಸತ್ತರೆ ಹಣಕೊಟ್ಟು ಹೊರತು ಹೆಣ ಒಯ್ಯುವುದಿಲ್ಲವೆಂದು ತಿಳಿದುಬರುತ್ತದೆ.

ತೆಲುಗು ಬ್ರಾಹ್ಮಣರಲ್ಲಿ ಮನೆಯಲ್ಲಿ ಯಾರಾದರೂ ಸತ್ತರೆ ಹತ್ತನೇ ದಿವಸ ಮನೆಯೊಳಗಿನ ಗಂಡಸರೆಲ್ಲರೂ ನದಿಗೆ ಹೋಗಿ ಪಿಂಡ ಕೊಡುವರು. ಆಗ ಆರು ಇಂಚು ಎತ್ತರವಾದ ಕೆಂಪು ನಿಶಾನೆಗಳನ್ನು ಹಿಡಿದು ಅನ್ನದ ಪಿಂಡವನ್ನು ಮುಟ್ಟುವುದಕ್ಕೆ ಕಾಗೆಯನ್ನು ಕರೆಯುವರು. ಕಾಗೆಯು ಪಿಂಡವನ್ನು ಮುಟ್ಟಿದ ಕೂಡಲೇ ಅವರು 'ಅಶ್ಮದ' ಅಂದರೆ ಜೀವದ ಕಲ್ಲಿನ ಮೇಲೆ ಎಳ್ಳುನೀರು ಬಿಟ್ಟು ಅದನ್ನು ನೀರೊಳಗೆ ಚೆಲ್ಲುವರು. ಅಲ್ಲದೆ ಅದ್ವೈತರಲ್ಲಿ ಹೆಣದ ಮೊರೆಗೆ(ಮುಖಕ್ಕೆ) ಜೇಡಿಮಣ್ಣನ್ನು ಹಚ್ಚುವರು. ಹೈಗರು ಸಹ ಶವವನ್ನು ಸುಟ್ಟುಬಂದ ಮೇಲೆ ಸೂತಕಿಗಳೆಲ್ಲರೂ ಕ್ಷೌರ ಮಾಡಿಸಿಕೊಳ್ಳುವರು. ಸತ್ತ ದಿವಸ ಮನೆಯಲ್ಲಿ ಇಟ್ಟ ದೀಪಕ್ಕೆ ಹತ್ತು ದಿವಸಗಳವರೆಗೆ ಪಿಂಡಪ್ರದಾನ ಮಾಡುವರು. ಆದರೆ ಮುಖ್ಯವಾಗಿ ಗಮನಿಸುವಂತಹ ಆಚರಣೆಗಳಲ್ಲಿ ವಿಶೇಷವಾದದ್ದು ಬೈಲಗಂಬಾರರು ಸಾಯುವ ಮನುಷ್ಯನ ಧೋತ್ರಗಳನ್ನು ಕಳೆದು ಅವನಿಗೆ ಚಡ್ಡಿ ಹಾಕುವರು ಎನ್ನಲಾಗುತ್ತದೆ. ಮುದ್ನಿಯಾರರು ಸಾಯುವ ಮನುಷ್ಯನ ಬಾಯೊಳಗೆ ತುಳಸಿಪತ್ರ ನೀರು ಹಾಕಿ ದೇವರ ನಾಮೋಚ್ಚಾರವನ್ನು ಮಾಡುತ್ತಾರೆ. ಇದರಿಂದ ಸತ್ತವನಿಗೆ ಮೋಕ್ಷ ದೊರೆಯುತ್ತದಂತೆ. ಸತ್ತ ಬಳಿಕ ಹಿರಿಮಗನು ಸತ್ತವನ ತಲೆ ತೊಳೆದು ಎಣ್ಣೆ ಹಚ್ಚುವನು. ಹೆಣಕ್ಕೆ ಹೊಸ ಬಟ್ಟೆ, ಬಾಯಿಗೆ ಅಕ್ಕಿಕಾಳು, ಅಡಿಕೆಗಳನ್ನು ಹಾಕುವರು. ಹಿರಿಮಗನೇ ಬೆಂಕಿ ಹಿಡಿಯುವುದು, ಹೆಣದ ಮುಂದೆ ವಾದ್ಯಗಳನ್ನು ಬಾರಿಸುವುದು, ಸುಡುಗಾಡಿಗೆ ಹೋದ ಬಳಿಕ ಹೆಣವನ್ನು ದಕ್ಷಿಣಕ್ಕೆ ಕಾಲುಮಾಡಿ ತಾಳಿಯ ಮೇಲೆ ಮಲಗಿಸಿ ಬಾಯಿಗೆ ಅಕ್ಕಿಕಾಳು ಚೆಲ್ಲುವರು, ಹೆಣವನ್ನು ಸುಡುವ ವಿಧಾನವೆಲ್ಲ ಬ್ರಾಹ್ಮಣರಂತೆ ನಡೆಸುವರು. ಇವರು ಮರಣದ ಸೂತಕವನ್ನು ಹದಿನಾರು ದಿವಸ ಹಿಡಿದು ಸೂತಕದವರೆಗೆ ಒಪ್ಪತ್ತು ಮಾತ್ರ ಉಣ್ಣುವರು. ಹದಿನೇಳನೇ ದಿವಸ ಬ್ರಾಹ್ಮಣರ ಭೋಜನ ಮುಂತಾದ ವಿಧಾನ ಮಾಡುವುದು. ತೆಲುಗು ಬಣಜಿಗರು ಹೆಣದ ಭುಜಗಳ ಮೇಲೆ ಬಿದಿರಿನ ಶಂಕಚಕ್ರಗಳನ್ನು ಮಾಡಿವೊತ್ತಿ ಹೆಣವನ್ನು ಸುಡಲಿಕ್ಕೆ ಒಯ್ಯುವರು. ದಾಸರು ಸಹ ಸತ್ತ ಮನುಷ್ಯನ ಭುಜಗಳಿಗೆ ಶಂಕಚಕ್ರಗಳನ್ನು ಕಟ್ಟಿ ಸ್ಮಶಾನದಲ್ಲಿ ತಾಳಿಯ ಮೇಲೆ ಹೆಣವನ್ನು ಹಾಕುವಾಗ ಅವುಗಳನ್ನು ಬಿಚ್ಚಿಕೊಳ್ಳುವರು. ಹತ್ತು ದಿವಸ ಸೂತಕ ಹಿಡಿದು ಐದನೇ, ಆರನೇ ದಿವಸ ಆ ಶಂಖಚಕ್ರಗಳಿಗೆ ಪೂಜೆ ಮಾಡುವರು. ಹೆಣಗಳನ್ನು ಹೆಚ್ಚಾಗಿ ಅನುಕೂಲವಿದ್ದವರು ಸುಡುವರು. ಉಳಿದವರು ಹುಗಿಯುವರು.

ಜೋಗೇರು ಗೋರಿಯೊಳಗೆ ಕೂಡಿಸಿ ಮಣ್ಣುಮುಚ್ಚುವರು. ಡೋರರಲ್ಲಿ ಹೆಣವನ್ನು ಹುಗಿಯುವ ಪೂರ್ವದಲ್ಲಿ ಮಠಪತಿಯು ತನ್ನ ಕಾಲು ಹೆಣದ ತಲೆಯ ಮೇಲೆ ಇಡಬೇಕು. ಹೆಣಗಳನ್ನು ಕೆಲವರು ವಿಮಾನದಲ್ಲಿ(ಹೆಣವನ್ನು ಸಾಗಿಸುವ ಮಂಟಪ) ಒಯ್ದು ಅವನ್ನು ಉತ್ತಮ ಕುಲದವರು ತಮ್ಮ ಹೆಣಗಳನ್ನು ಸುಡುವಾಗಲೂ, ಹುಗಿಯುವಾಗಲೂ ಹೊಲೆಯರಿಗೆ ಭೂಮಿಗೆ ತೆರಿಗೆ ಕೊಡುತ್ತಾರೆ.

ಮುಕ್ರಿಗಳು ಹೆಣವನ್ನು ಹುಗಿಯುವರು. ಮೂರನೇ ದಿವಸ ನೆರೆಯವರನ್ನು ಕರೆದುಕೊಂಡು ಗೋರಿಗೆ ಹೋಗಿ ಅದರ ಮೇಲೆ ಹುಣಸಿರಾಡಿಯಲ್ಲಿ ಕಲಸಿದ ಅನ್ನವನ್ನು ಮೂರು ಅಕ್ಕಿರೊಟ್ಟಿಗಳನ್ನು ಇಟ್ಟು ಅದನ್ನು ಕಾಗೆ ಮುಟ್ಟಿದ ಬಳಿಕ ಮನೆಗೆ ಹೋಗಿ ಸ್ನಾನ ಮಾಡಿ ಉಣ್ಣುವರು. ಹನ್ನೊಂದನೇ ದಿವಸ ಊರಿಗೆ ಊಟ ಹಾಕುವರು. ಬಳಗದವರು ಊರಿಗೆ ಹೋಗುವಾಗ ಕೆಲವು ತಿನ್ನುವ ಪದಾರ್ಥಗಳನ್ನು ತೆಗೆದುಕೊಂಡು ಹೋಗುವರು. ಆ ಪದಾರ್ಥಗಳನ್ನು ಮನೆಯ ಅಡಿಗೆಯ ಪದಾರ್ಥಗಳಲ್ಲಿ ಕೂಡಿಸಿ ಬಾಳೆಯ ಎಲೆಯ ಮೇಲೆ ಹಾಕಿ ಆಕಳಿಗೆ ತಿನ್ನಿಸುವರು. ಊಟವಾದ ಬಳಿಕ ಎಲ್ಲರೂ ಸಿಂದಿ ಕುಡಿಯಬೇಕು. ಮುಂದೆ ವರ್ಷವಾಗುವವರೆಗೆ ಪ್ರತಿತಿಂಗಳಿನ ಶುದ್ಧ ಪ್ರತಿಪದೆಯಲ್ಲಿ ಆಕಳಿಗೆ ಅನ್ನ ಹಾಕುವರು ಎಂದು ತಿಳಿದುಬರುತ್ತದೆ.[೨೨] ಮುಸಲ್ಮಾನರು ಹಿಂದೂಗಳಂತೆ ಆಚರಿಸದರೂ ಕೆಲವೊಂದು ವಿಧಾನದಲ್ಲಿ ವ್ಯತ್ಯಾಸವಿದೆ. ಹೆಣವನ್ನು ಹುಗಿಯುವಾಗ ಕಾಜೀ ಅಥವಾ ಮುಲ್ಲಾನು ಗೋರಿಯ ಬಳಿಯಲ್ಲಿ ನಿಂತು ಖುರಾನನ್ನು ಪಠಿಸಬೇಕು. ಮೂರನೇ ದಿವಸ 'ರಿಝಾರುಖತ್' ಎಂಬ ವಿಧಾನವನ್ನು ಮಾಡಿ ಹತ್ತನೇ ದಿವಸ ಜಾತಿಯವರಿಗೆ ಊಟ ಹಾಕುವುದು. ಮುಖ್ಯವಾಗಿ ಬೊಹೊರಿಗಳು ಸೂರತ್‌ದಲ್ಲಿರುವ ಮುಲ್ಲಾನು ಇವರ ಮುಖ್ಯ ಗುರು ಯಾರಾದರೂ ಸತ್ತರೆ ಈ ಮುಲ್ಲಾನು ಒಂದು ಪತ್ರ ಬರೆದು ಹೆಣದ ಕೈಯಲ್ಲಿ ಕಟ್ಟುವನು. ಅದರಲ್ಲಿ ಈ ಮನುಷ್ಯನಿಗೆ ದಯೆ ಮಾಡಬೇಕೆಂದು ದೇವರಿಗೆ ಪ್ರಾರ್ಥನೆ ಇರುತ್ತದೆ. ಈ ಪತ್ರದ ಛಾಪೇ ಪ್ರತಿಗಳು ಸೂರತ್‌ನಿಂದ ಬರುತ್ತವೆ.

ಕ್ರಿಶ್ಚಿಯನ್ನರಲ್ಲೂ ಸಹ ವಿಭಿನ್ನತೆಯನ್ನು ನೋಡಬಹುದು. ಮರಣದ ಸಂಧಿಯಲ್ಲಿ ಧರ್ಮೋಪ ದೇಶಕನನ್ನು ಕರೆ ಕಳುಹಿಸುವರು. ಅವನು ಬಂದ ಬಳಿಕ ಸಾಯುವ ಮನುಷ್ಯನು ಅವನ ಮುಂದೆ ತಾನು ಮಾಡಿದ ಪಾಪಗಳನ್ನು ವಾಕ್ಯರಿನ ಕ್ಷಮೆಯನ್ನು ಪಡೆಯುವನು. ಅವನಿಗೆ ಧರ್ಮೋಪದೇಶಕನು ಪವಿತ್ರವಾದ ಎಣ್ಣೆಯನ್ನು ಹಚ್ಚುವನು. ಸತ್ತ ಬಳಿಕ ಹೆಣಕ್ಕೆ ಸ್ನಾನ ಮಾಡಿಸಿ, ಹೊಸ ವಸ್ತ್ರ ಉಡಿಸಿ, ಬಿಳಿ ಅರಿವೆಯ ಮೇಲೆ ಮಲಗಿಸಿ ಅದರ ಕೈಯಲ್ಲಿ ಕ್ರೂಸಿಫಿಕ್ಸ(ಅಂದರೆ ಕ್ರೂಸದ ಮೇಲೆ ಏರಿಸಿದ ಯೇಸುಕ್ರಿಸ್ತನ ಮೂರ್ತಿ ಯನ್ನು) ಇಟ್ಟು ಎರಡು ಕೈಗಳನ್ನು ಎದೆಯ ಮೇಲೆ ಕಟ್ಟಿ ಅದರ ತಲೆಯ ಹತ್ತಿರ ಬೇರೊಂದು ದೊಡ್ಡ ಕ್ರೂಸಿಫಿಕ್ಸವನ್ನಿಟ್ಟು ಎರಡು ಮೇಣದ ಬತ್ತಿಗಳನ್ನು ಹಚ್ಚಿಡುವರು. ಬಳಿಕ ತಳವಾರನಂಥ ಜಾತಿಯ ಪರಿಚಾರಕನು ಊರವರನ್ನು ಕರೆಯಲಾಗಿ ಅವರು ಗೊತ್ತು ಮಾಡಿದ ವೇಳೆಗೆ ಕೂಡುವುದು. ತರುವಾಯ ಹೆಣವನ್ನು ಕಾಫಿನ್ ಎಂಬ ಪೆಟ್ಟಿಗೆಯೊಳಗೆ ಇಲ್ಲವೆ ಬಾಯರ ಎಂಬ ಸಿದಿಗೆಯ ಮೇಲೆ ಹಾಕಿ ನಾಲ್ಕರು ಹೊತ್ತುಕೊಂಡು ಧರ್ಮೋಪದೇಶಕ ಸಹಿತ ಎಲ್ಲರೂ ಪರಿವಾರದೊಂದಿಗೆ ಚರ್ಚ್‌ಗೆ ಹೋಗುವರು. ಹೆಣ ಹೊರಟಕೂಡಲೆ ಸತ್ತವನ ಹೆಂಡತಿಯ ಮಂಗಳಸೂತ್ರ, ಕಿವಿಯೊಳಗಿನ ಅಲಂಕಾರಗಳು, ಗಾಜಿನ ಬಳೆ ಇವುಗಳನ್ನು

ತೆಗೆಯುವರು. ಹೆಣವು ಚರ್ಚ್‌ಗೆ ತಂದ ಬಳಿಕ ಅಲ್ಲಿ ಮರಣೋಕ್ತ ಪ್ರಾರ್ಥನೆಗಳನ್ನು ಮಾಡಿ ಅದನ್ನು ಚರ್ಚ್‌ನ ಹೊರಗಿನ ಲೋವಿಯಲ್ಲಾಗಲಿ, ಬೇರೆ ಸ್ಮಶಾನ ಭೂಮಿಯಲ್ಲಾಗಲಿ ಹುಗಿಯುವರು. ಏಳನೇ ದಿವಸ ಬಳಗದವರು ಚರ್ಚ್‌ನಲ್ಲಿ ಕೂಡಿ ಪ್ರಾರ್ಥನೆ ಮಾಡಿ ಸತ್ತವರ ಮನೆಯಲ್ಲಿ ಉಣ್ಣುವರು. ಇದೇ ಪ್ರಕಾರ ೩೦ನೇ ದಿವಸವೂ, ವರ್ಷದ ದಿವಸವೂ ವಿಧಾನವಾಗುತ್ತದೆ. ಮುಂದೆ ಪ್ರತಿವರ್ಷ ಸತ್ತ ದಿವಸ ದೇವರ ಪ್ರಾರ್ಥನೆಯಾಗುತ್ತಿರುತ್ತದೆ. ಸತ್ತ ಬಳಿಕ ಒಂದು ವರ್ಷದವರೆಗೆ ಮನೆಯವರಿಗೆ ಸೂತಕವಿರುವುದು. ಈ ವರ್ಷದ ಸಂದರ್ಭದಲ್ಲಿ ಮನೆಯೊಳಗೆ ಲಗ್ನ ಮುಂತಾದ ಶುಭಕಾರ್ಯಗಳಾಗಕೂಡದೆಂದು ತಿಳಿಸುತ್ತದೆ.[೮೮]

ಮತ್ತೊಂದು ಸಂಗತಿ ಎಂದರೆ ಪಾರ್ಸಿಗಳು ಒಂದು ಬಾವಿಯನ್ನು ಅಗೆದು ಅದರ ಸುತ್ತಮುತ್ತ ಎತ್ತರವಾದ್ದೊಂದು ಗೋಡೆಯ ಕಟ್ಟಿ ಅದರಲ್ಲಿ ಹೆಣಗಳನ್ನು ಇಡಲಿಕ್ಕೆ ಸ್ಥಳವನ್ನು ಮಾಡುವರು. ಸತ್ತವರ ಹೆಣಗಳನ್ನು ಅಲ್ಲಿ ಇಟ್ಟ ಬಳಿಕ ಪಕ್ಷಿಗಳು ಅವುಗಳನ್ನು ತಿನ್ನುತ್ತಾ ಹೋದ ಹಾಗೆ ಅಸ್ಥಿಗಳು ಬಾವಿಯೊಳಗೆ ಬೀಳುತ್ತವೆ.[೮೯] ಹೆಣಗಳನ್ನು ಇಡಲಿಕ್ಕೆ ಮೇಲೆ ಹೇಳಿದಂತೆ ಗೋಡೆಗಳಿಲ್ಲದ್ದರಿಂದ ಅವುಗಳನ್ನು ಹುಗಿಯುವರು ಎಂದು ತಿಳಿದುಬರುವುದರಿಂದ ಇದೊಂದು ಬೇರೆ ದೇಶದ ಸಂಸ್ಕಾರವಿರಬಹುದು ಅಥವಾ ಅತಿ ಪ್ರಾಚೀನ ಕಾಲದ ಸಂಸ್ಕಾರವಿರಬಹುದೆಂದು ಭಾವಿಸಲಾಗಿದೆ. ಒಟ್ಟಿನಲ್ಲಿ ವೈದಿಕ ಸಂಪ್ರದಾಯದಂತೆ ಅನುಕೂಲವಿದ್ದವರು ಹೆಣವನ್ನು ಸುಡುವರು, ಇಲ್ಲದವರು ಹುಗಿಯುವರು. ಹೆಚ್ಚಾಗಿ ಸೂತಕದ ಆಚರಣೆಯನ್ನು ಹನ್ನೊಂದು ದಿನಗಳವರೆಗೆ ಆಚರಿಸುವವರೇ ಹೆಚ್ಚು ಎಂದು ಹೇಳಬಹುದು.

**೩.೩. ಮೈಸೂರು ಸಂಸ್ಥಾನ**

ಹಳೇಯ ಮೈಸೂರು ಎಂದೇ ಕರೆಯುವ ಈ ಘಟಕವು ಏಕೀಕರಣಕ್ಕೆ ಮೊದಲು ಒಟ್ಟು ಒಂಬತ್ತು ಜಿಲ್ಲೆಗಳನ್ನು ಒಳಗೊಂಡಿತ್ತು. ಕ್ರಿ.ಶ. ೧೭೯೯ರಲ್ಲಿ ಮೈಸೂರು ಜಿಲ್ಲೆ ಟಿಪ್ಪುಸುಲ್ತಾನನ ಪತನದ ನಂತರ ಅಸ್ತಿತ್ವಕ್ಕೆ ಬಂದಿತ್ತು. ಮುಖ್ಯವಾಗಿ ಬೆಂಗಳೂರು, ಮೈಸೂರು, ಚಿಕ್ಕಮಗಳೂರು, ತುಮಕೂರು, ಚಿತ್ರದುರ್ಗ, ಶಿವಮೊಗ್ಗ, ಕೋಲಾರ ಈ ಏಳು ಜಿಲ್ಲೆಗಳು ಮಾತ್ರ ೧೮೮೧ರವರೆಗೆ ರಾಜ್ಯದಲ್ಲಿ ಇದ್ದವು. ೧೮೮೬ರಲ್ಲಿ ಹಾಸನವನ್ನು ಎಂಟನೆಯು ಜಿಲ್ಲೆಯನ್ನಾಗಿಯೂ ೧೯೩೯ರಲ್ಲಿ ಮಂಡ್ಯವನ್ನು ಒಂಬತ್ತನೆಯು ಜಿಲ್ಲೆಯನ್ನಾಗಿಯೂ ರೂಪಿಸಲಾಯಿತು.[೯೦]

ವಸಾಹತು ಭಾರತದ ಸುಮಾರು ೫೬೫ ದೇಶಿ ಸಂಸ್ಥಾನಗಳಲ್ಲಿ ಮೈಸೂರು ವಿಸ್ತೀರ್ಣದಲ್ಲಿ ಎರಡನೇ ದೊಡ್ಡ ಸಂಸ್ಥಾನವಾಗಿತ್ತು. ೧೭೯೯ರಲ್ಲಿ ನಾಲ್ಕನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನ ಸೋತು ಕೊಲ್ಲಲ್ಪಟ್ಟ ನಂತರ ಆತನ ರಾಜ್ಯವನ್ನು ಹರಿದು ಹಂಚಿಕೊಳ್ಳಲಾಯಿತು. ಒಂದು ಭಾಗ ಬ್ರಿಟಿಷರಿಗೆ, ಇನ್ನೊಂದು ಭಾಗ ಹೈದರಾಬಾದ್ ನಿಜಾಮನ ಪಾಲಿಗೆ ಹೋದರೆ ಉಳಿದದ್ದನ್ನು ೧೭೬೩ರ ನಂತರ ಮೂಲೆ ಗುಂಪಾಗಿದ್ದ ಮೈಸೂರು ಒಡೆಯರ ಮನೆತನಕ್ಕೆ ವಹಿಸಿಕೊಡಲಾಯಿತು. ಒಡೆಯರ ವಂಶದ ಈ ಪುನಶ್ಚೇತನ ಬ್ರಿಟಿಷರು ಹೇರಿದ ಷರತ್ತುಗಳಿಗೆ ಒಳಪಟ್ಟಿತ್ತು. ತಾವು ದಯಪಾಲಿಸಿದ ರಾಜ್ಯವನ್ನು ವಾಪಸ್ಸು ಪಡೆಯಲು ಸಾಮ್ರಾಜ್ಯಶಾಹಿ ಬ್ರಿಟಿಷರು ಒಪ್ಪಂದದಲ್ಲೇ ಅನುವು ಮಾಡಿಕೊಂಡಿದ್ದರು. ಇದಕ್ಕೆ ಕಾರಣಗಳನ್ನು

ಸೃಷ್ಟಿಸಿಕೊಳ್ಳುವ ಜಾಣ್ಮೆ ಅವರಲ್ಲಿತ್ತು. ೧೮೩೧ರಲ್ಲಿ ನಡೆದ ನಗರದಂಗೆಯ ನೆಪವೊಡ್ಡಿ ಒಡೆಯರ ಮೈಸೂರನ್ನು ಬ್ರಿಟಿಷರು ತಮ್ಮ ನೇರ ಆಡಳಿತಕ್ಕೆ ವಹಿಸಿಕೊಂಡರು. ೧೮೮೧ರ ನಂತರ ಮೈಸೂರು ಒಡೆಯರಿಗೆ ೧೮೩೧ರಿಂದ ೧೮೮೧ರಲ್ಲಿ ವಹಿಸಿಕೊಡಲಾಯಿತು. ಹಾಗೆ ಮಾಡಿದಾಗ ಬ್ರಿಟಿಷರ ಷರತ್ತುಗಳು ಹೆಚ್ಚಿದವು. ಒಟ್ಟಿನಲ್ಲಿ ಮೈಸೂರು ಮತ್ತು ಮೈಸೂರಿನ ರಾಜರು ಬ್ರಿಟಿಷ್ ವಸಾಹತುಶಾಹಿಗಳ ನಡುವೆ ಮೈಸೂರು ೧೫೦ ವರ್ಷಗಳ ಕಾಲ ಪ್ರತ್ಯೇಕ್ಷ ಹಾಗೂ ಅಪರೋಕ್ಷವಾಗಿ ಆಳ್ವಿಕೆ ನಡೆಸಿರುವುದು ಸ್ಪಷ್ಟ.[೧೧]

ವಸಾಹತುಶಾಹಿಗಳ ಮೈಸೂರು ಜಿಲ್ಲೆಯನ್ನು ಕುರಿತು ಸಾಮಾನ್ಯವಾಗಿ ಮಾಹಿತಿಯನ್ನು ಕಲೆಹಾಕಿದರೆ ಆಡಳಿತದ ವ್ಯವಸ್ಥೆಯ ಬಗ್ಗೆ ತಿಳಿಯಲು ಮುಖ್ಯವಾಗಿ ಈ ಕಾಲಘಟ್ಟದಲ್ಲಿ ಅನೇಕ ಪ್ರಮುಖ ಕೃತಿಗಳ ರಚನೆಗೊಂಡಿರುವುದು ಸ್ಪಷ್ಟ. ಪ್ರಮುಖವಾಗಿ ಮೈಸೂರು ಪ್ರಾಂತ್ಯಕ್ಕೆ ಸಂಬಂಧಿಸಿದಂತೆ ಗ್ಯಾಸೆಟಿಯರ್ ಹಾಗೂ ಇತರ ಕೃತಿಗಳನ್ನು ನೋಡುವುದಾದರೆ ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿದಂತೆ ಎಚ್. ವೆಲ್ಲೆಸ್ಲಿಯವರು ೧೮೬೯ರಲ್ಲಿಯೇ ಮೈಸೂರು ಜಿಲ್ಲೆಗೆ ಸಂಬಂಧಿಸಿದಂತೆ ಗ್ಯಾಸೆಟಿಯರ್ ಸಂಪುಟವನ್ನು ತಯಾರಿಸಿದರೆಂದು ಬಿ.ಎಲ್. ರೈಸ್ ಅವರೇ ತಮ್ಮ ಪ್ರಥಮ ಸಂಪುಟದ ಮುನ್ನುಡಿಯಲ್ಲಿ ದಾಖಲಿಸಿರುತ್ತಾರೆ. ಆದರೂ ಈ ಕೃತಿಯು ಇದುವರೆಗೂ ದೊರೆತಿಲ್ಲವೆಂಬ ಅಭಿಪ್ರಾಯವಿದೆ.[೧೨] ಆದ್ದರಿಂದ ಇದು ಮೈಸೂರು ಪ್ರಾಂತ್ಯದ ಪ್ರಥಮ ಗ್ಯಾಸೆಟಿಯರ್ ಕೃತಿಯೆಂದು ಪರಿಗಣಿಸಲಾಗುತ್ತದೆ ಹೊರತು ಇದರಲ್ಲಿರುವ ಮಾಹಿತಿ ಏನೆಂದು ತಿಳಿದುಬರುವುದಿಲ್ಲ. ಅನಂತರ ಸಾರ್ವಜನಿಕ ಶಿಕ್ಷಣ ಇಲಾಖೆಯ ಪ್ರಥಮ ನಿರ್ದೇಶಕರಾಗಿದ್ದ ಬೆಂಜಮಿನ್ ಲೂಯಿ ರೈಸ್ ಅವರು ಸಂಪಾದಿಸಿದ ಪ್ರಮುಖ ಹಾಗೂ ಪ್ರಥಮವಾಗಿ ಸಿಗುವ ಗ್ಯಾಸೆಟಿಯರ್‌ಗಳು 'ಮೈಸೂರು ಅಂಡ್ ಕೂರ್ಗ್ ಗ್ಯಾಸೆಟಿಯರ್‌ಗಳು' ಇವು ಮೂರು ಸಂಪುಟಗಳಲ್ಲಿ ೧೮೭೬ರಲ್ಲಿ ರಚನೆಗೊಂಡವು. ಇವು ದೇಶದಲ್ಲಿಯೇ ಉತ್ತಮ ಪ್ರಯತ್ನವೆಂದು ಪರಿಗಣಿಸಲ್ಪಟ್ಟಿವೆ. ಇದರಲ್ಲಿ ಮೈಸೂರು ಗ್ಯಾಸೆಟಿಯರ್ ಒಂದು. ಎರಡನೇ ಮೈಸೂರು ಜಿಲ್ಲೆಯ ಬಗ್ಗೆ ಮಾಹಿತಿ ನೀಡುತ್ತವೆ. ಮೂರನೆಯ ಸಂಪುಟವು ಕೂರ್ಗ್ ಪ್ರಾಂತ್ಯದ ಬಗ್ಗೆ ಮಾಹಿತಿ ನೀಡುತ್ತದೆ. ಮೊದಲ ಸಂಪುಟವು ಮೈಸೂರು ಜಿಲ್ಲೆಯ ಬಗ್ಗೆ ಮಾಹಿತಿ ನೀಡಿದರೆ, ಎರಡನೇ ಸಂಪುಟವು ಮೈಸೂರು ಪ್ರಾಂತ್ಯದ ಮಂಡ್ಯ ಜಿಲ್ಲೆ ಬಿಟ್ಟು ಉಳಿದ ಎಂಟು ಜಿಲ್ಲೆಗಳ ಕುರಿತು ಗ್ಯಾಸೆಟಿಯರ್ ರೂಪದ ಮಾಹಿತಿ ನೀಡುತ್ತವೆ. ಮೂರನೇ ಸಂಪುಟವು ಕೊಡಗಿಗೆ ಸೀಮಿತವಾಗಿದೆ. ಆ ಕಾಲದಲ್ಲಿ ಮೈಸೂರು ಮತ್ತು ಕೊಡಗು ಪ್ರಾಂತ್ಯಗಳು ಬಹು ಸಮೀಪವಾಗಿದ್ದವು. ಹಳೆಯ ಮೈಸೂರು ರಾಜ್ಯದ ಬ್ರಿಟಿಷ್ ಅಧಿಕಾರಿಯೇ ಕೊಡಗಿನ ಮೇಲಧಿಕಾರಿಯಾಗಿದ್ದನು. ಆ ಕಾರಣದಿಂದಲೇ ಎರಡು ಸಂಪುಟದೊಂದಿಗೆ ಈ ಕೂರ್ಗ್‌ನ ಸಂಪುಟವನ್ನು ತರಲಾಯಿತು.[೧೩] ರೈಸ್ ಅವರು ೧೫ ವರ್ಷಗಳ ಕಾಲ ಕೊಡಗಿನಲ್ಲಿ ಶಿಕ್ಷಣ ಶಾಲಾ ಇನ್‌ಸ್ಪೆಕ್ಟರ್ ಆಗಿ ಸೇವೆ ಸಲ್ಲಿಸಿದ್ದರಿಂದ ಕೊಡಗನ್ನು ಸಂಪೂರ್ಣವಾಗಿ ಸ್ವತಃ ಕಣ್ಣಾರೆ ಕಂಡಿದ್ದಾರೆ. ಈ ಮೈಸೂರು ಗ್ಯಾಸೆಟಿಯರ್ ಬಗ್ಗೆ ೧೮೮೧ರ ಇಂಪೀರಿಯಲ್ ಗ್ಯಾಸೆಟಿಯರ್ ಸಂಪುಟಗಳನ್ನು ಸಂಪಾದಿಸಿದ ವಿಲಿಯಮ್ ವಿಲ್ಸನ್ ಹಂಟರ್ ಅವರು ತಮ್ಮ ಪ್ರಥಮ ಸಂಪುಟದ ಮುನ್ನುಡಿಯಲ್ಲಿ ಬಿ.ಎಲ್. ರೈಸ್ ಅವರ ಪರಿಪಕ್ವ ಸಂಪಾದಕತ್ವದ ಬಗ್ಗೆ ವೈಭವಯುತ ವಾಕ್ಯಗಳಲ್ಲಿ ಶ್ಲಾಘಿಸಿರುತ್ತಾರೆ. ಅನಂತರ ಬಿ.ಎಲ್.

ರೈಸ್ ಅವರೇ ೧೮೯೭ರಲ್ಲಿ ಮೈಸೂರು ಗ್ಯಾಸೆಟಿಯರ್ ಎರಡು ಸಂಪುಟಗಳನ್ನು ಪರಿಷ್ಕರಿಸಿ ಪುನಃ ಪ್ರಕಟಿಸಿದರು.[೧೪] ಅನಂತರ ಶ್ರೀ ಬಿ. ಕೃಷ್ಣಯ್ಯಂಗಾರ್ ಅವರು ೧೮೬೯ರಲ್ಲಿ ಕೋಲಾರ ಜಿಲ್ಲೆಗೆ ಸಂಬಂಧಿಸಿದಂತೆ ಗ್ಯಾಸೆಟಿಯರ್ ರಚನೆ ಮಾಡಿದರು. ಆದರೆ ಅದರ ಪತ್ತೆಹಚ್ಚುವ ಪ್ರಯತ್ನವು ವಿಫಲಗೊಂಡಿದೆ ಎನ್ನಲಾಗುತ್ತದೆ. ಇವಲ್ಲದೆ, ಶಿವಮೊಗ್ಗಕ್ಕೆ ಸಂಬಂಧಿಸಿದಂತೆ ಕ್ಯಾಪ್ಟನ್ ಗೋರ್ಡನ್ ಹಾಸನ ಜಿಲ್ಲಾ ಗ್ಯಾಸೆಟಿಯರನ್ನು ಮೇಜರ್ ಡಬ್ಲ್ಯು. ಹಿಲ್ ಅವರು ತಂದರು. ತುಮಕೂರಿಗೆ ಸಂಬಂಧಿಸಿದಂತೆ ಮೇಜರ್ ಸಿ. ವೇಯರ್ಸ್ ಅವರು ಹೊರತಂದರಲ್ಲದೆ, ಚಿತ್ರದುರ್ಗಕ್ಕೆ ಸಂಬಂಧಿಸಿದಂತೆ ಮಿಸ್ಟರ್ ಕೃಷ್ಣರಾವ್ ಅವರು ಗ್ಯಾಸೆಟಿಯರ್ ರಚಿಸಿದರು. ಆದರೆ ಕಡೂರು ಮತ್ತು ಬೆಂಗಳೂರು ಜಿಲ್ಲೆಗಳ ಗ್ಯಾಸೆಟಿಯರ್ ರಚನೆ ಕಾರ್ಯ ಕೈಗೊಂಡಿದ್ದರೂ ಅವು ಪೂರ್ಣಗೊಳ್ಳಲಿಲ್ಲ.[೧೫] ಇವುಗಳಲ್ಲದೆ ಅನಂತರದಲ್ಲಿ ರಾವ್‌ಬಹದ್ದೂರ್ ಸಿ. ಹಯವದನರಾವ್ ಅವರು ೧೯೨೭-೩೦ರಲ್ಲಿ ಅತ್ಯಂತ ಪರಿಶ್ರಮತೆಯ ಪ್ರಯತ್ನವನ್ನು ಮಾಡಿ ಮೈಸೂರು ಪ್ರಾಂತ್ಯಕ್ಕೆ ಸಂಬಂಧಿಸಿದಂತೆ ಐದು ಸಂಪುಟಗಳು ಎಂಟು ಭಾಗದಲ್ಲಿ ಗ್ಯಾಸೆಟಿಯರ್‌ಗಳನ್ನು ರಚಿಸಿದರು. ಈ ಗ್ಯಾಸೆಟಿಯರ್‌ಗಳಲ್ಲದೆ ಸಮಕಾಲೀನ ಕೃತಿಗಳೂ ಸಹ ಪ್ರಮುಖವಾಗಿದೆ. ಅವುಗಳೆಂದರೆ: ಎಂ. ಶ್ಯಾಮರಾವ್ ಅವರ 'ಮಾಡರ್ನ್ ಮೈಸೂರು' ಎರಡು ಸಂಪುಟಗಳು, ಮಾರ್ಕ್ಸ್‌ವಿಲ್ಕ್ಸ್‌ನ 'Historical Sketches of The South of India' ಎಂಬ ಎರಡು ಸಂಪುಟಗಳು, ಹಾಗೆಯೇ ಫ್ರಾನ್ಸಿಸ್ ಬುಕಾನನ್ ಅವರ 'ಎ ಜರ್ನಿ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಅಂಡ್ ಮಲಬಾರ್' ಎಂಬ ಮೂರು ಸಂಪುಟಗಳು(೧೮೦೭). ಇವುಗಳಲ್ಲದೆ ಎಂ. ಗುಂಡಣ್ಣ ಅವರ ಮೈಸೂರಿನ ಕೈಗನ್ನಡಿ ಎಂಬ ವಾರ್ಷಿಕ ವರದಿಗಳು ಇವುಗಳಲ್ಲದೆ ಇನ್ನೂ ಸಮಕಾಲೀನ ಕೃತಿಗಳೂ ಸಹ ಮೈಸೂರು ಪ್ರಾಂತ್ಯದ ಬಗ್ಗೆ ಮಾಹಿತಿ ನೀಡುತ್ತವೆ.

**೩.೩.೧. ಮೈಸೂರು ಸಂಸ್ಥಾನದ ಜನಸಂಖ್ಯೆ**

ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿದಂತೆ ಮೊದಲು ಜನಗಣತಿ ಪ್ರಾರಂಭಿಸಿದ್ದು ೧೮೪೦-೪೧ರಲ್ಲಿ. ಆಮೇಲೆ ೧೮೫೧-೫೨ರಲ್ಲಿ. ಇದು ೧೦ ವರ್ಷಗಳಿಗೊಮ್ಮೆ ನಡೆಯುತ್ತಿತ್ತು. ಆದರೆ ಸರಿಯಾದ ಮಾರ್ಗವನ್ನು ೧೮೭೧ರಿಂದ ಪ್ರಾರಂಭಿಸಲಾಯಿತು. ಆದರೆ ಬಿ.ಎಲ್. ರೈಸ್ ಅವರು ಮೈಸೂರು ಜಿಲ್ಲೆಯ ಜನಸಂಖ್ಯೆಯನ್ನು ೧೮೦೧ರಿಂದಲೇ ಮಾಹಿತಿ ನೀಡಿದ್ದಾರೆ. ೧೮೦೧ರಲ್ಲಿ ಜನಸಂಖ್ಯೆಯು ೧೯೬೯, ೪೯೩ರಷ್ಟಿತ್ತು. ಅನಂತರ ೧೮೦೪ರಲ್ಲಿ ೨೧,೭೧,೭೫೪ರಷ್ಟಕ್ಕೆ ಏರಿತು. ಅನಂತರ ೧೮೩೨ರಲ್ಲಿ ೩,೫೦೦,೦೦೦ರಷ್ಟು ಏರಿತ್ತು. ೧೮೪೧ರಲ್ಲಿ ೩೦,೫೦,೭೧೩ರಷ್ಟಕ್ಕೆ ಇಳಿಯಿತು. ೧೮೫೧ರಲ್ಲಿ ೩೪,೨೬,೪೫೮ರವರೆಗೆ ಇಳಿಯಿತು. ಇದು ೧೮೫೧ರಿಂದ ಪ್ರಾರಂಭವಾದ ಮಾಹಿತಿ ೧೮೭೧ರವರೆಗೆ ೧೮೫೩ರ ವರ್ಷ ಬಿಟ್ಟರೆ ಪ್ರತಿವರ್ಷದ ಮಾಹಿತಿಯನ್ನು ನೀಡಿದ್ದಾರೆ. ಕ್ರಿ.ಶ. ೧೮೪೧-೫೧ರಲ್ಲಿ ಶೇಕಡಾ ೧೨.೩ರಷ್ಟಿತ್ತು, ಆದರೆ ೧೮೫೧-೬೦ರಲ್ಲಿ ೯ ವರ್ಷಗಳಲ್ಲಿ ಜನಸಂಖ್ಯೆ ಶೇಕಡಾ ೧೧.೫ರಷ್ಟು ಇಳಿಮುಖವಾಯಿತು. ೧೮೬೦-೭೦ರಲ್ಲಿ ೭.೫ಕ್ಕೆ ಮತ್ತಷ್ಟು ಇಳಿದ ಬಗ್ಗೆ ಮಾಹಿತಿ ಸಿಗುತ್ತದೆ.[೧೬]

ಮೈಸೂರು ಪ್ರಾಂತ್ಯವು ಒಳಗೊಂಡಿದ್ದ ೮ ಜಿಲ್ಲೆಗಳ ಜನಸಂಖ್ಯೆಯ ಮಾಹಿತಿಯನ್ನು ಈ ರೀತಿ ವಿವರಿಸುತ್ತಾರೆ.

| ಜಿಲ್ಲೆ | ಸುಮಾರು ಏರಿಯಾ | ಪುರುಷ | ಮಹಿಳೆ | ಒಟ್ಟು | ಕಿಲೋಮೀಟರ್ ಗಂಟೆ | ಶೇಕಡಾವಾರು |
|---|---|---|---|---|---|---|
| ಬೆಂಗಳೂರು | ೩.೦೮೧ | ೩೯೯.೪೮೬ | ೪೦೩.೫೦೮ | ೮೦೨.೯೯೪ | ೨೬೦ | ೧೬.೨೪ |
| ಕೋಲಾರ | ೩.೪೩೩ | ೨೯೭.೬೫೫ | ೨೦೩.೩೭೫ | ೫೦೧.೦೩೦ | ೧೭೫ | ೧೧.೯೬ |
| ತುಮಕೂರು | ೪.೩೬೭ | ೨೯೧.೧೩೩ | ೨೮೯.೬೫೩ | ೧೮೧.೮೧೪ | ೧೩೩ | ೧೧.೭೫ |
| ಮೈಸೂರು | ೫.೦೭೮ | ೫೮೦.೭೩೭ | ೬೦೧.೦೭೭ | ೧.೧೮೧.೮೧೪ | ೨೩೨ | ೨೩.೯೦ |
| ಹಾಸನ | ೨.೬೦೩ | ೨೫೫.೦೪೪ | ೨೫೯.೯೦೮ | ೫೧೪.೯೫೨ | ೧೯೭ | ೧೦೪೨ |
| ಶಿವಮೊಗ್ಗ | ೪.೦೪೮ | ೨೭೫.೮೮೪ | ೨೫೨.೦೯೭ | ೫೨೭.೯೮೧ | ೧೩೦ | ೧೦.೬೮ |
| ಕಡೂರು | ೨.೬೮೫ | ೧೭೩.೯೨೨ | ೧೫೬.೧೪೧ | ೩೩೦.೦೬೩ | ೧೨೩ | ೬.೬೭ |
| ಚಿತ್ರದುರ್ಗ | ೪.೦೧೦ | ೨೦೯.೫೯೦ | ೨೦೪.೩೯೪ | ೪೧೩.೯೮೪ | ೧೦೩ | ೮.೩೮ |

ಇಲ್ಲಿ ಪ್ರಮುಖವಾಗಿ ಮೈಸೂರು ಜಿಲ್ಲೆಯೇ ಅಧಿಕ ಜನಸಾಂದ್ರತೆ ಹೊಂದಿರುವುದಾಗಿದೆ. ಕಡಿಮೆ ಜನಸಾಂದ್ರತೆಯನ್ನು ಕಡೂರು ಹೊಂದಿದೆ.[೯೭]

ಆದರೆ ಸರಿಯಾದ ಜನಗಣತಿ ೧೮೭೧ರಿಂದ ಪ್ರಾರಂಭವಾಗಿ ೧೦ ವರ್ಷಗಳಿಗೊಮ್ಮೆ ನೀಡಲಾಯಿತು. ಆ ಜನಸಂಖ್ಯೆಯು ಈ ರೀತಿ ಇರುತ್ತದೆ.

| ವರ್ಷ | ಪುರುಷ | ಮಹಿಳೆ | ಒಟ್ಟು | ವಿವಿಧ ಶೇಕಡಾವಾರು | No. per Squire mile |
|---|---|---|---|---|---|
| ೧೮೭೧ | ೨.೫೩೫.೯೨೪ | ೨.೫೧೯.೪೮೮ | ೫.೦೫೫.೪೧೨ | - | ೧೭೨.೫ |
| ೧೮೮೧ | ೨.೦೮೫.೮೪೨ | ೨.೧೦೦.೩೪೬ | ೪.೧೮೬.೧೮೮ | -೧೭.೧೯ | ೧೪೨.೮ |
| ೧೮೯೧ | ೨.೪೮೩.೪೫೧ | ೨.೪೬೦.೧೫೩ | ೪.೯೬೩.೬೦೪ | +೧೮.೦೯ | ೧೬೮.೬[೯೮] |
| ೧೯೦೧ | | | ೫.೫೩೯.೩೯೯ | +೧೨.೧ | |
| ೧೯೧೧ | | ೫.೮೦೬.೧೯೩ | | +೪.೮ | |
| ೧೯೨೧ | | ೫.೯೭೮.೮೯೨ | | +೩.೦ | |

ತಾಲೂಕುಗಳಲ್ಲಿಯೂ ಸಹ ೧೮೭೧ರಿಂದ ೧೯೨೧ರವರೆಗೆ ಸಿ. ಹಯವದನರಾವ್ ಅವರ ಗ್ಯಾಸೆಟಿಯರ್ ಪದ್ಧತಿ ಇತ್ತು. ಇವರದ್ದು ಬಿ.ಎಲ್. ರೈಸ್ ನಂತರ ಮುಂದುವರೆದ ಭಾಗವೆಂದರೂ ತಪ್ಪಲ್ಲ.[೯೯] ಇಲ್ಲಿ ೧೮೯೧ರವರೆಗೆ ಬಿ.ಎಲ್. ರೈಸ್ ಗ್ಯಾಸೆಟಿಯರ್ ಮಾಹಿತಿಯನ್ನೇ ನೀಡಿದ್ದಾರೆ. ನಂತರ ತಮ್ಮ ಜನಸಾಂದ್ರತೆ ನೀಡಿರುವುದನ್ನು ಕಾಣಬಹುದು.

೧೮೯೧ರಲ್ಲಿ ಮೈಸೂರು ಜಿಲ್ಲೆಯ ಎಲ್ಲಾ ಜನಸಮುದಾಯದಲ್ಲಿರುವ ಸಂಖ್ಯೆ

| | | |
|---|---|---|
| ಹಿಂದೂಗಳು | ೪.೬೩೯.೧೦೪ | ೯೩.೮೪% ರಷ್ಟು |
| ಜೈನರು | ೧೩.೨೭೮ | ೨೭ |

| | | |
|---|---|---|
| ಮುಸಲ್ಮಾನರು | ೨೫೨.೯೭೩ | ೫.೧೧ |
| ಕ್ರಿಶ್ಚಿಯನ್ನರು | ೩೮.೧೩೫ | ೧೧ |
| ಬೇರೆಯವರು | ೧೧೪ | - |

ಒಟ್ಟು ಮೇಲಿನ ೧೮೯೧ರ ಜನಸಂಖ್ಯೆಯು ೪.೯೪೩.೬೦೪ರಷ್ಟಿತ್ತು.[೧೦೦] ಆದರೆ ಮೈಸೂರು ಸಂಸ್ಥಾನದಲ್ಲಿ ಮೈಸೂರು ಪ್ರಜೆಗಳ ಸಂಖ್ಯೆಯಲ್ಲಿ ಒಂದು ಸಾವಿರದಲ್ಲಿ ೫೪ ಮಂದಿ ಇದ್ದಾರೆ. ಹೊರಗಿನವರು ಅನೇಕರು ಇರುತ್ತಿದ್ದರೆಂದು ಗೊತ್ತಾಗುತ್ತದೆ.

| | | |
|---|---|---|
| ಅ. | ಇಂಡಿಯಾ ದೇಶದ ಇತರ ಭಾಗಗಳಿಂದ ಬಂದಿರುವವರು | ೩,೦೮,೨೦೨ |
| ಆ. | ಏಷ್ಯಾಖಂಡ | -೨೮೩ |
| ಇ. | ಯುರೋಪ್ ಖಂಡದಿಂದ | -೪,೨೬೩ |
| ಈ. | ಆಫ್ರಿಕಾ, ಅಮೆರಿಕಾಗಳಿಂದ | -೧೬೦ |
| | ಒಟ್ಟು | ೩,೧೨,೯೦೮ |

ಅ. ಇದರಲ್ಲಿ ಇಂಡಿಯಾ ದೇಶದ ನಾನಾ ಪ್ರದೇಶಗಳಿಂದ ಮೈಸೂರು ಸಂಸ್ಥಾನದೊಳಗೆ ಬಂದಿರತಕ್ಕಂತಹ ಸಂಖ್ಯೆ:

| | |
|---|---|
| ಮದ್ರಾಸ್ ಆಧಿಪತ್ಯದಿಂದ | -೨,೬೩,೩೬೨ |
| ಮುಂಬಯಿ | ೨೮,೭೩೨ |
| ಕೊಡಗು | ೩,೦೭೧ |
| ಬ್ರಿಟಿಷರಿಗೆ ಸೇರಿದ ಇತರ ಪ್ರಾಂತ್ಯಗಳಿಂದ | ೪,೮೯೬ |
| ಇತರ ದೇಶೀಯ ಸ್ಥಾನಗಳಿಂದ | ೭,೩೭೩ |
| ಫ್ರೆಂಚರಿಗೂ, ಪೋರ್ಚ್‌ಗೀಸರಿಗೂ ಸೇರಿದ ಪ್ರಾಂತ್ಯಗಳಿಂದ | ೭೩೮ |

ಮೈಸೂರು ಸೀಮೆಯಲ್ಲಿ ಹುಟ್ಟಿದ ೧,೩೧,೨೫೭ ಮಂದಿ ಸಂಸ್ಥಾನದ ಹೊರಗಡೆ ವಾಸವಾಗಿರುವರೆಂದು ತಿಳಿದುಬರುತ್ತದೆ. ಸರಾಸರಿ ೪೫ ಮಂದಿ ದೇಶದಿಂದ ಹೊರಕ್ಕೆ ಹೋದರೆ ೧೦೦ ಮಂದಿ ಒಳಗೆ ಬಂದಿರುವಂತೆ ಕಾಣುತ್ತದೆ.

ಶೇಕಡಾವಾರು ವೆಚ್ಚಗಳ ಪ್ರಕಾರ:

| ವರ್ಷ | ಹೋದವರು | ಬಂದವರು |
|---|---|---|
| ೧೮೯೧ | ೧,೪೩,೫೩೩ | ೧,೬೬,೬೮೮ |
| ೧೯೦೧ | ೧,೩೨,೩೪೨ | ೨,೮೧,೫೨೬ |
| ೧೯೧೧ | ೧,೩೧,೨೫೭ | ೩,೧೨,೯೦೮ |

ದೇಶದಿಂದ ಹೊರಗೆ ಹೋಗಿ ಸಂಪಾದನೆ ಮಾಡಿಕೊಂಡು ಬರುವವರ ಸಂಖ್ಯೆ ಕ್ರಮೇಣ ಕಡಿಮೆಯಾಗುತ್ತಿದೆಯೆಂದೂ ಹೊರಗಿನಿಂದ ಬಂದು ಇಲ್ಲಿ ಸಂಪಾದನೆ ಮಾಡತಕ್ಕವರು ಹೆಚ್ಚುತ್ತಿರುವರೆಂದು

ಈ ಮೇಲಿನ ಪಟ್ಟಿಯಿಂದ ಗೊತ್ತಾಗುತ್ತದೆ. ಇದು ಗಮನಿಸಬೇಕಾದ ಅಂಶ ಎಂಬ ಮಾಹಿತಿ ಸಿಗುತ್ತದೆ.[೧೦೧] ಗ್ಯಾಸೆಟಿಯರ್‌ಗಳಲ್ಲಿ ಈ ರೀತಿ ಯಾವ ಕಾರಣಕ್ಕೆ ವಲಸೆ ಹೋದರೆಂಬ ಬಗ್ಗೆ ಸ್ಪಷ್ಟ ಮಾಹಿತಿ ನೀಡದೇ ಇರುವುದು ವಸಾಹತುಶಾಹಿಗಳ ಆಡಳಿತದ ಧೋರಣೆಯೆಂಬುದು ಸಹಜವಾಗಿದೆ.

**೩.೩.೨. ಮೈಸೂರು ಸಂಸ್ಥಾನದ ಜಾತಿ ವ್ಯವಸ್ಥೆ**

ಮಾನವಶಾಸ್ತ್ರದ ಕುರಿತು ಮೈಸೂರಿನಲ್ಲಿ ಸರ್ವೇ ಕೆಲಸವು ೧೯೦೩ರಲ್ಲಿ ದಿವಾನ್ ಎಚ್.ವಿ. ನಂಜುಂಡಯ್ಯ ಅವರ ನೇತೃತ್ವದಲ್ಲಿ ಪ್ರಾರಂಭವಾಯಿತು. ಇದು ೧೬-೧೭ ವರ್ಷಗಳ ಸಮಯ ತೆಗೆದುಕೊಂಡಿತ್ತು. ಈ ಕಾರ್ಯ ೧೯೨೪ರಲ್ಲಿ ಮುಗಿದಿತ್ತು. ಇದರಲ್ಲಿರುವ ಪ್ರಬಂಧಗಳು ಮತ್ತು ಲಘುಶಬ್ದಕೋಶಗಳು ಜಾತಿಗಳ ಬಗ್ಗೆ ಮಾಹಿತಿ ನೀಡುತ್ತವೆ.[೧೦೨] ಮದ್ರಾಸ್ ಮತ್ತು ಮೈಸೂರು Census ವರದಿ(೧೯೦೧) ಮತ್ತು ಮೈಸೂರು ಸೆನ್ಸಸ್ ವರದಿ (೧೯೧೧) ಮತ್ತು ಮಿಸ್ಟರ್ ಥರ್ಸ್ಟನ್ ಅವರ 'Castes Tribes of Southern India' ಎಂಬ ಪುಸ್ತಕಗಳು ಬಹಳ ಮುಖ್ಯವಾದ ಮಾಹಿತಿಯನ್ನು ಜಾತಿ ಬಗ್ಗೆ ನೀಡುತ್ತವೆ. ಇದಲ್ಲದೆ L.K. Ananthakrishna Iyer ಅವರ The Mysore Tribes and Castes ೫ ಸಂಪುಟಗಳು ಸಹ ಮೈಸೂರು ಜಾತಿ ಬುಡಕಟ್ಟುಗಳ ಬಗ್ಗೆ ಮಾಹಿತಿ ನೀಡುತ್ತವೆ. ಬಿ.ಎಲ್. ರೈಸ್ ಅವರು ಜಾತಿಯ ಬಗ್ಗೆ ತಮ್ಮ ಮೈಸೂರು ಗ್ಯಾಸೆಟಿಯರ್‌ನಲ್ಲಿ ಸ್ಪಷ್ಟವಾದ ಮಾಹಿತಿಗಳ ಮೂಲಕ ತಿಳಿಸುತ್ತಾರೆ. ಮೈಸೂರಿನಲ್ಲಿಯೇ ವಿವಿಧ ರೀತಿಯ ಜಾತಿಗಳಿವೆ. ಭಾರತದ ಬೇರೆ ಕಡೆ ಎಲ್ಲಿಯೂ ಇಷ್ಟು ಜಾತಿಗಳು ಕಂಡುಬರುವುದಿಲ್ಲ. ಈ ದೇಶದ ಮೈಸೂರಿನಲ್ಲಿ ಬಲಗೈ(Righthand faction) ಎಡಗೈ(Lefthand faction) ಎಂದು ಎರಡು ಭಾಗಗಳಾಗಿ ವಿಭಜಿತಗೊಂಡಿವೆ. ಬುಕಾನನ್ ಪ್ರಕಾರ ಹಿಂದೂಗಳಲ್ಲಿ ಬೇರೆಡೆ ಇದನ್ನು ನಾನು ಕಂಡಿದ್ದರೂ ಇಲ್ಲಿ ಅದರ ಪರಿಣಾಮ ತೀವ್ರವಾಗಿರುವುದು ಕಂಡೆ ಎಂದಿದ್ದಾರೆ.[೧೦೩]

ಮುಖ್ಯವಾಗಿ ಬಿ.ಎಲ್. ರೈಸ್ ಅವರು ಬಲಗೈ ಪಂಗಡ ಮತ್ತು ಎಡಗೈ ಪಂಗಡ ಎಂದು ಎರಡು ಗುಂಪುಗಳಾಗಿ ವಿಂಗಡಿಸಿದ್ದಾರೆ. ಇಲ್ಲಿ ಬರುವ ಜಾತಿಗಳೆಂದರೆ:

| **ಬಲಗೈ ಪಂಗಡ** | **ಎಡಗೈ ಪಂಗಡ** |
|---|---|
| ೧. ಬಣಜಿಗ - ವ್ಯಾಪಾರಿಗಳು | ೧. ಪಂಚಾಲರು: ಪ್ರಮುಖ ಗುಂಪುಗಳೆಂದರೆ ಕಮ್ಮಾರ, ಅಕ್ಕಸಾಲಿಗ, ಬಡಿಗೇರು, ಕಂಚುಗಾರ, ಕಲ್ಲುಕುಟಿಗ (ಇವರನ್ನೆಲ್ಲಾ ಪಂಚಾಳರು ಎಂದು ಕರೆಯುವರು) |
| ೨. ಒಕ್ಕಲಿಗ | ೨. ಭೇರಿ (Bheri) |
| ೩. ಗಾಣಿಗ | ೩. ದೇವಾಂಗ |
| ೪. ಬಣ್ಣಗಾರ | ೪. ಹೆಗಣ್ಣಿಗ (ಎಣ್ಣೆ, ಹಾಲು ಮಾರುವವರು) |
| ೫. ಲಾಡ - ಮರಾಠಿ ವರ್ತಕ | ೫. ಗೊಲ್ಲ / ದಾನಪಾಲರು |
| ೬. ಗುಜರಾತಿ - ಗುಜರಾತಿ ವ್ಯಾಪಾರಿಗಳು | ೬. ಬೇಡ |
| ೭. ಕೊಮಟಿ - Labourers | ೭. ಯಕುಲ |

೮. ಜೈನರು - ಜೈನ ವರ್ತಕರು

೮. ಪಲ್ಲೆ / ತಿಗಲರು

೯. ಕುರುಬ

೯. ಮಾದಿಗ

೧೦. ಕುಂಬಾರ, ೧೧. ಅಗಸ, ೧೨. ಬೆಸ್ತ, ೧೩. ಪದ್ಮಸಾಲೆ, ೧೪. ನಾಯಿಂಡ, ೧೫. ಉಪ್ಪಾರ, ೧೬. ಚಿತ್ರಗಾರ, ೧೭. ಗೊಲ, ೧೮. ಹೊಲೆಯ (ಕೆಳಜಾತಿಯವ).

ಇಲ್ಲಿ ಬಲಗೈಯಲ್ಲಿ ೧೮ ಜಾತಿಗಳಿವೆ, ಎಡಗೈಯಲ್ಲಿ ೯ ಜಾತಿಗಳಿವೆ. ದಕ್ಷಿಣ ಭಾರತದಲ್ಲಿ ಹಲವು ರಾಜ್ಯಗಳಲ್ಲಿ ಈ ರೀತಿಯ ಜಾತಿಗಳಿವೆ. ಮುಖ್ಯವಾಗಿ ಮದ್ರಾಸ್ ಹಾಗೂ ಮೈಸೂರು ಪ್ರಾಂತ್ಯದಲ್ಲಿ ನೋಡಬಹುದು. ಇದನ್ನು ಕ್ರಿ.ಶ. ೧೧ನೇ ಶತಮಾನದ ಶಾಸನದಲ್ಲಿಯೂ ಇದರ ಕುರಿತು ವಿವರಣೆ ಇದೆ. ಕೃಷಿ, ಕಲಾನೈಪುಣ್ಯ, ವ್ಯಾಪಾರವರ್ಗದವರು ಈ ವೃತ್ತಿ ಕೈಗೊಂಡವರನ್ನು ಎರಡು ಭಾಗ ಮಾಡಿ ಬಲಗೈ/ ಎಡಗೈ ಎಂದು ಕರೆಯಲಾಗಿದೆ. ಒಂದೇ ಜಾತಿಯವರು ಈ ಎರಡು ಪಂಗಡದಲ್ಲಿಯೂ ಇರುತ್ತಾರೆ. ಎಲ್ಲಾ ಬ್ರಾಹ್ಮಣರು ಕ್ಷತ್ರಿಯ ಮತ್ತು ಬೇರೆ ಜಾತಿಯವರು ಇದರಲ್ಲಿರುತ್ತಾರೆ.[೧೦೪]

ಬಲಗೈ ಪಂಗಡದಲ್ಲಿ ತೆಲುಗು ಬಣಜಿಗರೂ, ಲಿಂಗಬಣಜಿಗರು ಪ್ರಧಾನವಾದವರು. ಇದರಲ್ಲಿ ೧೮ ಪಂಗಡಗಳು ಬರುತ್ತವೆ. ಎಡಗೈ ಪಂಗಡದಲ್ಲಿ ಪಂಚಾಲರು ಹಾಗೂ ನಾಗರಥರು(Nagaratas) ಪ್ರಮುಖರಾದವರು. ಕಾಂಚೀವರಂನಲ್ಲಿರುವ ಕಾಳಿಕಾದೇವಿಯನ್ನು ಬಲಗೈ ಮತ್ತು ಎಡಗೈಯವರು ಪೂಜಿಸುತ್ತಾರೆ. ಪ್ರಮುಖವಾಗಿ ಈ ವಿಭಜನೆ ಕೆಲವೊಂದು ಬಣಗಾರರ ಪ್ರತ್ಯೇಕತೆಗಳಿಗೆ ಮಾತ್ರ ಅನ್ವಯವಾಗುತ್ತದೆ. ತಮ್ಮ ಮದುವೆಗಳು ನಡೆದಾಗ ೧೨ ಕಂಬದ ಚಪ್ಪರ ಬಳಸುವ ಪ್ರತ್ಯೇಕ ಹಕ್ಕು ತಮ್ಮದೆಂದು ಬಲಗೈ ಜಾತಿಯವರು ಭಾವಿಸುತ್ತಾರೆ ಮತ್ತು ತಮ್ಮ ಎದುರು ಪಕ್ಷದವರಿಗೆ ಮದುವೆಯ ಕಾಲಕ್ಕೆ ಮೆರವಣಿಗೆಯಲ್ಲಿ(ವರನಿಗೆ) ಕುದುರೆ ಸವಾರಿ ಮಾಡುವ ಹಕ್ಕು ಹನುಮಂತನ ಚಿತ್ರ ಬರೆದ ಧ್ವಜ ಒಯ್ಯುವ ಅಧಿಕಾರ ಇಲ್ಲ ಎನ್ನುತ್ತಾರೆ. ಈ ಎಲ್ಲಾ ವಿಶೇಷ ಗೌರವಗಳು ತಾಮ್ರಪತ್ರ ಒಂದರ ಮೂಲಕ ಕಾಳಿಯಿಂದ ಅವರಿಗೆ ದತ್ತವಾಗಿವೆಯೆಂಬ ಎಡಗೈ ಪಂಗಡದವರು ಹೇಳಿಕೊಳ್ಳುತ್ತಾರೆ. ಕಾಳಿಯು ಅವರನ್ನು ತಮ್ಮ ಬಲಗೈ ಮೇಲೆ ಇರಿಸಿಕೊಂಡದ್ದರಿಂದ ತಾವು ಶ್ರೇಷ್ಠಮಟ್ಟದವರು ಎಂದು ಹೇಳುತ್ತಾರೆ. ಇಂಥ ಮಹತ್ವದ ಸಂಗತಿಗಳ ಬಗ್ಗೆ ಆಗಾಗ ಜಗಳಗಳಾಗುತ್ತವೆ. ಇಂಥ ಸಂದರ್ಭಗಳಲ್ಲಿ ಪರಸ್ಪರ ಬೈದಾಟ, ಸಾಮಾನ್ಯವಲ್ಲದೆ, ಪ್ರತಿ ಪಕ್ಷದ ಮುಖ್ಯಸ್ಥರು ತಮ್ಮ ಪಕ್ಷದ ಕೆಳಜಾತಿಯವರನ್ನು ಅಜ್ಞಾನಿಗಳನ್ನು ಹಿಂಸಾಕೃತ್ಯಕ್ಕೆ ಪ್ರಚೋದಿಸಿ ತಮ್ಮ ಎದುರು ಪಕ್ಷದವರ ಅಂಗಡಿ, ಮನೆಗಳನ್ನು ಲೂಟಿ ಮಾಡಲು ಹುರಿದುಂಬಿಸುತ್ತಾರೆ(ಶ್ರೀರಂಗಪಟ್ಟಣದಲ್ಲಿ ನಡೆದ ಇಂಥ ಒಂದು ಮದುವೆ ಚಪ್ಪರದ ಪ್ರಕರಣದಲ್ಲಿ ದೊಂಬಿಯಾಗಿ ಸೇನೆ ಕೆಲವರನ್ನು ಕೊಂದ ವಿವರ ಇಲ್ಲಿದೆ). ಪ್ರತಿಷ್ಠೆಯೂ ಇಂಥ ಪ್ರಸಂಗಗಳಿಗೆ ಕಾರಣವಾಗಿದ್ದು ಬಲಗೈಯವರೇ ಆದ ಕಮಟಿಗರು(ಕೊಮಟಿಗರು), ಪಂಚಮ ಬಣಜಿಗರು ಯಾರು ಶ್ರೇಷ್ಠರೆಂದು ಹಿಂಸಾತ್ಮಕ ಜಗಳವಾಯಿತು. ಪಂಚಮ ಬಣಜಿಗರು ತಮ್ಮ ಈ ಪ್ರದೇಶದ ಪಾರಂಪರಿಕ ಒಡೆಯರು ಎಂದುಕೊಂಡರೆ ಕಮಟಿಗರು ತಾವು ವೈಶ್ಯರಾಗಿದ್ದು ಮೇಲ್ಜಾತಿಯವರೂ ಇನ್ನೊಂದು ಗುಂಪಿನವರು ಶೂದ್ರರು ಎಂದು ವಾದಿಸುತ್ತಾರೆ. ಈ ಜಗಳ ಪರಾಕಾಷ್ಠೆಗೆ ಹೋಗಿದ್ದು ಸರ್ಕಾರಕ್ಕೆ ಆಗ ತಲೆ

ನೋವಾಗಿರುತ್ತಂತೆ[೧೦೫] ಎಂಬುದಾಗಿ ಅಭಿಪ್ರಾಯವಾಗಿತ್ತು. ಅಲ್ಲದೆ ಸಾಕಷ್ಟು ವಿದ್ವಾಂಸರು ಈ ಬಣಗಳ ಕುರಿತು ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

ಸರ್ ಎಡ್ವರ್ಡ್ ಪ್ರಕಾರ 'Suggested that the division may be a survival of a dual exogamous graiping which existed before the development of the caste system, there is also a righthand and lefthand division of sakti worshippers, the rites of the former being principles magical of the later bloody and licentions

Dr. H.W. Wilson ಪ್ರಕಾರ There seems to be no connection between the castes as the abbe dubors point out the division is mainly a struggle for precedence between theartisans and the traders of the between the followers the old established handscrafts and innavators, who bought in exchanged of commodities with other parts supported by proveers and ministers of luxuries.[106]

೧೮೯೧ರ ಹಳೆಯ ಜಾತಿಯ ಉದ್ಯೋಗಗಳನ್ನು ಅನುಸರಿಸಿ ಸಂಖ್ಯೆಗಳನ್ನು ನೀಡಿದ್ದಾರೆ. ಮುಖ್ಯವಾಗಿ ಜಾತಿಗೆ ಸಂಬಂಧಿಸಿದ ಉದ್ಯೋಗಗಳು, ಸಂಖ್ಯೆಗಳು ಶೇಕಡಾವಾರು ವೃತ್ತಿಗಳು.

| | | | |
|---|---|---|---|
| ೧. | ಕೃಷಿ | ೧.೬೬೫.೪೪೨ | ೩೩.೮೯ |
| ೨. | ಉದ್ಯೋಗ(Professional) | ೨೯೦.೭೦೪ | ೫.೮೮ |
| ೩. | ವ್ಯಾಪಾರ ವಾಣಿಜ್ಯ | ೪೭೦.೫೭೦ | ೯.೫೨ |
| ೪. | Artisan ಮತ್ತು ಹಳ್ಳಿಯ Menial | ೧.೮೭೭.೯೪೧ | ೩೭.೯೯ |
| ೫. | Vagrantminor Artisans and Performers | ೩೪೪.೦೫೫ | ೬.೯೬ |
| ೬. | Raced and not ionalities | ೨೯೧.೧೬೮ | ೫.೮೯ |
| ೭. | Other not stated | ೩.೭೨೪ | ೦.೦೭ |

ಇದು ಜಾತಿಯನ್ನು ಅವಲಂಬಿಸಿರದವರ ಸಂಖ್ಯೆಯಾಯಿತು. ಆದರೆ ಇತರೇ ವೃತ್ತಿಗಳನ್ನನುಸರಿಸುವ ಪುರುಷ, ಮಹಿಳೆಯ ಸಂಖ್ಯೆಯನ್ನು ನೀಡಲಾಗಿದೆ.[೧೦೭]

| ವೃತ್ತಿವರ್ಗ | ಪುರುಷ | ಮಹಿಳೆಯರು | ಒಟ್ಟು | ಶೇಕಡವಾರು |
|---|---|---|---|---|
| ಸರ್ಕಾರಿ | ೧೨೨.೩೨೭ | ೧೧೩.೮೩೮ | ೨೩೬.೧೬೫ | ೪೭೭ |
| Pasture and ಕೃಷಿ | ೧.೬೮೫.೪೪೫ | ೧.೬೩೦.೫೫೮ | ೩.೩೧೬.೦೦೩ | ೬೭.೦೭ |
| Personal service | ೫೫.೧೮೨ | ೫೪.೧೫೭ | ೧೦೯.೩೩೯ | ೨.೨೧ |
| Preparation of material Substances | ೨೨೧.೮೧೯ | ೨೧೨.೬೧೦ | ೪೩೪.೪೨೯ | ೮.೭೮ |
| Commerce, Transport and Storage | ೯೦.೦೯೪ | ೮೭.೨೮೪ | ೧೭೧.೩೭೮ | ೩.೫೮ |

| | | | | |
|---|---|---|---|---|
| Professions | ೪೦.೧೮೭ | ೩೯.೮೨೫ | ೮೦.೦೧೨ | ೧.೬೧ |
| Indefinite and Independent | ೨೬೮.೩೯೭ | ೩.೨೧.೮೮೧ | ೫೯೦.೨೭೮ | ೧೧.೯೨ |

ಮಹಿಳೆಯು ಸಹ ಪುರುಷರಿಗೆ ಸಮನಾಗಿ ದುಡಿಯುತ್ತಿದ್ದರೆಂಬುದು ಇಲ್ಲಿ ಕಂಡುಕೊಳ್ಳಬಹುದಾಗಿದೆ.[೧೦೮] ಕೃಷಿ ಅವಲಂಬನೆಯು ಹೆಚ್ಚಿನ ಮಟ್ಟದಾಗಿತ್ತು. ಇದರಲ್ಲಿ ಪುರುಷ ಮತ್ತು ಮಹಿಳೆಯರಿಬ್ಬರೂ ವೃತ್ತಿಯನ್ನು ಕೈಗೊಂಡಿರುವುದು ತಿಳಿಯುತ್ತದೆ.

ಮೈಸೂರು ಸಂಸ್ಥಾನದಲ್ಲಿಯೇ ಅಧಿಕ ಜಾತಿಯ ಪದ್ಧತಿ ಇತ್ತು ಎಂಬುದು ಇಲ್ಲಿನ ಮಾಹಿತಿಗಳಿಂದ ತಿಳಿದುಬರುತ್ತದೆ. ಪ್ರಮುಖವಾಗಿ ೧,೦೦,೦೦೦ ಸಮೀಪಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿರುವ ಜಾತಿಗಳೆಂದರೆ ಒಕ್ಕಲಿಗ, ಹೊಲೆಯ, ಲಿಂಗವಂತ, ಕುರುಬ, ಮಾದಿಗ, ಬೇಡ, ಬ್ರಾಹ್ಮಣ, ಗೊಲ್ಲ, ಬಣಜಿಗ, ವಡ್ಡರು, ಒಟ್ಟು ೧೦ ಜಾತಿಗಳು ಬರುತ್ತವೆ. ಸಂಖ್ಯೆ, ೫.೬೮೫.೭೧೫, ಶೇಕಡಾ ೭೯.೫೦% ರಷ್ಟು ಬರುತ್ತದೆ.

೧,೦೦,೦೦೦ದಿಂದ ೫೦,೦೦೦ ಇರುವವರು ಆರು ಜಾತಿಗಳು: ಬೇಡ, ಅಕ್ಕಸಾಲಿಗ, ಉಪ್ಪಾರರು, ನೇಕಾರರು, ಅಗಸ, ತಿಗುಳ ಇವರು ಬರುತ್ತಾರೆ.

೫೦,೦೦೦ದಿಂದ ೨೦,೦೦೦ವರೆಗೆ ಇರುವವರು ಹತ್ತು ಜಾತಿಗಳು ಅವುಗಳೆಂದರೆ: ಮರಾಠಿ, ಕುಂಬಾರ, ಈಡಿಗ, ಲಂಬಾಣಿ, ನಾಯಿಂಡ, ಗಾಣಿಗ, ಕೊಮಟಿ, ಕೊರಚ, ನಾಗರ್ತ, ಕ್ಷತ್ರಿಯರು ಬರುತ್ತಾರೆ.

೨೦,೦೦೦ದಿಂದ ೧೦,೦೦೦ ಒಳಗೆ ಬರುವ ಜಾತಿಗಳು ಎರಡು ಮಾತ್ರ ಸತಾನಿ ದರ್ಜೆಯವರು, ೧೦,೦೦೦ದಿಂದ ೫,೦೦೦ದವರೆಗೆ ಇರುವ ಜಾತಿಗಳು ಆರು: ರಚಿವಾರರು, ಜೋಗಿ, ಬಡಗಿ, ನಟುವ, ಕಮ್ಮಾರ, ಮದಲಿ ಸಿಗುತ್ತಾರೆ.

೫,೦೦೦ದಿಂದ ೧,೦೦೦ದವರೆಗೆ ೮ ಜಾತಿಗಳು ಬರುತ್ತವೆ. ಮೇದರು, ಡೊಂಬರು, ಲಾಡರು, ಗಾಣಿಗರು, ಭಟ್‌ರಾಜು, ದಾಸರಿ, ಇರುಳಿಗ, ಬುಡಬುಡಿಕೆ.

ಆದರೆ ೧,೦೦೦ದಿಂದ ಕೆಳಗೆ ಇರುವ ಸಂಖ್ಯೆಗಳ ಜಾತಿಗಳು ಹೆಚ್ಚು ಇವೆ. ಅವೆಂದರೆ: ಗಾರುಡಿಗ, ಮೋಪಿ, ಸನ್ಯಾಸಿನಿ, ಪಿಲ್ಲೇ, ಗೋಸಾವಿ, ಕಂಚುಗಾರ, ಜಲಗಾರ, ಬೈರಾಗಿ ಮೊಂಡ, ನಾಯರ್, ಕನಕ್ಕನ್, ಶೀಲ್ಲೆಕಾರರು, ಶಿಲ್ಲೆಕ್ಯಾಥರು, ಗುಜರಾತಿ, ಸುಡುಗಾಡು ಸಿದ್ದರು, ಬನಿಯಾ, ಗೊಂದಲಿಗ, ಮಾರವಾಡಿ, ಪಂಡರಾಮ, ಉರಿಯಾ ಕರ್ಮ, ಕಾಯಸ್ಥ ಸನಿಯರ್ ಮುತ್ತಲರಿಜೆತ್ ಇವರುಗಳು ಬರುವರು.

**ಈ ಮೇಲಿನ ಎಲ್ಲಾ ಜಾತಿಗಳನ್ನು ಶೇಕಡಾವಾರು ಸಂಖ್ಯೆಯನ್ನು ಈ ರೀತಿ ನೋಡಲಾಗುತ್ತದೆ.**

| ವಿವರಗಳು | ಒಟ್ಟು ಸಂಖ್ಯೆ | ಶೇಕಡವಾರು |
|---|---|---|
| ೧೦ ಜಾತಿಗಳು ೧೦೦,೦೦೦ ಮೇಲೆ ಇರುವವರು | ೩.೬೮೫.೭೧೫ | ೭೯.೫೦ |
| ೬ ಜಾತಿಗಳು ೧,೦೦,೦೦೦ದಿಂದ ೫೦,೦೦೦ | ೫೧೬.೫೬೮ | ೧೧.೧೩ |
| ೧೦ ಜಾತಿಗಳು ೫೦,೦೦೦ದಿಂದ ೨೦,೦೦೦ | ೩೩೫.೭೪೦ | ೭.೨೪ |

| | | |
|---|---|---|
| ೭ ಜಾತಿಗಳು ೫೦,೦೦೦ದಿಂದ ೧೦,೦೦೦ | ೩೦.೬೫೧ | ೦.೬೬ |
| ೬ ಜಾತಿಗಳು ೧೦,೦೦೦ದಿಂದ ೫,೦೦೦ | ೪೬.೭೭೩ | ೧.೦೦ |
| ೮ ಜಾತಿಗಳು ೫,೦೦೦ದಿಂದ ೧,೦೦೦ | ೧೫.೦೪೭ | ೦.೩೨ |
| ೧,೦೦೦ದಿಂದ ಕೆಳಗೆ ಇರುವ ಜಾತಿಗಳು | ೪.೯೨೨ | ೦.೧೦ |

ಈ ರೀತಿಯಾಗಿ ಎಲ್ಲಾ ಜಾತಿಗಳ ಕುರಿತು ಸಂಖ್ಯೆ ವಿವರಣೆ ಸಿಗುತ್ತದೆ.[೧೦೯] ಸಿ. ಹಯವದನ ರಾವ್ ಅವರ ಮೈಸೂರು ಗ್ಯಾಸೆಟಿಯರ್ ಸಂಪುಟ ೧ರಲ್ಲಿ ಜಾತಿ ವಿವರಣೆ ಕುರಿತು ಮಾಹಿತಿ ಸಿಗುತ್ತದೆ. ಇವರು ಮುಂಬಯಿ ಕರ್ನಾಟಕದ ಗ್ಯಾಸೆಟಿಯರ್ ಮಾದರಿಯಲ್ಲಿಯೇ ಹೇಳಿದ್ದಾರೆಯೇ ಹೊರತು ಬಿ.ಎಲ್. ರೈಸ್ ಅವರ ಗ್ಯಾಸೆಟಿಯರ್‌ನಂತೆ ಪ್ರತ್ಯೇಕ ಸಂಖ್ಯೆ, ಜಾತಿಗಳ ವಿವರಣೆ ಸ್ಪಷ್ಟ ರೀತಿ ವಿವರಣೆ ಸಂಖ್ಯೆಯನ್ನು ನೀಡಿಲ್ಲ. ೧೮೯೧ರ ಸೆನ್ಸಸ್ ವರದಿಯ ಮಾಹಿತಿಯಂತೆ ಬಣಜಿಗರು ೧,೩೫,೦೦೦, ಬೆಸ್ತರು ೧,೫೮,೦೦೦, ಬೇಡರು ೨,೭೧,೦೦೦, ಬ್ರಾಹ್ಮಣರು ೨,೧೬,೦೦೦೦. ಇವರ ಜಾತಿಗಳ ಕುರಿತು ವಿವರಣೆ ಇದೆ. ಇಲ್ಲಿ ಬರುವಂತಹ ೬೯ ಗೋತ್ರಗಳ ವಿವರವಿದೆ. ಗೊಲ್ಲರು ೧,೫೬,೦೦೦, ಹೊಲೆಯರು ೬,೫೦,೦೦೦, ಜೈನರು ೨೦,೭೦೦, ಕುಂಬಾರರು ೪,೦೦,೦೦೦, ಲಿಂಗಾವಂತರು, ೭,೧೫,೦೦೦ ಇವುಗಳಲ್ಲಿ ಹಲವು ಒಳಜಾತಿಗಳಿವೆ. ಮಾದಿಗರು ೨,೮೧,೦೦೦, ನೇಯ್ಗರು ೬೩,೪೦೦, ದೇವಾಂಗರು, ಪಂಚಾಲರು ೧,೩೨,೦೦೦, ಉಪ್ಪಾರರು, ವಡ್ಡರು ೧,೫೨,೦೦೦, ಚಿಕ್ಕ ವಕ್ಕಲಿಗರು ೧೨,೩೫,೦೦೦ ಇಲ್ಲಿ ಪ್ರಮುಖ ಸಂಖ್ಯೆಯಲ್ಲಿರುವ ಜನರ ಜಾತಿಗಳ ವಿವರಣೆ ಮಾತ್ರ ಇದೆ, ಉಳಿದವರ ವಿವರಗಳಿಲ್ಲ.[೧೧೦]

**ಇಲ್ಲಿ ಜಾತಿಗಳನ್ನು ಆಧರಿಸಿ ಅಧಿಕ ಸಂಖ್ಯೆಯ ಜಾತಿಗಳಿರುವ ಜಿಲ್ಲೆಯನ್ನು ವಿವರಿಸಲಾಗಿದೆ.**

ಬೆಂಗಳೂರು ಜಿಲ್ಲೆಯಲ್ಲಿ: ಒಕ್ಕಲಿಗರು, ಹೊಲೆಯ, ಮಾದಿಗರು.

ಕೋಲಾರ ಜಿಲ್ಲೆಯಲ್ಲಿ: ಒಕ್ಕಲಿಗರು, ಹೊಲೆಯ, ಬೇಡರು, ಮಾದಿಗರು.

ತುಮಕೂರು ಜಿಲ್ಲೆಯಲ್ಲಿ: ಒಕ್ಕಲಿಗರು, ಲಿಂಗಾವಂತರು, ಮೇದರು, ಬೇಡರು, ಗೊಲ್ಲ ಮತ್ತು ಕುರುಬರು.

ಮೈಸೂರು ಜಿಲ್ಲೆಯಲ್ಲಿ: ಒಕ್ಕಲಿಗ, ಕುರುಬರು, ಹೊಲೆಯ, ಲಿಂಗಾವಂತರು, ಬೆಸ್ತರು, ಉಪ್ಪಾರರು.

ಚಿತ್ರದುರ್ಗ ಜಿಲ್ಲೆಯಲ್ಲಿ: ಲಿಂಗವಂತರು, ಬೇಡರು, ಗೊಲ್ಲರು, ಒಕ್ಕಲಿಗರು.

ಹಾಸನ ಜಿಲ್ಲೆಯಲ್ಲಿ: ಒಕ್ಕಲಿಗರು, ಹೊಲೆಯ.

ಕಡೂರು ಜಿಲ್ಲೆಯಲ್ಲಿ: ಲಿಂಗವಂತರು, ಹೊಲೆಯ.

ಶಿವಮೊಗ್ಗ ಜಿಲ್ಲೆಯಲ್ಲಿ: ಲಿಂಗವಂತರು.

ಈ ಜಾತಿಗಳು ಆಯಾ ಜಿಲ್ಲೆಗಳಲ್ಲಿ ಅಧಿಕ ಸಂಖ್ಯೆಯಲ್ಲಿರುವ ಬಗ್ಗೆ ತಿಳಿದುಬರುತ್ತದೆ.[೧೧೧] ಮುಸಲ್ಮಾನರು ೩,೪೦,೦೦೦ ಜನರಿದ್ದರು. ರಾಜ್ಯದಲ್ಲಿಯೇ ಹೆಚ್ಚು ಶೇಖ್‌ದಾರರು ಹಾಗೂ ಸಾಲ್ವರಿದ್ದರು. ಅವುಗಳಲ್ಲಿ ಪ್ರಮುಖವಾಗಿ ಬೇರೆ ಏಳು ಜಾತಿಗಳಿವೆ. ಕ್ರಿಶ್ಚಿಯನ್ನರು ಒಟ್ಟು ೭೧,೦೦೦. ಇದರಲ್ಲಿ ಹತ್ತಿರ ೬,೯೦೦ ಇರುವವರು.[೧೧೨] ಒಟ್ಟಿನಲ್ಲಿ ಬಿ.ಎಲ್. ರೈಸ್ ಹಾಗೂ ಸಿ. ಹಯವದನರಾವ್ ಅವರ ಗ್ಯಾಸೆಟಿಯರ್‌ಗಳಲ್ಲಿ ಜಾತಿ ಮತ್ತು ಬುಡಕಟ್ಟು ಎಂದು ಪ್ರತ್ಯೇಕವಾಗಿ ಗುರುತಿಸಿ ಜಾತಿ ಎಂದು ಕರೆಯಲಾಗಿದೆ.

ಬಿ.ಎಲ್. ರೈಸ್ ಅವರು ೯೦೦ಕ್ಕಿಂತಲೂ ಹೆಚ್ಚಿನ ಜಾತಿಗಳ ಹೆಸರುಗಳನ್ನು ಅಕರಾದಿಯಲ್ಲಿ ನೀಡಿದ್ದಾರೆ. ಆದ್ದರಿಂದಾಗಿ ಬಿ.ಎಲ್. ರೈಸ್ ಅವರ ಗ್ಯಾಸೆಟಿಯರ್ ಉತ್ತಮವಾದ ಆಕರ ಸಾಮಗ್ರಿ ಹೊಂದಿರುವುದು ಸ್ಪಷ್ಟ.

**೩.೩.೩. ಮೈಸೂರು ಸಂಸ್ಥಾನದ ಭಾಷೆ**

ಕರ್ನಾಟಕವು ಹಲವು ಭಾಷೆಗಳನ್ನು ಒಳಗೊಂಡಿರುವ ರಾಜ್ಯ. ಆದರೆ ಕನ್ನಡ ಕರ್ನಾಟಕದ ಮಾತೃಭಾಷೆ. ಮಾತೃಭಾಷೆ ಎಂದರೆ ತಾಯಿಯಿಂದ ಕಲಿತ ಅಥವಾ ಸ್ವಾಭಾವಿಕವಾಗಿ ಮನೆಯಲ್ಲಿ ಮಾತನಾಡುವ ಭಾಷೆ ಎಂದರ್ಥ. ಕನ್ನಡವು ಪಂಚದ್ರಾವಿಡ ಭಾಷೆಗಳಲ್ಲಿ ಒಂದು. ಈ ದ್ರಾವಿಡ ಭಾಷೆಗಳೆಂದರೆ: ಕನ್ನಡ, ತೆಲುಗು, ತಮಿಳು, ಮಲಯಾಳಂ ಹಾಗೂ ತುಳು. ಇವುಗಳಲ್ಲಿ ಕರ್ನಾಟಕಕ್ಕೆ ಕನ್ನಡ ಮಾತೃಭಾಷೆಯಾಗಿದೆ. ಏಕೆಂದರೆ ಕ್ರಿಸ್ತಶಕಕ್ಕೆ ಅನೇಕ ವರ್ಷಗಳ ಹಿಂದೆಯೇ ಅದಕ್ಕೆ ಪ್ರತ್ಯೇಕವಾದ ಲಿಪಿಯಿತ್ತೆಂದೂ, ಕ್ರಿ.ಶ ೨ನೇ ಶತಮಾನದ ಹಿಂದೆಯೇ ಕನ್ನಡದಲ್ಲಿ ಕಾವ್ಯರಚನೆಯು ಪ್ರಾರಂಭವಾಗಿತ್ತೆಂದೂ ಕಾಣಬರುತ್ತದೆ. ಇದುವರೆಗೆ ದೊರಕಿರುವ ಪುರಾತನ ಗ್ರಂಥಗಳಲ್ಲೆಲ್ಲಾ ಮೊತ್ತಮೊದಲನೆಯದು ಕವಿರಾಜಮಾರ್ಗವೆಂಬ ಅಲಂಕಾರಶಾಸ್ತ್ರ. ಅದನ್ನು ಬರೆದವನು ರಾಷ್ಟ್ರಕೂಟರ ರಾಜನಾದ ಅಮೋಘವರ್ಷ ನೃಪತುಂಗ(ಕ್ರಿ.ಶ. ೮೧೪ರಿಂದ ೮೭೭). ಇದರಲ್ಲಿ ಕನ್ನಡನಾಡಿನ ಮೇರೆಗಳ ಕುರಿತು ರಚನೆಯಾಗಿರುವುದು ಕಾಣಬಹುದು.[೧೩]

ಮೈಸೂರು ಪ್ರಾಂತ್ಯದಲ್ಲಿ ಈ ಸಂದರ್ಭದಲ್ಲಿ ಕನ್ನಡ, ತೆಲುಗು, ಮಲಯಾಳಂ ತೆಲುಗು, ತಮಿಳು, ಸಂಸ್ಕೃತ ಇತರೇ ಭಾಷೆಗಳಿಂದ ಕೂಡಿತ್ತು. ಆದರೆ ಈ ಪ್ರಾಂತ್ಯದ ಮಾತೃಭಾಷೆ ಕನ್ನಡವಾಗಿತ್ತು. ಈ ಕನ್ನಡ ಭಾಷೆಯಲ್ಲಿ ಮುಖ್ಯವಾಗಿ ೨ ರೀತಿ ಇದೆ. ಪಳಗನ್ನಡ ಅಥವಾ ಹಳೆಗನ್ನಡ ಮತ್ತೊಂದು ಅಥವಾ ಹೊಸಗನ್ನಡ ಎಂಬ ವಿಧಗಳನ್ನು ಗುರುತಿಸಲಾಗುತ್ತದೆ. ಮೈಸೂರು ಪ್ರಾಂತ್ಯದಲ್ಲಿ ೧೮೯೧ರ ವರದಿಯ ಪ್ರಕಾರ ಕನ್ನಡ ಮತ್ತು ಇತರೆ ಭಾಷೆಗಳನ್ನಾಡುವವರ ಸಂಖ್ಯೆ ನೋಡುವುದಾದರೆ,

| | | |
|---|---|---|
| ಕನ್ನಡ ಅಥವಾ ಕೆನರೀಸ್ | - | ೯೧,೭೫೧,೮೮೫ |
| ಕೊಡಗು ಅಥವಾ ಕೂರ್ಗ್ | - | ೯೭,೨೧೮ |
| ತುಳು | - | ೪,೯೧,೭೨೮ |
| ತೋಡ(Toda) | - | ೭೩೬ |
| ಕೋಟ | - | ೧,೨೦೧ |
| ಬಡಗ | - | ೩೦,೬೫೬ |
| ಒಟ್ಟು | | ೧೦,೩೧೩,೪೨೪ ಎಂದು ಗುರುತಿಸಲಾಗುತ್ತದೆ.[೧೪] |

ಮೈಸೂರು ಪ್ರಾಂತ್ಯವು ಕರ್ನಾಟಕ ಅಥವಾ ಕನ್ನಡ ಭಾಷೆಗೆ ಸ್ಥಾನವಾಗಿದೆ. ಇತರ ಕೆಲವು ಭಾಷೆಗಳೂ ಸಂಸ್ಥಾನದಲ್ಲಿ ಉಪಯೋಗದಲ್ಲಿವೆ. ಅವು ಯಾವುವೆಂದರೆ:

ತೆಲುಗು ೯,೧೯,೪೧೦, ಹಿಂದೂಸ್ತಾನಿ ೭,೦೫,೧೮೭, ತಮಿಳು ೨,೪೧,೧೫೯, ಮರಾಠಿ ೭೮,೧೦೯.

ಇಂಡಿಯಾ ದೇಶದ ಇತರ ಭಾಷೆಗಳು: ೯೯, ೩೨೩, ಏಷ್ಯಾ ಖಂಡ: ೧೩, ೭೦೬, ಯುರೋಪ್ ಖಂಡ: ೧೩, ೫೩೯, ಅಲ್ಲದೆ ಕನ್ನಡ ಭಾಷೆಯ ಕೊಡಗು, ಧಾರವಾಡ, ಬಳ್ಳಾರಿ, ಕೊಯಮತ್ತೂರು,

ಉತ್ತರ ಕೆನರಾ, ದಕ್ಷಿಣ ಕೆನರಾ ಮತ್ತು ಇನ್ನೂ ಕೆಲವು ಬ್ರಿಟಿಷ್ ಜಿಲ್ಲೆಯ ಹೈದರಾಬಾದ್ ಸಂಸ್ಥಾನದ ಕೆಲವು ಭಾಗಗಳಲ್ಲಿ ಮಾತೃಭಾಷೆಯಾಗಿತ್ತು ಎಂಬುದಾಗಿ ತಿಳಿದುಬರುತ್ತದೆ. ಒಟ್ಟು ಕನ್ನಡಿಗರ ಸಂಖ್ಯೆ ೧.೦೫, ೨೬,೦೦೦ ಜನರು ಮೈಸೂರು ಸಂಸ್ಥಾನದಲ್ಲಿದ್ದರು ಎಂಬುದಾಗಿ ತಿಳಿಯಬಹುದಾಗಿದೆ.[೧೧೫]

ಮೈಸೂರು ರಾಜ್ಯದ ೧೮೯೧ರ ಸೆನ್ಸಸ್ ವರದಿಯ ಪ್ರಕಾರ ವಿವಿಧ ಭಾಷೆಗಳನ್ನು ಮಾತನಾಡುವವರು ಅಧಿಕ ಸಂಖ್ಯೆಯಲ್ಲಿದ್ದಾರೆ. ಮುಖ್ಯವಾಗಿ ಇಲ್ಲಿನ ಮಾತೃಭಾಷೆ ಕನ್ನಡವಾಗಿದೆ. ಸೆನ್ಸಸ್ ಪ್ರಕಾರ:

| | | |
|---|---|---|
| ಕನ್ನಡ | - | ೭೩.೧೯೪% |
| ತೆಲುಗು | - | ೧೫.೧೯% |
| ತಮಿಳು | - | ೩.೨೨% |
| ಹಿಂದೂಸ್ತಾನಿ | - | ೪.೭೩% |
| ಕೂರ್ಗ್ | - | ೪೩.೯೯% |

ಎಂದು ವಿವರಿಸುತ್ತಾರೆ. ಅಲ್ಲದೆ ಉಳಿದ ಪ್ರಾಂತ್ಯಗಳಲ್ಲಿ ಕನ್ನಡ ಮಾತನಾಡುವವರ ಸಂಖ್ಯೆ ನೋಡುವುದಾದರೆ ಮದ್ರಾಸ್ ಪ್ರಾಂತ್ಯದಲ್ಲಿ ೪.೦೬%, ಹೈದರಾಬಾದ್ ಸಂಸ್ಥಾನದಲ್ಲಿ ೧೨.೫೮%, ಮುಂಬೈ ಪ್ರಾಂತ್ಯದಲ್ಲಿ ೧೫.೫೯% ಎಂಬುದಾಗಿ ವಿವರಿಸುತ್ತಾರೆ.[೧೧೬]

**೩.೩.೪. ಮೈಸೂರು ಸಂಸ್ಥಾನದ ವಸತಿ ವ್ಯವಸ್ಥೆ**

ಮೈಸೂರು ಸಂಸ್ಥಾನದ ಮನೆಗಳು ಸಾಮಾನ್ಯವಾಗಿ ಮಣ್ಣಿನಿಂದ ಕಟ್ಟಿರುತ್ತಾರೆ. ಒಂದು ಅಂತಸ್ತಿನ ಮನೆ ಕಟ್ಟುವುದು ಸಾಮಾನ್ಯ ಮತ್ತು ಕೆಳಗಡೆ ಸ್ವಲ್ಪ ಇರುತ್ತದೆ. ಅತಿ ಎತ್ತರದ ಗೋಡೆಗಳಿರುವುದಿಲ್ಲ. ತೆರೆದ ಅಂಗಳವಿರುತ್ತದೆ. ಇಲ್ಲಿ ಆಕಾಶ ಕಾಣುವಂತೆ ಕಟ್ಟಿರುತ್ತಾರೆ. ಮನೆಗಳು ಚೆನ್ನಾಗಿರುತ್ತವೆ. ಉತ್ತಮ ಮನೆಗಳಲ್ಲಿ ಕಲ್ಲಿನ ಹಾಸು ಹೊಂದಿಸಿರುತ್ತಾರೆ. ಜೊತೆಗೆ ಮರದ ಕಂಬಗಳಿರುತ್ತವೆ. ಅವುಗಳಿಗೆ ಚಿತ್ತಾಕರ್ಷಕ ಚಿತ್ರರೇಖೆಗಳಿರುತ್ತವೆ. ಶ್ರೀಮಂತರ ಮನೆಗಳು ಎರಡಂತಸ್ತಿನ ಮನೆಗಳನ್ನು ಹೊಂದಿರುತ್ತಾರೆ. ಗೋಡೆಗಳು ಬಿಳಿಬಣ್ಣ ಹಾಗೂ ಕೆಂಪುಪಟ್ಟೆ ಬಣ್ಣದಿಂದ ಕೂಡಿರುತ್ತವೆ. ಸಾಮಾನ್ಯವಾಗಿ ಉದ್ದವಾದ ಅಗಲವಿಲ್ಲದ ಕೊಠಡಿ ಇರುತ್ತವೆ. ಇವರ ಮನೆಯ ಪಕ್ಕದಲ್ಲಿ ದನದ ಕೊಟ್ಟಿಗೆ ಇರುತ್ತವೆ. ಶ್ರೀಮಂತರ ಮನೆಗಳು ಮರದ ಹಾಗೂ ಹೆಂಚಿನ ಹೊದಿಕೆ ಇರುತ್ತದೆ. ಬಡವರ ಮನೆಗಳಿಗೆ ಹುಲ್ಲಿನ ಹೊದಿಕೆ ಇರುತ್ತದೆ. ಮುಖ್ಯವಾಗಿ ಪೂರ್ವಕ್ಕೆ ಬಾಗಿಲುಗಳಿರುತ್ತವೆ. ಮೈಸೂರಿನಲ್ಲಿ ಮಳಿಗೆಮನೆಗಳು ಬಹಳ ಎಂಬ ಸಂಗತಿ ತಿಳಿದುಬರುತ್ತದೆ.[೧೧೭]

ದೊಡ್ಡದಾದ ನಗರಗಳಲ್ಲಿ ಹೆಂಚಿನ ಮನೆಗಳಿರುತ್ತಿದ್ದವು. ಇವುಗಳನ್ನು ಸಾಮಾನ್ಯವಾಗಿ ಸುಟ್ಟ ಇಟ್ಟಿಗೆ ಗಳಿಂದಲೂ ಕಟ್ಟುತ್ತಿದ್ದರು. ೩೦ ವರ್ಷಗಳಿಂದ ಇತ್ತೀಚೆಗೆ ಯುರೋಪಿಯನ್ ಮಾದರಿಯಲ್ಲಿ ಮನೆ ಕಟ್ಟುವುದನ್ನು ಕಾಣಬಹುದಾಗಿದೆ. ಮುಖ್ಯವಾಗಿ ಮಂಗಳೂರಿನ ಹೆಂಚು ಬಳಸಿಕೊಂಡು ಬೆಂಗಳೂರು, ಮೈಸೂರು ಕೋಲಾರಗಳಲ್ಲಿ ದೊಡ್ಡ-ದೊಡ್ಡ ಮನೆಗಳನ್ನು ಕಟ್ಟಿರುವುದನ್ನು ಕಾಣಬಹುದಾಗಿದೆ. ಶ್ರೀಮಂತರ ಮನೆಗಳನ್ನು ಆಧುನಿಕ ಮಾದರಿಯಲ್ಲಿ ಕಟ್ಟಲ್ಪಡುತ್ತಿದ್ದವು. ಪುರಸಭೆಯ ಆದೇಶದಂತೆ ಮನೆಗಳನ್ನು,

ಕಟ್ಟಡಗಳನ್ನು ಕಟ್ಟುವ ವ್ಯವಸ್ಥೆಯು ಉತ್ತಮ ರೀತಿಯಲ್ಲಿ ನೆರವಾಗುತ್ತದೆ. ಇತ್ತೀಚೆಗೆ ೧೯೨೩-೨೪ರಲ್ಲಿ ಬೆಂಗಳೂರು ನಗರದಲ್ಲಿ  ಪುರಸಭೆಯು ಹೊಸದಾಗಿ ಸಣ್ಣದಾದ ಕಡಿಮೆ ಖರ್ಚಿನ ಸುಂದರ ಮಾದರಿಯ ಮನೆಯ ನಿರ್ಮಾಣವನ್ನು ಜಾರಿಗೆ ತಂದಿರುವುದನ್ನು ತಿಳಿಸುತ್ತದೆ.[೧೧೮]

ಕೋಲಾರ ಜಿಲ್ಲೆಯಲ್ಲಿ ಸುಸ್ಥಿತಿಯಲ್ಲಿರುವ ಮನೆಗಳ ಸಂಖ್ಯೆ ೬೮೨, ಇದರಲ್ಲಿ ಬಾಡಿಗೆದಾರರ ಮನೆ ೬,೨೩೩ ಹಾಗೂ ಕೆಳಮಟ್ಟದ ರೀತಿಯಲ್ಲಿರುವ ಮನೆಗಳು ೧,೨೩,೯೬೪ ಜೊತೆಗೆ(೯,೮೪,೭೯೭, ನಿವಾಸಿಗಳು) ಒಳ್ಳೆಯ ಮನೆಗಳಿರುವುದು ಹೆಚ್ಚಾಗಿ ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಬೌರಿಂಗ್ ತಾಲೂಕು, ಕೋಲಾರ, ಚಿಂತಾಮಣಿ ತಾಲೂಕುಗಳಲ್ಲಿದ್ದವು.[೧೧೯]

ಮೈಸೂರಿನಲ್ಲಿ ೧೮೯೨ರಲ್ಲಿ ವಾಸದ ಮನೆಗಳು ೯೪,೮೫೪. ಇಂಥ ಮನೆಗಳಲ್ಲಿ ಮಾಳಿಗೆಮನೆಗಳು ೧೬೬, ಹೆಂಚಿನ ಮನೆಗಳು ೨೬,೪೫೪. ಉಳಿದವು ಗುಡಿಸಲುಮನೆಗಳು. ಮೈಸೂರು, ಶ್ರೀರಂಗಪಟ್ಟಣ, ನಂಜನಗೂಡು, ತಿರುಮಕೂಡ್ಲು ನರಸೀಪುರ ತಾಲೂಕುಗಳು ಬಹಳ ಸಂಖ್ಯೆಯಲ್ಲಿ ಮೊದಲ ಹಾಗೂ ಎರಡನೇ ವರ್ಗದ ಮನೆಗಳಿವೆ ಎಂದು ತಿಳಿದುಬರುತ್ತದೆ.[೧೨೦]

ಚಿತ್ರದುರ್ಗದಲ್ಲಿ ೧೮೯೨ರಲ್ಲಿ ಉತ್ತಮ ವರ್ಗದ ಮನೆಗಳ ಸಂಖ್ಯೆ ೧೫,೯೦೮. ಇವು ದಾವಣಗೆರೆ, ಚಿತ್ರದುರ್ಗ, ಹಿರಿಯೂರುಗಳಲ್ಲಿವೆ.[೧೨೧] ಈ ರೀತಿಯಾಗಿ ಮನೆಗಳ ಕುರಿತು ಮಾಹಿತಿ ದೊರೆಯುತ್ತದೆ.

ಮುಖ್ಯವಾಗಿ ಮನೆಗಳ ಗಣತಿಯು ೧೯೨೧ರಿಂದ ಪ್ರಾರಂಭವಾಯಿತು. ವಾಸಿಸುವ ಎಲ್ಲಾ ಮನೆಗಳ ಕುರಿತು ಇದರಲ್ಲಿ ಮಾಹಿತಿ ತಿಳಿಸುತ್ತದೆ. ಇದರ ಪ್ರಕಾರ ಮಿಲ್‌ಗಳು, ಫ್ಯಾಕ್ಟರಿಗಳು, ಜೈಲ್‌ಗಳು, ಸ್ಕೂಲ್‌ಗಳು, Plantations containing house, ಮಠಗಳು, ದೇವಾಲಯಗಳು, ಅಂಗಡಿಗಳು, ಚರ್ಚ್‌ಗಳು ಇತ್ಯಾದಿಗಳೆಲ್ಲವೂ ಸಹ ಮನೆಗಳ ಗಣತಿ ಸಂಖ್ಯೆಯಲ್ಲಿ ಬರುವಂತಹದ್ದು. ಒಟ್ಟಿನಲ್ಲಿ ೧೯೨೧ರ ಪ್ರಕಾರ ಒಟ್ಟು ಮೈಸೂರು ಸಂಸ್ಥಾನದಲ್ಲಿರುವ ಮನೆಗಳ ಸಂಖ್ಯೆ ೧೧,೯೬,೮೮೩ ಇತ್ತು. ಆದರೆ ೧೯೧೧ರಲ್ಲಿ ೩೯ರಷ್ಟು ಇದ್ದ ಸಂಖ್ಯೆ ೧೯೨೧ರಲ್ಲಿ ೪೧ರಷ್ಟು ಏರಿತು.[೧೨೨] ಇದೇ ರೀತಿಯಾಗಿ ಅವುಗಳ ಸಂಖ್ಯೆ ವಿಸ್ತಾರವಾಗುತ್ತಲೇ ಇಂದೂ ಸಹ ಮುಂದುವರೆದಿದೆ.

### ೩.೩.೫. ಮೈಸೂರು ಸಂಸ್ಥಾನದ ಉಡುಗೆ-ತೊಡುಗೆಗಳು

ಸಾಮಾನ್ಯವಾಗಿ ಉಡುಗೆಗಳು ಜಾತಿಯಿಂದ ಜಾತಿಗೆ, ಅಂತಸ್ತಿನಿಂದ ಅಂತಸ್ತಿಗೆ ಭಿನ್ನತೆಯನ್ನು ಹೊಂದಿವೆ. ಹತ್ತಿಬಟ್ಟೆ ಹಾಗೂ ಉಣ್ಣೆಯ ದಪ್ಪ ಬಟ್ಟೆಯನ್ನು, ಬಿಳಿ ಅಥವಾ ಬಣ್ಣದ ಹತ್ತಿಬಟ್ಟೆಯನ್ನು ಪ್ರಧಾನವಾಗಿ ಜನರು ಧರಿಸುತ್ತಾರೆ. ಕಂಬಳಿ, ಉಣ್ಣೆಯ ಕಂಬಳಿಯನ್ನು ಚಳಿಗಾಲಗಳಲ್ಲಿ ಅಥವಾ ರಾತ್ರಿ ಹೊತ್ತು ಹೊದ್ದುಕೊಳ್ಳುತ್ತಾರೆ. ಬ್ರಾಹ್ಮಣರು ತಲೆಯನ್ನು ಬೋಳಿಸಿಕೊಳ್ಳುತ್ತಾರೆ. ಆದರೆ ಹಿಂದಕ್ಕೆ ಜುಟ್ಟು ಬಿಡುತ್ತಾರೆ. ಇದೇ ಮಾದರಿಯಲ್ಲಿ ಹೆಚ್ಚಿನ ಹಿಂದೂಗಳು ಇರುತ್ತಾರೆ ಎನ್ನಬಹುದು. ಪುರುಷರ ಉಡುಗೆಗಳೆಂದರೆ ಧೋತ್ರ. ಇದು ತೆಳುವಾಗಿದ್ದು, ಕೈಕಾಲುಗಳವರೆಗೆ ಮುಚ್ಚಿರುತ್ತದೆ. ಕಾಲುಗಳ ಮುಂಭಾಗದಲ್ಲಿ ಮಡಿಕೆ ಬರುತ್ತದೆ. ಮೇಲ್ಭಾಗದಲ್ಲಿ ಉದ್ದವಾದ ಅಂಗಿ ಅಥವಾ ಸಣ್ಣದಾದ ಕೋಟನ್ನು ಧರಿಸುತ್ತಾರೆ.[೧೨೩]

ಕೋಟ ಒಕ್ಕಲಿಗರು ತಲೆಗೆ ಬಣ್ಣದ ಪೇಟ ಸೊಂಟಕ್ಕೆ ಲಂಗೋಟಿ ಹಾಗೂ ಮೇಲೊಂದು ಅಂಗಿ ಅದರ ಮೇಲೆ ಕಪ್ಪುಬಣ್ಣದ ಕೋಟು, ಬಿಳಿಬಣ್ಣದ ಧೋತ್ರ ಕೆಲವೊಂದು ಸಾದಾ, ಕೆಲವೊಂದು ಜರತಾರಿ ಅಂಚು ಬಂದದ್ದು, ಕೆಲವೊಬ್ಬರು ಬಿಳಿಬಣ್ಣದ ಶಲ್ಯವನ್ನು ಎಡಭಾಗಕ್ಕೆ ಇಳಿಬಿಟ್ಟು, ನಂತರ ಬೆನ್ನಿನ ಹಿಂಭಾಗದಿಂದ ಮುಂದೆ ತಂದು ಹಿಂದೆ ಹಾಕುತ್ತಾರೆ.[೧೨೪] ಜೇನು ಕುರುಬರು ಸೊಂಟಕ್ಕೆ ಬಟ್ಟೆ ಸುತ್ತಿಕೊಳ್ಳುತ್ತಾರೆ. ಉಳಿದಂತೆ ಬರೀ ಮೈಯಲ್ಲಿರುತ್ತಾರೆ.[೧೨೫] ಆದರೆ ಸಾಮಾನ್ಯ ಜನರು ಕೆಲವೊಬ್ಬರು ಲಂಗೋಟಿ ಅಥವಾ ಚಲ್ಲಣವನ್ನು ಧರಿಸುತ್ತಿದ್ದರು. ಸಾಧಾರಣವಾಗಿ ಪೇಟಾ, ಅಂಗಿ, ಧೋತ್ರ ಹಾಗೂ ಕೋಟು ಪ್ರಮುಖವಾದ ಎಲ್ಲಾ ಜನರ ಉಡುಪುಗಳಾಗಿದ್ದವು. ಈ ರೀತಿ ಮಾದರಿಯ ಉಡುಪುನ್ನು ಉದ್ಯೋಗದಲ್ಲಿರುವವರು, ಕಾಲೇಜು ಹುಡುಗರು ಸಹ ಧರಿಸುತ್ತಿದ್ದರು. ಪ್ರಮುಖವಾಗಿ ಮೈಸೂರಿನಲ್ಲಿ 'ಪೇಟ'ವು ತನ್ನದೇ ಆದ ಪ್ರಾಮುಖ್ಯತೆ ಪಡೆದಿತ್ತು ಈಗಲೂ ಸಹ ಮೈಸೂರಿನ ಪೇಟ ಎಂದು ಪ್ರಖ್ಯಾತಿ ಗಳಿಸಿರುವುದು ಸಹಜ. ಈ ಪೇಟದಲ್ಲಿ ರೇಷ್ಮೆಬಟ್ಟೆಯನ್ನು ಉನ್ನತ ವರ್ಗದವರು ಧರಿಸುತ್ತಿದ್ದರು. ಸಾಧಾರಣವಾಗಿ ಹತ್ತಿಬಟ್ಟೆ, ಉಣ್ಣೆಬಟ್ಟೆಯನ್ನು ಸಾಮಾನ್ಯ ಜನರು ಧರಿಸುತ್ತಿದ್ದರು. ಇದೊಂದು ಮೈಸೂರಿನ ಫ್ಯಾಶನ್ ಆಗಿತ್ತು. ಮುಖ್ಯವಾಗಿ ಮದ್ರಾಸ್ ಪೇಟ, ಪೂನಾ, ತಂಜಾವೂರ್ ಮಾದರಿಯಲ್ಲಿಯೂ ಪೇಟಗಳು ರಾಜ್ಯದಲ್ಲಿದ್ದವು. ಹಾಸನದಲ್ಲಿ ತಯಾರಾಗುವ ಉಣ್ಣೆಯ ಪೇಟಕ್ಕೆ ಬಹಳ ಬೆಲೆ ಇತ್ತು. ಆದರೆ ಮಲೆನಾಡಿನ ಇತರ ಕಡೆ ಬಳಸುವ ಪೇಟಕ್ಕೆ 'ರುಮಾಲು' ಎಂದು ಕರೆಯುತ್ತಾರೆ. ಸಾಮಾನ್ಯ ರುಮಾಲು ಬಣ್ಣಗಳೆಂದರೆ ಕೆಂಪು, ಬಿಳಿ, ನೀಲಿ, ಕಪ್ಪು ಇತರೇ ಬಣ್ಣಗಳು ಸಾಮಾನ್ಯವಾಗಿದ್ದವು. ಇವುಗಳಲ್ಲದೆ 'ನಡುಕಟ್ಟು' ಎಂಬ ಚೀಲವನ್ನು ಸೊಂಟಕ್ಕೆ ಕಟ್ಟುತ್ತಾರೆ. ಇದರಲ್ಲಿ ಎಲೆ, ಅಡಿಕೆ, ತಂಬಾಕು ಅಥವಾ ಸಣ್ಣ ಪದಾರ್ಥಗಳು ಇದರಲ್ಲಿರುತ್ತವೆ. ಮುಸಲ್ಮಾನರೂ ಸಹ ಸಡಿಲವಾದ ಧೋತ್ರ ಹಾಗೂ ತಲೆಗೆ ರುಮಾಲು, ಮೇಲೆ ಅಂಗಿಯನ್ನು ಧರಿಸುತ್ತಿದ್ದರು.[೧೨೬]

ಮೈಸೂರಿನ ಮಹಿಳೆಯರ ಉಡುಗೆಗಳು ಬಹಳ ಸುಂದರವಾದದ್ದು, ಹೆಚ್ಚಾಗಿ ಗಾಂಭೀರ್ಯವುಳ್ಳದಾಗಿರುತ್ತವೆ. ಬಿಗಿಕುಪ್ಪಸ, ಎದೆಯ ಭಾಗ ಮುಚ್ಚಿರುತ್ತದೆ. ಹಾಗೂ ಸೀರೆಯನ್ನು ಧರಿಸುತ್ತಾರೆ. ಇದನ್ನು ತಲೆಯ ಮೇಲೆ ಅಥವಾ ಭುಜದ ಮೇಲೆ ಸೆರಗನ್ನು ಹೊದ್ದುಕೊಳ್ಳುತ್ತಾರೆ. ಹೆಚ್ಚಾಗಿ ಅಂಚು(ಬಾರ್ಡರ್) ಇರುವ ಸೀರೆಯನ್ನು ಧರಿಸುತ್ತಿದ್ದರು. ಇವು ಸ್ವಲ್ಪ ದಪ್ಪವಾಗಿರುತ್ತಿದ್ದವು. ಮುಖ್ಯವಾಗಿ ಬಾರ್ಡರ್ ಬೂದು ಬಣ್ಣದಾದರೆ ಒಳಭಾಗದ ಸೀರೆ ಬಣ್ಣ ವಿರುದ್ಧವಾದದ್ದು. ಕೆಲವೊಬ್ಬರು ಸಡಿಲವಾದ ಕುಪ್ಪಸ ತೊಡುವರು. ಪಾದದವರೆಗೆ ಸೀರೆ ಉಟ್ಟಿರುತ್ತಾರೆ. ನೇರಿಗೆ(ಮಡಿಕೆ)ಗಳು ಹೆಚ್ಚಾಗಿ ಬಂದಿರುತ್ತವೆ. ಬಹಳ ಆಕರ್ಷಕವಾಗಿ ವೈಭವದಿಂದ ಕೂಡಿರುತ್ತದೆ. ಜೊತೆಗೆ ಆಭರಣಗಳನ್ನು ತಲೆಗೆ ಹೂ ಮುಡಿಯುವುದು ಇತ್ಯಾದಿ ಹಾಕಿಕೊಂಡು ನೀಟಾಗಿ ಕಾಣುತ್ತಾರೆ. ವೈಶ್ಯ ಹೆಣ್ಣುಮಕ್ಕಳು ಸಹ ಉತ್ತಮ ಉಡುಪು ಧರಿಸುತ್ತಾರೆ. ಇವರು ನಸುಗೆಂಪು ಬಣ್ಣದಿಂದ ಕೂಡಿದ್ದು, ಬ್ರಾಹ್ಮಣರಂತೆ ಕಾಣುತ್ತಾರೆ ಎಂದಿದ್ದಾರೆ.

ಮದುವೆಯಾದ ಮಹಿಳೆಯರು, ಸುಂದರವಾದ ಹೆಣ್ಣುಮಕ್ಕಳು ಹಚ್ಚೆಯನ್ನು ಹಾಕಿಸಿಕೊಳ್ಳುತ್ತಾರೆ. ಮೊಳಕೈಗೆ, ಹಣೆಗೆ ಇತರ ಕಡೆ ಹಾಕಿಕೊಳ್ಳುತ್ತಾರೆ. ಮುಸಲ್ಮಾನರ ಮಹಿಳೆಯರು ಸಹ ಹಿಂದೂಗಳಂತೆ

ಬಣ್ಣ ಬಣ್ಣದ ಸೀರೆ ಧರಿಸುತ್ತಾರೆ. ಇವರು ಬಿಳಿಬಟ್ಟೆಯಿಂದ ತಲೆ ಮತ್ತು ಇಡೀ ದೇಹವನ್ನು ಮುಚ್ಚಿಕೊಂಡಿರುತ್ತಾರೆ. ಜೊತೆಗೆ ಇವರು ಬುರ್ಕಾ ಧರಿಸುತ್ತಿದ್ದರು. ಕೆಲವೊಂದು ಬುಡಕಟ್ಟು ಜನಾಂಗಗಳು ಹೆಣ್ಣುಮಕ್ಕಳು ಕಂಬ್ಳಿ ಕುರುಬ ಮಹಿಳೆಯರು ಭುಜದ ಎದೆಯ ಭಾಗದವರೆಗೆ ಸೀರೆ ಸುತ್ತಿಕೊಳ್ಳುತ್ತಾರೆ. ಆದರೆ ರವಿಕೆ ಇರುವುದಿಲ್ಲ. ಕುತ್ತಿಗೆ ಹೆಚ್ಚಿನ ಸರಗಳನ್ನು, ಬಳೆಗಳನ್ನು ಹಾಕುತ್ತಾರೆ. ತಲೆಗೆ ಬಿಳಿಬಟ್ಟೆಯಿಂದ ಸುತ್ತಿಕೊಳ್ಳುತ್ತಾರೆ.

ಸಾಮಾನ್ಯವಾಗಿ ಉನ್ನತವರ್ಗದ ಹಿಂದೂಗಳು ಮರದ ಅಥವಾ ಚರ್ಮದ ಚಪ್ಪಲಿಯನ್ನು ಧರಿಸುತ್ತಿದ್ದರು. ಮುಸಲ್ಮಾನರು ಸಹ ಇವುಗಳನ್ನು ಧರಿಸುತ್ತಿದ್ದರು. ಆದರೆ ಇವು ಚಿಕ್ಕವು. ಶೂಗಳನ್ನು ಪುರುಷರು ಧರಿಸುತ್ತಾರೆ. ಆದರೆ ಮಹಿಳೆಯರು ಯಾವುದೇ ಕಾರಣಕ್ಕೂ ಶೂಗಳನ್ನು ಧರಿಸುವುದಿಲ್ಲ. ಕೇವಲ ಚಪ್ಪಲಿಗಳನ್ನು ಮಾತ್ರ ಧರಿಸುತ್ತಾರೆ. ಅದೂ ಮುಖ್ಯವಾಗಿ ಯಾತ್ರೆಗಳಲ್ಲಿ ಕಷ್ಟಕರವಾದ ಸ್ಥಳಗಳಲ್ಲಿ ಕೆಲವೊಂದು ಸಮಯದಲ್ಲಿ ಮಾತ್ರ ಎಂದು ತಿಳಿದುಬರುತ್ತದೆ.[೨೭] ಇದೇ ಅಭಿಪ್ರಾಯವು ಸಿ. ಹಯವದನರಾವ್ ಅವರ ಗ್ಯಾಸೆಟಿಯರ್‌ನಲ್ಲಿಯೂ ನೀಡಿದ್ದಾರೆ.

**ಆಭರಣಗಳು:** ಪ್ರಾಚೀನ ಕಾಲದಿಂದಲೂ ಸ್ತ್ರೀ-ಪುರುಷರಿಬ್ಬರೂ ಆಭರಣ ಪ್ರಿಯರಾಗಿದ್ದರೆನ್ನಬಹುದು. ಏಕೆಂದರೆ ಇಬ್ಬರೂ ಕೊರಳಿಗೆ ಚಿನ್ನದ ಸರವನ್ನು ಧರಿಸಿರುವುದು ಅನೇಕ ಶಿಲ್ಪಗಳಿಂದ ತಿಳಿದುಬರುತ್ತದೆ. ವಿದೇಶಿ ಪ್ರವಾಸಿಗನಾದ ಆಬೆದುಬಾಯಿಯವರ 'ದಿ ಹಿಂದೂ ಮ್ಯಾನರ್ಸ್ ಆ್ಯಂಡ್ ಕಸ್ಟಮ್ಸ್' ಎಂಬ ಮಹತ್ವದ ಪುಸ್ತಕದಲ್ಲಿ ವರ್ಣಿಸಿರುವ ಹಾಗೆ ಪುರುಷರ ಹಾರಕ್ಕೆ ಕಂಠಿಸರ 'ಗೋಪು' ಎಂದು ಕರೆದರೆ ಸ್ತ್ರೀಯರ ಹಾರಕ್ಕೆ 'ಸರಿಗೆಟೀಕು' ಎಂದು ಹೆಸರಿತ್ತೆಂದು ತಿಳಿಸಿದೆ. ಮೂಗುತಿ ಹಾರ, ಪದಕಗಳು ಹೆಣ್ಣುಮಕ್ಕಳ ಚೆಲುವನ್ನು ಹೆಚ್ಚಿಸುತ್ತಿದ್ದವು. ಹಬ್ಬಹರಿದಿನಗಳಲ್ಲಿ ವಿಶೇಷ ಸಮಾರಂಭಗಳಲ್ಲೂ ಸ್ತ್ರೀಯರು ಮಿಸುಪ ಸಂಪಗೆಗವಿ ಸಂದ್ಯವಳಿ ಮೊದಲಾದ ಬಣ್ಣ ಬಣ್ಣದ ದಿವ್ಯ ಆಭರಣಗಳನ್ನು ಧರಿಸುತ್ತಿದ್ದರೆಂದು ತಿಳಿಯುತ್ತದೆ.[೨೮]

ಬಿ.ಎಲ್. ರೈಸ್ ಅವರು ಬೆಳ್ಳಿ ಮತ್ತು ಬಂಗಾರದ ಆಭರಣಗಳನ್ನು ಕುರಿತು ಪ್ರತ್ಯೇಕವಾಗಿ ಅವುಗಳ ಹೆಸರನ್ನು ಹಾಗೂ ಅವುಗಳನ್ನು ಧರಿಸುವ ಭಾಗಗಳ ಕುರಿತು ವಿವರಣೆ ನೀಡುತ್ತಾರೆ. ಪ್ರಮುಖವಾಗಿ ಧರಿಸುತ್ತಿದ್ದಂತಹ ಆಭರಣಗಳೆಂದರೆ:

ರಗಟೆ: ಇದೊಂದು ಕಿರೀಟವಾಗಿದ್ದು, ಇದನ್ನು ಮಹಿಳೆಯರು ತಲೆಗೆ ಬಳಸುತ್ತಾರೆ.

Kyadige: ಇದು ಸಹ ತಲೆಗೆ ಧರಿಸುವ ಆಭರಣವಾಗಿದೆ.

ಜಡೆಬಿಲ್ಲೆ: ಇದನ್ನು ತಲೆಯ ಹಿಂಭಾಗದ ಜಡೆಗೆ ಹಾಕುತ್ತಾರೆ. ಇದೊಂದು ಫೇಲ್ ಮಾದರಿಯಲ್ಲಿರುತ್ತದೆ.

ಚಾರಿತುಪ್ಪೆ: ಇದೂ ಸಹ ತಲೆಗೆ ಹಾಕುವ ಆಭರಣವಾಗಿದೆ. ತಲೆಗೆ ಹಾಕುವ ಫಿನ್ ಎನ್ನಬಹುದು. ಮೇಲ್ಭಾಗದಲ್ಲಿ ಹಾಕುತ್ತಾರೆ.

ಬವಾಲಿ: ಕಿವಿಗೆ ಧರಿಸುವ ಆಭರಣ, ಕಿವಿಯ ಮೇಲ್ಭಾಗದಲ್ಲಿ ಹಾಕುತ್ತಾರೆ.

ಪದಕ: ಸರವಾಗಿದೆ.

ಅಡ್ಡಿಕೆ (Addike): ಗುಂಡಿನ ಸರ, ನೆಕ್ಲೇಸ್ ಇವು ಸಹ ಸರಗಳಾಗಿವೆ.

ಕಂಕನಿ: ಕೈಗೆ ಹಾಕುವ ಆಭರಣ(ಬ್ರಾಸ್‌ಲೈಟ್).

ವಂಕಿ: ತೋಳುಗಳಿಗೆ ಧರಿಸುವ ಆಭರಣಗಳು.

Bajuband: Armlets of broad belt-ellow

ಡಾಬು: ಸೊಂಟಕ್ಕೆ ಧರಿಸುವ ಆಭರಣ, ಇದು ಹೆಚ್ಚಾಗಿ ಬೆಳ್ಳಿಯದಾಗಿರುತ್ತದೆ.

Luli-Ruli: Kalsarpini anklets (ಬೆಳ್ಳಿ).

ಕಾಲ್ಗೆಜ್ಜೆ: ಹೆಚ್ಚಾಗಿ ಮಕ್ಕಳಿಗೆ ಧರಿಸುವ ಆಭರಣಗಳು ಅಥವಾ ತೋಳುಬಂದಿ.

ಫಿಲ್ಲೀ (Pilli): ಕಾಲು ಬೆರಳಿಗೆ ಧರಿಸುವ ಬೆಳ್ಳಿಯ ಆಭರಣ.

ಉಡುದಾರ: ಇದು ಸಹ ಬೆಳ್ಳಿಯದು, ಇದನ್ನು ಚಿಕ್ಕ ಗಂಡುಮಕ್ಕಳು ಹಾಗೂ ಪುರುಷರು ಧರಿಸುತ್ತಿದ್ದರು.

ಕರಡಿಗೆ: ಇದು ಬೆಳ್ಳಿಯ ಆಭರಣ. ಲಿಂಗವನ್ನು ಧರಿಸುವಂತಹ ಆಭರಣ.

Tayiti: ಬೆಳ್ಳಿಯ ಆಭರಣ ಹಣವನ್ನು ಇಡುವ ಬಾಕ್ಸ್.

Synnakayai: ಇದು ಬೆಳ್ಳಿಯ ಆಕಾರದ ಸುಣ್ಣದ ಡಬ್ಬಿ.

ಮೇಲಿನ ಎಲ್ಲಾ ಆಭರಣಗಳು ಜನರು ಉಪಯೋಗಿಸುವಂತಹವು.[೨೫] ಪ್ರಮುಖವಾಗಿ ಗಮನಿಸಬೇಕಾದ ಅಂಶಗಳೆಂದರೆ: ಎಲ್ಲಾ ಗ್ಯಾಸೆಟಿಯರ್‌ಗಳಲ್ಲಿ ಕಿವಿ, ಮೂಗು, ಕೈಗಡಿಯಾರಗಳಿಗೆ ಹಾಕುವ ಆಭರಣಗಳೆಂದೇ ಕರೆಯುತ್ತಾರೆ. ಆದರೆ ರೈಸ್ ಅವರು ಆಯಾ ಆಭರಣಗಳಿಗಿರುವ ಸರಿಯಾದ ಹೆಸರುಗಳ ಮೂಲಕ ಮಾಹಿತಿ ನೀಡಿರುವುದು ಅವರ ಕಾರ್ಯವೈಖರಿಯನ್ನು ತಿಳಿಯಬಹುದಾಗಿದೆ.

**೩.೩.೬. ಮೈಸೂರು ಸಂಸ್ಥಾನದ ಆಹಾರ ಪದ್ಧತಿ**

ಮೈಸೂರಿನ ಜನರು ಹೆಚ್ಚಾಗಿ 'ರಾಗಿ'ಯನ್ನು ಮುಖ್ಯವಾದ ಆಹಾರವಾಗಿ ಉಪಯೋಗಿಸುತ್ತಾರೆ. ರಾಗಿಯೂ ಒಣಕಾಳು ಆಗಿರುವುದರಿಂದ ಆಗಿನ ಕಾಲದಲ್ಲಿ ಮನೆಯಲ್ಲಿಯೇ ಬೀಸುವ ಕಲ್ಲಿನಿಂದ ಬೀಸುತ್ತಿದ್ದರು. ಈ ಬೀಸಿದ ಹಿಟ್ಟಿನಿಂದ ರೊಟ್ಟಿ, ದೋಸೆ, ಮುದ್ದೆ ಆಹಾರವನ್ನು ತಯಾರಿಸುತ್ತಿದ್ದರು. ರಾಗಿಯ ಕುರಿತು Forber watson ಅವರ ಪ್ರಕಾರ ರಾಗಿ ಆಹಾರವು ಮಹತ್ತರವಾದದ್ದು ಎಂದಿದ್ದಾರೆ. Semstobe ಅವರ ಪ್ರಕಾರ ರಾಗಿಯು ಮಹತ್ತರವಾದ ಮಿನರಲ್‌ನ್ನು ಕೊಡುತ್ತದೆ ಎನ್ನುವರು. ಇಲ್ಲಿನ ಜನರು ಅಕ್ಕಿ, ಗೋಧಿಯನ್ನು ಸಹ ಬಳಸುತ್ತಿದ್ದರು. ಹೆಚ್ಚಾಗಿ ಉನ್ನತ ವರ್ಗದವರು ಹಾಗೂ ಬ್ರಾಹ್ಮಣರು ಅಕ್ಕಿಯನ್ನು ಉಪಯೋಗಿಸುತ್ತಾರೆ. ಮುಖ್ಯವಾಗಿ ಬೆಂಗಳೂರು, ಕೋಲಾರ, ತುಮಕೂರು ಜಿಲ್ಲೆಗಳಲ್ಲಿ ಬ್ರಾಹ್ಮಣರು ಹೆಚ್ಚಾಗಿ ಅನ್ನವನ್ನು ಉಪಯೋಗಿಸುತ್ತಿದ್ದರು. ಹೊಸ ಅಕ್ಕಿ ಅಥವಾ Green rice ಎಂದು ಕರೆಯುತ್ತಾರೆ. ಈ ಅಕ್ಕಿಯನ್ನು Boiled ಮಾಡಿರುವುದಿಲ್ಲ. ಇಂತಹ ಅಕ್ಕಿಗೆ 'ಕುಡುಪಾಲ್‌ಅಕ್ಕಿ' ಎಂದು ಕರೆಯುತ್ತಾರೆ. ಜೊತೆಗೆ ತುಪ್ಪ, ಬೆಣ್ಣೆ, ಹಾಲು, ಮೊಸರು ಹೆಚ್ಚಾಗಿ ಬ್ರಾಹ್ಮಣರು ಉಪಯೋಗಿಸುತ್ತಿದ್ದರು. ಉಪ್ಪಿನಕಾಯಿ ಇತರೇ ದ್ವಿದಳಧಾನ್ಯಗಳು, ತರಕಾರಿಗಳು, ಅರಿಶಿನ, ಮೆಣಸಿನಕಾಯಿ ಇತರೇ ಎಲ್ಲಾ ವರ್ಗದವರು ಬಳಸುತ್ತಿದ್ದರು.

ಇವುಗಳಲ್ಲದೆ ಎಲ್ಲಾ ವರ್ಗದವರು ಎಲೆ, ಅಡಿಕೆ, ತಂಬಾಕು ಸೇವನೆಯನ್ನು ಮಾಡುತ್ತಿದ್ದರು. ಜೊತೆಗೆ ಮೈಸೂರಿನ ತಾಂಬೂಲ(ಎಲೆಗೆ) ತುಂಬಾ ಬೇಡಿಕೆ ಇರುವುದಾಗಿಯೂ ತಿಳಿಯಬಹುದು.[೧೩೦]

ಎಲ್ಲಾ ಕಡೆಯು ಸೇವಿಸುವಂತೆ ಹೆಂಡ(Kallu) ಸೇವನೆ ಇಲ್ಲಿಯೂ ಇದೆ. ಮುಖ್ಯವಾಗಿ ಗೌಡರು, ಹೊಲೆಯರು, ಮಾದಿಗರು ಇತರರು ಗಾಂಜಾ ಅಥವಾ 'ಭಂಗಿ'ಯನ್ನು ಸೇದುತ್ತಿದ್ದರು. ಜೊತೆಗೆ ಹೆಂಡ ಕುಡಿಯುತ್ತಿದ್ದರು.[೧೩೧] ಆಹಾರದ ವಿಚಾರವಾಗಿ ಬಿ.ಎಲ್. ರೈಸ್ ಅವರ ಗ್ಯಾಸೆಟಿಯರ್‌ನಲ್ಲಿ ಯಾವುದೇ ಮಾಹಿತಿ ದೊರೆಯುವುದಿಲ್ಲ.

**೩.೩.೭. ಮೈಸೂರು ಸಂಸ್ಥಾನದ ಧಾರ್ಮಿಕ ಆಚರಣೆಗಳು**

ಭಾರತದಲ್ಲಿ ಹಲವಾರು ದೇವರುಗಳನ್ನು ಪೂಜಿಸುತ್ತಾರೆ. ಈ ಹಿನ್ನೆಲೆಯಲ್ಲಿ ಮೈಸೂರು ಸಂಸ್ಥಾನದ ಗ್ರಾಮೀಣ ಪ್ರದೇಶಗಳಲ್ಲಿ ಹಬ್ಬಹರಿದಿನಗಳ ಹೆಸರಿನಲ್ಲಿ ಹಲವಾರು ಧಾರ್ಮಿಕ ಹಾಗೂ ಸಾಮಾಜಿಕ ಸಂಪ್ರದಾಯಗಳನ್ನು ಅವಲೋಕಿಸಿದಾಗ ರಥೋತ್ಸವಗಳು, ಜಾತ್ರೆಗಳು, ಉತ್ಸವಗಳು ಪ್ರಮುಖವಾಗಿ ಕಂಡುಬರುತ್ತವೆ. ಮೈಸೂರು ಸಂಸ್ಥಾನವು ದಸರಾ(ನವರಾತ್ರಿ) ಹಬ್ಬಕ್ಕೆ ವಿಶೇಷವಾದದ್ದು. ಹಾಗೆಯೇ ದೀಪಾವಳಿ, ಯುಗಾದಿಯು ವಿಶೇಷವಾದದ್ದು. ಆದರೆ ಗ್ಯಾಸೆಟಿಯರ್‌ಗಳಲ್ಲಿ ಈ ಹಬ್ಬಗಳ ಕುರಿತು ಯಾವುದೇ ಮಾಹಿತಿ ಸಿಗುವುದಿಲ್ಲ. ಆದರೆ ಮೈಸೂರು ಜಿಲ್ಲೆಗಳಲ್ಲಿ ಜರುಗುತ್ತಿದ್ದಂತಹ ಜಾತ್ರೆ, ಉತ್ಸವ ಇತ್ಯಾದಿಗಳ ಕುರಿತು ಹೆಚ್ಚಿನ ಮಾಹಿತಿ ಸಿಗುತ್ತದೆ.

ಕೆಲವೊಂದು ಪ್ರಾಕೃತಿಕ ಆರಾಧನೆಯನ್ನು ಕುರಿತು ಮಾಹಿತಿ ಕಾಣಬಹುದು. ನಾಗರಹಾವನ್ನು 'ನಾಗಪ್ಪ'ನೆಂದು ಪೂಜಿಸುತ್ತಾರೆ. ಹಲವಾರು ಗಿಡಗಳನ್ನು ಪೂಜಿಸುತ್ತಾರೆ. ಅವುಗಳಲ್ಲಿ ಬಿಲ್ವಪತ್ರೆ ಗಿಡವು ಸಹ ಒಂದು. ಇದು ಶಿವನ ಆರಾಧನೆ ಎಂದು ನಂಬುತ್ತಾರೆ. ತುಳಸಿ ಗಿಡವನ್ನು ವಿಷ್ಣುವಿನ ಅವತಾರವೆನ್ನುತ್ತಾರೆ. ವೈಷ್ಣವರು ಮನೆಯ ಮುಂದೆ ತುಳಸಿ ಗಿಡವನ್ನು ಹಾಕಿ ಪೂಜಿಸುತ್ತಾರೆ. ಮರಿಯಮ್ಮ ಅಥವಾ ಮಾರಮ್ಮ ಸಾಮಾನ್ಯವಾಗಿ ಅಮ್ಮ, ತಾಯಿ ಅಥವಾ ಅಮ್ಮನವರೆಂದು ನಗರ ಮತ್ತು ಪಟ್ಟಣಗಳಲ್ಲಿ ಪೂಜಿಸುತ್ತಾರೆ. ಈ ದೇವರುಗಳು ಮುಖ್ಯವಾಗಿ ಗ್ರಾಮದೇವತೆ ಅಲ್ಲದೆ ದುರ್ಗ್ಗಾ, ಕಾಳಿ, ಚಾಮುಂಡಿ ಈ ದೇವರ ಅವತಾರವೆಂದು ನಂಬುತ್ತಾರೆ. ಈ ದೇವರಿಗೆ ಪ್ರಾಣಿಬಲಿಯನ್ನು ಕೊಡುತ್ತಾರೆ. ಮುಖ್ಯವಾಗಿ 'ಎಮ್ಮೆ'ಯನ್ನು ಪೂಜಿಸುತ್ತಾರೆ. ಪ್ರತಿ ಹಳ್ಳಿಯಲ್ಲೂ ಸಾಮಾನ್ಯವಾಗಿ 'ಮಾರಿಗುಡಿ' ಇದ್ದೇ ಇರುತ್ತದೆ. ಇದನ್ನು ಬೇರೆ ಬೇರೆ ಹೆಸರಿನಿಂದ ಕರೆಯುತ್ತಾರೆ. ಜೊತೆಗೆ 'ಅಮ್ಮ' ಎಂಬುದು ಸಾಮಾನ್ಯವಾಗಿದೆ. ಆರಾಧನೆ ಎಂದರೆ ಭೂತಗಳ ಆರಾಧನೆ ಎಂದಾಗುತ್ತದೆ. ಈ ಪೂಜೆಯು ಭೂತಾಯಿಗೆ ಅನ್ವಯಿಸುತ್ತದೆ. ಜೊತೆಗೆ ಜೈನ, ಬುದ್ಧ, ಶಿವ ಮತ್ತು ವಿಷ್ಣುವನ್ನು ಸಾಮಾನ್ಯವಾಗಿ ಆರಾಧಿಸುತ್ತಾರೆ.[೧೩೨]

ಪ್ರಮುಖವಾಗಿ ಮೈಸೂರು ಸಂಸ್ಥಾನದ ಎಂಟು ಜಿಲ್ಲೆಗಳಲ್ಲಿ ಜರುಗುವ ಜಾತ್ರೆ, ಉತ್ಸವಗಳು ಈ ರೀತಿಯಾಗಿ ಕಂಡುಬರುತ್ತವೆ.

| ಸ್ಥಳ (ಜಿಲ್ಲೆ) | ದೇವರು | ಹಬ್ಬ | ದಿನಗಳು | ಭಾಗವಹಿಸಿದ ಜನರ ಸಂಖ್ಯೆ |
|---|---|---|---|---|
| ಬೆಂಗಳೂರು: | | | | |
| ಬೆಂಗಳೂರು ಜಿಲ್ಲೆ ದೊಡ್ಡಬಳ್ಳಾಪುರ ತಾ. (ಲಗುಮ್ಮೆನಾಹಳ್ಳಿ) | ಘಾಟಿಸುಬ್ರಹ್ಮಣ್ಯ | ರಥೋತ್ಸವ | ೩ | ೨೦,೦೦೦ |
| ಮಾಗಡಿ ತಾ. ತಿರುಮಲೆ | ರಂಗನಾಥಸ್ವಾಮಿ | ಅಪ್ಪಗ್ರಿ | ೧೦ | ೧೦,೦೦೦ |
| ಬೆಂಗಳೂರು | ರಂಗನಾಥಸ್ವಾಮಿ | ರಥೋತ್ಸವ | ೭ | ೩,೦೦೦ |
| ಹೊಸಕೋಟೆ | ಧರ್ಮರಾಯನ | ಕರಗ | ೧ | ೫,೦೦೦ |
| ತುಮಕೂರು ಜಿಲ್ಲೆ, ತುಮಕೂರು | ನರಸಿಂಹಸ್ವಾಮಿ | ರಥೋತ್ಸವ | ೧೫ | ೧೦,೦೦೦ |
| ಸೀಬಿ, ತುಮಕೂರು ತಾಲೂಕು ಚಿಕ್ಕನಾಯಕನಹಳ್ಳಿ | ಅಮ್ಮನ | ಜಾತ್ರೆ | ೧ | ೪,೦೦೦ |
| ಕುಣಿಗಲ್ | ಸಿದ್ದೇಶ್ವರ | ಜಾತ್ರೆ | ೫ | ೧೦,೦೦೦ |
| ಮೈಸೂರು: | | | | |
| ಮೈಸೂರು, ಶ್ರೀರಂಗಪಟ್ಟಣ | ರಥಸಪ್ತಮಿ | ಉತ್ಸವ | ೧ | ೨೦,೦೦೦ |
| ಮೇಲುಕೋಟೆ | ವೀರನುಡಿ | ಉತ್ಸವ | ೧೨ | ೧೦,೦೦೦ |
| ಚಾಮುಂಡಿಬೆಟ್ಟ | ಚಾಮುಂಡೇಶ್ವರಿ ಅಮ್ಮನ | ರಥೋತ್ಸವ | ಅಕ್ಟೋಬರ್ | ೪,೦೦೦ |
| ಮಳವಳ್ಳಿ ತಾ., ಮಳವಳ್ಳಿ | ನರಸಿಂಹಸ್ವಾಮಿ | ರಥೋತ್ಸವ | ೫ | ೩,೦೦೦ |
| ಮಂಡ್ಯ | ಭೈರಾದೇವ | ಜಾತ್ರೆ | ೪ | ೩,೦೦೦ |
| ಎಡತೊರೆ ತಾಲೂಕು ಚುಂಚನಕಟ್ಟೆ | ಗಂಗಾಧರೇಶ್ವರ | ಜಾತ್ರೆ | ೨೦ | ೨,೦೦೦ |
| ಹಾಸನ: | | | | |
| ಹಾಸನ ತಾ., ಹಾಸನ | ಹಾಸನಾಂಬ | ಹಬ್ಬ | ೧೨ | ೪,೦೦೦ |
| ಬೇಲೂರು | ಚನ್ನಕೇಶವ | ರಥೋತ್ಸವ | ೫ | ೫,೦೦೦ |
| ಹೊಸಕೋಟೆ (ಮಜರಾಬಾದ್ ತಾಲೂಕು) | ಕೆಂಚಮ್ಮನ | ಜಾತ್ರೆ | ವರ್ಷದಲ್ಲಿ ಎರಡು ಬಾರಿ | ೪,೦೦೦ |
| ಅರಕಲಗೂಡು ತಾಲೂಕು | ಸುಬ್ರಹ್ಮಣ್ಯ | ರಥೋತ್ಸವ | ೮ | ೩,೦೦೦ |

| | | | | |
|---|---|---|---|---|
| ರಾಮನಾಥಪುರ | | | | |
| ಹೊಳೆನರಸಿಂಹಪುರ | ನರಸಿಂಹಸ್ವಾಮಿ | ರಥೋತ್ಸವ | ೧೦ | ೩,೦೦೦ |
| ಕಡೂರು | | | | |
| **ಕಡೂರು:** | | | | |
| ಶೃಂಗೇರಿಯ ಕೊಪ್ಪ ತಾಲೂಕು | ನವರಾತ್ರಿ | ಮಹೋತ್ಸವ | ೧೫ | ೧೦,೦೦೦ |
| ಕಡೂರು ತಾಲೂಕು ಪುರಾ | ಮಲೇಶ್ವರ ದೇವರ | ಜಾತ್ರೆ | ೧೫ | ೪,೦೦೦ |
| ತರೀಕೆರೆ ತಾಲೂಕು | | | | |
| ಅಂತರಘಟ್ಟೆ | ಅಮ್ಮನ | ಜಾತ್ರೆ | ೧೫ | ೪,೦೦೦ |
| ಹೊಸಹಳ್ಳಿ | ನಿರ್ವಾಣ ದೇವರ | ಜಾತ್ರೆ | ೫ | ೩,೦೦೦ |
| (ಚಿಕ್ಕಮಗಳೂರು ತಾಲೂಕು) | | | | |
| **ಶಿವಮೊಗ್ಗ:** | | | | |
| ಶಿವಮೊಗ್ಗ | ಮಲ್ಲಿಕಾರ್ಜುನ | ಜಾತ್ರೆ | ೫, ಮಾರ್ಚ್ | ೧೦,೦೦೦ |
| ಶಿಕಾರಿಪುರು ತಾ., ತೊರ್ಗಸಿ | | | | |
| ಶಿಕಾರಿಪುರ | ಹುಚ್ಚುರಾಯ | ರಥೋತ್ಸವ | ೩ ದಿನ | ೫,೦೦೦ |
| | | | ಏಪ್ರಿಲ್ | |
| ಚನ್ನಗಿರಿ ತಾಲೂಕು | ಮಹೇಶ್ವರ | ಜಾತ್ರೆ | ೩ | ೬,೦೦೦ |
| ಚಿಕ್ಕಹಳ್ಳಿಕೆರೆ | | | | ಡಿಸೆಂಬರ್ |
| ಸೊರಬ ತಾ., ಚಂದ್ರಗುತ್ತಿ | ರೇಣುಕಮ್ಮನ | ರಥೋತ್ಸವ | ೮ | ೫,೦೦೦ |
| ತೀರ್ಥಹಳ್ಳಿ | ರಾಮೇಶ್ವರ | ರಥೋತ್ಸವ | ೭ | ೪,೦೦೦ |
| ಸಾಗರ ತಾಲೂಕು ಹುಮಚ | ಪದ್ಮಾವತಿ ಅಮ್ಮನ | ರಥೋತ್ಸವ | ೭ | ೪,೦೦೦ |
| ಸಾಗರ ತಾಲೂಕು | ಜೇನುಕಲ್ ಅಮ್ಮನ | ಜಾತ್ರೆ | ೪ | |
| ಜೇನುಕಲ್‌ಗುಡ್ಡ | | | | - |
| ಹೊನ್ನಳ್ಳಿ ತಾ., ರಾಮಪುರ | ಹಾಲ್‌ಸ್ವಾಮಿ | ಜಾತ್ರೆ | ೪ | - |
| ಶಿವಮೊಗ್ಗ ತಾ., ಪಿಲ್ಲನಗಿರಿ | ಶ್ರೀನಿವಾಸ ದೇವರ | ರಥೋತ್ಸವ | ೨ | ೩,೦೦೦ |
| ಹೊನ್ನಳ್ಳಿ ತಾ., ಮಾರಿಕೊಪ್ಪ | ಹಾಲದಮ್ಮ | ರಥೋತ್ಸವ | ೫ | - |
| **ಚಿತ್ರದುರ್ಗ:** | | | | |
| ಚಿತ್ರದುರ್ಗ ಜಿಲ್ಲೆ | ತಿಪ್ಪೇರುದ್ರ | ರಥೋತ್ಸವ | ೨ | ೧೦,೦೦೦ |
| ಚಳ್ಳಕೆರೆ ತಾ, ನಾಯಕನಹಟ್ಟಿ | | | | |
| ಜಗಳೂರು ತಾಲೂಕು | ವೀರಭದ್ರ ದೇವರ | ೧೭ | | |

| | | | | |
|---|---|---|---|---|
| ಕೋಟೆಗುಡ್ಡ | ಹಬ್ಬ | | | |
| ಜಗಳೂರು | ಕಳ್ಳ ದೇವರಪುರ | ರಥೋತ್ಸವ | ೧೫, ಏಪ್ರಿಲ್ | ೬,೦೦೦ |
| ಹಿರಿಯೂರು ತಾಲೂಕು ಹಿರಿಯೂರು | ತ್ಯಾರ ಮಲ್ಲೇಶ್ವರ | ಹಬ್ಬ | ೭ | ೪,೦೦೦ |
| ಚಿತ್ರದುರ್ಗ, ಮುರಘಾಮಠ | ಚೌಡೇಶ್ವರ | ಹಬ್ಬ | ೧ರಿಂದ ೩ ಮಾರ್ಚ್ | ೩,೫೦೦ |
| ಹಿರಿಯೂರು ತಾಲೂಕು ಮಾರಿ ಕಣವೆ | ಮಾರಮ್ಮ | ಜಾತ್ರೆ | ೫ | ೨,೫೦೦ |
| ಹಿರಿಯೂರು ತಾಲೂಕು ಎರೇಬಳ್ಳಿ | Similor | ಜಾತ್ರೆ | ೫ | ೩,೦೦೦ |
| ಹೊಸದುರ್ಗ ತಾಲೂಕು ದೇವಪುರ | ಕರಿಯಗಲಮ್ಮ | ಜಾತ್ರೆ | ಲ | ೨,೦೦೦ |
| ದಾವಣಗೆರೆ | ಹರಿಹರೇಶ್ವರ | ರಥೋತ್ಸವ | ೧ | ೫,೦೦೦ |
| ದಾವಣಗೆರೆ ತಾಲೂಕು ಹಳೇಹಟ್ಟಿ | ಪ್ರಾಣ ದೇವರ | ರಥೋತ್ಸವ | ಪುಷ್ಯ ತಿಂಗಳು | ೫,೦೦೦ |
| ಮೊಳಕಾಲ್ಮೂರು ತಾಲೂಕು ನುಕ್ಕೆ | ಭೈರವಗುಡ್ಡ | ಹಬ್ಬ | ಲ | ೨,೫೦೦ |
| ಚಳ್ಳಕೆರೆ ತಾ., ಗೌರಸಮುದ್ರ | ಮಾರಮ್ಮ | ಜಾತ್ರೆ | ೪ | ೩,೦೦೦ |
| ಕೋಲಾರ: | | | | |
| ಕೋಲಾರ ಜಿಲ್ಲೆ, ಚಿಕ್ಕಬಳ್ಳಾಪುರ, ನಂದಿ ಸ್ಥಳ | ನಂದೀಶ್ವರರ | ರಥೋತ್ಸವ | ೧೫ | ೨೦,೦೦೦ |
| ಮುಳಬಾಗಿಲು ತಾ, ಅವನಿ | ರಾಮಲಿಂಗ | ಹಬ್ಬ | ೧೫ | ೧೦,೦೦೦ |
| ಕೋಲಾರ ಜಿಲ್ಲೆ ವನರಾಶಿ | ಈರಲಪ್ಪ | ಹಬ್ಬ | ೧೫ | ೫,೦೦೦ |
| ಬೌರಿಂಗ್‌ಪೇಟೆ ತಾಲೂಕು ಮೇಲಾಹಳ್ಳಿ | ಶ್ರೀನಿವಾಸ ಸಮುದ್ರ ಗಂಗಮ್ಮ ಹಬ್ಬ | ಹಬ್ಬ | ೧೫ | ೨,೦೦೦ |
| ಮಾಲೂರು ತಾಲೂಕು ವಿಲೇರುಹಳ್ಳಿ | ಭೂಪತಮ್ಮ | ಹಬ್ಬ | ಲ | - |
| ಚಿಂತಾಮಣಿ ತಾಲೂಕು | ವೆಂಕಟರಮಣ | ರಥೋತ್ಸವ | ೧೫ | ೨೦,೦೦೦ |

ಕೋಣಕುಟ್ಟೆ

| | | | | |
|---|---|---|---|---|
| ಮಾಲೂರು ತಾ, ಚಿಕ್ಕ ತಿರುಪತಿ | ವೆಂಕಟರಮಣ | ರಥೋತ್ಸವ | ೫ | ೬,೦೦೦ |
| ಶಿಡ್ಲಘಟ್ಟ ತಾ, ಮೈಲಾರಿ | ಗಂಗಾದೇವಿ | ಹಬ್ಬ | ೧೦ | ೬,೦೦೦ |
| ಬೌರಿಂಗ್‌ಪೇಟೆ | ಕೊಂಡರ ರಾಮಸ್ವಾಮಿ | ರಥೋತ್ಸವ | ೧೦ | ೫,೦೦೦ |
| ವಕ್ಕಲೇರಿ | ಮಾರ್ಕಂಡೇಶ್ವರ | ರಥೋತ್ಸವ | ೮ | ೨,೦೦೦ |

ಮೇಲಿನ ವಿವರಣೆಯು ಮೈಸೂರು ಸಂಸ್ಥಾನದ ಎಂಟು ಜಿಲ್ಲೆಗಳಲ್ಲಿ ಕಂಡುಬರುವ ಜಾತ್ರೆ, ಉತ್ಸವಗಳಾಗಿವೆ. ಇಂಥ ಜಾತ್ರೆ, ಉತ್ಸವಗಳಲ್ಲಿ ಎಮ್ಮೆ, ಹಸುಗಳನ್ನು ಕೊಳ್ಳುವ ಹಾಗೂ ಮಾರಾಟ ಮಾಡುವ ವ್ಯವಹಾರ ನಡೆಸಲು ಇದು ಪ್ರಮುಖ ಸ್ಥಳವಾಗಿತ್ತು. ಮುಖ್ಯವಾಗಿ ಒಕ್ಕಲೇರಿಯಲ್ಲಿಯೇ ೧,೬೦೦ ಹಸು, ಎಮ್ಮೆಗಳು ಈ ಸಂದರ್ಭದಲ್ಲಿ ಮಾರಾಟವಾಗುತ್ತಿದ್ದವೆಂಬುದು ವಿಶೇಷವಾದದ್ದು.[೯೩] ಇವುಗಳಿಂದ ವ್ಯಾಪಾರಕ್ಕೆ ಈ ಜಾತ್ರೆ, ರಥೋತ್ಸವಗಳು ಉತ್ತಮ ಮಾರ್ಗಗಳಾಗಿವೆ ಎಂಬುದು ವಿಶೇಷ. ಬಿ.ಎಲ್. ರೈಸ್ ಹಾಗೂ ರಾವ್ ಅವರ ಗ್ಯಾಸೆಟಿಯರ್‌ಗಳಲ್ಲಿ ಸಾಮಾನ್ಯ ಹಬ್ಬಗಳ ಬಗ್ಗೆ ಮಾಹಿತಿ ನೀಡದೇ ಇರುವುದು ಅಚ್ಚರಿಯನ್ನುಂಟು ಮಾಡುತ್ತದೆ. ಆದರೆ ಜಾತ್ರೆ, ರಥೋತ್ಸವಗಳ ಬಗ್ಗೆ ಇರುವ ಮಾಹಿತಿಯು ಭಿನ್ನವಾದದ್ದು ಎಂಬುದಾಗಿ ಪರಿಗಣಿಸಬಹುದಾಗಿದೆ. ಆದರೂ ಸಹ ಇಲ್ಲಿ ಆಡಳಿತಾತ್ಮಕ ಹಾಗೂ ಆರ್ಥಿಕ ಅಂಶಗಳಿಗೆ ಹೆಚ್ಚು ಒತ್ತು ನೀಡಿರುವುದು ಸ್ಪಷ್ಟವಾಗಿದೆ.

**೩.೩.೮. ಮೈಸೂರು ಸಂಸ್ಥಾನದ ಸಾಮಾಜಿಕ ವ್ಯವಸ್ಥೆ**

ಸಾಮಾನ್ಯವಾಗಿ ಎಲ್ಲಾ ಜಾತಿಗಳಲ್ಲಿಯೂ ಮದುವೆ ಸಮಾರಂಭ ಒಂದೇ ರೀತಿ ಇದ್ದರೂ ಆಚರಣೆಗಳೆಲ್ಲವೂ ಭಿನ್ನತೆಯಿಂದ ಕೂಡಿರುತ್ತವೆ. ಮದುವೆಯು ೫ ದಿನಗಳ ಕಾಲ ನಡೆಯುತ್ತಿತ್ತು. ಎಲ್ಲಾ ಸಮಾರಂಭದ ಆಚರಣೆಗಳು ವಧುವಿನ ಮನೆಯಲ್ಲಿಯೇ ನಡೆಯುತ್ತಿತ್ತು. ಆದರೆ ಕೆಲವೊಂದು ಡೊಂಬರು, ಹೊಲೆಯ ಜಾತಿಗಳಲ್ಲಿ ವರನ ಮನೆಯಲ್ಲಿ ಮದುವೆಶಾಸ್ತ್ರ ನಡೆಯುತ್ತಿತ್ತು, ಮದುವೆ ಸಮಾರಂಭವೆಂದರೆ ಚಪ್ಪರ ಹಾಕುವುದು. ಇದನ್ನು ವಧುವಿನ ಚಿಕ್ಕಪ್ಪನು ಹಾಕುವನು. ಈ ಸಂದರ್ಭದಲ್ಲಿ ವಧುವಿಗೆ ಒಳ್ಳೆಯ ವಿಚಾರಗಳ ಕುರಿತು ತಿಳಿಸುತ್ತಾನೆ. ಅನಂತರ ಮೊದಲು ವೀಳ್ಯಶಾಸ್ತ್ರ ಮಾಡುತ್ತಾರೆ. ಇದು ಮದುವೆ ಗೊತ್ತುಪಡಿಸುವ ಶಾಸ್ತ್ರ. ಇದನ್ನು ಮನೆಯ ದೊಡ್ಡವರು ಮಾಡುವರು. ಅನಂತರ ಮನೆಯ ಹೊರಗಡೆ ಅರಿಶಿನ ಹಚ್ಚಿ ಸ್ನಾನ ಮಾಡಿಸುತ್ತಾರೆ. ಅನಂತರ ದೇವದೂತಃ ಎಂದು ಮಾಡುತ್ತಾರೆ. ಅಂದರೆ ಸತ್ತವರ ಹಾಗೂ ದೇವರಲ್ಲಿ ಬೇಡಿಕೊಂಡು ಜೋಡಿಗಳು ಆಶೀರ್ವಾದ ಪಡೆಯುತ್ತಾರೆ. ತಾಯಿಗಳಿಬ್ಬರು ಕೈಗಳಿಗೆ ಹಾಲು, ತುಪ್ಪ ಹಾಕಿ ಅಕ್ಷತೆಕಾಳು ಹಾಕಿ ಆಶೀರ್ವದಿಸುತ್ತಾರೆ. ಅನಂತರ ನಾಗವಲ್ಲಿ ಎಂಬ ಶಾಸ್ತ್ರ ಮಾಡುತ್ತಾರೆ. ಇದರಲ್ಲಿ ಕೆಂಪನೆಯ ನೀರಿನಲ್ಲಿ ಯಾವುದಾದರೊಂದು ವಸ್ತುವನ್ನು ಹುಡುಕಿ ತೆಗೆಯುವುದು. ಕೊನೆಗೆ Gaddige ಅಥವಾ ಸಿಂಹಾಸನಾ ಪೂಜೆ ಮಾಡುತ್ತಾರೆ. ಮೈಸೂರು ಪ್ರಾಂತ್ಯದಲ್ಲಿ ಪ್ರಾಯಕ್ಕೆ ಬಂದಾಗ ಮದುವೆ ಮಾಡುವುದು ಸಹಜವಾಗಿತ್ತು, ಆದರೆ ಬ್ರಾಹ್ಮಣರು ತಮ್ಮ ಮಕ್ಕಳನ್ನು ದೊಡ್ಡವರು ಚಿಕ್ಕ ವಯಸ್ಸಿನಲ್ಲಿದ್ದಾಗ ತಮ್ಮ ಸೊಸೆ ಅಥವಾ ಅಳಿಯನೆಂದು ಕೂಸಿರುವಾಗಲೇ ನಿರ್ಣಯಿಸುತ್ತಿದ್ದರು. ಅವರು ದೊಡ್ಡವರಾದ ನಂತರ

ಮದುವೆ ಮಾಡುವುದು ಸಹಜ. ಇದೇ ಪ್ರವೃತ್ತಿಯನ್ನು ಕೋಮಟಿಗರು ಇತರ ಜಾತಿಯವರು ಅನುಸರಿಸುತ್ತಿದ್ದರೆಂದು ತಿಳಿದುಬರುತ್ತದೆ.

ಮೈಸೂರು ಪ್ರಾಂತ್ಯದ ಗ್ಯಾಸೆಟಿಯರ್‌ನಲ್ಲಿ ಬೇರೆ ಪ್ರಾಂತ್ಯಗಳಿಗಿಂತ ಮದುವೆ ವಿಚಾರದಲ್ಲಿ ಭಿನ್ನತೆಯನ್ನು ಗುರುತಿಸಬಹುದು. ಏಕೆಂದರೆ ವರದಕ್ಷಿಣೆ ಕೊಡುವ ಪದ್ಧತಿಯು ಪ್ರಾಚೀನ ಕಾಲದಲ್ಲೂ ಇತ್ತು. ಆದರೆ ಅದನ್ನು ನಿರ್ದಿಷ್ಟಪಡಿಸಿರಲಿಲ್ಲ. ಮೈಸೂರಿನ ಪ್ರಾಂತ್ಯಗಳಲ್ಲಿ ಆಯಾ ಜಾತಿಗಳಿಗೆ ಇಂತಿಷ್ಟು ಎಂದು ನಿರ್ಣಯಿಸಿದ್ದರೂ ಇದೊಂದು ಪ್ರಮುಖ ವಿಚಾರವಾಗಿ ಪರಿಗಣಿಸಬಹುದು.

ಬ್ರಾಹ್ಮಣರಲ್ಲಿಯೇ ಸಹ ವರದಕ್ಷಿಣೆ ವಧುದಕ್ಷಿಣೆ ಕೊಡುವ ಪದ್ಧತಿ ಇತ್ತು. ತಮಗೆ ಇಷ್ಟವಾದ ಉಡುಗೊರೆಗಳನ್ನು ನೀಡಬಹುದಾಗಿತ್ತು. ಆದರೆ ವಸಾಹತುಶಾಹಿ ಕಾಲಘಟ್ಟದಲ್ಲಿ ವಿದ್ಯಾವಂತ ಅಳಿಯನಿಗೆ ತುಂಬಾ ಬೇಡಿಕೆ ಇತ್ತು. ಅಂಥವನು ದೊರಕಿದರೆ ಹೆಚ್ಚಿನ ಮೌಲ್ಯದ ಹಣವನ್ನು ನೀಡುತ್ತಿದ್ದರು. ಆ ಕಾಲದಲ್ಲಿ ೫೦೦ ರೂಪಾಯಿಗಳಿಂದ ೨೦೦೦ದವರೆಗೆ ನೀಡಬಹುದಾಗಿತ್ತು. ಇವರಲ್ಲದೆ ಇತರೇ ಜಾತಿ ಬುಡಕಟ್ಟುಗಳಲ್ಲಿಯೂ ಸಹ ವರದಕ್ಷಿಣೆಯ ಪದ್ಧತಿಯು ಇತ್ತು. ಆದರೆ ಜಾತಿಯಿಂದ ಜಾತಿಗೆ ಭಿನ್ನತೆ ಇತ್ತು. ಮುಖ್ಯವಾಗಿ ಕೆಲವೊಂದು ಜಾತಿಗಳಲ್ಲಿ ನಿಗದಿಪಡಿಸಿದಂತೆ ತಿಗಳರು ೧೨ ರೂಪಾಯಿಗಳು, ೫೦೦ ರೂಪಾಯಿಗಳನ್ನು, ಲಿಂಗವಂತರು, ಗಾಣಿಗರು ಮತ್ತು ದೇವಾಂಗದವರು ಪಡೆಯುತ್ತಿದ್ದರು. ಸಾಮಾನ್ಯವಾಗಿ ಒಂದೇ ರೀತಿಯ ಹಣವನ್ನು ನೀಡುತ್ತಿದ್ದಂತಹ ಜಾತಿಗಳೆಂದರೆ ಕುರುಬರು, ಹೊಲೆಯರು, ಬೇಡರು, ಮಾದಿಗರು, ಈಡಿಗರು, ಮೇದರು, ಗೊಲ್ಲರು, ಉಪ್ಪಾರರು, ತೆಲುಗು ಬಣಜಿಗರು ಇತರರು ೧೨ ರೂಪಾಯಿಯಿಂದ ೨೪ರವರೆಗೆ ಪಡೆಯುತ್ತಿದ್ದರು ಹಾಗೂ ಬಿಳಿಮಗ್ಗ ಮತ್ತು ಸಾಲೆ ಜಾತಿಗಳು ೨೪ ರೂಪಾಯಿಗಳು, ಕುರುಬರು ೨೫ರಿಂದ ೫೦ ರೂಪಾಯಿ, ಗಂಗಾಡಿಗ ಒಕ್ಕಲಿಗರು ೨೦ರಿಂದ ೩೫ ರೂಪಾಯಿ ನೀಡುತ್ತಾರೆ. ಹಂದಿ ಜೋಗಿಗಳು ೧೦ರಿಂದ ೪೦ ರೂಪಾಯಿವರೆಗೆ ಜೊತೆಗೆ ಒಂದು ಹಂದಿಯನ್ನು ಸಹ ನೀಡಬೇಕಾಗುತ್ತಿತ್ತು. ಆದರೆ ಕೊರಚರು ೬೦ ರೂಪಾಯಿಯಿಂದ ೭೨ ರೂಪಾಯಿವರೆಗೆ ನೀಡುತ್ತಿದ್ದರು. ಆದರೆ ಇದು ಹೆಚ್ಚಿನ ಮೊತ್ತವಾಗಿದ್ದುದರಿಂದ ವರ್ಷದಿಂದ ವರ್ಷಕ್ಕೆ ಇಂತಿಷ್ಟು ಎಂದು ನೀಡಬೇಕಾಗಿತ್ತು. ಮೊಂಡರು ಕೇವಲ ೬ ರೂಪಾಯಿ ಮಾತ್ರ, ಹೆಳವರು(Helavas) ೯ರಿಂದ ೨೪ ರೂಪಾಯಿ, ಬಡವ ದೇವಾಂಗರು ೯ರಿಂದ ೨೧ ರೂಪಾಯಿ. ಇದಲ್ಲದೆ ಕೆಲವೊಂದು ಜಾತಿ ಮತ್ತು ಬುಡಕಟ್ಟುಗಳಲ್ಲಿ ವಧುವಿನ ಚಿಕ್ಕಪ್ಪನು ವರನಿಗೆ ಉಡುಗೊರೆ ನೀಡಬೇಕಾಗಿತ್ತು. ಆದರೆ ಮೈಸೂರು ಸಂಸ್ಥಾನದಲ್ಲಿ ವಿಧವಾ ವಿವಾಹ ಕುರಿತು ಮಹತ್ವದ ವಿಚಾರಗಳು ತಿಳಿದುಬರುತ್ತದೆ. ಮುಖ್ಯವಾಗಿ ಉನ್ನತ ವರ್ಗದವರು ಮರುವಿಧವಾ ವಿವಾಹಕ್ಕೆ ಸಮ್ಮತಿ ನೀಡುವುದಿಲ್ಲ. ಆದರೆ ಎಲ್ಲಾ ಜಾತಿ ಮತ್ತು ಬುಡಕಟ್ಟುಗಳಲ್ಲಿ ಇದೇ ರೀತಿ ಇರುವುದಿಲ್ಲ. ಮರುಮದುವೆಗಳಿಗೆ ಅವಕಾಶವಿದೆ. ಮುಖ್ಯವಾಗಿ ಕೋಮಟಿಗರು, ಕಾಡುಗೊಲ್ಲ, ನಾಯಿಂದರು, ದೇವಾಂಗದವರಲ್ಲಿ ಅವಕಾಶವಿರಲಿಲ್ಲ. ಆದರೆ ಕುಂಬಾರರು, ಲಿಂಗಾಯತರು, ಸಾದರು, ನಾಗರತರು, ಬಣಜಿಗರು, ಗಾಣಿಗರು, ಗೊಲ್ಲರು, ಮೊರಸು ಒಕ್ಕಲಿಗರು ಮತ್ತು ಕುಂಚುಗಾರರು ಇವರಲ್ಲಿಯೂ ಸಹ ಮರುಮದುವೆಗೆ ಅವಕಾಶವಿತ್ತು. ಆದರೆ ವಿಧವೆಯು ಒಪ್ಪಿದರೆ ಮಾತ್ರ

ನಡೆಯುತ್ತಿತ್ತು. ಇಲ್ಲದಿದ್ದರೆ ಜೀವನ ಪರ್ಯಂತ ವಿಧವೆಯಾಗಿರಬಹುದಿತ್ತು. ಒಂಟಿಯಾಗಿ ಜೀವಿಸಬಹುದಿತ್ತು ಅಥವಾ ಮಕ್ಕಳೊಂದಿಗೆ ಬಾಳಬಹುದಿತ್ತು.[೧೩೪]

ಆದರೂ ವಿಧವಾ ಮರುವಿವಾಹ ಮೈಸೂರು ಸಂಸ್ಥಾನದಲ್ಲಿ ಸಾಮಾನ್ಯವಾಗಿತ್ತು. ಈ ಮರುವಿಧವಾ ವಿವಾಹವನ್ನು ಕೆಲವೊಂದು ಜಾತಿಗಳೇ ಹಲವು ಸಲ ವಿವಾಹವಾಗಬಹುದಿತ್ತು. ಮುಖ್ಯವಾಗಿ ವಡ್ಡರು, ಡೊಂಬರು, ಕೊರಚರು, ಹಂದಿಜೋಗಿಗಳಲ್ಲಿ ಒಟ್ಟು ಏಳು ಬಾರಿ ಮರುವಿವಾಹವಾಗಬಹುದಿತ್ತು. ಆದರೆ ಗಂಗಾಡಿಗರು, ಒಕ್ಕಲಿಗರು ಸಾಮಾನ್ಯವಾಗಿ ಮೂರು ಸಲ ಮರುಮದುವೆಯಾಗಬಹುದಿತ್ತು. ಆದರೆ ಬಂಜಾರರಲ್ಲಿ(Banjarar) ಮಾತ್ರ ವಿಧವೆಯು ತನ್ನ ಮರುಮದುವೆಯನ್ನು ತನ್ನ ಗಂಡನನ್ನೋ ಅಥವಾ ತಮ್ಮನನ್ನೋ ಎಂದಿಗೂ ಆಗುವಂತಿಲ್ಲ. ಹೆಚ್ಚಿನ ಜಾತಿಗಳಲ್ಲಿ ಗಂಡನ ಸಂಬಂಧಿಕರಲ್ಲಿಯೇ ನಡೆಯುತ್ತವೆ. ಮುಖ್ಯವಾಗಿ ಕುರುಬರು, ಹೆಳವರು, ಬೇಡರು, ಸನ್ಯಾಸಿನಿಯರು ಮತ್ತು ಹೊಲೆಯರಲ್ಲಿ ಸಾಮಾನ್ಯವಾಗಿ ಮೇಲಿನಂತೆ ನಡೆಯುತ್ತದೆ. ಆದರೆ ಉಪ್ಪಾರರಲ್ಲಿ ಮರುಮದುವೆಯಾಗಬೇಕಾದರೆ ವಿಧವೆಯು ಮೊದಲು ಚಿಕ್ಕವಯಸ್ಸಿರಬೇಕು, ಮಕ್ಕಳಿರಬಾರದು, ಅಲ್ಲದೆ ತಂದೆ-ತಾಯಿಗಳ ಮನೆಯಲ್ಲಿ ಇರಬೇಕಾಗಿತ್ತು. ಇಂಥ ಸಂದರ್ಭದಲ್ಲಿ ಮರುಮದುವೆಗೆ ಅವಕಾಶವಿದೆ. ಈಡಿಗರಲ್ಲಿ ಮರುಮದುವೆಗೆ ಯಾವುದೇ ನಿರ್ಬಂಧವಿಲ್ಲ. ಮರುಮದುವೆಗೆ ಒಪ್ಪಿಗೆ ದೊರೆತರೆ ಅವಳು ತನ್ನ ಮಕ್ಕಳೊಂದಿಗೆ ಮರುಮದುವೆಯ ಗಂಡನ ಮನೆಗೆ ಬರಬಹುದಿತ್ತು. ಆದರೂ ಸಹ ಇಂಥ ಮದುವೆಗಳನ್ನು ಸಾಮಾನ್ಯವಾಗಿ ಎಲ್ಲಾ ಜಾತಿಗಳಲ್ಲಿ ಕೂಡಿಕೆ ಎಂದೇ ಕರೆಯುತ್ತಾರೆ. ಆದರೂ ಸಹ ಇದು ಮೊದಲ ಮದುವೆಯಂತೆ ನಡೆಯುವುದಿಲ್ಲ. ಇದು ಸಾಮಾನ್ಯವಾಗಿ ೩ ದಿನಗಳ ಕಾಲ ನಡೆಯುತ್ತದೆ. ಹೆಚ್ಚಾಗಿ ಮೊದಲ ಮದುವೆಯಂತೆ ನಡೆಯುವುದಿಲ್ಲ. ಮರುಮದುವೆಯನ್ನು ಮುತ್ತೈದೆಯರು ಮಾಡುವುದಿಲ್ಲ. ಮರುಮದುವೆಯಾದ ಮುತ್ತೈದೆಯರೇ ಈ ಮದುವೆಶಾಸ್ತ್ರ ಮಾಡುವರು. ಸಾಮಾನ್ಯವಾಗಿ ಇಂಥ ಮದುವೆ ಗಂಡನ ಮನೆಯಲ್ಲಿ ಅಥವಾ ದೇವಸ್ಥಾನದಲ್ಲಿ ನಡೆಯುತ್ತದೆ. ಮದುವೆ ಆಗುವ ಗಂಡನು ಹೆಣ್ಣಿಗೆ ಸೀರೆ, ರವಿಕೆ, ಬಳೆ ಹಾಗೂ ತಾಳಿಯನ್ನು ತಂದಿರುತ್ತಾನೆ. ಹೆಣ್ಣಿನ ಕಡೆಯವರೂ ಸಹ ಒಂದರಲ್ಲಿ ಅರ್ಧಭಾಗ ವರದಕ್ಷಿಣೆ ಕೊಡಬೇಕಾಗುತ್ತದೆ. ಆದರೆ ಮಗಳನ್ನು ಕಳೆದುಕೊಂಡ ತಂದೆ-ತಾಯಿಗಳು ಮತ್ತೊಬ್ಬ ಮಗಳನ್ನು ಕೊಡಬೇಕಾದರೆ ವಿಧುರನಾದವನು ಅಧಿಕ ಮೊತ್ತದ ಹಣವನ್ನು ಕೊಡಬೇಕಾಗುತ್ತದೆ. ಇದನ್ನು 'ಸವತಿ ಹಣ'ವೆಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಮೊದಲ ಹೆಂಡತಿಯ ಬಂಗಾರದ ಆಭರಣಗಳನ್ನು ಇತರೇ ವಸ್ತುಗಳನ್ನು ೨ನೇ ಹೆಂಡತಿಗೆ ಕೊಡುತ್ತಾರೆ. ಒಟ್ಟಿನಲ್ಲಿ ಇಂಥ ಮದುವೆಯು ಇಂದಿಗೂ ಸಹ ಪ್ರಸ್ತುತವಾಗಿವೆ. ಆದರೆ ಈ ಸಂದರ್ಭದಲ್ಲಿ ಮನೆ ತುಂಬಿಸಿಕೊಳ್ಳುವಾಗ ಕೆಲವೊಬ್ಬರು ಜನರು ಈ ರೀತಿ ಕೇಳುತ್ತಾರೆ. ಹೆಣ್ಣಿಗೆ ಯಾಕೆ ಒಳಗೆ ಬರುತ್ತಿರುವೆ ಎಂದಾಗ, "ಆಕೆ ನಾನು ಕತ್ತಲು ತುಂಬಿದ ನಿಮ್ಮ ಮನೆಗೆ ಬೆಳಕನ್ನು ನೀಡಲು ಎಂದು ಹೇಳಿ ಒಳಬಂದು ದೀಪ ಹಚ್ಚುತ್ತಾಳೆ."[೧೩೫] ಅನಂತರ ಜಾತಿಯವರಿಗೆ ಊಟ ನೀಡುತ್ತಾರೆ. ಇಲ್ಲಿಗೆ ಮದುವೆ ವಿಧಾನಗಳು ಮುಗಿದಂತೆ. ಒಟ್ಟಿನಲ್ಲಿ ಹಯವದನರಾವ್ ಅವರ ಗ್ಯಾಸೆಟಿಯರ್‌ನಲ್ಲಿ ಮಾತ್ರ ವಿವಾಹದ ಕುರಿತು ಮಾಹಿತಿ ದೊರಕುತ್ತದೆಯೇ ಹೊರತು ಬಿ.ಎಲ್. ರೈಸ್ ಅವರ ಗ್ಯಾಸೆಟಿಯರ್‌ನಲ್ಲಿ ಸಾಮಾಜಿಕ ಜೀವನದ ಕುರಿತು ಯಾವುದೇ

ಮಾಹಿತಿಗಳಿಲ್ಲ. ಅಲ್ಲದೆ ಗರ್ಭಿಣಿ ಸ್ತ್ರೀಯರ ಬಗ್ಗೆ, ಮಗುವಿನ ನಾಮಕರಣದ ಇತರೆ ವಿಚಾರಗಳ ಕುರಿತು ಮಾಹಿತಿಗಳಿಲ್ಲವೆಂದು ಹೇಳಬಹುದು.

### ೩.೩.೯. ಮೈಸೂರು ಸಂಸ್ಥಾನದ ಶವಸಂಸ್ಕಾರ ಪದ್ಧತಿ

ಮೈಸೂರು ಸಂಸ್ಥಾನದಲ್ಲಿ ಸತ್ತಾಗ ಸುಡುವುದು ಅಥವಾ ಹೂಳುವುದು ಎಲ್ಲಾ ಜಾತಿಗಳಲ್ಲಿಯೂ ಸಾಮಾನ್ಯ. ಮುಖ್ಯವಾಗಿ ಬ್ರಾಹ್ಮಣರು, ಬಣಜಿಗರು ಹಾಗೂ ಕೋಮಟಿಗರು, ವೈಶ್ಯರು ಮೊದಲಾದವರು ಈ ಪದ್ಧತಿಯನ್ನು ಅನುಸರಿಸುತ್ತಾರೆ. ಆದರೆ ಗರ್ಭಿಣಿಯಾದ ಮಹಿಳೆ ಸತ್ತರೆ ಆಕೆಯನ್ನು ಸುಡುವುದಿಲ್ಲ. ಆಕೆಯನ್ನು ಹೂಳುವರು. ಮುಖ್ಯವಾಗಿ ಉಪ್ಪಾರರು, ವಡ್ಡರು, ಡೊಂಬರು, ಮಾದಿಗ, ಅಗಸರು, ತೆಲುಗು ಬಣಜಿಗರು ಮತ್ತು ಕೆಲವೊಂದು ಜಾತಿಗಳ ಜನರು ಹೂಳುವರು. ಸತ್ತವರನ್ನು ಹೂಳುವಾಗ ಸಾಮಾನ್ಯವಾಗಿ ಎಲ್ಲಾ ವರ್ಗದವರು ದಕ್ಷಿಣ ದಿಕ್ಕಿಗೆ ತಲೆಮಾಡಿ ಹೂಳುವರು. ಸತ್ತ ದೇಹವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವಾಗ ಮೊದಲು ಗುಂಡಿಯನ್ನು ಅಗೆಯುವ ಕೆಲಸವನ್ನು ಮಾದಿಗರು ಮಾಡುವರು. ಮೃತ ಸಂಬಂಧಿಗಳು ಹೋಗಿ ಜಾಗವನ್ನು ತೋರಿಸಿದಾಗ ಮಾದಿಗ ವ್ಯಕ್ತಿಯು ಗುಂಡಿ ಅಗೆಯುವ ಕೆಲಸ ಮಾಡುವನು. ಜೊತೆಗೆ ಮೃತ ದೇಹವನ್ನು ಹೊತ್ತುಕೊಂಡುಬರುವಾಗ ಈತನು ಸಹ ಅದರಲ್ಲಿ ಪಾಳ್ಗೊಳ್ಳುವನು.

ಲಿಂಗವಂತರು, ದೇವಾಂಗದವರು ಮೃತದೇಹವನ್ನು ಕುಳಿತ ಭಂಗಿಯಲ್ಲಿ ಹೂಳುತ್ತಾರೆ. ಕೆಲವೊಂದು ಜಾತಿಗಳು ಮೃತದೇಹವನ್ನು ಹೂಳುವ ಮೊದಲು ಗುಂಡಿಯಲ್ಲಿ ಸುತ್ತಲೂ ಕಲ್ಲುಗಳನ್ನು ಹಾಕಿ ನಂತರ ಮಣ್ಣನ್ನು ಎರಚುತ್ತಾರೆ. ಸತ್ತ ದಿವಸದಿಂದ ಹೆಚ್ಚಾಗಿ ೧೦ರಿಂದ ೧೫ ದಿನಗಳವರೆಗೆ ಮನೆಯವರು ಮಲಿನವಾಗಿರುತ್ತಾರೆ. ಈ ದಿನಗಳವರೆಗೆ ದಿವಸವನ್ನು ಆಚರಿಸಬೇಕು. ಸತ್ತ ದಿನದಿಂದ ಮೂರು ದಿನಗಳಲ್ಲಿ ಸ್ಮಶಾನಕ್ಕೆ ಹೋಗಿ ಮೃತವ್ಯಕ್ತಿಗೆ ಇಷ್ಟವಾದ ತಿಂಡಿ-ತಿನಿಸುಗಳನ್ನು ಇಟ್ಟು ಪೂಜೆ ಮಾಡಿ ಜನರಿಗೆ, ಸಂಬಂಧಿಕರಿಗೆ ಊಟ ಹಾಕುವರು. ಇದಲ್ಲದೆ ಒಂದು ವರ್ಷದ ತಿಥಿಯನ್ನು ಮಾಡಬೇಕು. ಮುಖ್ಯವಾಗಿ ಮಹಾನವಮಿ ಅಮಾವಾಸ್ಯೆಗೆ ಮೃತರ ಆತ್ಮದ ಪೂಜೆಯನ್ನು ಪ್ರತಿವರ್ಷವು ಮಾಡುವರು. ಮೃತವ್ಯಕ್ತಿಯ ಕಾರ್ಯವನ್ನು ನೆರವೇರಿಸುವಾಗ ಇದನ್ನು ಮನೆಯ ಹಿರಿಯ ಮಗನೇ ಮಾಡಬೇಕಾಗುತ್ತದೆ.[೧೩೬] ಒಟ್ಟಿನಲ್ಲಿ ಮೈಸೂರು ಜಿಲ್ಲೆಯ ಗ್ಯಾಸೆಟಿಯರ್‌ಗಳಲ್ಲಿ ಬಿ.ಎಲ್. ರೈಸ್ ಅವರ ಗ್ಯಾಸೆಟಿಯರ್‌ನಲ್ಲಿ ಸಾಮಾಜಿಕ ಜೀವನದ ಬಗ್ಗೆ ಹೆಚ್ಚಿನ ಬೆಳಕು ಚೆಲ್ಲುವುದಿಲ್ಲ. ಆರ್ಥಿಕ ಹಾಗೂ ಆಡಳಿತಾತ್ಮಕ ವಿಚಾರಗಳಿಗೆ ಹೆಚ್ಚು ಹೊತ್ತು ನೀಡಿರುವುದು ಸ್ಪಷ್ಟವಾಗಿದೆ.

### ೩.೪. ಹೈದರಾಬಾದ್ ಕರ್ನಾಟಕ

ರಾಯಚೂರು, ಕಲ್ಬುರ್ಗಿ, ಬೀದರ್ ಜಿಲ್ಲೆಗಳನ್ನು ಹೊಂದಿದ್ದ ನಿಜಾಂ ಸಂಸ್ಥಾನವು 'ಹೈದರಾಬಾದ್ ಕರ್ನಾಟಕ'ವೆಂದೇ ಪ್ರಸಿದ್ಧಿ ಪಡೆದಿದೆ. ಈ ಆಡಳಿತ ಘಟಕವು ಉತ್ತರದಲ್ಲಿ ಕೊಲ್ಲಾಪುರದಿಂದ ಜತ, ಅಂಕಲ (ಅಕ್ಕಲ)ಕೋಟೆ, ಕಲ್ಯಾಣ ಪಟ್ಟಣಗಳಿಂದ ಬೀದರ್‌ವರೆಗೂ ಪಸರಿಸಿತ್ತು. ಅಂತೆಯೇ ಪೂರ್ವಕ್ಕೆ ಬೀದರ್‌ನಿಂದ ರಾಯಚೂರಿನವರೆಗೂ ಈ ಭಾಗವನ್ನು ಗುರುತಿಸಬಹುದು. ಈ ಭಾಗವನ್ನೆಲ್ಲಾ 'ಮೊಗಲಾಯಿ ಕರ್ನಾಟಕ'ವೆಂತಲೂ ಕರೆಯುವ ವಾಡಿಕೆಯಿದೆ.

ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಿಂದ ಬಹಳ ಮುಖ್ಯ ಅನ್ನಿಸುವ ಈ ಪ್ರದೇಶ. ೧೮, ೧೯ನೇ ಶತಮಾನದ ವೇಳೆಗೆ 'ಹಿಂದುಳಿದ ಪ್ರಾಂತ್ಯ' ಎಂಬ ಹಣೆಪಟ್ಟಿಯನ್ನು ಅಂಟಿಸಿಕೊಂಡಿತು. ವಿಜಯನಗರದ ಅರಸರ ಅನಂತರ ಈ ಭಾಗ ಬಿಜಾಪುರದ ಆದಿಲ್‌ಶಾಹಿಗಳು ಮತ್ತು ಬರೀದ್‌ಶಾಹಿಗಳ ಆಳ್ವಿಕೆಗೆ ಒಳಪಟ್ಟಿತ್ತು.[೧೩೭] ಅನಂತರದಲ್ಲಿ ಮರಾಠಿ ಪೇಶ್ವೆಗಳು ಇಲ್ಲಿ ಆಳ್ವಿಕೆ ನಡೆಸಿದರು. ೧೮ನೇ ಶತಮಾನದ ಆದಿಭಾಗದಲ್ಲಿ ಹೈದರಾಬಾದಿನ ನಿಜಾಮನು ಇದರ ಅಧಿಪತ್ಯ ವಹಿಸಿದನು. ಅನಂತರ ಇದು ಇಂಗ್ಲಿಷರ ಕೈ ಸೇರಿತು. ಆದರೂ ಇಂಗ್ಲಿಷ್‌ರ ಒಡೆತನದಲ್ಲಿಯೇ ನಿಜಾಮನು ಆಳ್ವಿಕೆ ಮುಂದುವರೆಸಿದನು.[೧೩೮] ಹೀಗಾಗಿ ಇದೊಂದು ಹಿಂದೂ-ಮುಸ್ಲಿಂ ಸಂಸ್ಕೃತಿಗಳ ಸಮ್ಮಿಲನದ ಕೇಂದ್ರವೂ ಹೌದು.[೧೩೯]

ಭಾರತದಲ್ಲಿದ್ದ ಸುಮಾರು ೫೫೬ ಸಂಸ್ಥಾನಗಳಲ್ಲಿ ಹೈದರಾಬಾದ್ ಸಂಸ್ಥಾನವು ದೊಡ್ಡದು. ಭೌಗೋಳಿಕವಾಗಿ ಮತ್ತು ಜನಸಂಖ್ಯೆಯ ದೃಷ್ಟಿಯಿಂದ ವಿಶಾಲವಾಗಿತ್ತು.[೧೪೦] ೧೨,೦೦೦ ಚದರ ಮೈಲಿನಷ್ಟು ವಿಸ್ತಾರ ಹೊಂದಿತ್ತು.[೧೪೧]

ಹೈದರಾಬಾದ್ ನಿಜಾಮನ ಆಳ್ವಿಕೆಗೆ ಸೇರಿದ್ದ ಕರ್ನಾಟಕ ಭಾಗಗಳ ಪರಿಸ್ಥಿತಿಯು ವಿಲಕ್ಷಣವಾಗಿತ್ತು. ತೆಲಂಗಾಣ ಮತ್ತು ಮರಾಠವಾಡ ಎಂದು ಎರಡು ಪ್ರಮುಖ ಭಾಗಗಳನ್ನಾಗಿ ವಿಂಗಡಿಸಿದ್ದ ನಿಜಾಮನ ಪ್ರಾಂತ್ಯಗಳಲ್ಲಿ ಕರ್ನಾಟಕದ ಮೂರು ಜಿಲ್ಲೆಗಳಾದ ರಾಯಚೂರು, ಗುಲ್ಬರ್ಗ ಮತ್ತು ಬೀದರ್‌ಗಳು ಮರಾಠವಾಡಕ್ಕೆ ಸೇರಿದ್ದವು, ಅಲ್ಲಿ ಎಲ್ಲವೂ ಮರಾಠಿಮಯವಾಗಿತ್ತು. ಅಲ್ಲಿಯ ಸರ್ಕಾರದ ದಾಖಲೆಗಳಿಂದ ಮಾತ್ರವಲ್ಲದೆ ವಾಣಿಜ್ಯ ಮತ್ತು ವ್ಯವಹಾರಗಳ ದಾಖಲೆಗಳಿಂದಲೂ ಸ್ಪಷ್ಟವಾಗಿದೆ. ಬಿಜಾಪುರದ ಆದಿಲ್‌ಶಾಹಿಗಳ ಕಾಲದಿಂದಲೂ ಅವರ ಪ್ರಬಲ ನೆಲೆಯಾಗಿದ್ದ ಮೂರು ಜಿಲ್ಲೆಗಳು ನಂತರ ಮರಾಠ ಪೇಶ್ವೆಗಳ ಅಧಿಕಾರಕ್ಕೊಳಗಾದವು. ೧೮೦೦ರಲ್ಲಿ ನಿಜಾಮನಿಗೂ, ಬ್ರಿಟಿಷರಿಗೂ ಆದ ಒಪ್ಪಂದದ ಪ್ರಕಾರ ರಾಯಚೂರು, ಗುಲ್ಬರ್ಗ ಮತ್ತು ಬೀದರ್ ಜಿಲ್ಲೆಗಳು ನಿಜಾಮನ ಪಾಲಿಗೆ ಲಭಿಸಿದವು.[೧೪೨]

ಕ್ರಿ.ಶ. ೧೮೦೦ರಲ್ಲಿ ನಿಜಾಮನು ಇಂಗ್ಲಿಷರೊಂದಿಗೆ ಒಪ್ಪಂದ ಮಾಡಿಕೊಂಡು ಅದರ ಅನ್ವಯ ಹೈದರಾಬಾದನ್ನು ರಕ್ಷಿತರಾಜ್ಯವೆಂದು(Protected State) ಪರಿಗಣಿಸಿ ತಾನು ಇಂಗ್ಲಿಷರ ಮಾಂಡಲಿಕನೆಂದು ಅಂಗೀಕರಿಸಿದನು. ನಿಜಾಮನ ಸಮಕಾಲೀನ ಅಂದರೆ ವಸಾಹತು ಕಾಲಘಟ್ಟದಲ್ಲಿ ನಿಜಾಮ್‌ರಾಜ್ಯದಲ್ಲಿ ಕರೀಂನಗರ, ವಾರಂಗಲ್, ಆಶರಾಫಬಿಲ್ಸ್, ಹೈದರಾಬಾದ್ ನಲ್ಗೊಂಡಗಳಾಗಿದ್ದವು. ಇವು ಈಗಿನ ಆಂಧ್ರಪ್ರದೇಶದಲ್ಲಿವೆ. ಮರಾಠವಾಡದ ಐದು ಜಿಲ್ಲೆಗಳು ಔರಂಗಾಬಾದ್, ಪರಭಣಿ, ಬೀಡ್, ನಾಂದೇಡ್, ಉಸ್ಮಾನಾಬಾದ್ ಈಗಿನ ಮಹಾರಾಷ್ಟ್ರದಲ್ಲಿವೆ ಮತ್ತು ಕರ್ನಾಟಕದ ಮೂರು ಜಿಲ್ಲೆಗಳು ಬೀದರ್, ಗುಲ್ಬರ್ಗಾ ಮತ್ತು ರಾಯಚೂರುಗಳಾಗಿದ್ದವು.[೧೪೩]

ಆದರೆ ಕರ್ನಾಟಕ ರಾಜ್ಯವು ೧೯೭೩ರಲ್ಲಿ ನಾಮಕರಣಗೊಂಡಾಗ ಹೈದರಾಬಾದ್ ಕರ್ನಾಟಕವೆಂದು ಕರೆಯುವ ಮೂರು ಜಿಲ್ಲೆಗಳಿಗೆ ಬದಲಾಗಿ ಈಗ ಐದು ಜಿಲ್ಲೆಗಳಾಗಿವೆ. ಆಡಳಿತದ ಅನುಕೂಲತೆಗಾಗಿ ಮದ್ರಾಸ್ ಜಿಲ್ಲೆಯಾದ ಬಳ್ಳಾರಿಯನ್ನು ಸೇರಿಸಲಾಯಿತು. ಈಚೆಗೆ ರಾಯಚೂರು ಜಿಲ್ಲೆ ಒಡೆದು ಕೊಪ್ಪಳ

ಜಿಲ್ಲೆ(೧೯೯೭) ರಚನೆಯಾಯಿತು. ಹೀಗಾಗಿ ಈಗ ಹೈದರಾಬಾದ್ ಕರ್ನಾಟಕವೆಂದರೆ ಮೂರರ ಬದಲು ಐದು ಜಿಲ್ಲೆಗಳಾಗಿವೆ.[೧೪೪] ಆದರೆ ವಸಾಹತು ಕಾಲದ ಹೈದರಾಬಾದ್ ಕರ್ನಾಟಕಕ್ಕೆ ರಾಯಚೂರು, ಗುಲ್ಬರ್ಗಾ, ಬೀದರ್ ಈ ಮೂರು ಜಿಲ್ಲೆಗಳು ಮಾತ್ರ ಸೇರ್ಪಡೆಗೊಂಡಿದ್ದವು. ಅಲ್ಲದೆ ಈ ಬ್ರಿಟಿಷರ ಸಹಾಯಕ ಸೈನ್ಯ ಪದ್ಧತಿಯನ್ನು ಮೊದಲು ಒಪ್ಪಿಕೊಂಡದ್ದು ನಿಜಾಮ ಸಂಸ್ಥಾನವಾಗಿತ್ತು.[೧೪೫]

ಈ ಹೈದರಾಬಾದ್ ಕರ್ನಾಟಕಕ್ಕೆ ಸಂಬಂಧಿಸಿದಂತೆ ರಚನೆಗೊಂಡ ಗ್ಯಾಸೆಟಿಯರ್‌ಗಳಾವುವು ಎಂಬ ವಿಚಾರ ಬಂದಾಗ ಹೈದರಾಬಾದ್ ರಾಜ್ಯ ಸರ್ಕಾರವು ೧೯೨೧ರಿಂದ ಜಿಲ್ಲಾ ಗ್ಯಾಸೆಟಿಯರ್‌ಗಳನ್ನು ಹೊರತರುವ ಯೋಜನೆಯನ್ನು ಪ್ರಾರಂಭಿಸಿ ಅದರ ಅನ್ವಯ ಪ್ರತಿ ಜಿಲ್ಲೆಗೆ ಸಂಬಂಧಿಸಿದಂತೆ ಹೈದರಾಬಾದ್ ಜಿಲ್ಲಾ ಗ್ಯಾಸೆಟಿಯರ್‌ಗಳನ್ನು ಹೊರತಂದಿತು. ಆದರೆ ಅವು ಕೇವಲ ಸರ್ಕಾರದ ಕೆಲವೇ ಇಲಾಖೆಗಳ ಅಂಕಿ ಅಂಶಗಳನ್ನು ಒಳಗೊಂಡ ಮಾಹಿತಿ ಪುಸ್ತಕಗಳಾಗಿದ್ದವು. ಅವುಗಳಲ್ಲಿ ಆಯಾ ಜಿಲ್ಲೆಗಳ ಇತಿಹಾಸವಾಗಲಿ, ಇತರೇ ವಿವರಣೆಗಳಾಗಲಿ ಇರಲಿಲ್ಲ. ಇದಕ್ಕೂ ಪೂರ್ವದಲ್ಲಿ ಬ್ರಿಟಿಷ್ ಸರ್ಕಾರವು ೧೮೮೧ರಲ್ಲಿ ಇಂಪೀರಿಯಲ್ ಗ್ಯಾಸೆಟಿಯರ್‌ನ ಮೊದಲನೆಯ ಆವೃತ್ತಿ(ಒಂಬತ್ತು ಸಂಪುಟಗಳು) ಮತ್ತು ೧೮೮೫-೮೭ರಲ್ಲಿ ಎರಡನೆಯ ಆವೃತ್ತಿಯನ್ನು ೧೪ ಸಂಪುಟಗಳನ್ನು ಪ್ರಕಟಿಸಿತ್ತು, ಅಲ್ಲದೆ ೧೯೦೯ರಲ್ಲಿ ಇವುಗಳನ್ನು ಪುನಃ ಪರಿಷ್ಕರಿಸಲಾಯಿತು. ಈ ಗ್ಯಾಸೆಟಿಯರ್‌ಗಳಲ್ಲಿ ಭಾರತದ ಅಂದಿನ ಜಿಲ್ಲೆಗಳು ಮತ್ತು ಸಂಸ್ಥಾನಿಕರ ಪ್ರದೇಶಗಳ ಬಗ್ಗೆ ಕೆಲವೊಂದು ಮಾಹಿತಿ ದೊರೆಯುತ್ತದೆ.[೧೪೬]

ಹೈದರಾಬಾದ್ ಸಂಸ್ಥಾನದ ಕುರಿತು 'ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ' ಸಂಪುಟ-೧೩ರಲ್ಲಿ ಈ ರಾಜ್ಯದ ಕುರಿತು ಮಾಹಿತಿ ಸಿಗುತ್ತದೆ. ಇದು ಬೇರೆ ಪ್ರಾಂತ್ಯಗಳಿಗೆ ಉದಾಹರಣೆಗೆ ಮೈಸೂರು ಪ್ರಾಂತ್ಯದ ಗ್ಯಾಸೆಟಿಯರ್‌ಗೆ ಹೋಲಿಸಿದರೆ ಅಲ್ಲಿನ ಸಾಮಾಜಿಕ, ಆರ್ಥಿಕ ಇತರೆ ಭೌಗೋಳಿಕ ಹೀಗೆ ಅಲ್ಲಿಯ ರೀತಿಯಲ್ಲಿನ ಮಾಹಿತಿಗಳು ದೊರೆಯುವುದಿಲ್ಲ, ಸ್ವಲ್ಪಮಟ್ಟಿನ ಮಾಹಿತಿ ಲಭಿಸುತ್ತದೆ ಎಂದು ಹೇಳಬಹುದು. ಇವು ಸಹ ಅಂದಿನ ಅಮೂಲ್ಯ ಆಕರಗಳಾಗಿವೆ ಎಂದರೆ ತಪ್ಪಾಗಲಾರದು. ಈ ಮೂಲಕ ಅಂದಿನ ಜಾತಿ, ಜನಸಂಖ್ಯೆ, ಸಮಾಜಗಳನ್ನು ಈ ರೀತಿಯಾಗಿ ಗ್ರಹಿಸಬಹುದಾಗಿದೆ.

### ೩.೪.೧. ಹೈದರಾಬಾದ್ ಕರ್ನಾಟಕದ ಜನಸಂಖ್ಯೆ

ಹೈದರಾಬಾದ್ ಸಂಸ್ಥಾನದ ಒಟ್ಟು ವಿಸ್ತೀರ್ಣ ೮೨,೬೯೮ ಚ.ಮೀ ಇತ್ತು. ಇದು ಅತ್ಯಂತ ದೊಡ್ಡದಾದಂತಹ ಸಂಸ್ಥಾನವಾಗಿತ್ತು. ಹೈದರಾಬಾದ್ ರಾಜ್ಯದ ೧೬ ಜಿಲ್ಲೆಗಳಿಂದ ಕೂಡಿದ್ದು[೧೪೭] ೭೯ ನಗರಗಳನ್ನು, ೨೦,೦೧೦ ಹಳ್ಳಿಗಳನ್ನು ಒಳಗೊಂಡಿತ್ತು. ೧೯೦೧ರ ಹೈದರಾಬಾದ್ ಸೆನ್ಸಸ್ ಪ್ರಕಾರ ಜನಸಂಖ್ಯೆಯು ೧೧.೧೪೧.೧೪೨ ಇತ್ತು ಅಥವಾ ಶೇಕಡಾ ೧೨ರಷ್ಟು ಇಡೀ ದೇಶಕ್ಕೆ ಸಂಬಂಧಿಸಿದಂತೆ ಇತ್ತು. ಈ ಹೈದರಾಬಾದ್ ರಾಜ್ಯದಲ್ಲಿ ಶೇಕಡ ೧೪೧ರಿಂದ ೧೮೪ರಂತೆ ಬಹಳ ಹೆಚ್ಚಿನ ಜನಸಂಖ್ಯೆ ಹೊಂದಿದ್ದ ಜಿಲ್ಲೆಗಳೆಂದರೆ ಬೀದರ್, ಮೇಡಕ್, ಗುಲ್ಬರ್ಗಾ, ನಲ್ಗೊಂಡ, ನಾಂದೇಡ್ ಮತ್ತು ರಾಯಚೂರುಗಳಾಗಿದ್ದವು.

ಹಾಗೆಯೇ ೧೨೫ರಿಂದ ೧೩೫ರಂತೆ ಮೇಲಿನಕ್ಕಿಂತ ಕಡಿಮೆ ಹೊಂದಿದ್ದ ಜನಸಂಖ್ಯೆ ಲಿಂಗಸೂಗೂರು, ಉಸ್ಮಾನಾಬಾದ್, ಇಂದೂರ್, ಪರಭಣಿ, ಆಶರಾಫಬಿಲ್ಸ್ ಎಂದು ಗುರುತಿಸಬಹುದು. ಇದಕ್ಕಿಂತ ಕಡಿಮೆ

ಜನಸಂಖ್ಯೆ ೫೪ರಿಂದ ೧೭ರಂತೆ ಇರುವ ಜಿಲ್ಲೆಗಳೆಂದರೆ ಔರಂಗಬಾದ್, ಬೀದರ್, ಮಹಮ್ಮದ್‌ನಗರ, ವಾರಂಗಲ್, ಸಿರಪುರ, ತಾಂಡೂರು ಜಿಲ್ಲೆಗಳಾಗಿದ್ದವು.[೧೪೮] ಹೀಗಾಗಿ ಮೇಲಿನ ಹೈದರಾಬಾದ್ ರಾಜ್ಯದ ಕನ್ನಡ ಜಿಲ್ಲೆಗಳಾದ ರಾಯಚೂರು, ಗುಲ್ಬರ್ಗಾ, ಬೀದರ್ ಜಿಲ್ಲೆಗಳಲ್ಲಿ ಅತೀ ಹೆಚ್ಚಿನ ಜನಸಂಖ್ಯೆ ಇದ್ದ ಬಗ್ಗೆ ತಿಳಿದುಬರುತ್ತದೆ. ಅಲ್ಲದೆ ಮುಖ್ಯ ನಗರವಾದ ಹೈದರಾಬಾದ್‌ನಲ್ಲಿಯೇ ಜನಸಂಖ್ಯೆಯು ೪೪೮.೪೬೬ ಇತ್ತೆಂದು ತಿಳಿಯುತ್ತದೆ. ಅಲ್ಲದೆ ಜನಸಂಖ್ಯೆಯನ್ನು ಈ ರೀತಿಯಾಗಿ ವಿಭಾಗಿಸುತ್ತಾರೆ.

೫೦,೦೦೦ದಿಂದ ೨೦,೦೦೦ವರೆಗೆ ಇರುವ ಜನಸಂಖ್ಯೆ ೧೧ ನಗರಗಳಲ್ಲಿತ್ತೆಂದು ಗುರುತಿಸಿದ್ದಾರೆ. ೨೦,೦೦೦ದಿಂದ ೧೦,೦೦೦ವರೆಗೆ ಇರುವ ನಗರಗಳು ೫೮ ಎಂದಿದ್ದಾರೆ. ೧೦,೦೦೦ದಿಂದ ೫,೦೦೦ ವರೆಗೆ ಇರುವ ೫೧೪ ಹಳ್ಳಿಗಳಿಂದ ಕೂಡಿದ್ದವು. ೫,೦೦೦ದಿಂದ ೨,೦೦೦ವರೆಗೆ ೧೮೬೨ ಹಳ್ಳಿಗಳಲ್ಲಿ ಇತ್ತೆಂದು, ೧,೦೦೦ದಿಂದ ೫೦೦ವರೆಗೆ ೧೩,೨೯೦ ಹಳ್ಳಿಗಳಾಗಿದ್ದವು ಎಂದೇ ತಿಳಿದುಬರುತ್ತದೆ.

೧೮೮೧ರ ಸೆನ್ಸಸ್ ಪ್ರಕಾರ ಜನಸಂಖ್ಯೆಯನ್ನು ನೋಡಿದಾಗ ರಾಜ್ಯದಲ್ಲಿ ೧೮೮೧ರಂತೆ ೯,೮೪೫,೫೯೪ ಇತ್ತು. ೧೮೯೧ರಲ್ಲಿ ೧,೫೩೭,೦೪೦ ಇತ್ತು. ಅಂದರೆ ೧೭.೮%ರಂತೆ ಇತ್ತು. ಲಿಂಗಸೂಗೂರು, ರಾಯಚೂರು, ಗುಲ್ಬರ್ಗಾ, ಮಹಮ್ಮದ್‌ನಗರ, ನಲ್ಗೊಂಡ, ವಾರಂಗಲ್ ಈ ಆರು ಜಿಲ್ಲೆಗಳ ಜನಸಂಖ್ಯೆಯ ಶೇಕಡಾ ೨೯ರಿಂದ ೨೬ರಷ್ಟು ಇತ್ತು. ಅದೇ ರೀತಿ ೧೮೯೧ರಲ್ಲಿ ಶೇಕಡಾ ೩.೪೫ರಷ್ಟು ಇತ್ತು. ಈ ರೀತಿ ಕಡಿಮೆಯಾಗಲು ಕಾರಣವೆಂದರೆ ೧೮೯೭-೧೯೦೦ರಲ್ಲಿ ಈ ಭಾಗದಲ್ಲಿ ಪ್ಲೇಗ್, ಕಾಲರಾದಿಂದ ಜನಸಂಖ್ಯೆ ಕಡಿಮೆಯಾಯಿತೆಂದು ತಿಳಿದುಬರುತ್ತದೆ.[೧೪೯] ಅಲ್ಲದೆ ಇಲ್ಲಿ ಲಿಂಗಾಧಾರಿತ ಜನಸಂಖ್ಯೆಯನ್ನು ವಿವರಿಸುತ್ತಾರೆ. ೧೯೦೧ರಲ್ಲಿ ಒಟ್ಟು ಜನಸಂಖ್ಯೆ ೧೧,೫೩೭,೦೪೦ರಷ್ಟಿತ್ತು. ಇದರಲ್ಲಿ ಮಹಿಳೆಯ ಸಂಖ್ಯೆ ೫,೪೬೭,೫೧೩, ಪುರುಷರ ಸಂಖ್ಯೆ ೫,೬೭೩,೬೨೯ ಇತ್ತು.[೧೫೦] ಅಂದರೆ ಸ್ತ್ರೀ-ಪುರುಷರ ಪ್ರಮಾಣವೆಂದರೆ ಪ್ರತಿ ಸಾವಿರ ಪುರುಷರಿಗೆ ಇರುವ ಮಹಿಳೆಯರ ಸಂಖ್ಯೆ. ಅಂದರೆ ಒಂದು ಪ್ರದೇಶದಲ್ಲಿನ ಸಂಪ್ರದಾಯಗಳು, ಜನರ ವಲಸೆ, ಮತ್ತು ಸ್ತ್ರೀ-ಪುರುಷರ ಪ್ರಮಾಣವು ಸಾವಿರ ಪ್ರಮಾಣದ ಅಂತರವಾಗಿರುತ್ತದೆ.[೧೫೧] ಇಲ್ಲಿ ಒಂದು ನೂರು ಪುರುಷರಿಗೆ ೯೬ ಮಹಿಳೆಯರಂತೆ ಇದ್ದರು. ಆದರೆ ಎರಡು ಜಿಲ್ಲೆಗಳಲ್ಲಿ ಮಾತ್ರ ನಲ್ಗೊಂಡ ಮತ್ತು ಹಿಂದೂಸ್ ಜಿಲ್ಲೆಗಳಲ್ಲಿ ಮಾತ್ರ ಮಹಿಳೆಯರ ಸಂಖ್ಯೆ ೧೦೦೬ರಂತೆ ಪುರುಷರು ೧೦೦೦ ಸಂಖ್ಯೆ ಇರುವುದರಿಂದಾಗಿ ಇಲ್ಲಿ ಮಹಿಳೆಯರ ಸಂಖ್ಯೆ ಹೆಚ್ಚಾಗಿದೆಯೆಂದು ತಿಳಿದುಬರುತ್ತದೆ. ಲಿಂಗಾಧಾರಿತ ಜನಸಂಖ್ಯೆಯನ್ನು ಒಟ್ಟು ಸಂಖ್ಯಾಧಾರಿತವಾಗಿ ನೋಡುವುದಾದರೆ.

| | ೧೮೯೧ರಲ್ಲಿ ವ್ಯಕ್ತಿಗಳು | ಪುರುಷರು | ಮಹಿಳೆಯರು |
|---|---|---|---|
| ಅವಿವಾಹಿತರು | ೪,೨೩೨,೪೯೨ | ೨,೫೭೩,೨೩೬ | ೧,೬೫೯,೨೫೬ |
| ವಿವಾಹಿತರು | ೬,೦೩೮,೨೬೦ | ೩,೦೫೫,೨೬೬ | ೨,೯೮೨,೯೯೪ |

| | | | |
|---|---|---|---|
| ವಿಧುರರು | ೧,೨೫೯,೯೧೦ | ೨೪೨,೧೫೧ | ೧,೦೧೭,೭೫೯ |
| ವಿಧವೆಯರು | ೬,೩೭೮ | ೨,೪೭೬ | ೩,೯೦೨ |
| ಒಟ್ಟು | ೧೧,೫೩೭,೦೪೦ | ೫,೮೭೩,೧೨೯ | ೫,೬೬೩,೯೧೧ |

| | ೧೯೦೧ರಲ್ಲಿ ವ್ಯಕ್ತಿಗಳು | ಪುರುಷರು | ಮಹಿಳೆಯರು |
|---|---|---|---|
| ಅವಿವಾಹಿತರು | ೪,೩೧೧,೫೨೫ | ೨,೬೦೪,೪೩೯ | ೧,೭೦೭,೦೮೬ |
| ವಿವಾಹಿತರು | ೫,೫೦೨,೩೬೭ | ೨,೭೭೨,೭೯೫ | ೨,೭೨೯,೫೭೨ |
| ವಿಧುರರು | ೧,೩೨೭,೨೫೦ | ೨೯೬,೩೯೫ | ೧,೦೩೦,೮೫೫ |
| ವಿಧವೆಯರು | - | - | - |
| ಒಟ್ಟು | ೧೧,೧೪೧,೧೪೨ | ೫,೬೭೩,೬೨೯ | ೫,೪೬೭,೫೧೩ |

ಇಲ್ಲಿ ೧೦ ವರ್ಷದ ಬಾಲಕ-ಬಾಲಕಿ ಅವಿವಾಹಿತರು. ಶೇಕಡಾ ೯೭ರಷ್ಟು ಇದ್ದರು. ೧೦ರಿಂದ ೧೫ ವರ್ಷದವರು ಬಾಲಕ-ಬಾಲಕಿಯರು ಶೇಕಡಾ ೮೯ರಷ್ಟು ಇದ್ದರು. ೧೫ರಿಂದ ೪೦ ವರ್ಷ ಮೇಲ್ಪಟ್ಟವರು ಮಹಿಳೆಯರು ಶೇಕಡಾ ೭೧ರಷ್ಟು ಇದ್ದರೆ, ಪುರುಷರು ಶೇಕಡಾ ೭೮ರಷ್ಟು ಇದ್ದರೆಂಬ ಅಂಶವಿದ್ದ ಬಗ್ಗೆ ತಿಳಿದುಬರುತ್ತದೆ.[೧೫೨] ಒಟ್ಟಿನಲ್ಲಿ ಹೈದರಾಬಾದ್ ಕರ್ನಾಟಕದ ಕನ್ನಡ ಜಿಲ್ಲೆಗಳಾದ ಗುಲ್ಬರ್ಗಾ, ರಾಯಚೂರು, ಬೀದರ್‌ನಲ್ಲಿ ಅಧಿಕ ಜನಸಂಖ್ಯೆ ಹೊಂದಿರುವುದು ತಿಳಿದುಬರುತ್ತದೆ. ೧೯೪೨ರಲ್ಲಿ ಹೈದರಾಬಾದ್ ಜನಸಂಖ್ಯಾ ಗಣತಿಯ ಪ್ರಕಾರ ರಾಜ್ಯದ ಜನಸಂಖ್ಯೆ ಒಂದು ಕೋಟಿ ಅರವತ್ತೂಮೂರು ಲಕ್ಷ ಮೂವತ್ತೆಂಟು ಸಾವಿರದ ಐದುನೂರ ಮೂವತ್ನಾಲ್ಕರಷ್ಟಿತ್ತು(೧,೬೩,೩೮,೫೩೪) ಇತ್ತು ಎಂದು ತಿಳಿದುಬರುತ್ತದೆ.[೧೫೩]

### ೩.೪.೨. ಹೈದರಾಬಾದ್ ಕರ್ನಾಟಕದ ಜಾತಿ ವ್ಯವಸ್ಥೆ

ಇದೊಂದು ಹಿಂದೂ-ಮುಸ್ಲಿಂ ಸಂಸ್ಕೃತಿಗಳ ಸಮ್ಮಿಲನ ಕೇಂದ್ರವೆಂದು ಈ ಭಾಗವನ್ನು ಗುರುತಿಸಬಹುದು. ಏಕೆಂದರೆ ಇಲ್ಲಿ ಹಿಂದೂ-ಮುಸ್ಲಿಂ ಧರ್ಮಗಳ ಸಂಸ್ಕೃತಿ ಆಚರಣೆಗಳನ್ನು ಎರಡು ಧರ್ಮದವರು ಆಚರಿಸುವುದು ವಿಶೇಷವಾಗಿ ಕಂಡುಬರುತ್ತವೆ. ಹೈದರಾಬಾದ್ ರಾಜ್ಯದಲ್ಲಿ ಹಿಂದೂ, ಇಸ್ಲಾಂ, ಜೈನ ಹಾಗೂ ಕ್ರೈಸ್ತ ಧರ್ಮಗಳು ಪ್ರಮುಖವಾಗಿ ಕಂಡುಬರುತ್ತವೆ.[೧೫೪] ಇಲ್ಲಿ ಹಿಂದೂಗಳಲ್ಲಿ ಕೆಲವೊಂದು ಜಾತಿಗಳ ಹೆಸರುಗಳನ್ನು ಉಲ್ಲೇಖಿಸಲಾಗಿದೆ. ಮುಖ್ಯವಾಗಿ ಕುಣಬಿಗಳು ೨,೯೫೩,೦೦೦ (೨೬)ರಷ್ಟು

ಇದ್ದರು. ಮಲ್ಲರು ೧,೫೮೪,೦೦೦ (೧೪)ರಷ್ಟು, ಗೊಲ್ಲರು ೮೩೨,೪೦೦ರಷ್ಟು, ಬ್ರಾಹ್ಮಣರು ೬೯೨,೮೦೦ರಷ್ಟು, ವೈಶ್ಯರು ೫೪೮,೦೦೦ರಷ್ಟು ವಡ್ಡರು ೨೮೪,೬೦೦ರಷ್ಟು, ಲಂಬಾಣಿ ಅಥವಾ ಬಂಜಾರರು ೧೭೨,೩೦೦ರಷ್ಟಿದ್ದವು. ಇದೊಂದು ಬುಡಕಟ್ಟು ಜನಾಂಗವಾಗಿತ್ತು. ಗೌಡರು ೫೫,೦೦೦ ಮತ್ತು ಬಿಲ್ಲರು ೯,೬೦೦. ಈ ಜಾತಿಗಳ ಕುರಿತು ಉಲ್ಲೇಖವನ್ನು ನೋಡಬಹುದು. ಇಲ್ಲಿ ಕುಣಬಿಗಳು ಅಧಿಕ ಸಂಖ್ಯೆಯಲ್ಲಿದ್ದರೆಂದು ತಿಳಿದುಬರುತ್ತದೆ. ಇವು ಪ್ರಧಾನ ಸಂಖ್ಯೆಯಲ್ಲಿರುವ ಜಾತಿಗಳಾಗಿವೆ. ಬೇರೆ ಕಡೆ ಸಿಗುವಂತೆ ಇನ್ನುಳಿದ ಜಾತಿಗಳ ಬಗ್ಗೆ ಮಾಹಿತಿ ಇಲ್ಲ. ಕ್ರಿಶ್ಚಿಯನ್ನರು ೨೨,೯೯೬, ಜೈನರು ೨೦,೩೪೫, ಸಿಖ್ಖರು ೪,೩೩೫ ಮತ್ತು ಪಾರ್ಶಿಯನ್ನರು ೧,೪೬೩ ಇದ್ದರು.

೧೮೮೧ರಲ್ಲಿ ಹಿಂದುಗಳು ಶೇಕಡಾ ೯೦.೩ರಷ್ಟು ಇದ್ದರು. ೧೯೦೧ರಲ್ಲಿ ಶೇಕಡಾ ೮೮.೬ರಷ್ಟು ಇಳಿಯಿತು. ಆದರೆ ಮುಸ್ಲಿಮರು ಪ್ರಾರಂಭದಲ್ಲಿ ೧೭,೦೮೪ ಅಥವಾ ೧.೫ರಷ್ಟು ಇದ್ದವರು, ೧೮೮೧ರಲ್ಲಿ ಶೇಕಡಾ ೯.೪ರಷ್ಟು, ೧೯೦೧ರಲ್ಲಿ ಶೇಕಡಾ ೧೦.೪ರಷ್ಟು ಹೆಚ್ಚಾಯಿತೆಂದು ತಿಳಿದುಬರುತ್ತದೆ. ಇದರಿಂದ ತಿಳಿದುಬರುವುದೇನೆಂದರೆ ಇಲ್ಲಿ ಇಸ್ಲಾಂ ಧರ್ಮಕ್ಕೆ ಮತಾಂತರವಾಗಿರಬಹುದು ಅಥವಾ ಹಿಂದುಗಳು ವಲಸೆ ಹೋಗಿರಬಹುದೆಂದು ಅನುಮಾನ ಉಂಟಾಗುತ್ತದೆ. ಇದೇ ರೀತಿ ಕ್ರಿಶ್ಚಿಯನ್ನರು, ಜೈನರ ಸಂಖ್ಯೆಯು ಅಧಿಕವಾದಂತೆ ತಿಳಿದುಬರುತ್ತದೆ. ಇಲ್ಲಿ ಅಂಕಿ-ಸಂಖ್ಯೆಗಳ ಮೂಲಕ ಜಾತಿಯನ್ನು ಗಮನಿಸಬಹುದು.

| ಧರ್ಮಗಳು | ೧೮೯೧ | ೧೯೦೧ |
|---|---|---|
| ಹಿಂದುಗಳು | ೧೦,೩೧೫,೨೪೯ | ೯,೮೭೦,೮೩೯ |
| ಮುಸಲ್ಮಾನರು | ೧,೧೩೮,೬೬೬ | ೧,೧೫೫,೭೫೦ |
| ಸ್ಥಳೀಯ ಕ್ರಿಶ್ಚಿಯನ್ನರು | ೧೨,೬೬೧ | ೧೫,೩೫೭ |
| ಇತರ ಕ್ರಿಶ್ಚಿಯನ್ನರು | ೭,೭೬೮ | ೭,೬೩೯ |
| ಇತರರು | ೬೨,೮೯೬ | ೯೧,೫೫೭ |
| ಒಟ್ಟು | ೧೧,೫೩೭,೦೪೦ | ೧೧,೧೪೧,೧೪೨ |

ಇಲ್ಲಿ ಹಿಂದುಗಳ ಸಂಖ್ಯೆ ೧೮೯೧ರಲ್ಲಿ ಹೆಚ್ಚು ಇದ್ದದ್ದು, ೧೯೦೧ರಲ್ಲಿ ಇಳಿಮುಖವಾಗಿರುವುದನ್ನು ಗಮನಿಸಬಹುದು.[೧೫೫] ಹೈದರಾಬಾದ್ ರಾಜ್ಯದಲ್ಲಿ ಪ್ರತಿಶತ ಶೇಕಡಾ ೮೬ರಷ್ಟು ಹಿಂದುಗಳು ಇದ್ದರೆ ಮುಸಲ್ಮಾನರ ಸಂಖ್ಯೆ ಪ್ರತಿಶತ ೧೧ರಷ್ಟಿತ್ತು. ಅಂದರೆ ಬಹುಸಂಖ್ಯಾತ ಹಿಂದುಗಳು ಅಲ್ಪಸಂಖ್ಯಾತರಾದ ಮುಸಲ್ಮಾನರ ಯಜಮಾನಿಕೆಯನ್ನು ಮತ್ತು ದೌರ್ಜನ್ಯವನ್ನು ಸಹಿಸುವ ವ್ಯವಸ್ಥೆಯನ್ನೇ ನಿಜಾಮ ಆದರ್ಶವಾಗಿಟ್ಟುಕೊಂಡಿದ್ದ ಎಂಬ ಅಂಶ ತಿಳಿದುಬರುತ್ತದೆ.[೧೫೬]

### ೩.೪.೩. ಹೈದರಾಬಾದ್ ಕರ್ನಾಟಕದ ಭಾಷೆ

ಹೈದರಾಬಾದ್ ರಾಜ್ಯದಲ್ಲಿ ಮೂರು ಭಾಷೆಯ ಪ್ರದೇಶಗಳಿದ್ದವು. ತೆಲುಗು, ಮರಾಠಿ ಮತ್ತು ಕನ್ನಡ. ಆದರೆ ರಾಜ್ಯ ಭಾಷೆ ಉರ್ದು ಆಗಿತ್ತು. ಸರ್ಕಾರಿ ವ್ಯವಹಾರಗಳಲ್ಲಿ ಶಿಕ್ಷಣ ಮಾಧ್ಯಮವಾಗಿ, ಸಾಮಾಜಿಕ,

ಸಾಂಸ್ಕೃತಿಕ ಪರಿಸರದ ಆಡುಭಾಷೆಯಾಗಿ ಉರ್ದುವಿಗೆ ವಿಪರೀತ ಪ್ರಾಧಾನ್ಯವಿತ್ತು. ನ್ಯಾಯಾಂಗ, ವೈದ್ಯಕೀಯ ಹಾಗೂ ತಾಂತ್ರಿಕ ಕ್ಷೇತ್ರಗಳಲ್ಲಿ ಉರ್ದು ಭಾಷೆಯ ಪ್ರಯೋಗವನ್ನು ನಿಜಾಮ ಸರ್ಕಾರ ಯಶಸ್ಸುಗೊಳಿಸಿತ್ತು. ಸರ್ಕಾರಿ ನೌಕರಿಯಲ್ಲಿ ಸೇರಬೇಕಾದವರು ಕಡ್ಡಾಯವಾಗಿ ಉರ್ದು ಕಲಿಯಲೇಬೇಕಾಗಿತ್ತು. ಈಗ ಇಂಗ್ಲಿಷ್ ಭಾಷೆಯ ಮೋಹವಿದ್ದಂತೆ ಆಗ ಜನರಿಗೆ ಉರ್ದು ಭಾಷೆಯು ಮೋಹ ಹೆಚ್ಚಾಗಿತ್ತು. ಕನ್ನಡ ಭಾಷೆ ಸಂಸ್ಕೃತ ಶಬ್ದಗಳಿಂದ ಪರಿಪುಷ್ಪವಾಗಿ ಬೆಳೆದಂತೆ ಉರ್ದು ಭಾಷೆಯ ಅರಬ್ಬಿ ಹಾಗೂ ಪಾರ್ಸಿ ಭಾಷೆಗಳ ಸತ್ವ ಹೀರಿಕೊಂಡು ಶ್ರೀಮಂತ ಭಾಷೆಯಾಗಿ ಪಂಡಿತರು, ಅಧಿಕಾರಿಗಳು, ಪ್ರಾಧ್ಯಾಪಕರು ವಿದ್ವಾಂಸರುಗಳು, ಲೇಖಕರು ಮತ್ತು ಪ್ರತಿಷ್ಠಿತರ ಮೋಹಕವಾಣಿಯಾಗಿತ್ತು.[೧೫೭] ಆದರೆ ಗ್ಯಾಸೆಟಿಯರ್‌ಗಳು ಕೊಡುವಂತಹ ಮಾಹಿತಿಗಳೇ ಬೇರೆ ಎನ್ನಬಹುದು. ಇಲ್ಲಿನ ಪ್ರಮುಖ ಭಾಷೆಗಳೆಂದರೆ ತೆಲುಗು ಭಾಷೆ ಶೇಕಡಾ ೪೬ರಷ್ಟು, ಮರಾಠಿ ೨೬ರಷ್ಟು, ಕನ್ನಡ ೧೪ರಂತೆ ಇದ್ದರೆ, ಉರ್ದು ಶೇಕಡಾ ೧೦ರಷ್ಟು ಮಾತನಾಡುವವರು ಇದ್ದರು. ಈ ನಾಲ್ಕು ಭಾಷೆಗಳು ರಾಜ್ಯದ ಪ್ರಧಾನ ಭಾಷೆಗಳಾಗಿದ್ದವು. ಈ ಭಾಷೆಗಳನ್ನು ಶೇಕಡಾ ೯೭ರಷ್ಟು ಜನ ಮಾತನಾಡುತ್ತಿದ್ದರು. ಈ ಭಾಷೆಗಳಲ್ಲದೆ ಇನ್ನುಳಿದ ಭಾಷೆಗಳೆಂದರೆ ಮಾರವಾಡಿ ಭಾಷೆ ೫೭,೭೭೭, ಹಿಂದಿ ೨೮,೭೬೭, ತೆಲುಗು ೨೪,೪೭೫, ಗೋಂಡಿ ೫೯,೬೬೯ ಮತ್ತು ಕೋಯಾ ೧೫,೮೯೫, Gipsy dialects ೧೨೫,೦೭೦, ಲಂಬಾಣಿ ಅಥವಾ ಬಣಜಿಗರು ೧೨೦,೩೯೪ ಯುರೋಪಿನ ಭಾಷೆ ೭,೯೦೭ ಜನರು ಮಾತನಾಡುವವರು. ಹೈದರಾಬಾದ್ ರಾಜ್ಯದ ಪ್ರಧಾನ ಭಾಷೆಗಳ ಅಂಕಿ-ಸಂಖ್ಯೆಯನ್ನು ಈ ರೀತಿ ವಿವರಿಸಿದ್ದಾರೆ.

| **ರಾಜ್ಯದ ಪ್ರಧಾನ ಭಾಷೆಗಳಲ್ಲಿ** | ೧೮೯೧ | ೧೯೦೧ |
|---|---|---|
| ಉರ್ದು | ೧,೧೯೮,೩೮೨ | ೧,೧೫೮,೪೯೦ |
| ಮರಾಠಿ | ೩,೪೯೩,೮೫೮ | ೨,೮೯೫,೮೬೪ |
| ತೆಲುಗು | ೫,೦೩೧,೦೬೪ | ೫,೧೪೮,೦೫೬ |
| ಕನ್ನಡ | ೧,೪೫೧,೦೪೬ | ೧,೫೬೨,೦೧೮ |
| ಇತರೆ ಭಾಷೆಗಳು | ೩೬೨,೬೮೫ | ೩೭೬,೭೧೪ |
| **ಒಟ್ಟು** | ೧೧,೫೩೭,೦೪೦ | ೧೧,೧೪೧,೧೪೨[೧೫೮] |

ಇಡೀ ಹೈದರಾಬಾದ್ ರಾಜ್ಯಕ್ಕೆ ಸಂಬಂಧಿಸಿದಂತೆ ತೆಲುಗು ಭಾಷೆ ಅಧಿಕವಾಗಿತ್ತು. ಎರಡನೇ ಸ್ಥಾನ ಮರಾಠಿಗೆ ಇತ್ತು. ಮೂರನೇ ಸ್ಥಾನ ಉರ್ದುವಿಗೆ ಇದ್ದರೆ, ನಾಲ್ಕನೇ ಸ್ಥಾನ ಕನ್ನಡ ಭಾಷೆಗೆ ಇತ್ತು ಎಂಬುದಾಗಿ ಮೇಲಿನ ಅಂಕಿ-ಅಂಶಗಳಿಂದ ಗೊತ್ತಾಗುತ್ತದೆ. ಹೀಗಾಗಿ ಈ ನಾಲ್ಕು ಭಾಷೆಗಳು ಪ್ರಧಾನ ಪಾತ್ರ ವಹಿಸಿದವು ಎನ್ನಬಹುದು. ೧೯೦೧ರ ನಂತರ ಈ ಪ್ರದೇಶದಲ್ಲಿ ಉರ್ದುವಿಗೆ ಅಧಿಕ ಪ್ರಾಮುಖ್ಯತೆ ನೀಡಲಾಯಿತು. ಸರ್ಕಾರಿ ನೌಕರಿಗಳಲ್ಲಿ ಮುಸಲ್ಮಾನರಿಗೆ ಶೇಕಡಾ ೮೦ರಷ್ಟು ಪಾಲು ಇದ್ದರೆ ಹಿಂದೂಗಳಿಗೆ ಶೇಕಡಾ ೨೦ರಷ್ಟು ಪಾಲು ಇತ್ತು. ಮುಸಲ್ಮಾನರಿಗೆ ಸರ್ಕಾರಿ ನೌಕರಿಗಳಲ್ಲಿ ಹೆಚ್ಚಿನ ಪ್ರಾತಿನಿಧ್ಯವಿರಬೇಕೆಂಬುದು ನಿಜಾಮನ ನೀತಿಯಾಗಿತ್ತು. ಹಿಂದೂ ಜನಸಂಖ್ಯೆ ವೃದ್ಧಿಯಾದರೆ ಇಸ್ಲಾಂ ಧರ್ಮಕ್ಕೆ ಅಪಾಯವೆಂದು ಭಾವಿಸಿ ನಿಜಾಮ

ಉಸ್ಮಾನ ಆಲೀಖಾನ್ ಹುಟ್ಟುಹಾಕಿದ ಇಕ್ತೆಹಾದುಲ್ ಮುಸ್ಲಮೀನ್ ಸಂಸ್ಥೆ ಹಿಂದೂಗಳನ್ನು ಸಾಮೂಹಿಕವಾಗಿ ಮತಾಂತರಗೊಳಿಸುವ ಯೋಜನೆಯನ್ನು ಕಾರ್ಯಗತಗೊಳಿಸಿತ್ತು ಎನ್ನಲಾಗುತ್ತದೆ.[೧೫೯]

### ೩.೪.೪. ಹೈದರಾಬಾದ್ ಕರ್ನಾಟಕದ ವಸತಿ ವ್ಯವಸ್ಥೆ

ಸಾಮಾನ್ಯವಾಗಿ ಹೈದರಾಬಾದ್ ರಾಜ್ಯದ ಮನೆಗಳ ಕುರಿತ ಹೆಚ್ಚಿನ ಮಾಹಿತಿ ದೊರಕುವುದಿಲ್ಲ. ಇಲ್ಲಿನ ಜನರ ಅಭಿಪ್ರಾಯದ ಪ್ರಕಾರ ಸಾಮಾನ್ಯವಾಗಿ ಮನೆಗಳಲ್ಲಿ ಮೂರು ಅಥವಾ ನಾಲ್ಕು ಸಣ್ಣ ಕೊಠಡಿಗಳಿರುತ್ತವೆ ಎಂದಿರುವುದರಿಂದ ಇವು ಮಲಗುವ ಕೊಠಡಿಗಳೇ ಅಥವಾ ಎಲ್ಲಾ ಸೇರಿ ಅಡುಗೆಮನೆ, ದೇವರ ಕೋಣೆ ಇತ್ಯಾದಿ ಸೇರಿಸಿ ಹೇಳಿದ್ದಾರೋ ಎಂಬುದು ತಿಳಿದುಬರುವುದಿಲ್ಲ. ಮನೆಗಳನ್ನು ಮಣ್ಣಿನಿಂದ ಕಟ್ಟಿರುತ್ತಾರೆ. ಮನೆಗಳು ಚೆನ್ನಾಗಿ ಇರುತ್ತವೆ ಎಂಬುದಾಗಿ ಮಾಹಿತಿ ಸಿಗುತ್ತದೆ. ಮನೆಯ ಮೇಲ್ಛಾವಣಿಗೆ ಹೆಂಚು ಅಥವಾ ಹುಲ್ಲಿನ ಹೊದಿಕೆ ಹಾಕಿರುತ್ತಾರೆ. ಮನೆಗಳಲ್ಲಿ ಭವಂತಿ ಅಥವಾ ತೆರೆದ ಅಂಗಳವಿರುತ್ತದೆ ಎಂದು ತಿಳಿದುಬರುತ್ತದೆ.[೧೬೦] ಈ ಮಾಹಿತಿಗಳು ಮೇಲ್ನೋಟಕ್ಕೆ ಸಿಗುವಂತಹ ಅಂಶಗಳಾಗಿವೆಯೇ ಹೊರತು ನಿಖರತೆ ಇಲ್ಲ ಎನ್ನಬಹುದು. ಅಲ್ಲದೆ ಎಷ್ಟು ಸಂಖ್ಯೆಯಲ್ಲಿ ಮನೆಗಳಿವೆ ಅವುಗಳ ವಿವರಣೆ ಇತ್ಯಾದಿ ಯಾವುದೇ ಮಾಹಿತಿ ಇಲ್ಲ.

### ೩.೪.೫. ಹೈದರಾಬಾದ್ ಕರ್ನಾಟಕದ ಉಡುಗೆ-ತೊಡುಗೆಗಳು

ಉಡುಗೆ-ತೊಡುಗೆಗಳ ಕುರಿತು ಹೆಚ್ಚಿನ ಮಾಹಿತಿ ಗ್ಯಾಸೆಟಿಯರ್‌ಗಳಲ್ಲಿ ಲಭ್ಯವಿಲ್ಲ. ಸಾಮಾನ್ಯವಾಗಿ ಮೈಸೂರು, ಮದ್ರಾಸ್, ಕರ್ನಾಟಕ ಇತರೆ ಎಲ್ಲಾ ಕಡೆ ಬಳಸುವಂತೆ ಇಲ್ಲಿಯೂ ಸಹ ಅದೇ ಇತ್ತು. ಧೋತ್ರವನ್ನು ಪುರುಷರು ಸೊಂಟಕ್ಕೆ ಸುತ್ತಿಕೊಳ್ಳುತ್ತಾರೆ. ಮೇಲೆ ಅಂಗಿ(ಶರ್ಟ್), ಅದರ ಮೇಲೆ ಕೋಟು ಧರಿಸುತ್ತಾರೆ. ತಲೆಗೆ ರುಮಾಲು ಸುತ್ತಿಕೊಳ್ಳುತ್ತಾರೆ. ಇದು ಬಿಳಿ ಅಥವಾ ಕೆಂಪು ಬಣ್ಣದ್ದಾಗಿರುತ್ತದೆ. ಇದನ್ನು ಮರಾಠಿ ಜಿಲ್ಲೆಯಲ್ಲಿ ಹೆಚ್ಚಾಗಿ ಧರಿಸುತ್ತಾರೆ ಎಂಬುದಾಗಿ ತಿಳಿದುಬರುತ್ತದೆ. ಅಲ್ಲದೇ ಭುಜದ ಮೇಲೆ ಅಥವಾ ಸಾಮಾನ್ಯವಾಗಿ ಕಂಬಳಿಯ ಉಪಯೋಗವನ್ನು ಎಲ್ಲರೂ ಉಪಯೋಗಿಸುತ್ತಾರೆಂಬುದಾಗಿ ತಿಳಿದುಬರುತ್ತದೆ. ಅಲ್ಲದೆ ಮಹಿಳೆಯರ ಉಡುಪುಗಳೆಂದರೆ ಸೀರೆ ಉಪಯೋಗದ ಕುರಿತು ವಿವರಿಸಲಾಗಿದೆ. ಸೀರೆ, ರವಿಕೆಗಳನ್ನು ಧರಿಸುತ್ತಾರೆ. ಸೀರೆಯ ಸೆರಗನ್ನು ತಲೆಯ ಮೇಲೆ ಹಾಕಿಕೊಳ್ಳುತ್ತಾರೆ. ಅಲ್ಲದೆ ಮುಸಲ್ಮಾನ ಮಹಿಳೆಯರು ಚೋಲಿ ಅಥವಾ ದುಪ್ಪಟವನ್ನು ಧರಿಸುತ್ತಾರೆ.[೧೬೧] ಈ ಅಂಶಗಳನ್ನು ಬಿಟ್ಟರೆ ಅವರು ಧರಿಸುವ ಆಭರಣಗಳ ಕುರಿತು ಇತರೇ ರೀತಿಯ ಯಾವುದೇ ಮಾಹಿತಿಗಳು ಗ್ಯಾಸೆಟಿಯರ್‌ನಲ್ಲಿ ಸಿಗುವುದಿಲ್ಲ.

### ೩.೪.೬. ಹೈದರಾಬಾದ್ ಕರ್ನಾಟಕದ ಆಹಾರ ವ್ಯವಸ್ಥೆ

ಹೈದರಾಬಾದ್ ರಾಜ್ಯದ ಆಹಾರದ ಕುರಿತ ಹೆಚ್ಚಿನ ಮಾಹಿತಿ ಲಭ್ಯವಿಲ್ಲ. ಮುಂಬಯಿ ಕರ್ನಾಟಕದ ಆಹಾರದಂತೆ ಇವರ ಆಹಾರವಾಗಿತ್ತು. ರೊಟ್ಟಿ ಉಪಯೋಗ ಸಾಮಾನ್ಯವಾಗಿತ್ತು. ಅದು ಜೋಳ ಅಥವಾ ಸಜ್ಜೆಯದಾಗಿತ್ತು. ತೆಲುಗು ಜಿಲ್ಲೆಯಲ್ಲಿ ಅನ್ನ ಸಾಮಾನ್ಯವಾಗಿತ್ತು ಎನ್ನಲಾಗುತ್ತದೆ. ಹೆಚ್ಚಿನ ಸಂಖ್ಯೆಯಲ್ಲಿ

ತರಕಾರಿಗಳು, ದವಸಧಾನ್ಯಗಳನ್ನು ಉಪಯೋಗಿಸುತ್ತಿದ್ದರು ಎನ್ನಲಾಗುತ್ತದೆ. ಹಿಂದೂ-ಮುಸಲ್ಮಾನರು ಮಾಂಸಾಹಾರಿಗಳಾಗಿದ್ದರು. ಆದರೆ ಕೆಲವೊಂದು ಜಾತಿಗಳಲ್ಲಿ ಬ್ರಾಹ್ಮಣರು, ಲಿಂಗವಂತರು ಇತರೆ ಕೆಲವೊಬ್ಬರು ಮಾಂಸಾಹಾರ ಸೇವಿಸುತ್ತಿರಲಿಲ್ಲ. ಸಾಮಾನ್ಯವಾಗಿ ಮಾಂಸಾಹಾರವಾಗಿ ಕುರಿ, ಕೋಳಿ, ಮೇಕೆ, ಮೀನು ಉಪಯೋಗಿಸುತ್ತಿದ್ದರು. ದನದ ಮಾಂಸವನ್ನು ಮುಸಲ್ಮಾನರು ಉಪಯೋಗಿಸುವುದಿಲ್ಲ. ಆದರೆ ಹಿಂದೂಗಳಲ್ಲಿ ಮಲ್ಲರು, ಡೊಂಬರು, ಚಮ್ಮಾರರು, ಮಹಾರರು, ಮಗರು ಈ ಜಾತಿಯ ಜನರು ಸತ್ತ ಹಸುವನ್ನು ಸಹ ಸೇವಿಸುತ್ತಾರೆಂದು ತಿಳಿದುಬರುತ್ತದೆ.[೧೨] ಇವುಗಳ ಹೊರತಾಗಿ ಹೆಚ್ಚಿನ ಮಾಹಿತಿ ಗ್ಯಾಸೆಟಿಯರ್‌ಗಳಲ್ಲಿ ದೊರಕುವುದಿಲ್ಲ.

### ೩.೪.೨. ಹೈದರಾಬಾದ್ ಕರ್ನಾಟಕದ ಧಾರ್ಮಿಕ ಆಚರಣೆಗಳು

ಧರ್ಮಗಳಿಗೆ ಅನುಸಾರವಾಗಿ ಹಬ್ಬಗಳ ವಿಭಿನ್ನ ಆಚರಣೆಗಳನ್ನು ಒಳಗೊಂಡಿರುತ್ತದೆ. ಹೀಗಾಗಿ ಹೈದರಾಬಾದ್ ಕರ್ನಾಟಕದಲ್ಲಿ ಹಿಂದೂಗಳ ಹಬ್ಬಗಳೆಂದರೆ ಪ್ರಮುಖವಾಗಿ ಹೋಳಿ, ದೀಪಾವಳಿ, ದಸರಾ, ನಾಗರಪಂಚಮಿ, ರಾಮನವಮಿ, ಪಿತೃಪಕ್ಷ ಮತ್ತು ಶಿವರಾತ್ರಿ, ಪೋಲ ಹಬ್ಬಗಳನ್ನು ಪ್ರತಿಯೊಬ್ಬ ಹಿಂದೂಗಳು ಆಚರಿಸುತ್ತಾರೆ. ಈ ಪೋಲ ಹಬ್ಬಗಳಲ್ಲಿ ಹಸುಗಳಿಗೆ ಅಲಂಕರಿಸಿ ಪೂಜೆ ಮಾಡಿ ಹಳ್ಳಿಗಳಲ್ಲಿ ಅವುಗಳನ್ನು ಪೂಜಿಸುತ್ತಾರೆಂದು ತಿಳಿಯುವುದರಿಂದ ಇದೊಂದು ಕಾರಹುಣ್ಣಿಮೆ ಆಗಿರಬಹುದು. ಮುಸಲ್ಮಾನರ ಹಬ್ಬಗಳೆಂದರೆ: ಬಕ್ರೀದ್, ಈದ್‌ಮಿಲಾದ್, ಶಬ್-ಎ ಬರಾತ್ ಎಂದು ಆಚರಿಸುತ್ತಾರೆ. ಅಲ್ಲದೆ ಕ್ರೈಸ್ತರು, ಪರ್ಶಿಯನ್ನರು ತಮ್ಮ ಹೊಸ ವರ್ಷದ ದಿನ(New Year Day)ವನ್ನು ಎಲ್ಲಾ ರಾಜ್ಯದಲ್ಲಿಯೂ ಆಚರಿಸುತ್ತಾರೆಂಬ ಅಂಶ ತಿಳಿದುಬರುತ್ತದೆ.[೧೩] ಇಲ್ಲಿ ಹಬ್ಬಗಳ ಹೆಸರುಗಳನ್ನು ಮಾತ್ರ ನೀಡಿದ್ದಾರೆಯೇ ಹೊರತು ಆಚರಣೆಗಳ ಕುರಿತ ಅವುಗಳ ವಿಶೇಷತೆ ಇತ್ಯಾದಿ ಯಾವುದೇ ವಿಷಯದ ಬಗ್ಗೆ ಮಾಹಿತಿಯು ಅಪೂರ್ಣ ಎನ್ನಬಹುದು.

### ೩.೪.೮. ಹೈದರಾಬಾದ್ ಕರ್ನಾಟಕದ ಶವಸಂಸ್ಕಾರ ಪದ್ಧತಿ

ಮಾನವನ ಜೀವನದ ಅಂತಿಮ ಘಟ್ಟವೇ ಮರಣ. ಸಾವು ಬಂದಾಗ ಮನುಷ್ಯನ ಶರೀರಕ್ಕೆ ಸಂಸ್ಕಾರ ಮಾಡುವುದು ಸಹಜ. ಈ ಸಂಸ್ಕಾರ ಪದ್ಧತಿಯನ್ನು ಕೆಲವೊಂದು ಸಮುದಾಯದಲ್ಲಿ ಕೆಲವೊಂದು ಭಿನ್ನ ರೀತಿಯ ಆಚರಣೆಗಳನ್ನು ಅಳವಡಿಸಿಕೊಂಡಿರುತ್ತಾರೆ. ಆದರೆ ಶವಸಂಸ್ಕಾರವನ್ನು ಮುಖ್ಯವಾಗಿ ಎರಡು ರೀತಿಯಾಗಿ ಮಾಡಲಾಗುತ್ತದೆ. ಒಂದು ಶವವನ್ನು ಹೂಳುವುದು. ಮತ್ತೊಂದು ಶವವನ್ನು ಸುಡುವುದು. ಇವೆರಡು ಬಿಟ್ಟರೆ ಆಚರಣೆಗಳಲ್ಲಿ ಮಾತ್ರ ವ್ಯತ್ಯಾಸವಿರುತ್ತದೆ. ಇಲ್ಲಿ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಹಿಂದೂಗಳಲ್ಲಿ ಉನ್ನತವಾದ ಜಾತಿ ಎಂದರೆ ಬ್ರಾಹ್ಮಣರು, ರಜಪೂತರು ಮತ್ತು ಬನಿಯಾಸ್. ಈ ಜಾತಿಯವರು ಶವವನ್ನು ಸುಡುತ್ತಾರೆ. ಉಳಿದ ಜಾತಿಗಳ ಜನರು ಹೂಳುತ್ತಾರೆ. ಮುಸಲ್ಮಾನರೂ ಯಾವಾಗಲು ಶವವನ್ನು ಹೂಳುತ್ತಾರೆ. ಇವುಗಳಲ್ಲದೆ ಹೆಚ್ಚಿನ ಮಾಹಿತಿ ಸಿಗುವುದಿಲ್ಲ.[೧೪] ಹೀಗಾಗಿ ಹೈದರಾಬಾದ್ ಕರ್ನಾಟಕ ರಾಜ್ಯದ ಒಟ್ಟು ಸಮಾಜದ ಚಿತ್ರಣವೂ ಅಪೂರ್ಣತೆಯಿಂದ ಕೂಡಿದೆ ಎಂದು ಹೇಳಬಹುದು. ಯಾವುದೇ ಸ್ಪಷ್ಟವಾದ ದಾಖಲೆಗಳನ್ನು ಇಲ್ಲಿ ನೀಡಿರುವುದಿಲ್ಲ. ಕೇವಲ ಈ ರಾಜ್ಯದ ಸ್ಥೂಲವಾದ ಚಿತ್ರವೆಂದರೆ ತಪ್ಪಾಗಲಾರದು.

### ೩.೫. ಮದ್ರಾಸ್(ಬ್ರಿಟಿಷ್) ಕರ್ನಾಟಕ

ಮದ್ರಾಸ್ ಕರ್ನಾಟಕದ ಆಡಳಿತ ಘಟಕದಲ್ಲಿ ದಕ್ಷಿಣ ಕನ್ನಡ, ಬಳ್ಳಾರಿ ಜಿಲ್ಲೆಗಳು ಸೇರಿಕೊಂಡಿದ್ದವು. ಬ್ರಿಟಿಷರು ರಾಯಲಸೀಮೆಯನ್ನು ಗೆದ್ದಾಗ ಬಳ್ಳಾರಿ ಜಿಲ್ಲೆ ಅವರ ಅಧೀನಕ್ಕೆ ಕ್ರಿ.ಶ. ೧೮೦೦ ಬಂದಿತ್ತು. ಅಂದರೆ ನಿಜಾಮನು ಬಳ್ಳಾರಿಯನ್ನು ಬ್ರಿಟಿಷರಿಗೆ ಬಿಟ್ಟುಕೊಟ್ಟಿದ್ದನು. ಅಂತೆಯೇ 'ಕೆನರಾ'ವನ್ನು ಎರಡು ಹೋಳುಗಳನ್ನಾಗಿ ಮಾಡಿದಾಗ(೧೮೬೦ರಲ್ಲಿ) ಉತ್ತರ ಕನ್ನಡವು ಮುಂಬಯಿಗೂ, ದಕ್ಷಿಣ ಕನ್ನಡವು ಮದ್ರಾಸಿಗೂ ಸೇರಿಕೊಂಡಿದ್ದವು. ಬ್ರಿಟಿಷರ ಅಧೀನಕ್ಕೆ ಬಂದ ಕನ್ನಡ ಪ್ರದೇಶಗಳಲ್ಲಿ ಕೆನರಾವೇ ಮೊದಲನೆಯದು(೧೭೯೯). ಆಗ ತೀವ್ರವಾದ ಪ್ರತಿಭಟನೆಯನ್ನು ಈ ಭಾಗದಿಂದ ಆಂಗ್ಲರು ಎದುರಿಸ ಬೇಕಾಯಿತು. ಹೀಗಾಗಿ ಅವರು ಪ್ರಾಂತೀಯ ರಾಜಧಾನಿಗಳು(ಆಡಳಿತ) ಮುಂಬಯಿ, ಮದ್ರಾಸ್‌ಗಳಾಗಿದ್ದವು. ಈ ಅಂತರ ಜನತೆಗೆ ಹೆಚ್ಚಿನ ತೊಂದರೆಗಳನ್ನು ಉಂಟುಮಾಡಿತ್ತು. ಏಕೀಕರಣದ ಕಲ್ಪನೆಗೆ ಹೆಚ್ಚಿನ ಚಾಲನೆ ದೊರೆತದ್ದು ಬಹುಶಃ ಈ ಕಾರಣದಿಂದಲೇ. ಉದಾಹರಣೆಗೆ ದಕ್ಷಿಣ ಕನ್ನಡ ಜಿಲ್ಲೆಯ ಮದ್ರಾಸಿನಿಂದ ಐದುನೂರ ಐವತ್ತು(೫೫೦) ಮೈಲಿ ದೂರದಲ್ಲಿದ್ದರೆ, ಬಳ್ಳಾರಿ ಮುನ್ನೂರ ಏಳು(೩೦೭) ಮೈಲಿ ದೂರದಲ್ಲಿ ಇದ್ದದ್ದನ್ನು ಗಮನಿಸಬಹುದು.

ಬ್ರಿಟಿಷ್ ವಸಾಹತುಶಾಹಿ ಮೂಸೆಯಿಂದ ಬಂದ್ 'ಕ್ಯಾಂಟೋನ್ಮೆಂಟ್' ಪರಿಕಲ್ಪನೆ ಈ ಮದ್ರಾಸ್ ಕರ್ನಾಟಕಕ್ಕೂ ಅಂಟಿಕೊಂಡಿತ್ತು. ಅಂದು ಕಂಟೋನ್ಮೆಂಟ್ ಕರ್ನಾಟಕ ಎಂದು ಕರೆಯಲಾಗುತ್ತಿದ್ದ ಈ ಘಟಕ ಬ್ರಿಟಿಷರ ನೇರ ಹಿಡಿತಕ್ಕೆ ಒಳಗಾಗಿತ್ತು. ಏಕೆಂದರೆ ಇಂಥ ಕ್ಯಾಂಟೋನ್ಮೆಂಟ್ ಏರಿಯಾಗಳಲ್ಲಿ ಬ್ರಿಟಿಷರು ತಮ್ಮ ಮಿಲಿಟರಿ ವ್ಯವಸ್ಥೆಯನ್ನು ಇಟ್ಟುಕೊಂಡಿದ್ದರಿಂದ ಈ ಹಿನ್ನೆಲೆಯಲ್ಲಿಯೇ ಬೆಳಗಾವಿ, ಬೆಂಗಳೂರು, ಬಳ್ಳಾರಿಗಳು ಇಂದಿಗೂ 'ದಂಡು ಪ್ರದೇಶ'ಗಳೆಂದು ಕರೆಸಿಕೊಳ್ಳುವ ನಗರಗಳಾಗಿವೆ.[೬೫]

ಈ ಪ್ರಾಂತ್ಯಗಳ ಬಗ್ಗೆ ಗ್ಯಾಸೆಟಿಯರ್ ಮಾಹಿತಿಯನ್ನು ನೋಡುವುದಾದರೆ 'ದಕ್ಷಿಣ ಕೆನರಾಕ್ಕೆ' ಸಂಬಂಧಿಸಿದಂತೆ ಮೊಟ್ಟಮೊದಲ ಗ್ಯಾಸೆಟಿಯರ್ ಜಾನ್‌ಸ್ಟರ‍್ರೋಕ್ ಅವರು 'ಸೌತ್ ಕೆನರಾ ಗ್ಯಾಸೆಟಿಯರ್' ಮೊದಲ ಸಂಪುಟವನ್ನು ೧೮೯೪ರಲ್ಲಿ, ಎರಡನೇ ಸಂಪುಟವನ್ನು ಹೆರಾಲ್ಡ್ ಎ ಸ್ಟೂಯಿಟ್ ಅವರು(೧೮೯೫) ರಲ್ಲಿ ಕ್ರಮವಾಗಿ ಸಂಪಾದಿಸಿ ಪ್ರಕಟಿಸಿದರು. ೧೯೩೮ರಲ್ಲಿ ಜೆ.ಎಫ್. ಹಾಲ್ ಅವರು ಹಾಗೂ ಸಹಾಯಕರಾಗಿ, ಸಂಪಾದಕರಾಗಿ, ಕೆ.ಎನ್. ಕೃಷ್ಣಸ್ವಾಮಿ ಅಯ್ಯರ್ ಅವರು ದಕ್ಷಿಣ ಕೆನರಾದ ಸಂಖ್ಯಾಶಾಸ್ತ್ರಕ್ಕೆ ಸಂಬಂಧಿಸಿದಂತೆ ಕೋಷ್ಟಕ ಮಾದರಿಯಲ್ಲಿ Madras District Gazetteers Statistical Appendix, together with a supplement to the two district manuals for south canara district ರಚಿಸಿದರು.

ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ 'Manual of the Bellary district' ಅನ್ನು ಜಾನ್‌ಕೆಲ್‌ಸಾಲ್ ಅವರು ೧೮೭೨ರಲ್ಲಿ ಸಂಪಾದಿಸಿದರೆ ಎರಡನೇ ಸಂಪುಟವನ್ನು ಡಬ್ಲ್ಯು ಫ್ರಾನ್ಸಿಸ್ ಅವರು ೧೯೦೪ರಲ್ಲಿ ಹೊರತಂದರು. ಮದ್ರಾಸ್ ಪ್ರಾಂತ್ಯದ ಎಲ್ಲಾ ಜಿಲ್ಲೆಗಳಿಗೆ ಸಂಬಂಧಿಸಿದಂತೆ, ಮ್ಯಾಕ್ಲೀನ್ ಸಿ.ಡಿ. ಅವರು 'ಮ್ಯಾನ್ಯುಯಲ್ ಆಫ್ ದಿ ಅಡ್ಮಿನಿಸ್ಟ್ರೇಷನ್ ಆಫ್ ದಿ ಮದ್ರಾಸ್ ಪ್ರೆಸಿಡೆನ್ಸಿ' ಎಂಬ ಮೂರು ಸಂಪುಟಗಳನ್ನು

೧೮೮೫ರಲ್ಲಿ ಹೊರತಂದರು. ಇದು ಮದ್ರಾಸ್ ಪ್ರಾಂತ್ಯದ ಪ್ರಮುಖ ಜಿಲ್ಲೆಗಳಾದ ವಿಶಾಖಪಟ್ಟಣ, ಗಾಂಜಾಮ್, ಗೋದಾವರಿ, ಕೃಷ್ಣ, ಮದ್ರಾಸ್, ಚೆಂಗಲ್‌ಪೇಟೆ, ಬಳ್ಳಾರಿ, ಅನಂತಪುರ, ಗುಡಪಾತ್, ನೆಲ್ಲೂರು, ಸೌತ್‌ಆರ್ಕಾಟ್, ನಾರ್ತ್‌ಆರ್ಕಾಟ್, ತಂಜಾವೂರು, ತಿರುಚನಾಪಳ್ಳಿ, ಮಧುರೈ, ಸೇಲಮ್, ನೀಲಗಿರಿ, ಕಂಬೂಮರು, ಸೌತ್ ಕೆನರಾ, ಮಲಬಾರ್ ಎಂಬ ಎಲ್ಲಾ ಜಿಲ್ಲೆಗಳ ಕುರಿತು ಮಾಹಿತಿ ನೀಡುತ್ತಾರೆ. ಇದರಲ್ಲಿ ಎರಡು ಸಂಪುಟಗಳಿಂದ ಮಾತ್ರ ವಿವರಣೆ ಸಿಗುತ್ತದೆ. ಮೂರನೆಯ ಸಂಪುಟಗಳಲ್ಲಿ ಪದಸೂಚಿಗಳ ಪಟ್ಟಿಯನ್ನು ಮಾತ್ರ ನೀಡಿದೆ.[೧೬೬] ಅಲ್ಲದೆ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ, ಸಂ. ೨೨ರಲ್ಲಿ ಸಂಡೂರು ಸಂಸ್ಥಾನದ ಕುರಿತು ಮಾಹಿತಿ ಸಿಗುತ್ತದೆ. ಈ ಮೇಲಿನ ಕೃತಿಗಳಿಂದ ಅಂದಿನ ಸಾಮಾಜಿಕ ಜೀವನ ಇತರೇ ಎಲ್ಲಾ ವಿಚಾರಗಳ ಕುರಿತು ಅಮೂಲ್ಯವಾದ ಮಾಹಿತಿಗಳನ್ನು ಇದು ಒಳಗೊಂಡಿರುವುದು ಎಂದರೆ ತಪ್ಪಾಗಲಾರದು.

**೩.೫.೧. ಮದ್ರಾಸ್ ಕರ್ನಾಟಕದ ಜನಸಂಖ್ಯೆ**

ಮದ್ರಾಸ್ ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲಿ ೧೮೬೬-೬೭ರ ಜನಗಣತಿ ಪ್ರಕಾರ ಇಲ್ಲಿಯ ಜನಸಂಖ್ಯೆ ೧,೩೦೪,೯೯೮ರಷ್ಟಿತ್ತು. ಅಂದರೆ ೯೪% ರಷ್ಟು ಹಿಂದೂಗಳು, ೬% ರಷ್ಟು ಮುಸಲ್ಮಾನರು ಹಾಗೂ ಕೆಲವೊಂದು ಸಂಖ್ಯೆಯಲ್ಲಿ ವಿದೇಶಿಯರಿದ್ದರು.[೧೬೭]

ಬಳ್ಳಾರಿಯಲ್ಲಿ ೧೮೬೬-೬೭ರ ಪ್ರಕಾರ ೧,೨೯೧,೯೩೨ರಷ್ಟು ಇತ್ತು. ಸಂಡೂರು ೧೩,೦೬೬ ಒಟ್ಟು ೧,೩೦೪,೦೧೧, ೧೮೭೧ರ ಪ್ರಕಾರ ಬಳ್ಳಾರಿ ೧,೬೩೭೦೧೧, ಸಂಡೂರು ೧೫,೦೩೩, ಒಟ್ಟು ೧,೬೫೨,೦೪೪ರಂತೆ ಇರುತ್ತದೆ. ೧೯೦೧ರ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯ ಪ್ರಕಾರ ೧೯೦೧ರ ಪ್ರಕಾರ ೧,೧೩೪,೭೧೩, ೧೯೨೧ರ ಪ್ರಕಾರ ೨,೪೭,೩೬೮.

ಹೀಗೆ ಜನಸಂಖ್ಯೆಯಲ್ಲಿ ಶೇಕಡಾವಾರು ಬದಲಾವಣೆ ಹೀಗೆ ಇದೆ. ೧೮೯೧-೧೯೦೧ರ ಪ್ರಕಾರ ೭.೪, ೧೯೦೧-೧೯೧೧ರ ಪ್ರಕಾರ ೫.೩, ೧೯೧೧-೧೯೨೧ರ ಪ್ರಕಾರ ೪.೪ರಷ್ಟಿದೆ.[೧೬೮] ಪ್ರಾರಂಭದಲ್ಲಿ ಹೆಚ್ಚು ಇದ್ದ ಜನಸಂಖ್ಯೆಯು ಕ್ರಮೇಣ ಇಳಿಮುಖವಾಗಿರುವುದನ್ನು ನೋಡಿದರೆ ರೋಗ-ರುಜಿನಗಳಿಂದ ವ್ಯಾಪಾರಕ್ಕಾಗಿ ಇನ್ನಿತರೆ ಕಾರಣಗಳಿಂದ ವಲಸೆ ಹೋಗಿರುವ ಸಾಧ್ಯತೆ ಹೆಚ್ಚು. ಈ ಎರಡು ಜಿಲ್ಲೆಗಳಲ್ಲಿ ವಿವಿಧ ರೀತಿಯ ಶೇಕಡಾವಾರು ನೋಡಿದಾಗ ಸೌತ್‌ಕೆನರಾ ಹಿಂದೂಗಳು ೮೧.೬೮, ಮುಸಲ್ಮಾನರು ೧೦.೬೦, ಕ್ರಿಶ್ಚಿಯನ್ನರು ೬.೭೫ ಹಾಗೂ ಜೈನರು ೦.೯೭.[೧೬೯]

ಆದರೆ ಬಳ್ಳಾರಿಯಲ್ಲಿ ಜನಸಂಖ್ಯೆ ೧೮೬೧-೬೬ರ ಐದು ವರ್ಷಗಳಲ್ಲಿ ಜನಸಂಖ್ಯೆಯು ಶೇಕಡಾ ೬% ರಷ್ಟು ಹೆಚ್ಚಾಯಿತು. ೧೮೭೧ರಲ್ಲಿ ೨೬% ರಷ್ಟು ಹೆಚ್ಚಾಯಿತು. ಅಲ್ಲದೆ ೯೪,೨೭,೧೧೨ರಷ್ಟು ಜನಸಂಖ್ಯೆಯಲ್ಲಿ ೭೧.೮ ಜನರು ಶೇಕಡಾ ಕೃಷಿಯನ್ನೇ ಅವಲಂಭಿಸಿದ್ದರು.[೧೭೦]

ದಕ್ಷಿಣ ಕನ್ನಡದಲ್ಲಿ ಪ್ರಬಲವಾಗಿರುವ ಜಾತಿಗಳ ಸಂಖ್ಯೆಯನ್ನು ನೋಡುವುದಾದರೆ ಬಿಲ್ಲವರು (೧,೨೫,೬೬೩), ಬ್ರಾಹ್ಮಣರು(೯೫,೬೬೩), ಮಾಪಿಳ್ಳೆಯವರು(೯೦,೦೦೦), ಭಂಟರು(೭೦,೦೦೦),

ನಾಡವರಿಗೆ ಸಮೀಪವಾದ ಭಟ್ಟಂ(೩೯,೦೦೦), ಗೌಡರು(೪೩,೦೦೦), ಮೊಗೇರು(೩೧,೦೦೦), ಕುಂಬಾರರು(೨೭,೦೦೦), ಮರಾಠರು(೨೬,೦೦೦), Tiyyans(೨೪,೦೦೦), ಕಮ್ಮಲರು(೨೨,೦೦೦), ಹಳೇಪಿಕ್ಕಿಗಳು(೨೨,೦೦೦), ದೇವಾಡಿಗರು(೧೯,೦೦೦), ನಾಯರು(೧೫,೦೦೦), ಕುಂಬಾರರು(೧೧,೦೦೦), ಗಾಣಿಗರು(೧೧,೦೦೦), ಕೊಲೆಯನ್(೧೦,೦೦೦), ಕೊರಗರು ಎಂಬ ಬುಡಕಟ್ಟು ಜನಾಂಗದವರು(೪,೩೫೫), ಸ್ಥಳೀಯ ಕ್ರಿಶ್ಚಿಯನ್ನರು(೭೦,೬೪೧), ಇತರೇ ಜನಾಂಗದ ಸಂಖ್ಯೆ ಸಿಗುತ್ತದೆ. ಅಲ್ಲದೆ ವೃತ್ತಿಗಳನ್ನು ಆಧರಿಸಿದ ಜಾತಿಗಳ ಜನಸಂಖ್ಯೆಯು ಸಂಕ್ಷಿಪ್ತವಾಗಿ ಕೋಷ್ಟಕದ ಮೂಲಕ ಮಾಹಿತಿ ನೀಡಿರುತ್ತಾರೆ. ಅಲ್ಲದೆ ಬಳ್ಳಾರಿ ಹಾಗೂ ಅನಂತಪುರ ಜಿಲ್ಲೆಗಳಿಗೆ ಉದ್ಯೋಗಕ್ಕಾಗಿ ಹಲವು ಜನರು ಇಲ್ಲಿ ವಲಸೆ ಬರುತ್ತಿದ್ದರು. ಮುಖ್ಯವಾಗಿ ನಿಜಾಂ ಸಂಸ್ಥಾನದಿಂದಲೂ ಹೆಚ್ಚಿನ ಜನರು ವಲಸೆ ಬರುತ್ತಿದ್ದರೆಂದು ತಿಳಿದುಬರುತ್ತದೆ.[೧೬೧]

### ೩.೫.೨. ಮದ್ರಾಸ್ ಕರ್ನಾಟಕದ ಜಾತಿ ವ್ಯವಸ್ಥೆ

ಜಾತಿ ಎಂಬ ಪದದ ಅರ್ಥವು ಅತ್ಯಂತ ವಿಸ್ತಾರವಾದದ್ದು. ದಕ್ಷಿಣ ಭಾರತದ ಜಾತಿಪದ್ಧತಿಯ ವಿಷಯ ಬಂದಾಗ ಹಲವು ಅರ್ಥಗಳುಂಟು. ಜಾತಿ ವಿಷಯ ಬಂದಾಗ ಮೊದಲನೇ ಸ್ಥಾನ ದೊರೆಯುವುದು ಬ್ರಾಹ್ಮಣರಿಗೆ. ಇವರದು ಮೇಲ್ವರ್ಗದ ಜಾತಿ. ಹಿಂದುಗಳಲ್ಲಿ ಈ ನಾಲ್ಕು ವರ್ಗಗಳಲ್ಲಿ(ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ) ಉನ್ನತ ಜಾತಿ ಬ್ರಾಹ್ಮಣರು. ನಾಲ್ಕು ಜಾತಿಗಳನ್ನು ಬಿಟ್ಟರೆ ಬುಡಕಟ್ಟುಗಳನ್ನು ಹೊರಜಾತಿಗಳೆಂದು ಗುರುತಿಸಲಾಗುತ್ತಿತ್ತು. ಆದರೆ ಮದ್ರಾಸ್ ಪ್ರಾಂತ್ಯದಲ್ಲಿ ಉನ್ನತವಾದ ವರ್ಗ ಅಥವಾ ಜಾತಿ ಎಂದು ತಮಿಳುನಾಡಿನ(Tamilians) ತಮಿಳು ಬ್ರಾಹ್ಮಣರನ್ನು ಕರೆಯುತ್ತಾರೆ. ಇವರು ಪ್ರಮುಖವಾಗಿ ಮಾಡುವ ವೃತ್ತಿ ಎಂದರೆ ಜೋತಿಷ್ಯ, ಸರ್ಕಾರಿ ಉದ್ಯೋಗ, ಆಫೀಸರ್ ಲಾಯರ್‌ಗಳಾಗಿ ಹಾಗೂ ಗುಮಾಸ್ತ ಹುದ್ದೆಗಳಲ್ಲಿ ಇರುತ್ತಿದ್ದರು. ಮ್ಯಾಕ್ಲೀನ್ ಅವರು ಭಾರತಕ್ಕೆ ಸಂಬಂಧಿಸಿದಂತೆ ಜಾತಿವ್ಯವಸ್ಥೆಯನ್ನು ವಿವರಿಸುತ್ತಾರೆ. ವಿವಿಧ ಪ್ರಾಂತ್ಯಗಳಲ್ಲಿ ಬ್ರಾಹ್ಮಣರನ್ನು ನೋಡುವುದಾದರೆ: ಬೆಂಗಲ್ ೬.೦೬% ರಷ್ಟು, ಮದ್ರಾಸ್ ೩.೯೪%, ಬಾಂಬೆ ೪.೮೩% ನಾರ್ತ್‌ವೆಸ್ಟ್ ಪ್ರಾಂತ್ಯ ಮತ್ತು ಔದ್ ೧೨.೨೩%, ಪಂಜಾಬ್ ೧೧.೬೦% ಇದರಲ್ಲಿ ಅತೀ ಕಡಿಮೆ ಕಂಡುಬರುವುದು ಮದ್ರಾಸ್ ಪ್ರಾಂತ್ಯದಲ್ಲಿ ಮಾತ್ರ. ಬ್ರಾಹ್ಮಣರಲ್ಲಿ ಶೈವ ಬ್ರಾಹ್ಮಣರು ಹೆಚ್ಚು. ತಮಿಳರು ಇವರನ್ನು 'ಅಯ್ಯರ್' ಎಂದೇ ಕರೆಯುತ್ತಾರೆ. ಪ್ರಧಾನವರ್ಗ ವೈಷ್ಣವ ಬ್ರಾಹ್ಮಣರು. ತೆಲುಗರು ಇವರನ್ನು ಅಯ್ಯಂಗಾರ್ ಎಂದೇ ಕರೆಯಲಾಗುತ್ತಿತ್ತು.[೧೬೨]

ಬಳ್ಳಾರಿಯಲ್ಲಿ ಬ್ರಾಹ್ಮಣರು, ಸ್ಮಾರ್ತ, ಮಾಧ್ವರು ಹಾಗೂ ವೈಷ್ಣವರು ಪ್ರಧಾನವರ್ಗದವರಾಗಿದ್ದಾರೆ.[೧೬೩] ದಕ್ಷಿಣಕನ್ನಡದಲ್ಲಿ ಬ್ರಾಹ್ಮಣರು, ಕೊಂಕಣಸ್ಥರು, ದೇಶಸ್ಥರು, ಗೌಡ, ಬ್ರಾಹ್ಮಣರು, ಕೊಂಕಣಿ, ಕೋಟೇಶ್ವರ, ಪಡಿಯಾ, ಸಂಕ್ಲಾಪುರಗಳು, ಸಂಸ್ಕೃತರು, ಶಿವಳ್ಳಿಗಳು ಅಲ್ಲದೆ ತುಳು ಬ್ರಾಹ್ಮಣರು ಪ್ರಮುಖವರ್ಗವೆಂದು ಗುರುತಿಸಲಾಗುತ್ತದೆ. ತುಳುಬ್ರಾಹ್ಮಣರು, ಹಳೆಯ ತುಳು ದ್ರಾವಿಡರು, ದೇಶಸ್ಥರು, ಹಳೆಯ ದ್ರಾವಿಡ ಬ್ರಾಹ್ಮಣರು, ಸಂಸ್ಕೃತರು ಹಾಗೂ ಗೌಡಬ್ರಾಹ್ಮಣರು ಎಂಬುದಾಗಿ ತಿಳಿದುಬರುತ್ತದೆ.[೧೬೪]

ಕ್ಷತ್ರಿಯರು ಸಾರ್ವಜನಿಕ ಸೇವೆಯಲ್ಲಿ ಗುರುತಿಸಿಕೊಳ್ಳುವರು. ಬ್ರಾಹ್ಮಣರ ನಂತರದ ಸ್ಥಾನ ಇವರದು. ಇವರು ಬ್ರಾಹ್ಮಣರ ಭುಜದಿಂದ ಬಂದವರು ಎನ್ನಲಾಗುತ್ತದೆ. ಇವರಿಗೆ ಉನ್ನತವಾದ Excutive power ಇದೆ. ಇವರು ಕೆಲವರನ್ನು ಮಿಲಿಟರಿವರ್ಗದವರೆಂದು, ರೈತ ಎಂದು ಗುರುತಿಸಲಾಗುತ್ತದೆ.

ಮೂರನೇ ವರ್ಗ ವೈಶ್ಯರು. ಈ ವರ್ಗವು ವ್ಯಾಪಾರ ಸಮುದಾಯವಾಗಿದೆ. ಇದು ಎಣ್ಣೆ, ಬಟ್ಟೆ ಇತರೇ ವ್ಯಾಪಾರ ಮಾಡುವ ವರ್ಗ. ಮತ್ತೊಂದು ನಾಲ್ಕನೇ ವರ್ಗ ಶೂದ್ರರು ಎಂದು ಗುರುತಿಸಬಹುದು. ಇದು ನಾಲ್ಕು ವರ್ಗಗಳಲ್ಲಿ ಕಡೆಯದಾಗಿರುತ್ತದೆ. ಅತಿ ಕನಿಷ್ಠವಾದ ಉದ್ಯೋಗವನ್ನು ಕೈಗೊಂಡವರು.[೧೭೫]

೧೮೭೧-೮೧ರ ಜನಗಣತಿ ಪ್ರಕಾರ ೬೦೦ ಪ್ರತ್ಯೇಕ ಜಾತಿಗಳಿವೆ ಎಂದು ಹೇಳಲಾಗುತ್ತದೆ.[೧೭೬] ಬಳ್ಳಾರಿಯಲ್ಲಿ ಬ್ರಾಹ್ಮಣರು ಅಲ್ಪಸಂಖ್ಯಾತರು. ಆದರೆ ಪ್ರಧಾನವಾಗಿ ಲಿಂಗವಂತರು ೧೨% ರಷ್ಟು ಹಾಗೂ ಬೋಯಿ ಅಥವಾ ಬೇಡರು ೧,೭೭,೦೦೦ ಜನರು ಇದ್ದಾರೆ. ಅಂದರೆ ೧೮% ರಷ್ಟು. ಇವರು ಕನ್ನಡ, ತೆಲುಗು, ಎರಡು ಭಾಷೆ ಮಾತನಾಡುತ್ತಾರೆ. ಕುರುಬರು ೯೭,೦೦೦, ಮಾದಿಗರು, ಹೊಲೆಯರು, ಕಬ್ಬೇರರು, ಲಂಬಾಣಿಗರು, ಕೊರಚರು ಈ ಜಾತಿಯ ಬಗ್ಗೆ ಹೆಚ್ಚಿನ ಮಾಹಿತಿ ಸಿಗುತ್ತದೆ. ಅಂದರೆ ಇವು ಅಂದು ಪ್ರಬಲ ಜಾತಿಗಳಾಗಿದ್ದವು ಎಂಬುದಾಗಿ ತಿಳಿಯಬಹುದು. ಇವುಗಳಲ್ಲದೆ ಇನ್ನಿತರ ಪ್ರಮುಖ ಜಾತಿಗಳೆಂದರೆ: ಗೊಲ್ಲರು ಗೌಳಿಗರು, ದೇವಾಂಗದವರು, ಈಡಿಗರು, ಮರಗೋಲರು, ಸಾಕಲ್ಯರು ಎಂಬ ಉಲ್ಲೇಖವನ್ನು ಸಹ ಮಾಡಬಹುದು.[೧೭೭]

ಆದರೆ ವೃತ್ತಿಗಳನ್ನಾಧರಿಸಿ ಜಾತಿ ಪ್ರಸ್ತಾಪವಿದೆ. ದೇವರ ಹೆಸರಿನಲ್ಲಿ ಕೆಲಸ ಮಾಡುವ ವರ್ಗಗಳು ಸತಾನಿಗಳು, ದೇವಾಡಿಗರು, Moylars ಇತರರು.

ವ್ಯಾಪಾರಿ ವರ್ತಕ ಜಾತಿಗಳೆಂದರೆ: ಬಣಜಿಗರು, ವೈಶ್ಯರು ಇತರರು.

ರೈತರು: ಭಂಟರು, ಗೌಡರು, ಕ್ಷತ್ರಿಯ, ಮಲವ, ಮರಾಠರು, ನಾಡವರು, ನಾಯಿಂದರು ಪ್ರಮುಖರು.

Shepherds: ಕುರುಬರು, Heggades ಪ್ರಮುಖ ಜಾತಿಗಳು.

ಕಲೆಗಾರರು: ಅಕ್ಕಸಾಲಿಗ, ಕುಂಬಾರ, ಕಂಚುಗಾರ, ಕಲ್ಲುಕುಟಿಗ ಇತರರು.

ನೇಕಾರ ಜಾತಿಗಳೆಂದರೆ: ದೇವಾಂಗರು, ನಾಲಿಗಳು, ಪಟವೇಗಾರರು, ಬಿಳಿಮೊಗ್ಗರು.

ಎಣ್ಣೆವೃತ್ತಿ ಕೈಗೊಂಡ ಜಾತಿ: ಗಾಣಿಗರು, ಕುಂಬಾರರು.

ಮೀನು ವೃತ್ತಿ ಕೈಗೊಂಡವರು: ಮೊಗ್ಗೇರು, Kharicris

ತೊಳೆಯುವ ಕೆಲಸ ಮಾಡುವವರು: ಅಗಸರು, ಮಡಿವಾಳರು, ಕ್ಷೌರಿಕರು ಇತರರು. ಈ ರೀತಿ ವಿವರಣೆ ನೀಡಿದ್ದಾರೆ.[೧೭೮] ಆದರೆ ಹೆಚ್ಚಿನ ಮಾಹಿತಿಗಳು ದೊರೆಯುವುದಿಲ್ಲ.

ಆದರೆ ಸೌತ್ ಕೆನರಾದಲ್ಲಿ ಬ್ರಾಹ್ಮಣರು ಹಾಗೂ ಭಂಟರು ಪ್ರಬಲ ಜಾತಿಯಾಗಿ ಗುರುತಿಸಿಕೊಂಡರೆ, ಬಳ್ಳಾರಿಯಲ್ಲಿ ಲಿಂಗವಂತರು ಹಾಗೂ ಬೇಡರು ಪ್ರಬಲ ಜಾತಿಯಾಗಿ ಗುರುತಿಸಿಕೊಳ್ಳುತ್ತಾರೆ. ಮದ್ರಾಸ್ ಪ್ರಾಂತ್ಯದಲ್ಲಿಯೂ ಸಹ ಹೆಚ್ಚಿನ ಮಾಹಿತಿಯು ಬ್ರಾಹ್ಮಣ ಜಾತಿಯ ಬಗ್ಗೆಯೇ ನೀಡಿರುವುದು ಸ್ಪಷ್ಟ.

### ೩.೫.೩. ಮದ್ರಾಸ್ ಕರ್ನಾಟಕದ ಭಾಷೆ

ಮದ್ರಾಸ್ ಪ್ರಾಂತ್ಯದಲ್ಲಿ ದ್ರಾವಿಡ ಭಾಷೆಯನ್ನು ಕಾಣಬಹುದು. ಇಲ್ಲಿ ತೆಲುಗು, ತಮಿಳು, ತುಳು, ಮಲಯಾಳಂ, ಕನ್ನಡ ಎಂಬ ಪಂಚ ದ್ರಾವಿಡ ಭಾಷೆಗಳನ್ನು ಒಳಗೊಂಡಿತ್ತು. ಇಡೀ ಮದ್ರಾಸ್ ಪ್ರಾಂತ್ಯಕ್ಕೆ ಸಂಬಂಧಿಸಿದಂತೆ ಯಾವ ಯಾವ ಭಾಷೆ ಮಾತನಾಡುತ್ತಾರೆ ಎಂದು ಹೇಳುವುದಾದರೆ:

೧೨,೩೮೮,೦೦೦ ಜನರು ತಮಿಳು ಮಾತನಾಡುತ್ತಾರೆ.

೧,೩೦೦,೫೫೫ ಜನರು ಕನ್ನಡ

೨,೩೭೦,೦೦೦ ಜನರು ಮಲಯಾಳಂ

೪,೨೭,೦೦೦ ಜನರು ತುಳು

೨೦,೫೦೦ ಜನರು Khond

ಇಲ್ಲಿ ೮,೦೦೦ ಜನರು Gond ಭಾಷೆ ಮಾತನಾಡುತ್ತಾರೆ. ಒಟ್ಟು ಇಲ್ಲಿ ದ್ರಾವಿಡ ಭಾಷೆ ಮಾತನಾಡುವವರು ೨೯ ಮಿಲಿಯನ್ ಜನರು ಇದ್ದರು. ಮದ್ರಾಸ್ ಪ್ರಾಂತ್ಯವು ತಮಿಳು ದೇಶವೆಂದೇ ಹೇಳಬಹುದು. ಏಕೆಂದರೆ ಹೆಚ್ಚಿನ ಜನರು ಇಲ್ಲಿ ತಮಿಳು ಮಾತನಾಡುತ್ತಿದ್ದರು. ಇಲ್ಲಿಂದಲೂ ಜನರು ಹೆಚ್ಚಾಗಿ ಸಿಕಂದರಾಬಾದ್, ಬೆಂಗಳೂರು ಇತರೆ ಕಡೆ ತಮಿಳರು ವಲಸೆ ಹೋದರು ಎನ್ನಲಾಗುತ್ತದೆ. ಅಲ್ಲದೆ ಸ್ಥಳೀಯ ಹಾಗೂ ಬೇರೆ ಕಡೆಯಿಂದ ಬಂದು ನೆಲೆಸಿರುವವರ ಮಾಹಿತಿಯನ್ನು ಅವರ ಜಾತಿ ಯಾವುದು ಎಂಬುದನ್ನು ಆಯಾ ಹೆಸರು ಗಳಿಂದಲೂ ಗುರುತಿಸಬಹುದಾಗಿದೆ. ತಂಜಾವೂರಿನಲ್ಲಿ ಆರ್ಯನ್‌ರ ಪ್ರಭಾವ ಹೆಚ್ಚು. ಶೇಕಡಾ ೭೫% ಕಚ್ಚಾ ತಮಿಳು ಹೆಸರುಗಳಿವೆ. ಶೇಕಡಾ ೧೩%ರಷ್ಟು ಶುದ್ದ ಸಂಸ್ಕೃತ ಹೆಸರುಗಳಿವೆ. ಮಿಶ್ರಣ ಹೆಸರು ೧೨% ರಷ್ಟು ಇವೆ ಎಂಬುದಾಗಿ ತಿಳಿಯುವುದರಿಂದ ವಲಸಿಗರು ಹಾಗೂ ಸ್ಥಳೀಯರ ಬಗ್ಗೆ ಸ್ಪಷ್ಟತೆ ಸಿಗುತ್ತದೆ.[೧೯] ಮದ್ರಾಸ್ ಕರ್ನಾಟಕದ ಕನ್ನಡ ಮಾತನಾಡುವ ಜಿಲ್ಲೆಗಳು ಬಳ್ಳಾರಿ ಹಾಗೂ ದಕ್ಷಿಣ ಕನ್ನಡಕ್ಕೆ ಸೀಮಿತವಾಗಿವೆ. ಅಲ್ಲದೆ ದಕ್ಷಿಣ ಕನ್ನಡದಲ್ಲಿ ತುಳು ಭಾಷೆಯು ಪ್ರಮುಖವಾಗಿತ್ತು. ದಕ್ಷಿಣ ಕನ್ನಡದಲ್ಲಿ ೧೮೯೧ರ ಜನಗಣತಿ ಪ್ರಕಾರ ದಕ್ಷಿಣ ಕನ್ನಡ ಭಾಷೆ ಮಾತನಾಡುವವರು.

ಅರೆ(೯೪೨), ಬೆಲ್ಲರು(೬೬೮), ಕನ್ನಡ(೨,೩೩,೫೫೧), ಹಿಂದೂಸ್ತಾನಿ(೧೬,೬೦೨), ಕೊಂಕಣಿ (೧೩,೦೧,೯೧), ಕೊಡಗು(೧,೮೬೮), ಲಂಬಾಣಿ(೧೭), ಮಲಯಾಳಂ(೧,೯೧,೬೯೬), Pathul(೭), ತಮಿಳು (೧,೧೫೦), ತೆಲುಗು(೨,೦೯೬), ತುಳು(೪,೬೦,೨೦೯), ಒರಿಯಾ(೧೦) ಮೇಲಿನ ಸಂಗತಿಯಿಂದ ನೋಡಿದಾಗ ಕನ್ನಡವು ಪ್ರಬಲ ಭಾಷೆಯಾಗಿರಲಿಲ್ಲ, ಆದರೆ ಇಲ್ಲಿನ ಮಾತೃಭಾಷೆ ತುಳು ಆಗಿತ್ತು. ೪,೩೫೯ ಜನರು ತುಳು ಮಾತನಾಡುತ್ತಾರೆ. ಕನ್ನಡವನ್ನು ಶೇಕಡಾ ೨೦.೨೩% ರಷ್ಟು, ಮಲಯಾಳಂ ೧೮.೧೬%, ಕೊಂಕಣಿ ೧೨.೩%, ಹಿಂದೂಸ್ತಾನಿ ೧.೫೭%, ಮರಾಠಿ ೩.೩೧% ಎಂದು ತಿಳಿಯುತ್ತದೆ. ಅಲ್ಲದೆ ಇಲ್ಲಿರುವ ತಾಲೂಕುಗಳಲ್ಲಿ ನೋಡಿದಾಗ ಮಲಯಾಳಂ ಭಾಷೆಯು ಕಾಸರಗೋಡು ಮತ್ತು ಅಮೀನದೀವಿ ದ್ವೀಪದಲ್ಲಿ ಹುಟ್ಟಿತ್ತು. ಶೇಕಡಾ ೧೦%ರಷ್ಟು ಇತ್ತು. ಮಂಗಳೂರು ತಾಲೂಕಿನಲ್ಲಿ ತುಳು ಪ್ರಮುಖವಾಗಿತ್ತು.

ಮಂಗಳೂರು, ಉಡುಪಿ ಉಪ್ಪಿನಂಗಡಿಯಲ್ಲಿ ಶೇಕಡಾ ೩೦ರಷ್ಟು ಜನರಿಗೆ ತುಳು ಮಾತೃಭಾಷೆಯಾಗಿತ್ತು.[೧೮೦] ಬಳ್ಳಾರಿ ಜಿಲ್ಲೆಗೆ ಬಂದಾಗ ಕನ್ನಡವು ಇಡೀ ಜಿಲ್ಲೆಯ ಪ್ರಭುತ್ವ ಪಡೆದ ಭಾಷೆಯಾಗಿತ್ತು. ಬಳ್ಳಾರಿಯ ಅರ್ಧದಷ್ಟು ಜನರು ತೆಲುಗು ಮಾತನಾಡಿದ್ದರೆ ಮೂರನೇ ಸ್ಥಾನ ಹಿಂದೂಸ್ತಾನಿ ಭಾಷೆಯಾಗಿತ್ತು. ಕನ್ನಡ ಭಾಷೆಯನ್ನು ಹಡಗಲಿ ತಾಲೂಕು, ಪಶ್ಚಿಮ ತಾಲೂಕಿನಲ್ಲಿ ಶೇಕಡಾ ೯/೧೦ರಷ್ಟು ಜನರು ಕನ್ನಡ ಮಾತನಾಡುತ್ತಾರೆ. ಬಳ್ಳಾರಿ, ಆದೋನಿ, ಆಲೂರು, ರಾಯದುರ್ಗ ಶೇಕಡಾ ೪೧೩ರಷ್ಟು ಜನರು ಕನ್ನಡ ಮಾತನಾಡುವರು. ಮರಾಠಿಗರು ೧೩,೦೦೦ ಜನರು, ಲಂಬಾಣಿ ೧೦,೦೦೦ ಜನರು, ಕೊರಚರು ೫,೦೦೦ ಜನರು ಕನ್ನಡ, ತೆಲುಗು ಮಾತನಾಡುತ್ತಾರೆ. ಆದ್ದರಿಂದ ಇದೊಂದು ಭಾಷೆಯಲ್ಲಿ ಸರ್ಕಾರಿ ಪತ್ರಗಳೆಲ್ಲವೂ ಸಹ ಇತ್ತು ಎಂಬುದಾಗಿ ತಿಳಿದಿರುತ್ತದೆ. ಆದ್ದರಿಂದ ಇದೊಂದು ಕನ್ನಡ ಪ್ರದೇಶ. ಆದರೆ ವಲಸಿಗರ ಸಂಖ್ಯೆ ಇಲ್ಲಿ ಹೆಚ್ಚಿರಬಹುದು. ಬಳ್ಳಾರಿ, ಕೂಡ್ಲಿಗಿಯಲ್ಲಿ ಕನ್ನಡ ಪ್ರಧಾನ ಭಾಷೆಯಾಗಿತ್ತು. ತೆಲುಗು ಅರ್ಧದಷ್ಟಿತ್ತು. ಹರಪನಹಳ್ಳಿ, ಹಡಗಲಿ, ಪೆನುಗೊಂಡ, ಹಿಂದೂಪುರ, ಮಡಕಸಿರ ಇವುಗಳಲ್ಲಿ ಕನ್ನಡ ಪ್ರಧಾನ ಭಾಷೆಯಾಗಿತ್ತು. ಆದರೆ ರಾಯದುರ್ಗ, ಆಲೂರು, ಆದೋನಿ, ಗುತ್ತಿ, ತಾಡಪತ್ರಿ, ಧರ್ಮವರಂ, ಅನಂತಪುರ ಇಲ್ಲಿ ತೆಲುಗು ಪ್ರಧಾನ ಭಾಷೆಯಾಗಿತ್ತು ಎನ್ನಲಾಗುತ್ತದೆ.[೧೮೧] ಆದರೂ ಬ್ರಿಟಿಷರ ವಿರುದ್ಧ ಹೋರಾಟ ಬಂದಾಗ ಈ ಪ್ರದೇಶದಿಂದಲೇ ಮೊದಲ ಏಕೀಕರಣಕ್ಕಾಗಿ ಹೋರಾಟ ನಡೆಯಿತು. ಒಟ್ಟಿನಲ್ಲಿ ಇದೊಂದು ಕನ್ನಡ ಪ್ರದೇಶವಾಗಿತ್ತು. ಈಗಲೂ ಸಹ ತೆಲುಗರ ಹಾವಳಿ ಹೆಚ್ಚಾಗುತ್ತಿದೆ. ಬ್ರಿಟಿಷರ ಸೆನ್ಸಸ್ ವರದಿಗಳಿಂದ ಯಾವ ಭಾಷೆ ಮಾತನಾಡುವವರ ಸಂಖ್ಯೆ ಅಧಿಕವಾಗಿದೆ ಎಂದು ತಿಳಿಯುವುದರಿಂದ ನಾವು ಎಚ್ಚೆತ್ತುಕೊಳ್ಳಲು ಇವರ ಆಡಳಿತವು ನೆರವಾಯಿತು.

### ೩.೫.೪. ಮದ್ರಾಸ್ ಕರ್ನಾಟಕದ ವಸತಿ ವ್ಯವಸ್ಥೆ

ವಸಾಹತುಶಾಹಿ ಕಾಲಘಟ್ಟದಲ್ಲಿ ಮನೆಗಳನ್ನು ಸಾಮಾನ್ಯವಾಗಿ ಕಲ್ಲು ಅಥವಾ ಮಣ್ಣಿನಿಂದ ಕಟ್ಟುತ್ತಿದ್ದರು. ಮೇಲ್ಚಾವಣಿಯು ಹುಲ್ಲು, ಹೆಂಚು ಹಾಗೂ ಕಟ್ಟಿಗೆಗಳಿಂದ ಕೂಡಿರುತ್ತಿದ್ದವು. ಬಳ್ಳಾರಿ ಜಿಲ್ಲೆಯ ಮನೆಗಳು ಸಾಮಾನ್ಯವಾಗಿ ಹಳೆಯ ಮಾದರಿಯಲ್ಲಿದ್ದವು. ಮುಖ್ಯವಾಗಿ ಚಿಕ್ಕಗಾತ್ರದ್ದು. ಆದರೆ ಎತ್ತರವಾದ ಗೋಡೆಗಳಿರುತ್ತಿದ್ದವು. ಜೊತೆಗೆ ಕಿಟಕಿ ಒಂದೇ ಇರುತ್ತಿತ್ತು. ಹಾಗೂ ಒಂದೇ ಮುಖ್ಯದ್ವಾರವಿರುತ್ತಿತ್ತು. ದೊಡ್ಡದಾದ ಮನೆಗಳು ಚಚ್ಚೌಕಾಕಾರದಲ್ಲಿ ಕಟ್ಟಿರುತ್ತಾರೆ. ಇತ್ತೀಚೆಗೆ ಬಳ್ಳಾರಿಯಲ್ಲಿ ಕಟ್ಟಿದಂತಹ ಕಟ್ಟಡಗಳಲ್ಲಿ ವರಾಂಡವಿರುತ್ತದೆ. ಮಧ್ಯದಲ್ಲಿ ತುಳಸಿಕಟ್ಟೆ ಇರುತ್ತದೆ. ಈ ಮಾದರಿಯು ಹೆಚ್ಚಾಗಿ ದಕ್ಷಿಣಕೆನರಾಕ್ಕೆ ಸಂಬಂಧಿಸಿದಂತೆ ಎಂದು ಹೇಳಬಹುದು. ಸಾಮಾನ್ಯವಾಗಿ ಮನೆಗಳ ಗೋಡೆಗಳು ಕಲ್ಲು ಮತ್ತು ಮಣ್ಣಿನದಾಗಿರುತ್ತದೆ. ಮೇಲ್ಚಾವಣಿಯು ಸಮವಾಗಿರುತ್ತದೆ. ಗಾಳಿ, ಬೆಳಕು ಬರಲು ಸಣ್ಣದಾದ ಕಿಂಡಿಯನ್ನು ಮಾಡಿರುತ್ತಾರೆ. ಜೊತೆಗೆ ಮಳೆಗಾಲದಲ್ಲಿ ಮನೆ ಸೋರುವುದು ಸಾಮಾನ್ಯ. ಆದರೆ ಹೊಸಮನೆಗಳಲ್ಲಿ ವಿನ್ಯಾಸದಿಂದ ಕೂಡಿದ ವೃತ್ತಾಕಾರದ ಬಾಗಿಲುಗಳನ್ನು ಹೊಂದಿರುತ್ತವೆ ಮತ್ತು ಇಲ್ಲಿನ ಗೋಡೆಗಳಿಗೆ ಕೆಂಪುಬಣ್ಣ ಹಾಗೂ ಬಿಳಿಬಣ್ಣದಿಂದ ಅಲಂಕರಿಸಿರುತ್ತಾರೆ. ಆದರೂ ಸಹ ಇಲ್ಲಿನ ಮನೆಗಳು

ದೋಷಪೂರಿತವಾಗಿವೆ. ಏಕೆಂದರೆ ಮನೆಗಳಲ್ಲಿ ಗಾಳಿ, ಬೆಳಕು ಇರುವುದಿಲ್ಲ ಅದು ಮೇಲ್ಛಾವಣಿಯ ಕಿಂಡಿಗಳ ಮೂಲಕ ಮಾತ್ರ ಬರಬೇಕಾಗಿತ್ತು. ಆದ್ದರಿಂದ ಅಲ್ಲಿನ ಮನೆಗಳು(ಭೀಕರ) ಧೂಳಿನಿಂದ ಕೂಡಿದ್ದು, ನಿರುತ್ಸಾಹಗೊಳಿಸುವಂತಹ ಸ್ಥಿತಿಯಲ್ಲಿರುತ್ತವೆ ಎಂಬುದಾಗಿ ಕೆಲ್‌ಸಾಲ್ ಅವರ ಅಭಿಪ್ರಾಯಪಡುತ್ತಾರೆ. ಆದರೆ ಮನೆಗಳ ಒಳವಿನ್ಯಾಸಕ್ಕೆ ಬಂದರೆ ಸಣ್ಣ ಮನೆಗಳಲ್ಲಿಯೂ ಸಹ ಎರಡು ಅಥವಾ ಮೂರು ಕೊಠಡಿಗಳಿರುತ್ತವೆ. ಅವು ತೆರೆದುಕೊಂಡಿರುತ್ತವೆ, ಅಂದರೆ ಬಾಗಿಲುಗಳಿರುವುದಿಲ್ಲ. ಜೊತೆಗೆ ದವಸಧಾನ್ಯಗಳನ್ನು ಮನೆಯ ಕೊಠಡಿಗಳಲ್ಲಿ ಶೇಖರಿಸಿಡುತ್ತಿದ್ದರು. ಎಲ್ಲಾ ಕಡೆ ಹೆಚ್ಚಾಗಿ ಸಾಧುಪ್ರಾಣಿಗಳನ್ನು ಸಾಕುತ್ತಿದ್ದರು. ಬಳ್ಳಾರಿಯಲ್ಲಿ ಗುತ್ತಿ ಮತ್ತು ಆದೋನಿಯ ಹಲವಾರು ಮನೆಗಳು ಎರಡು ಅಂತಸ್ತಿನ ಮಾಳಿಗೆ ಮನೆಗಳಾಗಿದ್ದವು. ಮನೆಗಳಲ್ಲಿ ಸಾಮಾನ್ಯವಾಗಿ ಚಾಪೆ, ಮಂಚ ಉಪಯೋಗಿಸುತ್ತಿದ್ದರು. ಅಲ್ಲದೆ ಪೀಠೋಪಕರಣಗಳಾದ ಕುರ್ಚಿ, ಟೇಬಲ್ ಸಾಮಾನ್ಯವಾಗಿದ್ದವು.[೧೮೨]

ನೂರು ವರ್ಷಗಳಿಂದಲೂ ಬಳ್ಳಾರಿ ಜಿಲ್ಲೆಯ ಹಳ್ಳಿಗಳು, ಹಳ್ಳಿಯ ಸುತ್ತಲೂ ಪ್ರವೇಶದ್ವಾರದಿಂದ ಸಾಮಾನ್ಯವಾಗಿ ಕಲ್ಲಿನಿಂದ ಕಟ್ಟಿದ ಬೇಲಿ ಇರುತ್ತಿದ್ದವು. ಹಳ್ಳಿಯನ್ನು ಪ್ರವೇಶಿಸಬೇಕಾದ ದ್ವಾರದಲ್ಲಿ ದುಂಡನೆಯ ಕಾವಲುಗೋಪುರ ನಿರ್ಮಿಸಿದ್ದರು. ಪಕ್ಕದಲ್ಲಿಯೇ ಹನುಮಂತನ ಮೂರ್ತಿಯನ್ನು ನಿಲ್ಲಿಸುತ್ತಿದ್ದರು. ಏಕೆಂದರೆ ಯಾವುದೇ ದುಷ್ಟಶಕ್ತಿ ಹಳ್ಳಿಯೊಳಗೆ ಪ್ರವೇಶಿಸಲು ಅವಕಾಶವಿಲ್ಲವೆಂಬ ನಂಬಿಕೆಯಾಗಿತ್ತು. ಒಟ್ಟಿನಲ್ಲಿ ಬಳ್ಳಾರಿ ಜಿಲ್ಲೆಯಲ್ಲಿರುವ ಮನೆಗಳು ಬಹಳ ಹತ್ತಿರ ಹತ್ತಿರ ಇಕ್ಕಟ್ಟಾಗಿ ಕಟ್ಟಿರುತ್ತಿದ್ದರು ಎಂಬುದಾಗಿ ತಿಳಿದುಬರುತ್ತದೆ.[೧೮೩]

ಆದರೆ ಸೌತ್‌ಕೆನರಾಕ್ಕೆ ಬಂದಾಗ ಬ್ರಾಹ್ಮಣರ ಮನೆಯ ಕುರಿತು ಹೆಚ್ಚಿನ ಮಾಹಿತಿ ಸಿಗುತ್ತದೆ. ಎರಡಂತಸ್ತಿನ ಮನೆಗಳನ್ನು ನೋಡುವುದಾದರೆ ಒಳ್ಳೆಯ ಗೋಡೆಯಿಂದ ಕೂಡಿರುತ್ತದೆ. ಮನೆಯು ದೊಡ್ಡದಾಗಿರುತ್ತದೆ. ಮನೆಯ ಒಳಭಾಗಕ್ಕೆ ಬಂದಾಗ ದೊಡ್ಡದಾದ ಸುಂದರವಾದ ಹಾಲ್ ಇರುತ್ತದೆ. ಈ ಕೊಠಡಿಯ ಸುತ್ತಲೂ ಮರದ ಕೆತ್ತನೆಯ ಕಂಬಗಳನ್ನು ಹೊಂದಿರುತ್ತವೆ. ಒಳಭಾಗದಲ್ಲಿ ಹಲವು ಕೊಠಡಿಗಳಿರುತ್ತವೆ. ಮೇಲ್ಛಾವಣಿಯು ಕಟ್ಟಿಗೆಯಿಂದ ಕೂಡಿರುತ್ತದೆ. ಬಾಗಿಲುಗಳು ಗಟ್ಟಿಯಾಗಿ ಸ್ಥಿರವಾಗಿರುತ್ತವೆ. ಮೇಲ್‌ಮಾಳಿಗೆಯಲ್ಲಿ ಕಿಟಕಿಗಳನ್ನು ಮಾಡಿರುತ್ತಾರೆ. ದೊಡ್ಡದಾದ ವಿಸ್ತಾರವಾದ ಜಾಲಂದ್ರವನ್ನು ಹೊಂದಿರುತ್ತವೆ. ಮನೆಯಲ್ಲಿ ದವಸ-ಧಾನ್ಯಗಳನ್ನು ಸಂಗ್ರಹಿಸಿಡಲು ಉಗ್ರಾಣರೂಪದ ಕೊಠಡಿ ಹೊಂದಿರುತ್ತವೆ. ಧಾನ್ಯ ಇಡಲು, ಓದಲು ಕೊಠಡಿಗಳಿರುತ್ತವೆ. ಇತರೆ ಹಲವು ಕೊಠಡಿಗಳಿರುತ್ತವೆ. ಮನೆಯ ಅಂಗಳದಲ್ಲಿ ಬಾವಿ ಇರುತ್ತದೆ. ಇದನ್ನು ಬಕೆಟ್‌ನಿಂದ ನೀರೆತ್ತುವ ಬಾವಿ ಜೊತೆಗೆ ಸಣ್ಣ ದೇವಾಲಯವಿರುತ್ತದೆ. ಹಿಂಭಾಗದಲ್ಲಿ ಅಥವಾ ಮನೆಯ ಅಂಗಳದಲ್ಲಿ ಹಸು ಇತರೆ ಸಾಕಿದ ಪ್ರಾಣಿಗಳನ್ನು ಕಟ್ಟಲು ಪ್ರತ್ಯೇಕ ಸ್ಥಳಾವಕಾಶವಿರುತ್ತದೆ. ಮುಂಭಾಗದಲ್ಲಿ ಬ್ರಾಹ್ಮಣರು ಮನೆಯಮುಂದೆ ತಿರುಗಾಡಲು, ಕುಳಿತುಕೊಳ್ಳಲು, ಹಾಡಲು ಚರ್ಚಿಸಲು ಸ್ಥಳಾವಕಾಶವಿರುತ್ತದೆ. ಮನೆಯಿಂದ ಹೊರಭಾಗದಲ್ಲಿ ಪ್ರಯಾಣಿಕರು, ಹಳ್ಳಿಯವರು, ತರಕಾರಿಯವಳು, ಕಾಳುಕಡಿ ಮಾರುವವರು, ಭಿಕ್ಷೆ ಬೇಡುವವರು ಪ್ರತಿದಿನ ಇಲ್ಲಿ ಸೇರುವಂತಹ ಜಾಗವಿರುತ್ತದೆ.[೧೮೪]

ಇವು ಬ್ರಾಹ್ಮಣರ ಮನೆಗಳ ಮಾಹಿತಿಯಾಯಿತು. ಆದರೆ ಬೇರೆ ಜನಾಂಗದ ಯಾವುದೇ ರೀತಿಯ ಮಾಹಿತಿ ಇಲ್ಲ. ಆದರೆ ಇಲ್ಲಿರುವ ಒಟ್ಟು ಮನೆಗಳ ಮಾದರಿಯನ್ನು ನೋಡಬೇಕಾದರೆ ಇಡೀ ಸೌತ್‌ಕೆನರಾಕ್ಕೆ ಸಂಬಂಧಿಸಿದಂತೆ ಒಟ್ಟು ಮನೆಗಳ ಸಂಖ್ಯೆ ೧,೮೯,೫೮೪ ಇತ್ತು. ಅಂದರೆ ೫.೫೭ ಶೇಕಡಾವಾರು. ೧೮೭೧ರ ಪ್ರಕಾರ ದಕ್ಷಿಣ ಕೆನರಾದಲ್ಲಿರುವ ಒಟ್ಟು ಮನೆಗಳ ಸಂಖ್ಯೆಯನ್ನು ಈ ರೀತಿ ಗುರುತಿಸಲಾಗುತ್ತದೆ.

| ಮನೆಗಳು | ಹೆಂಚಿನ | ಮಾಳಿಗೆಮನೆ | ಹುಲ್ಲಿನ | ಒಟ್ಟು | ಶೇಕಡಾವಾರು |
|---|---|---|---|---|---|
| Occupied and Non Occupied | ೫,೪೩೮ | ೨ | ೧,೯೦,೨೧೪ | ೧,೯೫,೬೫೪ | ೯,೭೨೨ |
| ಬೇರೆ ಕಟ್ಟಡಗಳು | ೩,೧೧೪ | ೧೨ | ೨೮,೧೨೨ | ೩೧,೯೦೨ | ೯,೬೨೨ |
| ಒಟ್ಟು | ೮,೫೫೨ | ೧೪ | ೨,೧೮,೩೩೬ | ೨,೨೬,೯೦೨ | ೯,೬೨೨ |

ಹುಲ್ಲಿನ ಮನೆಗಳ ಸಂಖ್ಯೆ ಹೆಚ್ಚಾಗಿರುವುದು ತಿಳಿದುಬರುತ್ತದೆ. ೧೮೭೧ರಲ್ಲಿ ಕೇವಲ ವಾಸಿಸಲು ಯೋಗ್ಯವಾದ ಮನೆಗಳನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಳ್ಳಲಾಯಿತು. ಆದರೆ ೧೮೯೧ರಿಂದ ಎಲ್ಲಾ ರೀತಿಯ ವಾಸಿಸಲು ಯೋಗ್ಯವಾದ ಹಾಗೂ ಯೋಗ್ಯವಲ್ಲದ ಕಟ್ಟಡಗಳನ್ನು ಗಣನೆಗೆ ತೆಗೆದುಕೊಳ್ಳಲಾಯಿತು. ೭೦ ವರ್ಷಗಳಿಂದ ಇತ್ತೀಚೆಗೆ ಮನೆಗಳಲ್ಲಿ ಬದಲಾವಣೆ ಕಾಣಲಾರಂಭಿಸಿದೆ. ದಕ್ಷಿಣ ಕನ್ನಡದಲ್ಲಿ ಹುಲ್ಲಿನ ಹೊದಿಕೆಯ ಮೇಲ್ಛಾವಣಿ ಮನೆಗಳು ಸಾಮಾನ್ಯವಾಗಿದ್ದವು. ಆದರೆ ಬಳ್ಳಾರಿ, ಅನಂತಪುರದಲ್ಲಿ ಇಂಥಹ ಮನೆಗಳು ಶೇಕಡ ೨೮% ರಷ್ಟು ಮಾತ್ರ ಇವೆ. ಮಲಬಾರ್/ಕೆನರಾದಲ್ಲಿ ೯೭% ರಷ್ಟು ಹುಲ್ಲಿನ ಹೊದಿಕೆ ಮನೆಗಳು ಸಾಮಾನ್ಯವಾಗಿದ್ದವು.[೧೮೫] ಆದರೆ ಇಲ್ಲಿ ಸಾಮಾನ್ಯ ಜನರ ಮನೆಗಳ ಕುರಿತು ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಕೇವಲ ಅನುಕೂಲಸ್ಥ ಬ್ರಾಹ್ಮಣರ ಮನೆಗಳ ಕುರಿತು ಮಾಹಿತಿ ಇದೆ. ಈ ರೀತಿಯಾಗಿ ಕೆಲವೊಬ್ಬರು ಮಾತ್ರ ಇರುತ್ತಿದ್ದರೆಂಬುದಾಗಿ, ಸಾಮಾನ್ಯ ಜನರು ಆರ್ಥಿಕವಾಗಿ ತುಂಬಾ ಹಿಂದುಳಿದಿದ್ದರು ಹಾಗೂ ನಿರ್ಗತಿಕರಾಗಿದ್ದಾರೆಂಬುದಾಗಿ ತಿಳಿಯಬಹುದು. ಬಳ್ಳಾರಿ ಜಿಲ್ಲೆಯ ಅನುಕೂಲಸ್ಥ ಮನೆಗಳ ಮಾಹಿತಿಯ ಕೊರತೆ ಇದೆ ಎಂಬುದಾಗಿ ತಿಳಿದುಬರುತ್ತದೆ.

### ೩.೫.೫. ಮದ್ರಾಸ್ ಕರ್ನಾಟಕದ ಉಡುಗೆ-ತೊಡುಗೆಗಳು

ಬಳ್ಳಾರಿಯ ವಾತಾವರಣವು ಅತಿ ಹೆಚ್ಚು ಬಿಸಿಲಿರುವುದರಿಂದ ಇಲ್ಲಿಗೆ ಹೊಂದಿಕೊಳ್ಳುವಂತಹ ಉಡುಗೆ ಹತ್ತಿಬಟ್ಟೆ ಉತ್ತಮ. ಆದರೆ ಇಲ್ಲಿನ ಜನರು ಧರಿಸುತ್ತಿದ್ದಂತಹ ಬಟ್ಟೆ ವಸಾಹತುಕಾಲದ್ದು. ರೈತರು ಹಾಗೂ ಇತರರು ಸಾಮಾನ್ಯವಾಗಿ ಸೊಂಟದಿಂದ ಕೆಳಗೆ ಸಣ್ಣದಾದ ಚಲ್ಲಣ ಧರಿಸುತ್ತಾರೆ. ಇದನ್ನು ಮೊಣಕಾಲವವರೆಗೆ ಹಾಕಿಕೊಂಡಿರುತ್ತಾರೆ. ಮರಾಠರು ಇದನ್ನು ಚೆಡ್ಡಿ(Cheddi) ಎಂದೇ ಕರೆಯುತ್ತಾರೆ. ಆದರೆ ವ್ಯಾಪಾರಿವರ್ಗ ಹಾಗೂ ಇತರರು ಸೊಂಟದಿಂದ ಕೆಳಗೆ ಧೋತ್ರವೆಂಬ ಪಂಚೆ ಉಡುತ್ತಾರೆ.[೧೮೬] ಈ ಹತ್ತಿಬಟ್ಟೆಯು ನಯವಿಲ್ಲದದ್ದು. ಈ ಧೋತ್ರದ ಅಂಚು ಒಂಬತ್ತು ಇಂಚು ಉದ್ದವಾಗಿದ್ದು ಸಡಿಲವಾಗಿರುತ್ತದೆ. ಇದು ಹೆಚ್ಚಾಗಿ ಬಿಳಿಬಣ್ಣದ ಹತ್ತಿಬಟ್ಟೆ. ಕಾಲಿನ ಪಾದದವರೆಗೆ ನೆರಿಗೆಗಳು ಬಂದಿರುತ್ತವೆ. ಮೇಲ್ವರ್ಗದವರು

ಬನಿಯನ್, ಅಂಗಿ ಧರಿಸುತ್ತಾರೆ. ಸೊಂಟಕ್ಕೆ ಸುರುಳಿಸುತ್ತಿದ ಬಟ್ಟೆ ಕಟ್ಟುತ್ತಾರೆ. ಅದರ ಮೇಲೆ ಸಡಿಲವಾದ ಅಂಗಿ ಧರಿಸುತ್ತಾರೆ. ತಲೆಗೆ ಬಿಳಿಯ ಪೇಟ ಮತ್ತು ಭುಜಕ್ಕೆ ಕಂಬಳಿ ಹಾಕಿಕೊಳ್ಳುತ್ತಾರೆ.[೧೮೭] ಹತ್ತಿ ಮತ್ತು ರೇಷ್ಮೆ ಮಿಶ್ರಿತ ಬಟ್ಟೆ ಧರಿಸುತ್ತಾರೆ.

ಆದರೆ ಸ್ತ್ರೀಯರು ಸಾಮಾನ್ಯವಾಗಿ ಸೀರೆ ಹಾಗೂ ಕುಪ್ಪಸವನ್ನು ಧರಿಸುತ್ತಾರೆ. ಸಾಮಾನ್ಯವಾಗಿ ಬಿಳಿ, ನೀಲಿ, ಕೆಂಪು ಇತರೆ ಬಣ್ಣದ ಸೀರೆಗಳನ್ನು ಧರಿಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಬಗ್ಗೆ ಯಾವುದೇ ಹೆಚ್ಚಿನ ಮಾಹಿತಿ ಇಲ್ಲ ಎಂದು ಹೇಳಬಹುದು.

### ೩.೫.೬. ಮದ್ರಾಸ್ ಕರ್ನಾಟಕದ ಆಹಾರ ಪದ್ಧತಿ

ಬಳ್ಳಾರಿ ಜಿಲ್ಲೆಯಲ್ಲಿ ಜನರು ಪ್ರತಿದಿನ ಉಪಯೋಗಿಸುವ ಆಹಾರವೆಂದರೆ ಜೋಳ, ರಾಗಿ ಹಾಗೂ ಅಕ್ಕಿ ಪ್ರಮುಖವಾದದ್ದು. ದಿನಕ್ಕೆ ಮೂರು ಬಾರಿ ಆಹಾರ ತೆಗೆದುಕೊಳ್ಳುತ್ತಾರೆ. ಮಧ್ಯಾಹ್ನ ಹಾಗೂ ರಾತ್ರಿ ಹೊತ್ತು ಬಿಸಿ ಆಹಾರ ತೆಗೆದುಕೊಂಡರೆ ಮುಂಜಾನೆ ಮಾತ್ರ ತಣ್ಣನೆಯ ಆಹಾರ ಸೇವಿಸುತ್ತಾರೆಂದು ತಿಳಿದುಬರುತ್ತದೆ. ಏಕೆಂದರೆ ಇಲ್ಲಿ ರಾತ್ರಿಯ ಆಹಾರವನ್ನೇ ಬೆಳಗ್ಗೆ ಸೇವಿಸುತ್ತಿರಬಹುದು. ಆದರೆ ಇಲ್ಲಿರುವ ಬ್ರಾಹ್ಮಣರು ಮಾತ್ರ ಹೆಚ್ಚಾಗಿ ಆಹಾರವಾಗಿ ಅನ್ನವನ್ನು ಉಪಯೋಗಿಸುತ್ತಾರೆ. ಉಳಿದವರು ರಾಗಿ ಹಾಗೂ ಜೋಳವನ್ನು ಬಳಸುತ್ತಾರೆ.[೧೮೮] ಆದರೆ ದಕ್ಷಿಣ ಕೆನರಾದಲ್ಲಿ ಎಲ್ಲಾ ಜನರು ಸಹ ಹೆಚ್ಚಾಗಿ ಅನ್ನವನ್ನು ಸೇವಿಸುತ್ತಾರೆ. ಇಲ್ಲಿ ಹೆಚ್ಚಾಗಿ ಭತ್ತವನ್ನು ಬೆಳೆಯುತ್ತಾರೆ, ಆದ್ದರಿಂದ ಅನ್ನ ಸೇವಿಸುತ್ತಾರೆ. ದಕ್ಷಿಣ ಕನ್ನಡ ಹಾಗೂ ಬಳ್ಳಾರಿ ಎರಡು ಕಡೆ ಎಲ್ಲಾ ಬಗೆಯ ತರಕಾರಿಗಳು, ದ್ವಿದಳ ಧಾನ್ಯಗಳು, ಎಣ್ಣೆಕಾಳುಗಳನ್ನು ಸೇವಿಸುತ್ತಿದ್ದಾರೆ. ಭಂಟರು, ಜೈನರು, ಸಂಜೆ ಆದ ಮೇಲೆ ಊಟ ಮಾಡುವುದಿಲ್ಲ. ಸಾಮಾನ್ಯವಾಗಿ ಇಲ್ಲಿಯ ಬೆಳಗಿನ ಉಪಾಹಾರಕ್ಕೆ ಅನ್ನದ ಗಂಜಿಯು ಪ್ರಮುಖವಾದದ್ದು.[೧೮೯] ದಕ್ಷಿಣ ಕನ್ನಡದಲ್ಲಿ ಜನರು ಹೆಚ್ಚಾಗಿ ಮೀನನ್ನು ಸೇವಿಸುತ್ತಾರೆ. ಅನಂತರ ಇನ್ನುಳಿದ ಪ್ರಾಣಿಗಳು ಕುರಿ, ಮೇಕೆ, ಕೋಳಿ ಇತರೆ ಮಾಂಸಾಹಾರವನ್ನು ಸೇವಿಸುತ್ತಾರೆ. ಬಳ್ಳಾರಿಯಲ್ಲಿರುವ ಜನರು ಹೆಚ್ಚಾಗಿ ತಂಬಾಕು ಸೇವಿಸುತ್ತಿದ್ದರು. ಜೊತೆಗೆ ಅಡಿಕೆ, ಎಲೆ ಹಾಗೂ ತಂಬಾಕು ಪುಡಿ ಹಾಕಿಕೊಂಡು ತಿನ್ನುತ್ತಾರೆ ಮತ್ತು ಸೇದುತ್ತಾರೆ.[೧೯೦] ಈ ಎರಡು ಗ್ಯಾಸೆಟಿಯರ್ ಗಳಲ್ಲಿಯೂ ಸಹ ಆಹಾರದ ಕುರಿತು ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ.

### ೩.೫.೭. ಮದ್ರಾಸ್ ಕರ್ನಾಟಕದ ಸಾಮಾಜಿಕ ವ್ಯವಸ್ಥೆ

ಮದುವೆಯು ಎಲ್ಲಾ ಜಾತಿಗಳಲ್ಲೂ ಸಾಮಾನ್ಯವಾಗಿ ಒಂದೇ ರೀತಿ ನಡೆದರೂ, ಆಚರಣೆಯಲ್ಲಿ ಭಿನ್ನತೆ ಇರುವುದಾಗಿ ಕಂಡುಬರುತ್ತದೆ. ಮೊದಲ ಮದುವೆಯನ್ನು ಕೈ-ಧಾರೆ(Kai-dhare) ಎಂದು ಭಂಟರಲ್ಲಿ ಕರೆಯುತ್ತಾರೆ. ಮೊದಲ ಮದುವೆ ಆಚರಣೆ ಎಂದರೆ ವರನ ಸಂಬಂಧಿಕರು, ಸ್ನೇಹಿತರು, ಬಂಧುಗಳೆಲ್ಲರೂ ಸೇರಿ ಮದುವೆ ದಿನ ನಿಶ್ಚಯಿಸಿಕೊಂಡು ವಧುವಿನ ಮನೆಗೆ ಹೋಗುವರು. ಮೊದಲು ದೊಡ್ಡದಾಗಿ ಊಟ ಹಾಕಿಸುತ್ತಾರೆ. ಈ ಸಂದರ್ಭದಲ್ಲಿ ವಧುವಿನ ಸಂಬಂಧಿಗಳನ್ನು ಕರೆಯುತ್ತಾರೆ. ಮೊದಲು ಎರಡು ಕುಟುಂಬವರ್ಗದವರು ಎಲೆ, ಅಡಿಕೆ, ತಾಂಬೂಲವನ್ನು ಬದಲಾಯಿಸಿಕೊಳ್ಳುತ್ತಾರೆ. ಅನಂತರ ವರನು ಕ್ಷೌರ

ಮಾಡಿಸಿಕೊಂಡು ನಂತರ ಅರಿಶಿನ ಹಚ್ಚಿಸಿಕೊಂಡು ಸ್ನಾನ ಮಾಡುತ್ತಾನೆ.[೧೯೧] ಆದರೆ ಬಳ್ಳಾರಿ ಜಿಲ್ಲೆಯಲ್ಲಿ ಮೊದಲು ಹಾಲುಕಂಬ ನೆಡುತ್ತಾರೆ, ಹಾಲುಕಂಬವೆಂದರೆ ಮದುವೆ ಚಪ್ಪರದಲ್ಲಿ ಸೇರಿಗೆ ಕೋಲು, ಸೇರಿನ ಹಸಿರು ಎಲೆಗಳಿಂದ ಜೋಳ ಇತರೇ ವಸ್ತುಗಳನ್ನು ಇಟ್ಟು ಅನಂತರ ಪೂಜೆ ಮಾಡುವರು. ಅನಂತರ ವಧು-ವರರಿಗೆ ಸ್ನಾನ ಮಾಡಿಸಬೇಕಾದರೆ ನಾಲ್ಕು ಮಡಿಕೆಗಳನ್ನು ತೆಗೆದುಕೊಂಡು ಚಚ್ಚೌಕಾಕಾರಕ್ಕೆ ಬರುವಂತೆ ಇಟ್ಟು ಅದಕ್ಕೆ ದಾರವನ್ನು ಸುತ್ತುತ್ತಾರೆ. ಒಳಗಡೆ ನವವಧು-ವರರನ್ನು ಹಾಗೂ ಇವರಿಬ್ಬರ ಸಂಬಂಧಿಕ ದಂಪತಿಗಳು ಸ್ನಾನಕ್ಕೆ ಕೂರಬೇಕಾಗುತ್ತದೆ. ಈ ಸಂದರ್ಭದಲ್ಲಿ ವಧುವಿಗೆ ಹೊಸ ಸೀರೆಯನ್ನು ಕೊಡುತ್ತಾರೆ. ಈ ರೀತಿಯ ಸ್ನಾನಕ್ಕೆ 'ಸುರಿಗಿ' ಎಂದೇ ಕರೆಯುತ್ತಾರೆ. ಆಮೇಲೆ ಇವರಿಬ್ಬರಿಗೂ 'ಕಂಕಣ' ಕಟ್ಟುತ್ತಾರೆ. ಆಮೇಲೆ ವರನು ವಧುವಿನ ಕುತ್ತಿಗೆಗೆ ತಾಳಿ ಕಟ್ಟುತ್ತಾನೆ. ಕೆಲವೊಂದು ಜಾತಿಗಳಲ್ಲಿ ತಾಳಿಯನ್ನು ಪುರೋಹಿತರು, ಬಸವಿಗಳು ಅಥವಾ ಸಂಬಂಧಿಗಳು ಕಟ್ಟುತ್ತಾರೆ. ಆದರೆ ಯಾವುದೇ ಕಾರಣಕ್ಕೂ ವಿಧವೆಯು ಕಟ್ಟುವಂತಿಲ್ಲ. ಆಕೆ ಈ ಸಂದರ್ಭದಲ್ಲಿ ವೀಕ್ಷಿಸಬಹುದೇ ಹೊರತು ಯಾವುದೇ ಕಾರ್ಯ ಮಾಡುವಂತೆ ಇಲ್ಲ.[೧೯೨]

ಆದರೆ ಧಾರೆಯನ್ನು ಮಂಟಪದಲ್ಲಿ ವಧು-ವರರನ್ನು ಕುಳ್ಳಿರಿಸಿ ಅವರಿಬ್ಬರೂ ತಮ್ಮ ಬಲಗೈಯನ್ನು ಹಿಡಿದುಕೊಳ್ಳಬೇಕು. ಆಮೇಲೆ ಇವರಿಬ್ಬರನ್ನು ಕುಳ್ಳಿರಿಸಿ ಸಂಬಂಧಿಕರು ಬೆಳ್ಳಿಯ 'ಧಾರೆಗಿಂಡಿ'ಯಿಂದ (ಇದರಲ್ಲಿ ಎಳನೀರು, ಹಾಲು ಮತ್ತು ನೀರು ಇತರೇ ವಸ್ತು) ತಂದೆ-ತಾಯಿಗಳು, ಸ್ನೇಹಿತರು, ಸಂಬಂಧಿಕರು ಧಾರೆ ಎರೆಯುತ್ತಾರೆ.[೧೯೩] ಸಾಮಾನ್ಯವಾಗಿ ವಿವಾಹವನ್ನು ವಯಸ್ಕ ಹುಡುಗಿಗೆ ೫ರಿಂದ ೧೧ ವರ್ಷ, ಹುಡುಗನಿಗೆ ೧೫ರಿಂದ ೨೦ ವರ್ಷದರೊಳಗೆ ಮಾಡುವರು.[೧೯೪]

ಇಲ್ಲಿ ಎಲ್ಲಾ ಕಡೆಯು ಮರುಮದುವೆಗೆ ಅವಕಾಶವಿದೆ. ಮುಖ್ಯವಾಗಿ ಬಳ್ಳಾರಿಯಲ್ಲಿ ಮರುಮದುವೆ ಎಂದರೆ ಹೆಣ್ಣು ಅಥವಾ ಗಂಡು ತಮ್ಮ ವಿವಾಹದಿಂದ ಯಾವುದೇ ಕಾರಣದಿಂದ ಬಿಡುಗಡೆಗೊಂಡವರಿಗೆ ಮರುಮದುವೆ ಮಾಡುವುದಾಗಿದೆ. ಸೌತ್‌ಕೆನರಾದಲ್ಲಿ ಮರುಮದುವೆ 'Buda-dhare' ಎಂದೇ ಕರೆಯುತ್ತಾರೆ.[೧೯೫] ಬಳ್ಳಾರಿಯಲ್ಲಿ ಇಂತಹ ವಿವಾಹವನ್ನು 'ಉಡಿಕೆ' ಎಂದು ಕರೆಯುತ್ತಾರೆ. ಕೆಲವೊಂದು ಕಡೆ 'ಕೂಡಿಕೆ' ಎಂದೇ ಕರೆಯುತ್ತಾರೆ(ಮುಖ್ಯವಾಗಿ ಮೈಸೂರು). ಈ ವಿವಾಹವು ಸರಳವಾದದ್ದು, ಗಂಡನು ಹೆಂಡತಿ ಆಗುವವಳಿಗೆ ಹೊಸ ಸೀರೆ ಕೊಡಬೇಕು. ಇವರು ದೇವಸ್ಥಾನದಲ್ಲಿ ಸರಳವಾಗಿ ವಿವಾಹ ವಾಗುತ್ತಾರೆ. ಅನಂತರದಲ್ಲಿ ಹನುಮಂತನ ದೇವಸ್ಥಾನಕ್ಕೆ ಹೋಗಿ ಆಶೀರ್ವಾದ ಪಡೆಯುತ್ತಾರೆ. ಎಲ್ಲಾ ಜಾತಿಗಳಲ್ಲಿ ವರದಕ್ಷಿಣೆ ಪದ್ಧತಿ ಇದೆ. ಆದರೆ ಇದರ ಬಗ್ಗೆ ಗ್ಯಾಸೆಟಿಯರ್‌ನಲ್ಲಿ ಹೆಚ್ಚಿನ ಮಾಹಿತಿ ಇಲ್ಲ. ಮರುಮದುವೆ ಸಂದರ್ಭದಲ್ಲಿ ಸಾಮಾನ್ಯವಾಗಿ ಒಂದನೇ ಅರ್ಧಭಾಗದಷ್ಟು ಕೊಡಬೇಕಾಗುತ್ತದೆ.

ಒಂದೇ ಜಾತಿ ಒಳಗಡೆ ಒಂದೇ ಬೆಡಗು ಬಂದರೆ ವಿವಾಹವಾಗುವಂತೆ ಇಲ್ಲ.[೧೯೬] ಬ್ರಾಹ್ಮಣರು ಹಾಗೂ ಉನ್ನತ ವರ್ಗಗಳಿಗೆ ಮರುಮದುವೆಗೆ ಅವಕಾಶವಿಲ್ಲ. ಆಕೆಯು ಯಾವುದೇ ಆಭರಣ ಗಳನ್ನು ಧರಿಸುವಂತೆ ಇಲ್ಲ. ಅಲ್ಲದೆ ಕೆಂಪು ಅಥವಾ ಬಿಳಿ ಬಣ್ಣದ ಸೀರೆಯನ್ನು ಉಡಬೇಕು. ಸಾಮಾನ್ಯವಾಗಿ ಮೊದಲ ಮದುವೆಗಳು ೫ ದಿನವೆ ನಡೆಯುತ್ತವೆ.[೧೯೭]

### ೩.೫.೮. ಮದ್ರಾಸ್ ಕರ್ನಾಟಕದ ಧಾರ್ಮಿಕ ಆಚರಣೆಗಳು

ಹಿಂದೂಗಳಲ್ಲಿ ಹಲವು ದೇವರನ್ನು ಆರಾಧಿಸುತ್ತಾರೆ. ಹಾಗೆಯೇ ಹಲವರು ಪ್ರಕೃತಿ ಆರಾಧನೆಯನ್ನು ಮಾಡುವರು. ಪ್ರಮುಖವಾಗಿ ಮದ್ರಾಸ್ ಪ್ರಾಂತ್ಯದಲ್ಲಿ ಸಾಮಾನ್ಯವಾಗಿ ಭೂತಾರಾಧನೆ ಅಥವಾ Devil worship ಇರುತ್ತದೆ. ಭೂತಾರಾಧನೆಯನ್ನು ಮಾಡುವ ಸ್ಥಳವನ್ನು ಸಾಮಾನ್ಯವಾಗಿ 'Peycoils or devil temples' ಎಂದೇ ಕರೆಯುತ್ತಾರೆ. ಇದೊಂದು ಸಣ್ಣದಾದ ಕಟ್ಟಡವನ್ನು ಒಳಗೊಂಡಿದ್ದು, ಇದರ ಮೇಲೆ ಗೋಪುರವಿರುತ್ತದೆ. ಕೆನರಾದಲ್ಲಿ ಎಲ್ಲಾ ಹಳ್ಳಿಗಳಲ್ಲೂ ಸಾಮಾನ್ಯವಾಗಿ ಭೂತ ದೇವಾಲಯವಿರುತ್ತದೆ. ಸಾಮಾನ್ಯವಾಗಿ ಈ ದೇವಾಲಯಗಳಲ್ಲಿ ಪೂಜಾರಿಗಳಿರುತ್ತಾರೆ. ಅವರು ಬಿಲ್ಲವ ಜಾತಿಯವರು. ಸತ್ತವರ ಆತ್ಮಗಳು ಕಾಡಬಾರದೆಂಬ ಮೃತ ಆತ್ಮಗಳಿಗಾಗಿ ಹಬ್ಬವನ್ನು ಮಾಡುವುದಾಗಿದೆ. ಭೂತಗಳಲ್ಲಿ ಒಳ್ಳೆಯ ಹಾಗೂ ಕೆಟ್ಟ ಭೂತಗಳಿರುತ್ತವೆ. ಮುಖ್ಯವಾಗಿ ಕಾಡುಗಳಲ್ಲಿ ಹಾಳಾದ ಸ್ಥಳ, ಮನೆಗಳಲ್ಲಿ, ಹಳ್ಳಿಗಾಡು ಭಾಗದಲ್ಲಿ ಹೆಚ್ಚಾಗಿ ಇರುತ್ತವೆ[೧೯೮] ಎಂದು ಜನರ ನಂಬಿಕೆಯುಂಟು. ಭೂತಾರಾಧನೆಯು ಮುಖ್ಯವಾಗಿ ದಕ್ಷಿಣ ಕೆನರಾ, ಮಲಬಾರ್, ತಿನ್ನಾವಲ್ಲಿ ಮತ್ತು ತಿರುವಾಂಕೂರ್ ಈ ಸ್ಥಳಗಳಲ್ಲಿ ಬಹಳ ಹೆಚ್ಚು. ಸೌತ್ ಕೆನರಾದಲ್ಲಿ ಹೆಚ್ಚು ಎಂದು ಹೇಳಬಹುದು. ಒಟ್ಟಿನಲ್ಲಿ ಇಲ್ಲಿ ಭೂತಾರಾಧನೆ ಭೂತಕೋಲ ಪ್ರಮುಖವಾದದ್ದು. ಭಂಟರು ಭೂತಾರಾಧನೆಯನ್ನು ೪ ಪ್ರಕಾರವಾಗಿ ಮಾಡುತ್ತಾರೆ. ಕೋಲ(Kola), ಬಂದಿ(Bandi), ನೇಮ(Nema), ಮತ್ತು Agelu tambila ಎಂಬುದಾಗಿ ಮಾಡುತ್ತಾರೆ.

ಎಲ್ಲಾ ಹಳ್ಳಿಗಳಲ್ಲಿ ಸಾಮಾನ್ಯವಾಗಿ ಹಳ್ಳಿದೇವತೆಗಳನ್ನು ಪೂಜಿಸುತ್ತಾರೆ. ಸಾಮಾನ್ಯವಾಗಿ ಊರಮ್ಮ 'ಅಮ್ಮನ್' ಅಥವಾ 'ಅಮ್ಮಹ' ಎಂಬ ಈ ಗ್ರಾಮದೇವತೆಯನ್ನು ಎಲ್ಲಾ ಕಡೆಯೂ ಇದೇ ಅರ್ಥದಲ್ಲಿ ಕರೆಯುತ್ತಾರೆ. ಅಂದರೆ ತಾಯಿ, ಈ ಗ್ರಾಮದೇವತೆಗಳ ಮುಖ್ಯವಾದ ಹೆಸರುಗಳೆಂದರೆ ಪೊನ್ನಿಯಮ್ಮ ಅಥವಾ (Gold mother) ಚಿನ್ನಿಅಮ್ಮ, ಮುತ್ತ್ಯಲಮ್ಮ, ತ್ರಿಪುರಾ ಸುಂದರಮ್ಮ, ಹೊಸೂರಮ್ಮ, ಶೇಲ್ಲಮ್ಮ, ಬಳ್ಳಾರಿ ಪ್ರದೇಶದಲ್ಲಿರುವ ಯಲ್ಲಮ್ಮ, ಹೊಸೂರು, ಹೊಸಪೇಟೆ ಬಳಿ ಇರುವ ಹುಲಿಗೆಮ್ಮ ಮತ್ತು ಹುಚ್ಚುಗೆಮ್ಮನನ್ನು ಆರಾಧಿಸುತ್ತಾರೆ. ಇಂಥ ದೇವರುಗಳನ್ನು ಪೂಜಿಸುವುದರಿಂದ ಮುಖ್ಯವಾಗಿ ಕಾಲರಾ ಅಥವಾ ಇನ್ನಿತರ ಬೇರೆ ರೀತಿಯ ಮಾರಕ ರೋಗಗಳಿಂದ ದೇವಿಯು ತಮ್ಮನ್ನು ಕಾಪಾಡುವಳೆಂದು ಇಲ್ಲಿನ ಜನರು ಭಾವಿಸುತ್ತಾರೆ. ಮರಿಯಮ್ಮನನ್ನು ತಮಿಳರು ಸಿಡುಬುರೋಗದ ದೇವತೆ ಎಂದು ಕರೆಯುತ್ತಾರೆ. ಪೆದ್ದಮ್ಮನನ್ನು ಸಿಡುಬುರೋಗದ ಮಹಾದೇವತೆ ಎನ್ನುವರು. ಪೇರಿಯರಮ್ಮನನ್ನು ವನದೇವತೆ ಎಂದೇ ಕರೆಯುತ್ತಾರೆ. ಇಂಥ ದೇವರುಗಳನ್ನು ಕಪ್ಪುಕಲ್ಲಿನಿಂದ ಮರದ ಕೆತ್ತನೆಯಿಂದ ವಿಗ್ರಹಗಳನ್ನು ಮಾಡಿ ಪೂಜಿಸುತ್ತಾರೆ.[೧೯೯] ಮಾರಿಅಮ್ಮನಿಗೆ ಪ್ರಾಣಿಗಳನ್ನು ಬಲಿ ಕೊಡುವುದು ಸಾಮಾನ್ಯ. ಮುಖ್ಯವಾಗಿ ಕುರಿ, ಮೇಕೆ, ಎಮ್ಮೆಯನ್ನು ಪ್ರಾಣಿಯ ರಕ್ತದ ಬಲಿ ಕೊಡುತ್ತಾರೆ. ಅಲ್ಲದೆ ಕೋಣವನ್ನು ಉಚಿತವಾಗಿ ಈ ದೇವರ ಹೆಸರಿನಲ್ಲಿ ಬಿಟ್ಟಿರುತ್ತಾರೆ. ಅಲ್ಲದೆ ಇಲ್ಲಿ ಸರ್ಪಪೂಜೆ(ನಾಗಪೂಜೆ) ಪ್ರಮುಖವಾದದ್ದು. ಸಾಕಷ್ಟು ಸಂಖ್ಯೆಯಲ್ಲಿ ಹಾವಿನ ಚಿತ್ರವಿರುವ ಕಲ್ಲನ್ನು ಜಿಲ್ಲೆಯ ಎಲ್ಲಾ ಕಡೆ ಪ್ರತಿಷ್ಠಾಪನೆ ಮಾಡುತ್ತಾರೆ. ಪ್ರತ್ಯೇಕವಾಗಿ

ಪೂಜೆ ಮಾಡುವರು. ದಕ್ಷಿಣಕನ್ನಡದ ಜನರು ಹೆಚ್ಚಾಗಿ ಈ ದೇವರನ್ನು ಆರಾಧಿಸುತ್ತಾರೆ. ಅಲ್ಲದೆ ಇದೊಂದು ಹಾವಿನ ವಾಸಸ್ಥಳ ಅಥವಾ Ahi-kshaina ಅಥವಾ Snake land ಎಂದೇ ಕರೆಯುತ್ತಾರೆ. ಈ ದೇವರ ಪ್ರಮುಖ ದೇವಸ್ಥಾನವು ಉಪ್ಪಿನಂಗಡಿಯ ತಾಲೂಕಿನ ಸುಬ್ರಹ್ಮಣ್ಯ ದೇವಸ್ಥಾನ ಇದು ಬ್ರಾಹ್ಮಣರ ದೇವಸ್ಥಾನ.[೨೦೦] ಹಾಲು, ತುಪ್ಪ, ಮೊಟ್ಟೆ ಅಥವಾ ಹೂವುಗಳನ್ನು ನಾಗನಿಗೆ ಅರ್ಪಿಸುತ್ತಾರೆ. ಹಲವು ಸ್ಥಳಗಳಲ್ಲಿ ಈ ದೇವರ ಕುರಿತು ಪೂಜಿಸುತ್ತಾರೆ. ಈ ದೇವರಿಗಾಗಿಯೇ ದಕ್ಷಿಣಕೆನರಾದ ಸುಬ್ರಹ್ಮಣ್ಯ ದೇವರ ದೇವಸ್ಥಾನದಲ್ಲಿ ಪ್ರಧಾನವಾದ ನಾಗರ ಪೂಜಾಮಂದಿರವಿದ್ದು, ದಕ್ಷಿಣ ಭಾರತದಲ್ಲಿಯೇ ಪ್ರಮುಖವಾಗಿದೆ. ಇವರು ಸೂರ್ಯನನ್ನು ಪೂಜಿಸುತ್ತಾರೆ. ನದಿಗಳನ್ನು ಪೂಜಿಸುತ್ತಾರೆ. ಮುಖ್ಯವಾಗಿ ಗೋದಾವರಿ, ಕಾವೇರಿ, ಕೃಷ್ಣ, ತುಂಗಭದ್ರಾ ದಕ್ಷಿಣದಲ್ಲಿ ಈ ನದಿಗಳನ್ನು ಗಂಗಾದೇವಿ ಎಂದೇ ಕರೆಯುತ್ತಾರೆ. ಪ್ರಾಣಿಗಳಾದ Cow, bull ಇವುಗಳನ್ನು ಶಿವನ ವಾಹನ ನಂದಿ ಎಂದೇ ಕರೆಯುತ್ತಾರೆ. ಕೋತಿಗಳನ್ನು ಎಂದರೆ ಹನುಮಂತ ಮಂಕಿಗಳ ದೇವರೆಂದು ಪೂಜಿಸುತ್ತಾರೆ. ಅಲ್ಲದೆ ಸಾಕಷ್ಟು ಪ್ರಾಣಿಗಳು ಇತರ ದೇವರುಗಳಿಗೆ ವಾಹನಗಳೆಂದೇ ಪೂಜೆಗೊಳ್ಳುತ್ತವೆ. ಬ್ರಹ್ಮ ಅಥವಾ ವಿಷ್ಣುವಿನ ವಾಹನ ಹಂಸ ಮತ್ತು ಗರುಡ. ವರುಣನು ನೀರಿನ ದೇವರು.[೨೦೧] ಮಳೆ ಬಾರದೇ ಹೋದರೆ ಮಳೆ ದೇವರಾದ ಜೋಕುಮಾರ ದೇವರಿಗೆ ಪೂಜಿಸುತ್ತಾರೆ. ಇವನೊಬ್ಬ ಸ್ಥಳೀಯ ದೇವರು ಗೌರಿಯ(ಪಾರ್ವತಿ) ಮಕ್ಕಳಲ್ಲಿ ಒಬ್ಬನೆಂದು ಕರೆಯುತ್ತಾರೆ. ಮಾರಿಯಮ್ಮನನ್ನು ಪೂಜಿಸಿದರೆ ಸಿಡುಬು, ಕಾಲರಾ ತಡೆಗಟ್ಟುತ್ತಾಳೆ. ಆದ್ದರಿಂದ ಮಗು-ಮಕ್ಕಳಿರುವವರು ಈ ದೇವಿಗೆ ನಡೆದುಕೊಂಡರೆ ಕಾಪಾಡುವಳೆಂದು ತಿಳಿಯುತ್ತಾರೆ.[೨೦೨] ಹೀಗೆ ಆಂಗ್ಲರಿಗೆ ಈ ರೀತಿ ಪೂಜೆ-ಪುನಸ್ಕಾರಗಳು ವಿಶೇಷವಾಗಿ ಕಂಡಿರುವುದರಿಂದಾಗಿ ಇವುಗಳನ್ನು ದಾಖಲಿಸಿರುತ್ತಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಜಾತ್ರೆಗಳು, ಉತ್ಸವಗಳು ಇತರೆ ಹಬ್ಬಗಳು ವಿಶೇಷವಾದವು. ಇಲ್ಲಿ ನಡೆಯುವಂತಹ ಜಾತ್ರೆ ಇತರೆ ಹಬ್ಬಗಳನ್ನು ಕುರಿತು ಈ ಕೆಳಗಿನ ವಿವರಗಳನ್ನು ನೋಡಬಹುದು.

| ತಾಲೂಕು | ಸ್ಥಳ | ಪೂಜಿಸುವ ದೇವರುಗಳು | ದಿನಾಂಕ |
|---|---|---|---|
| ಹೊಸಪೇಟೆ | ಹಂಪಿ | ವಿರೂಪಾಕ್ಷಸ್ವಾಮಿ | ೧೫ನೇ ಏಪ್ರಿಲ್ |
| ಕೂಡ್ಲಿಗಿ | ಕೊಟ್ಟೂರು | ಬಸವೇಶ್ವರಸ್ವಾಮಿ | ೨೬ನೇ ಫೆಬ್ರವರಿ |
| ಹಡಗಲಿ | ಮೈಲಾರ | ಲಿಂಗಪ್ಪಸ್ವಾಮಿ | ೧೪-೧೬ನೇ ಫೆಬ್ರವರಿ |
| ಹರಪನಹಳ್ಳಿ | ಕುರುವತ್ತಿ | ಗೋಣಿಭದ್ರಪ್ಪಸ್ವಾಮಿ | ೧೨-೧೪ನೇ ಮಾರ್ಚ್ |
| ಆದೋನಿ | ಮಂಚಲಾ | ರಾಘವೇಂದ್ರಸ್ವಾಮಿ | ೧೪ನೇ ಆಗಸ್ಟ್ |

ಈ ಮೇಲೆ ಕಾಣಿಸಿದ ಕೋಷ್ಟಕವು ಅಂದು ಸರ್ಕಾರದ ಆದೇಶದಂತೆ ರಚಿಸಿರುವುದಾಗಿದೆ. ಹಬ್ಬಗಳ ಬಗ್ಗೆ ಜನರ ಅಭಿಪ್ರಾಯವೆಂದರೆ ಹಂಪಿ ಹಬ್ಬದಲ್ಲಿ ಜನಸಂಖ್ಯೆ ವರ್ಷದಿಂದ ವರ್ಷಕ್ಕೆ ಇಳಿಮುಖವಾಗುತ್ತಿದೆ. ಏಕೆಂದರೆ ೫೦ ವರ್ಷಗಳ ಹಿಂದೆ ೧,೦೦,೦೦೦ ಜನರು ಭಾಗವಹಿಸಿದ್ದರು. ಅದಾದ ಮೇಲೆ ೫ ವರ್ಷಗಳಲ್ಲಿ ೬೦,೦೦೦ಕ್ಕೆ ಇಳಿಯಿತು. ಇನ್ನೂ ಕಡೆ ವರ್ಷದಲ್ಲಿ ೪೦,೦೦೦ ಜನರಿದ್ದರು. ಅಲ್ಲದೆ ಈ ರೀತಿ ಜನರ

ಇಳಿಮುಖವಾಗುವುದಕ್ಕೆ ಪ್ರಮುಖ ಕಾರಣವೆಂದರೆ ಈ ಸಂದರ್ಭದಲ್ಲಿ ಪರಿಸರವು ಮಾಲಿನ್ಯವಾಗಿ ಕಾಲರಾ ಇತರೇ ಸಾಂಕ್ರಾಮಿಕ ರೋಗಗಳು ಹರಡುತ್ತಿದ್ದವು. ಅಲ್ಲದೆ ಈ ಸಂದರ್ಭದಲ್ಲಿ ಸರ್ಕಾರವು ವಾರ್ಷಿಕವಾಗಿ ೬೦೦ ರೂಪಾಯಿಯನ್ನು ಬಾವಿಗಳ ಸ್ವಚ್ಛತೆಗೆ ಹಾಗೂ ಇತರೇ ರೀತಿಯ ಸ್ವಚ್ಛತಾ ಕಾರ್ಯಕ್ರಮ ಹಣ ನೀಡುತ್ತಿತ್ತು ಎಂಬುದಾಗಿ ತಿಳಿಯುತ್ತದೆ. ಇಲ್ಲಿ ಮೈಲಾರ ಜಾತ್ರೆಯ ಸಂದರ್ಭದಲ್ಲಿ ಜಾತ್ರೆಯ ದಿನ ಸಾವಿರ ಜನರನ್ನು ಉದ್ದೇಶಿಸಿ ಒಂದೇ ವಾಕ್ಯದಲ್ಲಿ ಭವಿಷ್ಯಸೂಚಕವನ್ನು ನುಡಿಯುತ್ತದೆ. ಇದು ಮುಂದಿನ ಭವಿಷ್ಯದ ಪರಿಣಾಮವನ್ನು ಸೂಚಿಸುತ್ತದೆ. ಬಂದ ಜನರು ತುಂಗಾಭದ್ರ ನದಿಯ ಸಮೀಪ ಉತ್ತಮವಾಗಿರುವ ಸ್ಥಳದಲ್ಲಿ ಡೇರೆ ಹಾಕುತ್ತಿದ್ದರು.

೧೮೬೯ರಲ್ಲಿ ಉಚ್ಚರಿಸದ ಪದವೆಂದರೆ "There are many thunder bolts in the sky and the words were greeted with murmur of jay as..." ಆಕಾಶದಿಂದ ಹಲವಾರು ಸಿಡಿಲುಗಳು ಬೀಳುತ್ತವೆ ಇದನ್ನು ಸ್ವಾಗತಿಸುವುದು, ಆಮೇಲೆ ಆನಂದ, ಅಸ್ಪಷ್ಟ ನುಡಿ ಕೇಳಿಸಿತ್ತು. ಈ ವಾಕ್ಯದ ಅರ್ಥವನ್ನು ಬುದ್ಧಿವಂತರಿಂದ ತಿಳಿದುಕೊಳ್ಳುತ್ತಾರೆ. ಅವರ ಹೇಳಿಕೆಯು ದೇವರ ಹೇಳಿಕೆಯಾಗಿರುವುದು. ಆ ವಾಕ್ಯದ ಮೇಲೆ ಆ ವರ್ಷವು ಅವಲಂಬನೆಯಾಗಿರುತ್ತದೆ ಎಂದು ನಂಬಲಾಗುತ್ತದೆ. ಈ ರೀತಿ ಹಬ್ಬ, ಜಾತ್ರೆ ಹೇಳಿಕೆಗಳೆಲ್ಲವೂ ಸಹ ಬಳ್ಳಾರಿ ಜಿಲ್ಲೆಯಲ್ಲಿ ಅಂದಿನಿಂದ, ಇಂದಿಗೂ ಸಹ ಮುಂದುವರೆದಿರುವುದು ಅಷ್ಟೇ ಸತ್ಯವಾಗಿದೆ.[೨೦೩] ಸಾಮಾನ್ಯವಾಗಿ ದೇವರ ವಿಗ್ರಹಗಳೆಂದರೆ ಕಬ್ಬಿಣ, ಕಂಚು, ಚಿನ್ನ, ಬೆಳ್ಳಿ, ಕಲ್ಲು, ಮೆಟಲ್ ಇತರೇ ವಸ್ತುಗಳಿಂದ ಮಾಡಿದ ವಿಗ್ರಹ ಹಾಗೂ ಫೋಟೋಗಳನ್ನು ಮನೆಯಲ್ಲಿ ಪೂಜಿಸುವುದು ಸಾಮಾನ್ಯ. ಬ್ರಾಹ್ಮಣರು ಪೂಜಿಸುವ ಸಂದರ್ಭದಲ್ಲಿ ಮಂತ್ರದ ಪ್ರಾರ್ಥನೆ ಮಾಡುವರು. ಅದು ಹಳೆಯದಾದ ಗಾಯತ್ರಿ ಮಂತ್ರ ಹೇಳುವರು. ಈಗಲೂ ಸಹ ಅದನ್ನು ಉಚ್ಚರಿಸುವರು.

ಸಾಮಾನ್ಯವಾಗಿ ಮನೆಯಲ್ಲಿರುವ ಫೋಟೋ ಅಥವಾ ವಿಗ್ರಹಗಳೆಂದರೆ: ಕೃಷ್ಣ, ಹನುಮಾನ್, ರಾಮ, ಸೀತಾರಾಮರು ಮತ್ತು ವಿಷ್ಣುವನ್ನು ಪ್ರಮುಖವಾಗಿ ಇಲ್ಲಿ ನಡೆದುಕೊಳ್ಳುವರು. ಮುಸಲ್ಮಾನರು ಒಂದೇ ದೇವರನ್ನು ದಕ್ಷಿಣಭಾರತದಲ್ಲಿ ಪೂಜಿಸುತ್ತಾರೆ. ಇಸ್ಲಾಂ ಮತದ ಪೀರ್ ಅಥವಾ ಸಂತನನ್ನು ಪೂಜಿಸುವರು. ಕ್ರಿಶ್ಚಿಯನ್ನರು ಏಸುವನ್ನು ಪೂಜಿಸುವುದು ಸಾಮಾನ್ಯ.[೨೦೪]

**೩.೫.೯. ಮದ್ರಾಸ್ ಕರ್ನಾಟಕದ ಶವಸಂಸ್ಕಾರ ಪದ್ಧತಿ**

ಬಳ್ಳಾರಿ ಮತ್ತು ದಕ್ಷಿಣಕೆನರಾದಲ್ಲಿ ಹಾಗೂ ಎಲ್ಲಾ ಕಡೆಯೂ ಶವಸಂಸ್ಕಾರ ಪದ್ಧತಿಯನ್ನು ಎರಡು ರೀತಿಯಲ್ಲಿ ಅನುಸರಿಸುತ್ತಾರೆ; ಒಂದು ಸುಡುವುದು, ಮತ್ತೊಂದು ಹೂಳುವುದು. ಹೆಚ್ಚಾಗಿ ಉನ್ನತವರ್ಗದವರು ಸುಡುತ್ತಾರೆ. ಇದನ್ನು 'ಕರ್ಮವರತಮ್' ಅಥವಾ Carmantantaram ಎಂದು ಕರೆಯುತ್ತಾರೆ. ಮುಖ್ಯವಾಗಿ ತಿಥಿ ಆಚರಣೆಯನ್ನು ಸಾಮಾನ್ಯವಾಗಿ ವೈಷ್ಣವರು ೧೬ ದಿನಗಳಿಗೆ, ವೈಶ್ಯರು, ೧೫ ದಿನಗಳಿಗೆ ಕ್ಷತ್ರಿಯರು, ೧೪ ದಿನಗಳಿಗೆ ಬ್ರಾಹ್ಮಣರು ೧೨ ದಿನಗಳಿಗೆ ಆಚರಿಸುತ್ತಾರೆ.[೨೦೫] ಹೀಗೆ ಎಲ್ಲಾ ಕಡೆಯೂ ಪದ್ಧತಿ ಒಂದೇ ಆದರೆ ಆಚರಣೆಯಲ್ಲಿ ಭಿನ್ನತೆಯನ್ನು ಗುರುತಿಸಬಹುದಾಗಿದೆ.

**೩.೬. ಕೊಡಗು(ಪ್ರತ್ಯೇಕ ಘಟಕ)**

'ಕೊಡಗು' ಎನ್ನುವ ಪ್ರಾಂತ್ಯವು ಬ್ರಿಟಿಷರ ಮೂಸೆಯಿಂದ ಕೂರ್ಗ್ ಎಂದು ಕರೆಸಿಕೊಂಡಿದೆ. ಈ ನಾಡು ಒಂದು ಅತ್ಯಂತ ರಮಣೀಯವಾದ ಭೂ ಪರಿಸರವನ್ನು ಹೊಂದಿದೆ. ಬೇರೆ ಬೇರೆ ಕಾಲಘಟ್ಟದಲ್ಲಿ ಕೊಡಗು ಬೇರೆ ಬೇರೆ ರೀತಿಯ ಭೌಗೋಳಿಕ ಅಸ್ತಿತ್ವವನ್ನು ಹಾಗೂ ರಾಜಕೀಯ ಹಿನ್ನೆಲೆಯನ್ನು ಹೊಂದಿತ್ತು. ಪ್ರಾಚೀನ ಕಾಲದಿಂದ ಬ್ರಿಟಿಷರವರೆಗೆ ಕೊಡಗಿನ ಬೇರೆ ಬೇರೆ ಭೂಭಾಗಗಳು ಗಂಗರು, ಚೋಳರು, ಕದಂಬರು, ಹೊಯ್ಸಳರು, ಚಾಲುಕ್ಯರು ಹಾಗೂ ವಿಜಯನಗರ ಅರಸರ ಸಾಮಂತ ಮಹಾಶಯರ ಆಳ್ವಿಕೆಗೆ ಒಳಪಟ್ಟಿತ್ತು. ಕೆಂಗಾಳ್ವ ಮತ್ತು ಚೆಂಗಾಳ್ವರು ಕೊಡಗನ್ನು ಆಳಿದರು. ಇವರ ಕಾಲದಲ್ಲಿ ಈಗಿನ ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ಕೊಡಗಿನ ಭೂಪಟದಲ್ಲಿತ್ತು. ಲಿಂಗಾಯಿತ ಅರಸರ ಕಾಲದಲ್ಲಿ ಕೊಡಗು ಭೂಪ್ರದೇಶಕ್ಕೆ ಏಳು ಸಾವಿರ ಸೀಮೆ ಪ್ರದೇಶಗಳು(ಈಗಿನ ಸೋಮವಾರಪೇಟೆ ತಾಲೂಕು) ಸೇರಿತು. ೧೮ನೇ ಶತಮಾನದ ಅಂತ್ಯದಲ್ಲಿ ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಕೂಡ ಕೊಡಗನ್ನು ಆಳಿದರು. ಇದಾದ ಮೇಲೂ ಕೆಲವು ವರ್ಷಗಳು ಚಿಕ್ಕವೀರಪ್ಪ ಮತ್ತು ಮುದ್ದುರಾಜರು ಈ ಭಾಗವನ್ನು ಆಳಿದರು. ಅನಂತರ ಇವರನ್ನು ಮೂಲೆ ಗುಂಪಾಗಿಸಿದ್ದ ಬ್ರಿಟಿಷರು ಕ್ರಿ.ಶ. ೧೮೩೪ರಲ್ಲಿ ತಮ್ಮ ನೇರ ಅಧೀನಕ್ಕೆ ತೆಗೆದುಕೊಂಡರು.[೨೦೬] ಕೊಡಗು ಹಲವು ಸಂಸ್ಕೃತಿಗಳ ಬೀಡು. ಇಲ್ಲಿನ ಪ್ರಶಾಂತ ವಾತಾವರಣವು ಪಾಶ್ಚಾತ್ಯರನ್ನು ಆಕರ್ಷಿಸದೇ ಇರಲಿಲ್ಲ. ಹೀಗಾಗಿ ಹಲವಾರು ಪಾಶ್ಚಾತ್ಯ ವಿದ್ವಾಂಸರು, ಕ್ರೈಸ್ತ ಪಾದ್ರಿಗಳು ಹಾಗೂ ಬ್ರಿಟಿಷ್ ಅಧಿಕಾರಿಗಳು ಬಂದರು. ತಮ್ಮದೇ ಆದ ರೀತಿಯಲ್ಲಿ ಈ ಪ್ರಾಂತ್ಯದ ಕೃತಿಗಳನ್ನು ಕುರಿತ ರಚಿಸಿದರು. ಕೂರ್ಗ್ ಬಗ್ಗೆ ತಿಳಿಯಬೇಕಾದರೆ ವಸಾಹತುಶಾಹಿಯ ಕೃತಿಗಳಿಂದ ಮಾತ್ರ ತಿಳಿಯಲು ಸಾಧ್ಯವಾಗುತ್ತದೆ. ಏಕೆಂದರೆ ೧೮೩೪ರಲ್ಲಿ ಬ್ರಿಟಿಷರ ನೇರ ಆಳ್ವಿಕೆಗೆ ಒಳಪಟ್ಟ ಈ ಪ್ರಾಂತ್ಯವು ಬ್ರಿಟಿಷರಿಂದ ೧೯೪೭ರವರೆಗೆ ಆಳಲ್ಪಟ್ಟಿತ್ತು. ಈ ಪ್ರದೇಶವು ರಾಜ್ಯದೊಳಗೆ ಸೇರದೆ ತನ್ನ ಪ್ರತ್ಯೇಕವಾದ ಅಸ್ತಿತ್ವವನ್ನು ಉಳಿಸಿಕೊಂಡಿತ್ತು.[೨೦೭]

ಕೊಡಗು ತನ್ನದೇ ಆದ ಪ್ರಮುಖವಾದ ಚರಿತ್ರೆಯನ್ನು ಹೊಂದಿದೆ. ವಸಾಹತು ಕಾಲಘಟ್ಟದ ಚರಿತ್ರೆಯನ್ನು ಬಹುಮುಖ್ಯವಾಗಿ ನಿರ್ಧರಿಸಬೇಕಾದರೆ ಅಂದಿನ ಸಮಕಾಲೀನ ಬ್ರಿಟಿಷ್ ಆಡಳಿತದಲ್ಲಿ ಪ್ರಕಟಿಸಲಾದ ಕೃತಿಗಳಿಂದ ಮಾತ್ರ ಸಾಧ್ಯವಾಗುತ್ತದೆ.

ಪ್ರಮುಖವಾಗಿ ಕೊಡಗಿಗೆ ಸಂಬಂಧಿಸಿದಂತೆ ಗ್ಯಾಸೆಟಿಯರ್‌ಗಳನ್ನು ನೋಡಬೇಕಾಗುತ್ತದೆ ಅವುಗಳೆಂದರೆ ಮೊಟ್ಟಮೊದಲನೆಯದಾಗಿ ೧೮೭೦ರಲ್ಲಿ ರಿಕ್ಟರನು ಬರೆದ ಗ್ಯಾಸೆಟಿಯರ್ ಆಫ್‌ಕೂರ್ಗ್, ೧೮೭೮ರಲ್ಲಿ ಲೀವಿಸ್ ರೈಸರು ಬರೆದ ಕೂರ್ಗ್ ಗ್ಯಾಸೆಟಿಯರ್(ಮೈಸೂರು ಆ್ಯಂಡ್ ಕೂರ್ಗ್, ಮೂರನೇ ಸಂಪುಟ). ೧೮೫೫ರಲ್ಲಿ ಮೋಗ್ಲಿಂಗ್‌ನು ಬರೆದ ಕೂರ್ಗ್ ಮೆಮೋರಿಸ್, ೧೮೮೫ರಲ್ಲಿ ಹಂಟರನು ಸಂಪಾದಿಸಿ ಪ್ರಕಟಿಸಿದ ಇಂಪೀರಿಯಲ್ ಗ್ಯಾಸೆಟಿಯರ್, ೧೮೯೨ರಲ್ಲಿ ಬೇಡೆನ್ ಪೊವೆಲ್ ಬರೆದ ದಿ ಲ್ಯಾಂಡ್ ಸಿಸ್ಟಮ್ಸ್ ಆದ ಬ್ರಿಟಿಷ್ ಇಂಡಿಯಾ ೧೯ನೇ ಶತಮಾನದ ಕೊಡಗಿನ ಇತಿಹಾಸದ ಬಗ್ಗೆ ಬೆಳಕು ಚೆಲ್ಲುತ್ತವೆ. ವೀರರಾಜೇಂದ್ರ ಒಡೆಯರ್‌ನ (೧೭೮೦-೧೮೦೯) 'ರಾಜೇಂದ್ರನಾಮೆ' ೧೮೧೧ರಲ್ಲಿ ಲಿಂಗರಾಜೇಂದ್ರ ಒಡೆಯನು ಹೊರಡಿಸಿದ

'ಹುಕುಂನಾಮಗಳು' ನಮಗೆ ೧೮ನೆಯ ಶತಮಾನದ ಉತ್ತರಾರ್ಧದ ಮತ್ತು ೧೯ನೇಯ ಶತಮಾನದ ಪೂರ್ವಾರ್ಧದ ದಶಕಗಳಲ್ಲಿನ ರಾಜಕೀಯ ಮತ್ತು ಸಾಮಾಜಿಕ ಅಂಶಗಳನ್ನು ವಿವರಿಸುತ್ತವೆ. ಈ ಗ್ರಂಥಗಳಿಂದ ಅಂದಿನ ಕೊಡಗಿನ ಬಗ್ಗೆ ಸಂಪೂರ್ಣ ಮಾಹಿತಿಯನ್ನು ತಿಳಿಯಬಹುದಾಗಿದೆ.

ಕೊಡಗು ಪರ್ವತಗಳಿಂದ ಕೂಡಿದ ರಮಣೀಯವಾದ ದೇಶ. ಇದು ದಕ್ಷಿಣ ಹಿಂದೂಸ್ತಾನದಲ್ಲಿ ಪಶ್ಚಿಮಘಟ್ಟಗಳ ಮೇಲೆ ಪೂರ್ವ ದಿಕ್ಕಿಗೆ ವಿಸ್ತರಿಸಿಕೊಂಡಿದೆ. ಕೊಡಗು ಅಂದರೆ ಕೋಡುಗಲ್ಲುಗಳುಳ್ಳದ್ದು. ಪ್ರಸಿದ್ಧ ಘಟ್ಟ ಕಾವೇರಿ ನದಿಯು ಈ ದೇಶದಲ್ಲಿ ಹುಟ್ಟಿ ಸ್ವಲ್ಪ ದೂರದವರೆಗೆ ಹರಿದು ಮುಂದಕ್ಕೆ ಹೋಗುತ್ತದೆ. ಇದಕ್ಕೂ ಪಶ್ಚಿಮಕ್ಕೆ ೩೦ ಮೈಲಿಗಳ ದಕ್ಷಿಣಕ್ಕೆ ವೈನಾಡು, ಪೂರ್ವಕ್ಕೂ, ಉತ್ತರಕ್ಕೂ ಮೈಸೂರು ಮೇರೆಗಳಾಗಿವೆ. ದಕ್ಷಿಣೋತ್ತರ ೬೦ ಮೈಲಿಗಳ ಉದ್ದಕ್ಕೂ ಪೂರ್ವ-ಪಶ್ಚಿಮ ೪೦ ಮೈಲಿಗಳ ಅಗಲವೂ ಉಳ್ಳದ್ದಾಗಿ ಸುಮಾರು ೧,೫೮೦ ಚದರ ಮೈಲಿಗಳ ವಿಸ್ತೀರ್ಣವುಳ್ಳದ್ದಾಗಿದೆ. ಗದ್ದೆ, ಹೊಲ, ಕಾಫಿ ತೋಟಗಳಲ್ಲದೆ ಪ್ರಾಯಶಃ ದೇಶವೆಲ್ಲಾ ಗಿಡಸೀಮೆಯಾಗಿದೆ.[೨೦೮] ಇಂಥ ಪ್ರದೇಶದಲ್ಲಿ ವಾಸಿಸುವ ಜನರನ್ನು ಕೊಡವರು ಎಂದು ಕರೆಯುತ್ತಾರೆ. ಕೊಡವರು ಸಹಜವಾಗಿ ಕಷ್ಟಸಹಿಷ್ಣುಗಳಾಗಿದ್ದಾರೆ. ಅವರು ಉತ್ತಮ ದೇಹದಾರ್ಢ್ಯವನ್ನು ಹೊಂದಿದ್ದಾರೆ. ಈ ದೇಶದ ಮೂಲನಿವಾಸಿಗಳೆಂದು ಹೇಳಿಕೊಳ್ಳುತ್ತಾರೆ. ಆಕಾರ, ನಡೆ-ನುಡಿಗಳಲ್ಲಿ ಇವರಿಗೂ ಮಲಯಾಳ ಕನ್ನಡ ಮೈಸೂರು ಸೀಮೆಗಳ ಜನರಿಗೂ ಹೆಚ್ಚು-ಕಡಿಮೆ ಒಂದೇ ಹೋಲಿಕೆ ಇದೆ. ಕೊಡಗಿನವರು ೬ ಫೀಟ್ ಎತ್ತರವಾಗಿದ್ದಾರೆ. ಉತ್ತಮ ದೇಹದಾರ್ಢ್ಯ ಹೊಂದಿದ್ದು, ಉತ್ತಮ ಬಣ್ಣ, ಜೊತೆಗೆ ಸುಂದರವಾಗಿರುತ್ತಾರೆ ಎಂಬ ಮಾತು ವಿದೇಶಿಯರ ಹೇಳಿಕೆಯಾಗಿದೆ.[೨೦೯] ದಕ್ಷಿಣ ಭಾರತದಲ್ಲಿರುವ ಪ್ರಮುಖ ಹಿಂದೂ ಜನಾಂಗಗಳಲ್ಲಿ ಕೊಡವ ಜನಾಂಗವು ಒಂದು. ಈ ಪಂಗಡವು ಅಧಿಕವಾಗಿ ಕೊಡಗು ಜಿಲ್ಲೆಯಲ್ಲಿ ಕಾಣಬರುತ್ತವೆ. ಈ ಪಂಗಡ ಕ್ಷಾತ್ರ ವೃತ್ತಿಗೆ ಪ್ರಸಿದ್ಧವಾಗಿದೆ. ಈ ಒಂದು ಸಣ್ಣ ಪಂಗಡ ಅತ್ಯಧಿಕ ಸಂಖ್ಯೆಯ ಯೋಧರನ್ನು ಭಾರತದ ಸೇನೆಗೆ ಕೊಟ್ಟಿದೆ. ಸಾಮಾನ್ಯವಾಗಿ ಪ್ರತಿಯೊಂದು ಕೊಡವ ಸಂಸಾರದಲ್ಲೂ ಸೈನ್ಯಕ್ಕೆ ಸೇರಿದವರೇ ಇರುತ್ತಾರೆ. ಇವರ ಜೀವನಕ್ರಮದಲ್ಲೇ ಕ್ಷಾತ್ರವು ಹಾಸುಹೊಕ್ಕಾಗಿ ಸೇರಿವೆ. ಈ ಪಂಗಡದವರಿಗೆ ತಮ್ಮದೇ ಆದ ವೈಶಿಷ್ಟ್ಯವಿದೆ. ಅವರ ವೇಷ-ಭೂಷಣಗಳಲ್ಲಿ, ಆಚಾರ-ವಿಚಾರಗಳಲ್ಲಿ ಕೆಲವು ಗಣನೀಯವಾದ ವಿಶೇಷತೆಗಳಿವೆ. ಕೊಡವರ ವೈಶಿಷ್ಟ್ಯವನ್ನು ನೋಡಿ ಕೆಲವರು ಶರೀರರಚನೆಯ ದೃಷ್ಟಿಯಿಂದ, ಕೆಲವರು ಸಾಂಸ್ಕೃತಿಕ ದೃಷ್ಟಿಯಿಂದ, ಕೆಲವರು ಚಾರಿತ್ರಿಕ ದೃಷ್ಟಿಯಿಂದ ಮತ್ತೆ ಕೆಲವರು ಸಾಮಾಜಿಕ, ಸಾಂಸ್ಕೃತಿಕ ದೃಷ್ಟಿಯಿಂದ ಕೊಡವರ ಮೂಲವನ್ನು ಹುಡುಕಲು ಪ್ರಯತ್ನಿಸಿದ್ದಾರೆ. ಕೆಲವರು ಅವರನ್ನು ಆರ್ಯರೆಂದರು, ಕೆಲವರು ದ್ರಾವಿಡರೆಂದರು, ಕೆಲವರು ಇಂಡೋಸಭಿಯನ್ನರೆಂದರು. ಕೆಲವರು ಅರಬ್ಬಿಯನ್ನರೆಂದು, ಕೆಲವರು ಕದಂಬರೆಂದರೆ, ಇವರು ಕುರ್ದಿಸ್ತಾನದ, ಕುರ್ದಿಗಳೆಂದು ಮತ್ತೊಂದು ಅಭಿಪ್ರಾಯ.

ದಕ್ಷಿಣ ದೇಶದ ಇತರ ಜನಾಂಗಗಳಿಗಿಂತ ಭಿನ್ನವಾದ ಇವರ ಶರೀರ ರಚನೆಯು ಇವರು ಉತ್ತರಭಾರತದ ಜನಾಂಗವೆಂಬುದನ್ನು ಸೂಚಿಸಿದರೆ ಇವರ ವೇಷಭೂಷಣಗಳು ಮತ್ತೊಂದು ಸಿದ್ಧಾಂತಕ್ಕೆ ಎಡೆಮಾಡಿ ಕೊಡುತ್ತವೆ.[೨೧೦]

ಇವರು ಕೊಡಗಿಗೆ ಎಲ್ಲಿಂದ ಬಂದು ನೆಲೆಸಿದರು ಎಂಬುದಕ್ಕೆ ಯಾವ ಲಿಖಿತ ಆಧಾರವು ಇಲ್ಲ. ಇವರಿಗೆ 'ಕೊಡಗು' ಎಂಬ ಹೆಸರು ಬಂದಿದ್ದು, ಇವರು ಇಲ್ಲಿಗೆ ಬಂದು ನೆಲೆಸಿದ ಮೇಲೆಯೇ ಎಂದು ಹೇಳಲಾಗುತ್ತದೆ. ಇವರು ದೊಡ್ಡ ಸಂಖ್ಯೆಯಲ್ಲಿಯೇ ಬಂದು ನೆಲೆಸಿದರು. ಇವರು ಇಲ್ಲಿ ಬಂದು ನೆಲೆಸಿದಾಗ ಈ ಪ್ರದೇಶಕ್ಕೆ ಇದು ಬೆಟ್ಟಸೀಮೆಯಾಗಿದ್ದುದರಿಂದ 'ಕೊಡಿಮಲೈನಾಡು' ಎಂದು ಹೆಸರಿತ್ತು. ಇವರು ತಾವು ನೆಲೆಸಿದಲ್ಲಿ ಹೆಚ್ಚಿನ ಸಂಖ್ಯೆಯವರಾಗಿದ್ದು, ತಮ್ಮ ಧೀರತನದಿಂದಲೂ, ಬುದ್ಧಿವಂತಿಕೆಯಿಂದಲೂ ಅಲ್ಲಿ ತಮ್ಮ ವರ್ಚಸ್ಸನ್ನು ಇತರರ ಮೇಲೆ ಬೀರಲು ಶಕ್ತರಾದುದರಿಂದ ಇವರನ್ನು ಕೊಡಗರು ಎಂದು ಉಳಿದವರು ನೆರೆ ಪ್ರದೇಶದವರೆಂದು ಕರೆದರು ಎಂದು ಹೇಳಬಹುದು.[೨೧೧] ಲೂಯಿಸ್‌ರೈಸ್ ಕೊಡಗು ಗೆಜೆಟಿಯರ್ ಪುಸ್ತಕದ ಪ್ರಕಾರ "The coorgs are the souther most extension a scytho draidian type which prevails throughout the wast of India" ಎಂದು ಬರೆಯುತ್ತಾರೆ. ನಾನು ಇಷ್ಟರವರೆಗೆ ಉದಾಹರಿಸಿರುವ ಮಾನವಕುಲದ ಶಾಸ್ತ್ರಜ್ಞರ ಅಭಿಪ್ರಾಯಗಳಿಂದ ಕೊಡವರು ಅಥವಾ ಕೊಡಗರು ಹಿಂದುಸ್ತಾನದ ವಾಯುವ್ಯ ಭಾಗಕ್ಕಾಗಿ ಹಿಂದುಸ್ಥಾನವನ್ನು ಒಳನುಗ್ಗಿ ಬಂದ ಸಿಥಿಯನ್ನರು ಅಥವಾ ಶಕರು ಹಿಂದೂಸ್ತಾನದ ಉತ್ತರ ಭಾಗದಲ್ಲಿ ಆಗಿದ್ದ ಜನರೊಡನೆ ಬೆರೆತು ಅನಂತರ ಪಶ್ಚಿಮ ಕರಾವಳಿಗಾಗಿ ದಕ್ಷಿಣಕ್ಕೆ ಬಂದ ಅನೇಕ ಗುಂಪುಗಳ ಜನರಲ್ಲಿ ಒಂದು ಗುಂಪಿನ ಜನರು ಎಂದು ತಿಳಿಯುತ್ತದೆ.[೨೧೨]

**೩.೬.೧. ಕೊಡಗಿನ ಜನಸಂಖ್ಯೆ ಮತ್ತು ಜಾತಿ ವ್ಯವಸ್ಥೆ**

ಕೊಡಗಿನಲ್ಲಿ ಎಲ್ಲೆಲ್ಲಿಯೂ ಕಾಡು ಇದ್ದುದರಿಂದ ಜನರ ಸಂಖ್ಯೆಯು ಹೆಚ್ಚಾಗಿರಲಿಲ್ಲ ಮತ್ತು ಟಿಪ್ಪು ಕೊಡಗರನ್ನು ಬಲವಂತ ಮಾಡಿ ಮೈಸೂರು ದೇಶದ ಅನೇಕ ಊರುಗಳಿಗೆ ಹಿಡಿದಿಟ್ಟುಕೊಂಡು ಹೋದುದ್ದರಿಂದ ಜನರ ಸಂಖ್ಯೆಯು ಕಡಿಮೆಯಾಗುವುದಕ್ಕೆ ಕಾರಣವಾಯಿತು. ಕೊಡಗಿನ ಆಗ್ನೇಯ ಭಾಗದಲ್ಲಿ ಪಾಳುಬಿದ್ದ ಅನೇಕ ಗ್ರಾಮಗಳುಂಟು. ಕೊಡಗು ರಾಜರ ಆಳ್ವಿಕೆಯು ಕ್ರೂರತರದಾದ್ದರಿಂದ ಜನಸಂಖ್ಯೆ ಹೆಚ್ಚಲಿಲ್ಲ ಎನ್ನಲಾಗುತ್ತದೆ.

ಸನ್ ೧೮೪೦ನೆಯ ಇಸವಿಯಲ್ಲಿ ಕೊಡಗಿನಲ್ಲಿ ೮೦,೦೦೦ ಜನರಿದ್ದರು. ಇವರಲ್ಲಿ ೧೬,೦೦೦ ಕೊಡಗರು. ೧೮೩೪ರಲ್ಲಿ ಇಂಗ್ಲಿಷರು ಕೊಡಗು ದೇಶವನ್ನು ಹಿಡಿದ ಮೇಲೆ ಜನಸಂಖ್ಯೆ ಹೆಚ್ಚುತ್ತಾ ಬಂತು. ಸನ್ ೧೮೫೪ನೇ ಖಾನೇಸುಮಾರಿ ಪ್ರಕಾರ ೧. ೨೫,೦೦೦ ಜನರಿದ್ದರು. ಇವರಲ್ಲಿ ೨೫,೦೦೦ ಕೊಡಗರು.[೨೧೩] ರಿಕ್ಟರ್ ಪ್ರಕಾರ ೧೮೬೯-೭೦ರಲ್ಲಿ ೧೧೨.೯೫೬ ಇತ್ತು. ಇದರಲ್ಲಿ ೨೪.೫೮೫ ಕೂರ್ಗ್‌ರವರು, ೮೦.೯೩೪ ಹಿಂದೂಗಳು, ೫.೭೭೪ ಮುಸಲ್ಮಾನರು, ೧.೬೫೯ ಕ್ರಿಶ್ಚಿಯನ್ನರ ಜನಸಂಖ್ಯೆ ಇತ್ತು.[೨೧೪]

೧೮೭೧ರ ಪ್ರಕಾರ ಒಟ್ಟು ಕೊಡಗಿನ ಜನಸಂಖ್ಯೆ ೧.೬೮.೩೧೨ ಇತ್ತು. ಇವರಲ್ಲಿ ೨೬,೩೮೯ ಕೂರ್ಗ್‌ರವರು.

೧,೨೮,೦೮೫ - ಮಂದಿ ಇತರ ಹಿಂದುಗಳು

೧೧೨ - ಜೈನರು

| | | |
|---|---|---|
| ೧೧,೩೦೪ | - | ಮುಸಲ್ಮಾನರು |
| ೨,೪೧೦ | - | ಕ್ರಿಶ್ಚಿಯನ್ನರು |
| ೧೦ | - | ಪಾರ್ಸಿಗಳು |
| ೭ | - | ಚೀನಿಯರು |

ಒಟ್ಟು ೧,೬೮,೩೧೨ ಜನರಲ್ಲಿ ಗಂಡಸರು ೯೪,೪೫೪, ಹೆಂಗಸರು ೭೩,೮೫೮ ಮಂದಿ ಇದ್ದರು. ಇದನ್ನು ತಾಲೂಕುವಾರು ವಿಂಗಡಿಸಿದ್ದಾರೆ.

| | | |
|---|---|---|
| ಮಡಿಕೇರಿ ತಾಲೂಕಿನಲ್ಲಿ | - | ೩೨,೧೩೨ |
| ಪಾಡಿನಾಲ್ಕುನಾಡು | - | ೩೨,೩೫೦ |
| ಎಡೆನಾಲ್ಕುನಾಡು | - | ೩೧,೧೦೪ |
| ಕಿಗ್ಗಟ್ಟುನಾಡು | - | ೨೭,೭೩೮ |
| ನಂಜರಾಯಿಪಟ್ಟಣ | - | ೨೬,೧೫೯ |
| ಏಳು ಸಾವಿರ ಸೀಮೆನಾಡು | - | ೧೮,೮೨೯[೨೧೫] |

೧೮೭೧ರ ಜನಗಣತಿಯಲ್ಲಿ ೧,೬೮,೩೧೨ ಜನ ಕೊಡಗಿನವರನ್ನು, ೨೬,೩೮೯ ಜನ ಕೊಡಗರನ್ನು ಬಿಟ್ಟರೆ ಇತರೇ ಹಿಂದೂಗಳೆಂದರೆ: ಬ್ರಾಹ್ಮಣರು(೩,೨೭೦), ಕ್ಷತ್ರಿಯರು(೨೮೦೦), ವೈಶ್ಯರು(೨೯೭), ಶೂದ್ರರು (೫೫,೩೪೩), ಕೂರ್ಗ್‌ಗಳು(೨೬,೩೮೯), ಜೈನರು(೧೧೦), ಲಿಂಗವಂತರು(೯೮೩೫), ಅಲೆದಾಡುವ (Wandering Triber) ಬುಡಕಟ್ಟುಗಳು ೧.೩೮೪, ಕಾಡುಬುಡಕಟ್ಟುಗಳು(Wild Tribes) ೧೪,೭೮೩, ಇತರೇ ಜಾತಿಯವರು ೪೦,೪೧೫ ಜನರಿದ್ದರು.

ರಿಕ್ಟರ್ ಅವರ ಪ್ರಕಾರ ಕೊಡಗು ಪ್ರಾಂತ್ಯದಲ್ಲಿ ಮೂರನೇ ಒಂದು ಭಾಗದಷ್ಟು ಕೊಡಗರು ಮತ್ತು ಹೊಲೆಯರಾಗಿದ್ದಾರೆ ಎಂದಿದ್ದಾರೆ.[೨೧೬] ಕೊಡಗಿನಲ್ಲಿ 'ಕೊಡವ'ರನ್ನು ಬಿಟ್ಟರೆ ಶೂದ್ರರು ಅತೀ ಹೆಚ್ಚಿನ ಸಂಖ್ಯೆಯಲ್ಲಿದ್ದರು. ಪ್ರಮುಖವಾಗಿ ಅಗಸರು(೧೮೪೦), ಬೆಸ್ತರು(೧,೮೨೯), ಬೇಡರು ಅಥವಾ ನಾಯಕರು (೫೦೪), ಬಣಜಿಗರು(೨,೭೯೨), ಕುಂಬಾರ(೧,೩೭೬), ಕುರುಬ (೭,೯೮೭), ಮೋಡಿ ಅಥವಾ(Tingar) (೧೩), Modali ಮತ್ತು Pille(೮೮೭), Nyiga(೩,೫೫೨), Natva ೩೬, Pallior Tiglur(೧೦೪), Sadur (೭), ಉಪ್ಪಾರರು(೪೭೫), ವಡ್ಡರು(೧,೨೯೬), ಒಕ್ಕಲಿಗರು(೨೮,೨೩೧) ಜೊತೆಗೆ ಬುಡಕಟ್ಟು ಜನಾಂಗಗಳು Wanderring Tribes (೧,೩೪೪) ಕಾಡು ಬುಡಕಟ್ಟುಗಳು (೧೪,೭೮೩) ಇತರೇ ಹೊರ ಜಾತಿಗಳೆಂದರೆ ಅಡಿಯಾರು Ajjalapale, ಹೊಲೆಯ Hulisivar (Kaladi) ಕಲಡಿ ಕಪಲ, ಮಲಟ್ಟೀ Kukka Madar, ಮರಿಂಗಿ(Maringi) Marta Mayal Pale ಎಂದು ಗುರುತಿಸಬಹುದು. ಇವು ಪ್ರಮುಖವಾದ ಶೂದ್ರ ಜಾತಿಗಳಾಗಿವೆ.[೨೧೭]

ಅದೇ ರೀತಿ ೧೮೮೧ರಲ್ಲಿ ಕೊಡಗಿನಲ್ಲಿ ಬ್ರಿಟಿಷರು ಆಡಳಿತಕ್ಕನುಗುಣವಾಗಿ ೬ ತಾಲೂಕು ಹಾಗೂ ೨೪ ನಾಡುಗಳನ್ನಾಗಿ ವಿಭಾಗಿಸಿದ್ದರು. ಈ ಸಂದರ್ಭದಲ್ಲಿ ೫೦೦ ಗ್ರಾಮಗಳಿರುವುದು ಎಣಿಕೆಯಾಗಿದೆ. ೧೮೮೧ರ ಒಟ್ಟು ಜನಸಂಖ್ಯೆ ೧,೭೮,೩೦೨. ಇವರಲ್ಲಿ:

| | | |
|---|---|---|
| ಕೊಡವರು | - | ೨೭,೦೩೩ |
| ಮುಸಲ್ಮಾನರು | - | ೧೨,೫೪೧ |
| ಒಕ್ಕಲಿಗರು | - | ೧೬,೮೦೮ |
| ಲಿಂಗವಂತರು | - | ೧೦,೪೪೩ |
| ಕ್ರೈಸ್ತರು | - | ೩,೧೫೨ |
| ಬ್ರಾಹ್ಮಣರು | - | ೨,೪೪೫ |
| ಅಮ್ಮಕೊಡವರು | - | ೪೭೫ |
| ಜೈನರು | - | ೯೯ |
| ಪಾರ್ಸಿ | - | ೨೧೮ |

ಕಳೆದ ೧೯೦೧ನೇ ಇಸವಿಯಲ್ಲಿ ತೆಗೆದ ಖಾನೇಸುಮಾರಿ ಪ್ರಕಾರ ೧,೮೦,೬೦೭ ಜನರಿದ್ದರು ಇವರಲ್ಲಿ:

| | | |
|---|---|---|
| ಕೊಡವರು | - | ೩೬,೦೯೧ |
| ಇತರ ಹಿಂದುಗಳು | - | ೧,೨೩,೭೨೬ |
| ಮುಸಲ್ಮಾನರು | - | ೧೩,೬೫೪ |
| ಕ್ರೈಸ್ತರು | - | ೩,೬೮೩ |
| ಜೈನರು, ಬುದ್ಧರು | - | ೧೦೭ |
| ಪಾರ್ಸಿಗಳು | - | ೪೧ |
| ಇತರರು | - | ೩,೩೦೫ |

ಕ್ರಿ.ಶ. ೧೯೦೧ನೇ ಇಸವಿಯಲ್ಲಿ ೧,೮೦,೬೦೭ರ ಜನರಲ್ಲಿ ಪುರುಷರು ೧,೦೦,೨೩೮, ಸ್ತ್ರೀಯರು ೮೦,೩೪೯. ತಾಲೂಕುವಾರು ವಿಂಗಡಿಸಿದರೆ:

ಎಡೆನಾಲ್ಕುನಾಡು ತಾಲೂಕಿನಲ್ಲಿ ೪೩,೪೧೨

ಕಿಗ್ಗವ್ನಾಡು ತಾಲೂಕಿನಲ್ಲಿ ೩೭,೨೩೫

ಪಾಡಿನಾಲ್ಕುನಾಡು ತಾಲೂಕಿನಲ್ಲಿ ೨೮,೬೨೦

ಮಡಿನಾಲ್ಕುನಾಡು ತಾಲೂಕಿನಲ್ಲಿ ೨೮,೬೨೦

ಮಡಿಕೇರಿ ತಾಲೂಕಿನಲ್ಲಿ ೨೮,೬೨೦

ನಂಜರಾಯಪಟ್ಟಣ ತಾಲೂಕಿನಲ್ಲಿ ೪೨,೭೨೦ ಜನಸಂಖ್ಯೆ ಇದ್ದದ್ದು ಕಂಡುಬರುತ್ತದೆ.

ಇವರಲ್ಲಿ ಬ್ರಾಹ್ಮಣರು(೨,೮೨೦), ಅಗಸರು(೧,೬೭೦), ಕುಂಬಾರು(೧,೦೦೦), ನೇಗೆಯವರು(೩,೨೦೦), ಉಪ್ಪಾರರು, ವಡ್ಡರು, ಬೆಸ್ತರು, ಬೇಡರು, ಬೆಣಜಿಗರು, ಗಾಣಿಗರು, ಹಜಾಮರು, ಈಡಿಗರು ಸಂಖ್ಯೆಯ ಮಾಹಿತಿ ಇಲ್ಲ. ಲಿಂಗವಂತರು, ಜಂಗಮರು(೯೦೦೦), ೨೦ರಷ್ಟು ಪಾಲು ಇವರೇ ಇದ್ದಾರೆ. ತಿರುಗಾಡುವ ಜಾತಿಯವರು, ಮೇರಾರು, ಕೊರಚರು, ಲಂಬಾಣಿಯರು.[೨೦೯]

ಕಾಡುಜನರು ಯಾರೆಂದರೆ ಎರವರು(೧೪,೫೦೦), ಕುರುಬರು(೭೦೦೦), ಮುಸಲ್ಮಾನರು ಎಂದು ವಿವರಿಸಲಾಗಿದೆ. ಕೆಲವೊಂದು ಜಾತಿಗಳ ಸಂಖ್ಯೆಗಳನ್ನು ವಿಮರ್ಶಿಸಿದರೆ ಕೆಲವೊಂದು ಮಾಹಿತಿ ಇಲ್ಲ. ರಿಕ್ಟರ್ ಅವರ ಪ್ರಕಾರ ಕೊಡವರು ಸಹ ಸಾಮಾನ್ಯ ಬುಡಕಟ್ಟು ಜನಾಂಗವೆಂದೇ ಪರಿಗಣಿಸುತ್ತಾರೆ.[೨೧೦] ಒಟ್ಟಿನಲ್ಲಿ ವರ್ಷದಿಂದ ವರ್ಷಕ್ಕೆ ಕೊಡಗಿನಲ್ಲಿ ಜನರ ಸಂಖ್ಯೆಯು ಹೆಚ್ಚಾಗಿರುವುದು ಸ್ಪಷ್ಟವಾಗುತ್ತದೆ.

### ೩.೬.೨. ಕೊಡಗಿನ ಭಾಷೆ

ಕೊಡಗಿನಲ್ಲಿ ಬ್ರಿಟಿಷರ ಪೂರ್ವ ಕಾಲದಿಂದಲೂ ಸಹ ಕನ್ನಡ ಮಾತನಾಡುವವರ ಸಂಖ್ಯೆ ಹೆಚ್ಚು. ಅಂದರೆ ಇಲ್ಲಿ ಕೊಡಗು ಕನ್ನಡ, ತೆಲುಗು, ಮಲಯಾಳಂ ಇತರೆ ಭಾಷೆಗಳನ್ನು ಮಾತನಾಡುವವರ ಸಂಖ್ಯೆ ಇತ್ತು. ಆದರೆ ಬ್ರಿಟಿಷರ ಕಾಲದಲ್ಲಿ ಕೊಡಗು ಭಾಷೆ ಮಾತನಾಡುವವರ ಸಂಖ್ಯೆಗಿಂತ 'ಅರೆ-ಕನ್ನಡ' ಭಾಷಿಕರ ಸಂಖ್ಯೆ ಅಧಿಕವಾಗಿತ್ತು ಎಂಬ ಮಾಹಿತಿ ಸಿಗುತ್ತದೆ. ಏಕೆಂದರೆ ಕೊಡಗು ಭಾಷೆಯು ಹಳೆಗನ್ನಡ ಮತ್ತು ತುಳು ಭಾಷೆಯ ಮಿಶ್ರಣವಾಗಿದೆ ಎಂಬುದಾಗಿ ಮೇಜರ್ ಕಾಲಿಂಗ್‌ಕೋಲ್ ಅಭಿಪ್ರಾಯಪಡುತ್ತಾರೆ.[೨೧೧]

ಜನಸಂಖ್ಯೆಯ ದೃಷ್ಟಿಯಿಂದ ಭಾಷೆಯನ್ನು ನೋಡುವುದಾದರೆ ೧೮೭೧ರಲ್ಲಿ ಒಟ್ಟು ಜನಸಂಖ್ಯೆ ೧,೬೮,೩೧೨ ಇತ್ತು. ಇದರಲ್ಲಿ ೨೬,೩೮೯ ಕೊಡಗರು, ೧,೨೮,೦೮೫ ಜನ ಇತರೇ ಹಿಂದೂಗಳು, ೧೧೨ ಜನ ಜೈನರು, ೧೧,೩೦೪ ಜನರು ಮುಸಲ್ಮಾನರು, ೨,೪೧೦ ಜನರು ಕ್ರಿಶ್ಚಿಯನ್ನರು ಹಾಗೂ ಇತರರು. ಆದ್ದರಿಂದಾಗಿ ಇಲ್ಲಿ ಹಿಂದೂಗಳ ಸಂಖ್ಯೆ ಅಧಿಕವಾಗಿತ್ತು ಎಂಬುದಾಗಿ ತಿಳಿಯಬಹುದು. ಆದರೆ ಗ್ಯಾಸೆಟಿಯರ್‌ನಲ್ಲಿ ಭಾಷೆಯ ಕುರಿತು ವ್ಯಾಕರಣದ ಮಾಹಿತಿ ವಿವರಿಸುತ್ತಾರೆ ಹೊರತು ಜನರಾಡುವ ಭಾಷೆಯ ಬಗ್ಗೆ ಹೆಚ್ಚಿನ ಮಾಹಿತಿಯು ಸಿಗುವುದಿಲ್ಲ. ಹೀಗಾಗಿ ಜನಸಂಖ್ಯೆಯ ಆಧಾರದ ಮೂಲಕ ನೋಡಿದಾಗ ಕನ್ನಡ ಮಾತನಾಡುವವರ ಸಂಖ್ಯೆ ಅಧಿಕವಾಗಿತ್ತು ಎಂಬುದಾಗಿ ಅಭಿಪ್ರಾಯಪಡಬಹುದು.[೨೧೨] ಆದರೂ ಸಹ ಕೊಡಗಿನವರೆಂದರೆ ಎಲ್ಲರೂ ಸಹ ಕೂರ್ಗ್ ಭಾಷೆ ಮಾತನಾಡುವವರೆಂಬ ಅಭಿಪ್ರಾಯಕ್ಕೆ ಬರಲಾಗುತ್ತದೆ.

### ೩.೬.೩. ಕೊಡಗಿನ ವಸತಿ ವ್ಯವಸ್ಥೆ

ಕೂರ್ಗ್ ಮನೆಗಳು ಸಾಮಾನ್ಯವಾಗಿ ಕೊಡವರ ಮನೆಗಳೇ 'ಐನ್ ಮನೆಗಳು.' ಅದು ಅವರ ವೈಶಿಷ್ಟ್ಯಗಳಲ್ಲೊಂದು. ಕೊಡವ ಮೂಲ ಕುಟುಂಬಗಳ ಮನೆಗಳನ್ನು ಐನ್‌ಮನೆ, ಬಲ್ಯಮನೆ ಎಂದು ಕರೆಯುತ್ತಾರೆ.[೨೧೩]

ಏಕೆಂದರೆ ಕ್ರಿ.ಶ. ೧೮೩೫ ಲೀಹಾರ್ಡಿ ಉಲ್ಲೇಖಿಸಿರುವಂತೆ ಟಿಪ್ಪುವಿನ ಆಕ್ರಮಣ (೧೭೮೫)ಕ್ಕಿಂತ ಮೊದಲು ಒಂದೇ ಮನೆಯಲ್ಲಿ ೧೨೦ರಿಂದ ೧೫೦ ಮಂದಿ(೩೫ರಿಂದ ४೦ ಮಂದಿ ವಯಸ್ಕ ಪುರುಷನನ್ನು

ಸೇರಿಸಿ) ವಾಸಿಸುತ್ತಿದ್ದದ್ದು ಬಹಳ ಸಾಮಾನ್ಯವಾದ ವಿಚಾರವಾಗಿತ್ತು. ೧೮೫೫ರಲ್ಲಿ ಮೋಗ್ಲಿಂಗ್ ಆ ಸಂಖ್ಯೆಯನ್ನು ೬೦ರಿಂದ ೮೦ ಅಥವಾ ಅದಕ್ಕೂ ಹೆಚ್ಚು ಎಂದು ವಿವರಿಸುತ್ತಾನೆ. ಲೂಯಿರೈಸ್ ಪ್ರಕಾರ ೪೦, ೬೦ರಿಂದ ೮೦ರವರೆಗೆ ಎಂದು ಇದೇ ಅಭಿಪ್ರಾಯಪಡುತ್ತಾರೆ. ಅವರೆಲ್ಲ ವಾಸಿಸುತ್ತಿದ್ದ ಮನೆಯನ್ನು ಐನ್‌ಮನೆಯೆಂದು ಕರೆಯಲಾಗುತ್ತಿತ್ತು. ಒಕ್ಕದ ಮೂಲಮನೆ ಐನ್‌ಮನೆಗಳೆ ಆಗಿದ್ದವು. ಅಂದರೆ ಅವಿಭಕ್ತ ಕುಟುಂಬವಾಗಿದ್ದು, ಕೆಲವು ಐನ್‌ಮನೆಗಳಲ್ಲಿ ೧೦೦-೧೫೦ ಜನರು ವಾಸಿಸುತ್ತಿದ್ದರು. ರೈಸ್ ಪ್ರಕಾರ ೧೮೭೦ರ ವೇಳೆಯಲ್ಲಿ ಒಂದೊಂದು ಒಕ್ಕದಲ್ಲಿಯೂ ೨೦-೩೦ ಜನರಿರುತ್ತಿದ್ದರು. ಒಕ್ಕದಲ್ಲಿ ಸಾಮಾನ್ಯವಾಗಿ ೩-೪ ತಲೆಮಾರಿಗೆ ಸೇರಿದ ಜನರು ಇರುತ್ತಿದ್ದರು. ಕುಟುಂಬದ ಆಸ್ತಿಯು ತಂದೆಯಿಂದ ಮಗನಿಗೆ ವರ್ಗಾವಣೆ ಆಗದೇ ತಲೆಮಾರಿನಿಂದ ತಲೆಮಾರಿಗೆ ಆಗುತ್ತಿತ್ತು. ಕುಟುಂಬದ ಮುಖ್ಯಸ್ಥನನ್ನು ಯಜಮಾನ ಅಥವಾ ಕೊರವಕಾರ, ಕೊರೋಕ್ಕಾರ ಎಂದು ಕರೆಯಲಾಗುತ್ತಿತ್ತು. ಸ್ತ್ರೀಗೆ ಕೊರವಕಾರ್ತಿ ಎಂದು ಒಂದು ವೇಳೆ ಕೋರೋಕ್ಕಾರ ಸತ್ತರೆ ಅಥವಾ ಅವನ ಸ್ಥಾನ ಪಲ್ಲಟವಾದರೆ ಆ ಸ್ಥಳವನ್ನು ಆ ಕುಟುಂಬದಲ್ಲಿನ ಅತ್ಯಂತ ಹೆಚ್ಚು ವಯಸ್ಸಾದವರು ವಹಿಸಿಕೊಳ್ಳುತ್ತಿದ್ದರು. ಕೋರೋಕ್ಕಾರನ ಹೆಂಡತಿಯನ್ನು ಮನೆ ಪರ್ಣಿಕಾರ್ತಿ ಎಂದು ಕರೆಯಲಾಗುತ್ತಿತ್ತು. ಆಕೆ ಮನೆಯೊಳಗಿನ ಜವಾಬ್ದಾರಿಯನ್ನು ನಿರ್ವಹಿಸಬೇಕಿತ್ತು. ಮಿಕ್ಕುಳಿದವರನ್ನೆಲ್ಲ ಕೀಕ್ಕಾರರೆಂದು ಕರೆಯಲಾಗುತ್ತಿತ್ತು. ರಿಕ್ಟರ್ ಕೀಕ್ಕಾರರನ್ನು ಸರ್ಕಾರದಿಂದ ಸಂಬಳ ತೆಗೆದುಕೊಳ್ಳುವ ನೌಕರರಿಗೆ ಹೋಲಿಸುತ್ತಾನೆ. ಕೊರೋಕ್ಕರ ಇಡೀ ಆಸ್ತಿಯ ಮೇಲೆ ಸಮಸ್ತ ಅಧಿಕಾರವನ್ನು ಹೊಂದಿದ್ದು, ಎಲ್ಲರ ಒಳಿತಿಗಾಗಿ ಆತ ಶ್ರಮಿಸಬೇಕಿತ್ತು. ವರ್ಷದಲ್ಲಿ ಏನೇ ಆದಾಯ ಬಂದರೂ, ಹೊಸದಾದ ಜಾಗವನ್ನು ಕಂಡುಕೊಂಡರೂ ಅದು ಒಕ್ಕದ ಸ್ವತ್ತಾಗುತ್ತಿತ್ತು.[೨೪]

ಐನ್ ಮನೆಗಳಿಗೆ ಸಂಬಂಧಿಸಿದ ಎಲ್ಲಾ ಶುಭಾಶುಭ ಕಾರ್ಯಗಳು ಇಲ್ಲಿ ನಡೆಯುತ್ತವೆ. ಈ ಮನೆಗಳನ್ನು ಸ್ಥಳದಲ್ಲಿ ಪೂರ್ವಾಭಿಮುಖವಾಗಿ ಕಟ್ಟಿರುತ್ತಾರೆ. ಪ್ರವೇಶದಲ್ಲಿ ಮೆಟ್ಟಿಲುಗಳನ್ನು ಏರಿದೊಡನೆಯೇ ವಿಶಾಲವಾದ ಕಯ್ಯಾಲೆ ಎಂಬ ವರಾಂಡವಿರುತ್ತದೆ. ಕಯ್ಯಾಲೆಯ ಮೇಲ್ಛಾವಣಿಯನ್ನು ಎತ್ತಿ ಹಿಡಿದಿರುವ ಮುಂದಿನ ಕಂಬಗಳಿಗೆ ಹೊಂದಿಸಿ ಬೆಂಚಿನಂತಿರುವ ಮರಗಳನ್ನು ಐಮರಗಳೆನ್ನುತ್ತಾರೆ. ಇಲ್ಲಿಂದ ಒಳಬಂದಾಗ ಚೌಕಾಕಾರದ ದೊಡ್ಡ ಪಡಸಾಲೆಯಿರುತ್ತದೆ. ಇದನ್ನು ಒಳಕಯ್ಯಾಲೆ ಎಂದು ಕರೆಯುತ್ತಾರೆ. ಇದರ ಮಧ್ಯದಲ್ಲಿ ನಾಲ್ಕು ಮೂಲೆಗೂ ಕಂಬಗಳಿರುವ ತೊಟ್ಟಿಯಿರುತ್ತದೆ. ಇಲ್ಲಿ ಪ್ರತಿನಿತ್ಯ ಇಲ್ಲವೇ ಹಬ್ಬಹರಿದಿನಗಳಲ್ಲಿ ಕಾರುಣರಿಗೆ (ಕುಟುಂಬದ ಮೂಲ ಪುರುಷರಿಗೆ) ಮೀದಿ(ಮನೆಯಲ್ಲಿ ಮಾಡಿದ ಅಡುಗೆ) ನೈವೇದ್ಯ ಮಾಡುತ್ತಾರೆ. ಕಾರುಣನ ಪ್ರತಿರೂಪವಾಗಿ ದೀಪ ಹಚ್ಚುತ್ತಾರೆ. ಅಡುಗೆ ಮನೆಯು ಕೊಡವರ ಪವಿತ್ರ ಸ್ಥಾನಗಳಲ್ಲೊಂದು. ಇಲ್ಲಿ ಪೂರ್ವಾಭಿಮುಖವಾಗಿ ಅಡಿಗೆ ಮಾಡಲು ಒಲೆಗಳಿರುತ್ತವೆ. ಮನೆಯ ತೊಟ್ಟಿಲ ಸುತ್ತಲೂ ಕಂಬಗಳಿಗೆ ತಗಲುವಂತೆ ನಾಲ್ಕು ಮರಗಳನ್ನು ಹಾಸಿರುತ್ತಾರೆ. ಇವುಗಳನ್ನು ಐಮರಗಳೆನ್ನುತ್ತಾರೆ. ಐಮರಗಳು ಪವಿತ್ರ ಸ್ಥಳವಾಗಿದ್ದು, ಸ್ತ್ರೀಯರು ಇದರ ಮೇಲೆ ಕೂರುವಂತಿಲ್ಲ. ತೊಟ್ಟಿಯ ಸುತ್ತಲೂ ಇರುವ ಭಾಗವನ್ನು ನೆಲ್ಲಕ್ಕಿ ನಡಬಾಯೆಯೆಂದು ಕರೆಯುತ್ತಾರೆ. ಇಲ್ಲಿ ಪಶ್ಚಿಮದ ಗೋಡೆಯ ಒಂದು ಮೂಲೆಯಲ್ಲಿ ಗೂಡನ್ನು ಮಾಡಿ ಅಲ್ಲಿ ಪೂರ್ವಾಭಿಮುಖವಾಗಿ ದೀಪ ಹಚ್ಚುವ ಹಣತೆ ಇಟ್ಟಿರುತ್ತಾರೆ. ಇದನ್ನು ನೆಲಕ್ಕೆ ಬೊಳಿಕೆಯೆನ್ನುತ್ತಾರೆ.

ಅಲ್ಲೇ ನೇತಾಡುವ ದೀಪವನ್ನು ತುಕಂಬೊಳಿಕ ಎಂದು ಕರೆಯುತ್ತಾರೆ.[೨೨೫] ಪಡಸಾಲೆಯ ಬಲಭಾಗದಲ್ಲಿ ಎರಡು ಕೊಠಡಿಗಳಿವೆ. ಅವುಗಳಲ್ಲಿ ಮದುವೆಯಾದ ಜೋಡಿಗಳು ಮಲಗುತ್ತಾರೆ. ಮದುವೆ ಆಗದ ಮಹಿಳೆಯರು, ಹುಡುಗರು, ಯುವಕರು, ಮಲಗುವ ಹಾಲ್‌ನಲ್ಲಿ ಈ ಸ್ಥಳದಲ್ಲಿ ಮೇಲ್ಛಾವಣಿಯಲ್ಲಿ ತೂಗು ಹಾಕಿದ ಜೋಡಿ ಬಂದೂಕುಗಳಿರುತ್ತವೆ. ಮರದ ಗಂಟೆಗಳು, ಪ್ರಾಣಿಗಳ ಮೂತಿಗಳು, ಎಮ್ಮೆಗಳಿಗೆ ಅಲಂಕಾರ ಮಾಡಲು ಕುತ್ತಿಗೆಗೆ ಕಟ್ಟುವ ಗಂಟೆಗಳನ್ನು ಗೋಡೆಗೆ ಅಲಂಕರಿಸಿರುತ್ತಾರೆ. ಅಡುಗೆ ಮನೆ ಹೆಚ್ಚಾಗಿ ಹೊಗೆಯಿಂದ ತುಂಬಿರುತ್ತದೆ ಎನ್ನಲಾಗುತ್ತದೆ. ಮತ್ತೊಂದು ಚಿಕ್ಕದಾದ ಕೋಣೆಯಲ್ಲಿ ಕೆಲವೊಂದು ಬುಟ್ಟಿಗಳು, ಚೀಲಗಳು, ಮತ್ತೆ ದಿಂಬು, ಈರುಳ್ಳಿ, ಉಪ್ಪು ಇತ್ಯಾದಿ ದಿನಸಿ ಸಾಮಗ್ರಿಗಳನ್ನು ಈ ರೂಮ್‌ನಲ್ಲಿ ಶೇಖರಿಸಿಡುತ್ತಾರೆ.

ಸಾಮಾನ್ಯವಾಗಿ ಕೂರ್ಗ್ ಮನೆಗಳು ನೀಟಾಗಿ, ಉತ್ತಮ ರೀತಿಯಲ್ಲಿರುತ್ತವೆ. ಯಾರಾದರೂ ಅತಿಥಿಗಳು ಮನೆಗೆ ಬಂದರೆ ಅವರಿಗೆ ಗೌರವದ ಸಂಕೇತವಾಗಿ ಹಳದಿ ಹೂವಿನಕಡ್ಡಿ ಅಥವಾ ಪೊರಕೆಕಡ್ಡಿಗಳಿಂದ ನಿವಾಳಿಸುತ್ತಾರೆ. ಅನಂತರ ಒಳಗೆ ಕರೆಯುತ್ತಾರೆ. ಸಾಮಾನ್ಯವಾಗಿ ಮನೆಯ ಗೋಡೆಗಳನ್ನು ಕಲ್ಲಿನಿಂದ ಕಟ್ಟಲಾಗಿರುತ್ತದೆ. ಭೂಮಿಯಿಂದ ಮೂರು ಅಡಿಗಳಿಗಿಂತಲೂ ಎತ್ತರವಾಗಿರುತ್ತದೆ. ಮೇಲ್ಛಾವಣಿಯು ಬಿದಿರುಗಳಿಂದ ಕೂಡಿದ್ದು, ಜೊತೆಗೆ ಭತ್ತದ ಹುಲ್ಲಿನ ಹೊದಿಕೆ ಇರುತ್ತದೆ.[೨೨೬] ಕೊಡವರ ಈ ಆಯತಾಕಾರದ ಮನೆಗಳನ್ನು ನಾಲೆಕಟ್ ಮನೆಗಳೆನ್ನುತ್ತಾರೆ. ಕೆಲವು ಐನ್‌ಮನೆಗಳ ಮಧ್ಯದಲ್ಲಿ ತೊಟ್ಟಿಗಳಿರುವುದಿಲ್ಲ.[೨೨೭]

**೩.೬.೪. ಕೊಡಗಿನ ಉಡುಗೆ-ತೊಡುಗೆಗಳು**

ಕೊಡಗಿನವರು ತಮ್ಮ ಉಡುಗೆ-ತೊಡುಗೆಗಳಿಂದಲೇ ಪ್ರತ್ಯೇಕವಾಗಿ ಗುರುತಿಸಿಕೊಳ್ಳುತ್ತಾರೆ. ಪುರುಷರು ಹಾಗೂ ಮಹಿಳೆಯರಿಬ್ಬರ ಉಡುಗೆಗಳು ವಸಾಹತುಕಾಲದ ಹಲವು ಬಗೆಯ ವೈವಿಧ್ಯತೆಯನ್ನುಳ್ಳದ್ದಾಗಿದೆ. ಈಗಲೂ ಸಹ ಅವರ ಉಡುಗೆಗಳು ಹಳೇ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದಿರುವುದು ಮಹತ್ವದಾಗಿದೆ.

ಕೊಡಗು ಪುರುಷರು ಉತ್ತರ ದೇಶದಿಂದ ಬಂದಾಗ ತೊಡುತ್ತಿದ್ದ ಕುತ್ತಿಗೆಯಿಂದ ಮೊಣಕಾಲಿನವರೆಗೆ ಮುಚ್ಚುವ ನಿಲುವಂಗಿ, ಸೊಂಟದ ಮೇಲೆ ಒಂದು ಅಂಗಿ, ಸೊಂಟದ ಕೆಳಗೆ ಮೊಣಕಾಲಿನವರೆಗೆ ಒಂದು ಚಡ್ಡಿ, ತಲೆಯಲ್ಲಿ ನಿತ್ಯದಲ್ಲಿ ವಸ್ತ್ರದ ಸುತ್ತು. ವಿವಾಹ, ಹಬ್ಬ ಮೊದಲಾದ ವಿಶೇಷ ದಿನಗಳಲ್ಲಿ ತಲೆಯ ಮೇಲೆ ಚಪ್ಪಟೆಯಾಗಿರುವ ರುಮಾಲು ಇವುಗಳನ್ನು ಇಲ್ಲಿಯೂ ತೊಡುತ್ತಿದ್ದರೆಂದು ಹೇಳಬಹುದು. ನಿಲುವಂಗಿಯು ಸೊಂಟದ ಸುತ್ತಲೂ ಬಿಗಿಯಾಗಿ ನಿಲ್ಲುವ ಹಾಗೆ ಉದ್ದದ ಬಟ್ಟೆಯ ಮಡಿತೆಯನ್ನು ಕಟ್ಟಿ ಸೊಂಟದ ಮುಂದುಗಡೆ ಅವುಗಳ ತುದಿಗಳನ್ನು ಇಳಿಬಿಡುತ್ತಿದ್ದರು. ಪೀಚೆಕತ್ತಿ, ಪಾನಿ ಮುಡೇತುಣಿ ಸೊಂಟದ ಸುತ್ತಲೂ ಚೇಲೆ(ಪ್ರತ್ಯೇಕ) ಕುಪ್ಪಸವನ್ನು ಬಿಗಿದುಕೊಳ್ಳುವುದಕ್ಕೆ ಮತ್ತು ಪೀಚೆಕತ್ತಿಯನ್ನು ಅಳವಡಿಸುವುದಕ್ಕೆ ಚೀಲೆಯನ್ನು ಉಪಯೋಗಿಸುತ್ತಾರೆ. ಚೀಲೆಯು ರೇಷ್ಮೆಯದಾಗಿದ್ದು, ಹೂವುಗಳ ಆಕಾರದಿಂದ ಚಿತ್ರಿತವಾಗಿರುತ್ತದೆ. ಸೊಂಟಕ್ಕೆ ಸುತ್ತಿ ಕಟ್ಟಿದಾಗ ಎರಡು ತುದಿಗಳು ಎಡಗಡೆಗೆ ನೇತಾಡುತ್ತಿರುತ್ತವೆ(ಈ ಕುಪ್ಪಸ ಅಥವಾ ಕುಪ್ಪಿಯೂ ಉದ್ದವಾದ ಕರಿಕೋಟು). ಆ ಕಾಲದಲ್ಲಿ ಕೈಯಿಂದಲೇ ಬಟ್ಟೆಯನ್ನು ಹೊಲಿಯ

ಬೇಕಾಗಿದ್ದು, ಗುಂಡಿಹಾಕಿ ಮೊದಲಾದವುಗಳು ಇಲ್ಲದಿದ್ದ ಕಾಲದಲ್ಲಿ ಲಾಡಿಗಳಿಂದ ಮತ್ತು ಸೊಂಟದ ನಡುಪಟ್ಟಿಗಳಿಂದಲೇ ಗಂಡಸರ ಉಡುಪನ್ನು ಬಿಗಿ ಮಾಡಬೇಕಾಗಿತ್ತು.[೨೫೮] ಕಾಲುಗಳಿಗೆ ಕೆಲವೊಬ್ಬರು ಪಾದರಕ್ಷೆ ಹಾಕುವರು. ಕೆಲವೊಬ್ಬರು ಬರಿಗಾಲಲ್ಲಿ ಇರುವರು.

ಮಹಿಳೆಯ ಉಡುಪುಗಳೆಂದರೆ ಎಲ್ಲಾ ಸಮುದಾಯಗಳಲ್ಲಿ ಸೀರೆ ಧರಿಸುವಾಗ ಸೀರೆಯ ನೆರಿಗೆಗಳು ಮುಂದೆ ಬರುವಂತೆ ಉಡುವುದು ಸಾಮಾನ್ಯ. ಆದರೆ ಕೊಡವರ ಸೀರೆ ಉಡುವುದು ವೈವಿಧ್ಯತೆಯಿಂದ ಕೂಡಿದೆ. ಏಕೆಂದರೆ ಸೀರೆಯನ್ನು ಹಿಂಭಾಗಕ್ಕೆ ನೆರಿಗೆ ಬರುವಂತೆ ಉಡುತ್ತಾರೆ. ಇದಕ್ಕೆ 'ಬಲಮುರಿ' ಎನ್ನುವರು. ಕಾವೇರಮ್ಮ ಒಮ್ಮೆಲೆ ದಿಕ್ಕು ಬದಲಾಯಿಸಿದ್ದು ಕಾರಣವೆಂದು ಹೇಳುತ್ತಾರೆ.[೨೫೯] ಆದರೆ ಮತ್ತೊಂದು ಕಾರಣ ವೆಂದರೆ ಕೊಡಗು ಕಳೆದ ಶತಮಾನದ ಮಧ್ಯಭಾಗದವರೆಗೂ ನಿಬಿಡವಾದ ಅರಣ್ಯಗಳಿಂದಲೂ ಹಿಂಸಾಜಂತು ಗಳಿಂದಲೂ ತುಂಬಿಕೊಂಡಿದ್ದುದರಿಂದ ಇಲ್ಲಿನ ಗಂಡಸರೂ, ಹೆಂಗಸರೂ ಹಳ್ಳಿಗಳಲ್ಲಿ ಸಂಚರಿಸುತ್ತಿದ್ದಾಗ ಕೆಲವು ವೇಳೆ ಕಾಡುಮೃಗಗಳಿಂದ ತಪ್ಪಿಸಿಕೊಳ್ಳುವುದಕ್ಕೆ ಪಕ್ಕನೇ ಮರಗಳನ್ನು ಹತ್ತಬೇಕಿತ್ತು. ಕೊಡಗಿನ ಕೊನೆಯ ರಾಜನ ಕಾಲದಲ್ಲಿ ಎಂದರೆ ಹತ್ತೊಂಬತ್ತನೆಯ ಶತಮಾನದ ಮೊದಲಿನ ಮೂರು ದಶಕಗಳಲ್ಲಿಯೂ ಹೆಂಗಸರು ಮರಗಳನ್ನು ಹತ್ತಿ ಅವುಗಳ ಮೇಲಿನಿಂದ ಶತ್ರುಗಳ ಮೇಲೆ ಬಿಲ್ಲುಗಳಿಂದ ಬಾಣಗಳನ್ನು ಹೊಡೆಯುತ್ತಿದ್ದರೆಂದು ಕೊಡಗಿನವನೊಬ್ಬನು ಬ್ರಿಟಿಷ್ ಮಿಲಿಟರಿ ಅಧಿಕಾರಿಗೆ ಹೇಳಿಕೆ ಕೊಟ್ಟನೆಂದು ಆ ರಾಜನ ಕಾಲದ ದಾಖಲೆಗಳಿಂದ ತಿಳಿಯುತ್ತದೆ. ಕೊಡಗಿನ ಪಶ್ಚಿಮ ಗಡಿಯಲ್ಲಿ ವಾಸಿಸುತ್ತಿದ್ದ ಮಲೆಕುಡಿಯರ ಹೆಂಗಸರು ತಾವೇ ಬಗಿನಿಮರಗಳನ್ನು ಹತ್ತಿ ಅವುಗಳ ಮೇಲಿನಿಂದ ಹೆಂಡವನ್ನು ಕೆಳಗಿಳಿಸುತ್ತಿದ್ದರು ಎಂದು ಹಿಂದಿನ ವೃದ್ಧರು ಹೇಳುತ್ತಿದ್ದರು. ಹೀಗಾಗಿ ಮರಗಳನ್ನು ಹತ್ತುವುದಕ್ಕೆ ಸುಲಭವಾಗಬೇಕಾದರೆ ಹೆಂಗಸರು ತಮ್ಮ ಸೀರೆಯ ನೆರಿಗೆಗಳನ್ನು ಹಿಂದಕ್ಕೆ ಇಡಬೇಕಿತ್ತು, ಇದೇ ಕಾರಣದಿಂದ ಉತ್ತರದಿಂದ ತಮ್ಮ ಗಂಡಸರೊಡನೆ ಬಂದ ಹೆಂಗಸರು ತಮ್ಮ ಸೀರೆಗಳ ನೆರಿಗೆಗಳನ್ನು ಹಿಂದಕ್ಕೆ ಸರಿಸಿದರು[೨೬೦] ಎಂಬ ಎರಡು ಅಭಿಪ್ರಾಯಗಳು ಕಂಡುಬರುವುದರಿಂದ ಎರಡು ರೀತಿಯಲ್ಲಿ ಪ್ರಾರಂಭದಲ್ಲಿ ಸರಿ ಇರಬಹುದು. ಕೆಲವೊಬ್ಬರು ಧಾರ್ಮಿಕ ನಂಬಿಕೆ ಮೇಲೆ ಉಟ್ಟುಕೊಂಡರೆ ಇನ್ನೊಂದು ಬುಡಕಟ್ಟು ಜನಾಂಗವು ಪ್ರಾಣಿಗಳಿಂದ ರಕ್ಷಿಸಲು ಈ ರೀತಿ ಮಾಡಿರುವುದು ಉತ್ತಮ ನಿದರ್ಶನ ಎಂದು ಹೇಳಬಹುದು.

ವಸಾಹತು ಕಾಲಘಟ್ಟದಲ್ಲಿ ಕಪ್ಪು, ಬಿಳಿ, ಕೆಂಪು, ನೀಲಿ, Sash ಇತರೆ ಗಾಢಬಣ್ಣದ ಬಟ್ಟೆ ಧರಿಸುತ್ತಿದ್ದರು. ಇವರಲ್ಲಿ ಕೆಂಪುಬಣ್ಣವು ಶ್ರೇಷ್ಠವಾದದ್ದಾಗಿದೆ. ಮುಖ್ಯವಾದ ಬಟ್ಟೆಗಳೆಂದರೆ ಹತ್ತಿಬಟ್ಟೆ, ಉಣ್ಣೆಯ ಬಟ್ಟೆ ಹೆಚ್ಚಾಗಿ ಬಳಸುತ್ತಿದ್ದರೆಂಬುದು ಇಲ್ಲಿಂದ ತಿಳಿಯುತ್ತದೆ. ಆದರೆ ಅಮ್ಮಕೊಡವರು ಮತ್ತು ನೆರಿಗೆಗಳು ಮುಂದೆ ಬರುವಂತೆ ಸೀರೆಯನ್ನುಡುತ್ತಾರೆ. ಹೆಂಗಸರು ಕೈ ಮುಚ್ಚುವ ಹಾಗೆ ಉದ್ದವಾದ ತೋಳಿನ ರವಿಕೆ ಹಾಕುತ್ತಾರೆ. ವಯಸ್ಸಾದವರು ತಲೆಗೆ ಬಟ್ಟೆ ಕಟ್ಟುತ್ತಾರೆ. ಇನ್ನು ಸೆರಗನ್ನು ಬೆನ್ನಿನಿಂದ ಎದೆಗೆ ಸುತ್ತಿ ನಂತರ ಅದನ್ನು ಬೆನ್ನಿನ ಹಿಂಭಾಗದಿಂದ ತುಂಡು ಭುಜದ ಮೇಲೆ ಕುಪ್ಪಸಕ್ಕೆ ಗಂಟು ಹಾಕುತ್ತಾರೆ (ಜೋಡಿಸುತ್ತಾರೆ). ಮಹಿಳೆಯರು ಹತ್ತಿ, ಉಣ್ಣೆಬಟ್ಟೆ ಹಾಗೂ ರೇಷ್ಮೆ ಬಟ್ಟೆಗಳನ್ನು ಧರಿಸುತ್ತಾರೆ. ಜೊತೆಗೆ ಕಸೂತಿ ವರ್ಕ್ ಇರುವ ಉಡುಪು ಧರಿಸುವುದು ಹೆಚ್ಚು ಎಂಬ ಅಂಶ ಸ್ಪಷ್ಟವಾಗುತ್ತದೆ.[೨೬೧]

ಆಭರಣಗಳು: ಕೊಡವರಲ್ಲಿ ಜನರು ಹಾಕಿಕೊಳ್ಳುವ ಆಭರಣಗಳಿಗೂ ಇತರ ಜಿಲ್ಲೆಯ ಜನರು ಹಾಕಿಕೊಳ್ಳುವ ಆಭರಣಗಳಿಗೂ ಹೆಚ್ಚು ವ್ಯತ್ಯಾಸವೇನು ಕಂಡುಬರುವುದಿಲ್ಲ. ಕೊಡವ ಸ್ತ್ರೀಯರು ಸಾಮಾನ್ಯವಾಗಿ ಬೆಳ್ಳಿ, ಬಂಗಾರದ ಆಭರಣ ಧರಿಸುವುದು ಸಾಮಾನ್ಯ. ವಿಸ್ತಾರವಾದ ಕಡಗವನ್ನು ಕೈಗೆ ಧರಿಸುತ್ತಾರೆ. ಕಿವಿಗೆ ಬೆಂಡೋಲೆ, ಬೆರಳಿಗೆ ಉಂಗುರ, ಮೂಗಿಗೆ ಉಂಗುರವನ್ನು ಧರಿಸುತ್ತಾರೆ. ಕುತ್ತಿಗೆಗೆ ಹವಳದ ಸರ, ಬಹಳ ಬೆಲೆಯುಳ್ಳ ಕತ್ತಿನಾಗರ, ಅರ್ಧಚಂದ್ರನಾಗರ, ಚಂಗೋಲೆ, ಮುತ್ತು ಅಥವಾ ಬಂಗಾರದ ಸರಗಳನ್ನು ಧರಿಸುತ್ತಾಳೆ.[೨೩೨] ಜಡೆಗೆ ಜಡೆಬಿಲ್ಲೆ(ವಿವಾಹ ಕಾಲದಲ್ಲಿ) ಕಾಲುಗಳಿಗೆ ಕಾಲುಂಗುರ ಇದು ವಿವಾಹದ ಸಂಕೇತವಾಗಿರುತ್ತದೆ. ಕೊಡವರಲ್ಲಿ ಕೆಂಪುಬಣ್ಣವು ಮುತ್ತೈದೆತನದ ಸಂಕೇತವಾಗಿರುತ್ತದೆ. ಒಟ್ಟಿನಲ್ಲಿ ಬಂಗಾರ, ಬೆಳ್ಳಿ, ಆಭರಣಗಳಲ್ಲದೆ ಮುತ್ತು, ಹವಳ ಹೀಗೆ ಬಹಳ ಬೆಲೆಯುಳ್ಳ ಕಲ್ಲಿನ(ಶಿಲೆ) ಆಭರಣಗಳನ್ನು ಯಾವಾಗಲೂ ಧರಿಸುತ್ತಿದ್ದರು. ಅಲ್ಲದೆ ಪುರುಷರೂ ಸಹ ಕೆಲವೊಂದು ಆಭರಣಗಳನ್ನು ಧರಿಸುತ್ತಿದ್ದರು. ಆ ಸಂದರ್ಭದಲ್ಲಿ ಬೆಳ್ಳಿಯ ಕೈಕಡಗ, ಕುತ್ತಿಗೆಗೆ ಸರ, ಬಂಗಾರದ್ದು ಅಥವಾ ರುದ್ರಾಕ್ಷಿಯದ್ದು, ಬೆಳ್ಳಿ-ಬಂಗಾರದ ಕೈಕಡಗ, ಕಿವಿಗೆ ಓಲೆ ಹಾಕಿರುತ್ತಾರೆ. ಮುಖ್ಯವಾಗಿ ಕೊರಳಿಗೆ ಕೂರ್ಗ್ ಪದಕ ಅಥವಾ(Coorg medal) ಅಥವಾ The lunalate ಆಭರಣ ಇದನ್ನು Kokadadi ಎಂದು ಕರೆಯುತ್ತಾರೆ. ಯಾವಾಗಲೂ ಸೊಂಟಕ್ಕೆ (Wast Knife) ಪಿಚ್ಚೆ-ಕತ್ತಿ ಇವರ ಬಳಿ ಆಯುಧವಿರುತ್ತದೆ. ಶ್ರೀಮಂತರಲ್ಲದೆ ಬಡವರೂ ಸಹ ಇದನ್ನು ಉಪಯೋಗಿಸುತ್ತಾರೆ. ಕೆಲವೊಬ್ಬರ ಬಳಿ ಕೋವಿಯೂ ಸಹ ಇರುತ್ತದೆ. ಮತ್ತೊಂದು ದೊಡ್ಡದಾದ ಕತ್ತಿ (Knife) ಇರುತ್ತದೆ. ಇದರಲ್ಲಿ ರಾಜನ ಮುದ್ರೆ 'ವಿ' ಇರುತ್ತದೆ. ಇದನ್ನು ಸುಮಾರಂಭದಲ್ಲಿ ಮಾತ್ರ ಉಪಯೋಗಿಸುತ್ತಾರೆ ಎಂದು ತಿಳಿದುಬರುತ್ತದೆ. ಜೊತೆಗೆ ಕೊಡಗು ದಟ್ಟವಾದ ಅರಣ್ಯಪ್ರದೇಶವಾದದ್ದರಿಂದ ಪ್ರಾಣಿಗಳಿಂದ ರಕ್ಷಣೆ ಪಡೆಯಲು ಈ ರೀತಿ ಕೋವಿ ಹಾಗೂ ಕತ್ತಿಯನ್ನು ಬಳಸುತ್ತಿದ್ದರೆಂಬುದು ಮುಖ್ಯವಾಗಿರುತ್ತದೆ. ಬಿ.ಎಲ್. ರೈಸ್ ಪ್ರಕಾರ ಕೊಡಗರು ಹೆಚ್ಚಾಗಿ ಸರಳವಾಗಿರುತ್ತಾರೆ ಎಂಬುದಾಗಿ ಅಭಿಪ್ರಾಯಪಟ್ಟಿರುತ್ತಾರೆ.[೨೩೩]

**೩.೬.೫. ಕೊಡಗಿನ ಆಹಾರ ಪದ್ಧತಿ**

ಕೊಡಗಿನವರು ಮುಖ್ಯವಾಗಿ ಮಾಂಸಾಹಾರಿಗಳು ಹಾಗೂ ಸಸ್ಯಾಹಾರಿಗಳು. ಮುಖ್ಯವಾಗಿ ಇವರು ಹಂದಿಮಾಂಸ, ಮಟನ್, ಕೋಳಿ ಮತ್ತು ಮೀನುಗಳನ್ನು ತಿನ್ನುತ್ತಾರೆ. ತರಕಾರಿಗಳು, ಸಿಹಿ ಪದಾರ್ಥ, ಅನ್ನ ಪ್ರಮುಖವಾದ ಆಹಾರವಾಗಿದೆ.

ಮುಖ್ಯವಾಗಿ ಕೊಡವರಲ್ಲಿ ಎರಡು ವಿಧಗಳು ಬರುತ್ತವೆ. ಅಮ್ಮ ಕೊಡವರು ಮತ್ತು ಕೊಡವರು ಎಂದು ವಿಂಗಡಿಸಲಾಗಿದೆ. ಅಮ್ಮ ಕೊಡವರು ಮಾಂಸಾಹಾರಿಗಳಲ್ಲ ಮಾಂಸ ಮತ್ತು ಮದ್ಯ ಅವರಿಗೆ ವರ್ಜ್ಯ.[೨೩೪] ಆದರೆ ಕೊಡವರು ಮಾತ್ರ ಮಾಂಸಾಹಾರಿಗಳು. ಸಾಮಾನ್ಯವಾಗಿ ಕೊಡಗರು ಬ್ರಿಟಿಷರ ಕಾಲದಲ್ಲಿ ಬೆಳಿಗ್ಗೆ ಏಳು ಗಂಟೆಗೆ ಅನ್ನದ ಗಂಜಿಯನ್ನು, ಉಪ್ಪಿನಕಾಯಿ ಅಥವಾ ಮೊಸರಿನೊಂದಿಗೆ ಸೇವಿಸುತ್ತಾರೆ. ಅನಂತರ ಹತ್ತು ಗಂಟೆಗೆ ತಿಂಡಿಯನ್ನು ತಿನ್ನುತ್ತಾರೆ. ಮುಖ್ಯವಾಗಿ ಅನ್ನ ಮತ್ತು ಮಾಂಸದ ಊಟವಿರುತ್ತದೆ.

ಮಧ್ಯಾಹ್ನ ಮತ್ತೆ ಗಂಜಿಯನ್ನು ಕುಡಿಯುತ್ತಾರೆ. ಸಂಜೆಗೆ ಅವರು ರಾತ್ರಿ ಊಟ ಮಾಡುತ್ತಾರೆ. ಮುಖ್ಯವಾಗಿ ರಾತ್ರಿ ಊಟದಲ್ಲಿ ಅನ್ನ, ತರಕಾರಿಗಳು ಅಥವಾ ಮಾಂಸದ ಆಹಾರಗಳ ಜೊತೆಗೆ ಬೇರೆ ರೀತಿ ಚಟ್ನಿ, ಉಪ್ಪಿನಕಾಯಿಯನ್ನು ಸೇವಿಸುತ್ತಾರೆ. ಹೆಚ್ಚಾಗಿ ಇವರು ಎಣ್ಣೆ ಮತ್ತು ತುಪ್ಪವನ್ನು ಬಳಸುತ್ತಾರೆ ಎನ್ನಲಾಗುತ್ತದೆ. ಬಿ.ಎಲ್. ರೈಸ್ ಅವರ ಪ್ರಕಾರ ಇವರು ಮಾವಿನಕಾಯಿ, ನಿಂಬೆಹಣ್ಣು, ಅಮಟೆಕಾಯಿ, ಕಂಚೀಕಾಯಿಗಳ ಉಪ್ಪಿನಕಾಯಿಯನ್ನು ಹಾಕುತ್ತಾರೆ. ಅವುಗಳ ರುಚಿ ಅದ್ಭುತವಾದದ್ದು ಎನ್ನಲಾಗುತ್ತದೆ.[೨೩೪] ಚಟ್ನಿ ತಯಾರಿಸುತ್ತಾರೆ. ದೋಸೆ, ಪಾಯಸ, ಅನ್ನದ ವಿವಿಧ ಪದಾರ್ಥಗಳನ್ನು ತಯಾರಿಸುತ್ತಾರೆ. ಮುಖ್ಯವಾಗಿ ಅಕ್ಕಿರೊಟ್ಟಿ, ಹಲಸಿನಬೀಜ, ಹುರುಳಿಯ ಚಟ್ನಿ, ಒಣಗಿದ ಮಾಂಸವನ್ನು ಉಪಯೋಗಿಸುತ್ತಾರೆ. ಕಣಿಪೂಜೆಗೆ ತಟ್ಟೆ ಇಡ್ಲಿ, ಪಾಯಸ, ಹುತ್ತರಿ ಹಬ್ಬಗಳಲ್ಲಿ ಎಳ್ಳುಅಕ್ಕಿ ಹಿಟ್ಟಿನ ತೆಂಗಿನಕಾಯಿ ತಂಬಿಟ್ಟು, ಜೇನು, ಬಾಳೆಹಣ್ಣು, ತುಪ್ಪ ತಿನ್ನುತ್ತಾರೆ. ಗೆಣಸನ್ನು ಬೇಯಿಸಿ ಬೆಲ್ಲಹಾಕಿ ಜೇನುತುಪ್ಪ ಬೆರೆಸಿ ತಿನ್ನುತ್ತಾರೆ. ಸಾಮಾನ್ಯವಾಗಿ ಮಣೆಯ (ಪಲಿ) ಮೇಲೆ ಕುಳಿತು ಮುಕ್ಕಲಿಯ ಮೇಲೆ ಕಂಚಿನ ತಟ್ಟೆಯಲ್ಲಿ ಊಟ ಮಾಡುತ್ತಾರೆ. ಕೈಪೋಳ್ದ ಹಬ್ಬಗಳೇ ಅಕ್ಕಿ ತರಕಾರಿಯಿಂದ ಮಾಡಿದ ತಂಬಿಟ್ಟು, ಹಂದಿಮಾಂಸ ತಿನ್ನುತ್ತಾರೆ. ಕರ್ಕಾಟಕ ಮಾಸದಲ್ಲಿ ೧೮ನೇ ದಿನ ಮದ್ದು ತೊಪ್ಪಿನ(ಒಂದು ಜಾತಿಯ ಗಿಡ) ರಸ ಹಿಂಡಿ ಪಾಯಸದಂತೆ ಮಾಡಿ ಸೇವಿಸುತ್ತಾರೆ.[೨೩೫] ಒಟ್ಟಿನಲ್ಲಿ ಕೊಡಗರ ಮುಖ್ಯ ಆಹಾರ ಅಕ್ಕಿ, ಹಂದಿ ಮಾಂಸಾ ಹಾಗೂ ಮದ್ಯ ಪ್ರಮುಖವಾದದ್ದು. ಹಿಂದೂ ಮಹಿಳೆಯ ಪದ್ಧತಿಯಂತೆ ಕೂರ್ಗ್ ಮಹಿಳೆಯರೂ ಸಹ ಸಾಮಾನ್ಯವಾಗಿ ಗಂಡಸರಿಗೆ ಮೊದಲು ಊಟ ಬಡಿಸುತ್ತಾರೆ. ಅವರ ಊಟವಾದ ನಂತರ ಮಹಿಳೆಯರು ಮಾಡುತ್ತಾರೆ. ಇದೊಂದು ಸ್ವಾರ್ಥವಾದ ಮತ್ತು ಅಯೋಗ್ಯ ರೂಢಿ ಎಂದು ಬಿ.ಎಲ್. ರೈಸ್ ಅಭಿಪ್ರಾಯಪಡುತ್ತಾರೆ. ಸಮಾರಂಭಗಳಲ್ಲಿ, ಹಬ್ಬಗಳಲ್ಲಿ ಎಲ್ಲರೂ ಒಟ್ಟಿಗೆ ಸೇರಿ ಊಟ ಮಾಡುತ್ತಾರೆ ಎಂದು ಮಾಹಿತಿ ಸಿಗುತ್ತದೆ. ಹೆಚ್ಚಾಗಿ ಹಿತ್ತಾಳೆ, ತಾಮ್ರ, ಮಣ್ಣಿನ ಪಾತ್ರೆ ಉಪಯೋಗಿಸುತ್ತಾರೆ.[೨೩೬]

**೩.೬.೬. ಕೊಡಗಿನ ಸಾಮಾಜಿಕ ವ್ಯವಸ್ಥೆ**

ಕೊಡವರ ವಿವಾಹ ಸಂಪ್ರದಾಯಗಳು ಅನೇಕ ರೀತಿಯ ಸಂಸ್ಕಾರಗಳನ್ನು ಒಳಗೊಂಡಿವೆ. ಇದೊಂದು ಹಳೆಯ ಹಾಗೂ ಹೊಸ ಕಾಲದ ಮಿಶ್ರಣವೆನ್ನಬಹುದು. ಇವರಲ್ಲಿ ನಾಲ್ಕು ವಿಧವಾದ ವಿವಾಹಗಳಿವೆ. ಅವುಗಳೆಂದರೆ ಕನ್ನಿಮಂಗಲ, ಕೂಡಾವಳಿ ಮಂಗಲ, ಒಕ್ಕಪರಿಜೆ ಮತ್ತು ಮಕ್ಕಪರಿಜೆ ಎಂಬುವು ಪ್ರಮುಖವಾದವು. ಕನ್ನಿಮಂಗಲವು ಕನ್ಯೆಯವರಿಗೆ ಆಗುವ ವಿವಾಹವಾಗಿದೆ. ಉಳಿದವು ವಿವಾಹ ವಿಚ್ಛೇದಿತರಿಗೆ ಆಗುವ ವಿವಾಹ ಪದ್ಧತಿಗಳಾಗಿವೆ.[೨೩೭]

ಇವರ ವಿವಾಹಗಳಲ್ಲಿ ಗಂಡಿನ ಮನೆಯಲ್ಲಿ ಗಂಡಿನ ವಿವಾಹ ಶಾಸ್ತ್ರಗಳು ನಡೆಯುತ್ತವೆ. ಹೆಣ್ಣಿನ ಮನೆಯಲ್ಲಿ ಹೆಣ್ಣಿನ ವಿವಾಹ ಶಾಸ್ತ್ರಗಳು ನಡೆಯುತ್ತವೆ. ಕಡೆಯಲ್ಲಿ ಗಂಡಿನ ಮನೆಯವರು ಹೆಣ್ಣಿನ ಮನೆಗೆ ಬಂದು ಹೆಣ್ಣನ್ನು ಕರೆದುಕೊಂಡು ಹೋಗುತ್ತಾರೆ. ಇವರಲ್ಲಿ ತಾಳಿಕಟ್ಟುವ ಪದ್ಧತಿ ಇಲ್ಲ. ತಾಳಿಯನ್ನು ಹೆಣ್ಣಿನ ತಾಯಿ ಅಥವಾ ಸುಮಂಗಲೆಯರು ಕಟ್ಟುವರು. ಹಿಂದಿನ ಸಂಪ್ರದಾಯದಂತೆ ಜಾತಕ ನೋಡುವುದು

ದೇವರಲ್ಲಿ ಹೂವು ಕೇಳುವುದು ಸಾಮಾನ್ಯವಾಗಿತ್ತು. ಇಲ್ಲಿ ವಿವಾಹವನ್ನು ಹದಿನಾರು ವರ್ಷಕ್ಕಿಂತ ಒಳಗೆ ಮಾಡುವುದಿಲ್ಲ. ಇದೊಂದು ರೀತಿಯ ನಿಯಮವು ಇಡೀ ಕೊಡಗಿನವರು ಅನುಸರಿಸುವುದು ತುಂಬಾ ವಿರಳವಾದದ್ದು ಎಂಬುದಾಗಿ ಬಿ.ಎಲ್. ರೈಸ್ ಅಭಿಪ್ರಾಯಪಡುತ್ತಾರೆ. ಆದರೆ ಕಡುಬಡತನದಲ್ಲಿ ರುವವರು ತಮ್ಮ ಮಕ್ಕಳನ್ನು ಸುರಕ್ಷಿತವಾಗಿಡಲು ಬಾಲ್ಯವಿವಾಹವಿತ್ತು ಎಂಬುದಾಗಿ ತಿಳಿದುಬರುತ್ತದೆ. ಆದರೆ ಇದು ಅಪರೂಪವಾಗಿತ್ತು ಎನ್ನಬಹುದು.[೨೩೯]

ಸಾಮಾನ್ಯವಾಗಿ ಎಲ್ಲಾ ವರ್ಗಗಳಿಗೆ ಅನುಸರಿಸುವಂತೆ ಮೊದಲು ಮನೆಯ ವಿವಾಹದ ಮಾತುಕತೆಯನ್ನು ಮನೆಯ ಹಿರಿಯರು ಮಾತನಾಡುತ್ತಾರೆ. ಇವರನ್ನು ಅರೋವಾ ಎನ್ನುವರು. ಹಳೆಯ ಸಂಪ್ರದಾಯವೆಂದರೆ ನೆಲ್ಲಕ್ಕಿ ನಡುಬಾಡೆಯಲ್ಲಿ ತಳಿಯಕ್ಕಿ ಬೊಳಿಪರ(ದೀಪ) ಹಚ್ಚಿ ಎರಡು ಕಡೆ ಗಂಡು ಹೆಣ್ಣಿನ ಕಡೆಯವರು ನಿಂತು ಮದುವೆ ನಿಶ್ಚಯಿಸಿದ ದೀಪಕ್ಕೆ ನಮಸ್ಕರಿಸಿ ಈತ್(ಕೈಕುಲುಕುವುದು) ಮಾಡುವುದು. ಈ ಸಂದರ್ಭದಲ್ಲಿ ಹಣವನ್ನಾಗಲಿ, ಆಭರಣವನ್ನಾಗಲಿ ತಳಿಯಕ್ಕಿ ಬೊಳಿತಕ್ಕೆ ನಂಬಿಕೆಗಾಗಿ ಇಡುವುದು ಸಂಪ್ರದಾಯವಾಗಿ ಅನಂತರ ಮದುವೆಯ ಸಿದ್ಧತೆ ಮಾಡುವರು. ಮದುವೆಯ ಒಪ್ಪಂದವು ಆರು ತಿಂಗಳಿನಿಂದ ೧೨ ತಿಂಗಳವರೆಗೆ ನಡೆಯುತ್ತದೆ. ಕೂರ್ಗ್‌ನವರು ಸಾಮಾನ್ಯವಾಗಿ ಮದುವೆಯನ್ನು ಏಪ್ರಿಲ್ ಅಥವಾ ಮೇ ತಿಂಗಳಲ್ಲಿ ಮಾಡುವರು. ಇದು ಬೇಸಿಗೆಯ ಕಾಲವಾಗಿದ್ದು, ಹೆಚ್ಚಿನ ಕೆಲಸವಿರುವುದಿಲ್ಲ. ಮದುವೆ ೧೦ ದಿನಗಳ ಕಾಲ ನಡೆಯುತ್ತದೆ. ಮದುವೆಯ ದಿನ ಮಡಿವಾಳರು ಚಪ್ಪರದ ಮುಂಭಾಗದಿಂದ ನೆಲ್ಲಕ್ಕಿ ನಡುಬಾಡೆಯ ತಲೆಯವರೆಗೂ ಅಲಂಕರಿಸುತ್ತಾರೆ. ದಂಪತಿಗಳ ಮುಹೂರ್ತವು ನೆಲ್ಲಕ್ಕೆ ನಡುಬಾಡೆಯಲ್ಲಿ ನಡೆಯುತ್ತದೆ (ಸಾಮಾನ್ಯವಾಗಿ ರಾತ್ರಿ ೭ರಿಂದ ಅರ ಗಂಟೆಯವರೆಗೆ). ಮುಕ್ಕಲಿಗಳ ಮೇಲೆ ವಧುವರರು ಕೂಡುತ್ತಾರೆ. ಹಣ(ಉಡುಗೊರೆ) ಕೊಡುವವರು ಕೊಡುತ್ತಾರೆ. ಭೋಜನಕಾರನು ವರನನ್ನು ಕೈಹಿಡಿದು ಎಬ್ಬಿಸುತ್ತಾನೆ. ವರನು ವಧುವಿಗೆ ತಲೆಯ ಮೇಲೆ ಅಕ್ಕಿ ಹಾಕಿ ಮನೆಯಿಂದ ಪೋಳಿಯದಲ್ಲಿ ತಂದ ಹಾಲನ್ನು ವಧುವಿಗೆ ಕುಡಿಯಲು ಕೊಟ್ಟು ಹಣದ ಚೀಲ ಕೊಡುತ್ತಾನೆ. ವಧುವು ಅದನ್ನು ಬಲಗೈಯಲ್ಲಿ ತೆಗೆದುಕೊಂಡು ಎಡಗೈಯಲ್ಲಿ ಹಿಡಿದುಕೊಂಡು ಬಲಗೈಯನ್ನು ವರನಿಗೆ ಕೊಡುತ್ತಾಳೆ. ವರನು ಕೈಯನ್ನು ಹಿಡಿದು ಎಬ್ಬಿಸುತ್ತಾನೆ. ಅನಂತರ ಪರದೆ ಸಂಪ್ರದಾಯವಾಗುತ್ತದೆ.

ವರನು ವಧುವನ್ನು ಕರೆದುಕೊಂಡು ಹೋಗುವಾಗ ಸೋದರಮಾವ ಅಥವಾ ಸೋದರತ್ತೆಯ ಮಗ ಮುಂದೆ ಬಂದು ದಾರಿ ತಡೆಯುತ್ತಾನೆ. ಆಗ ವರನು ಇವನಿಗೆ ಬಹುಮಾನ ಕೊಟ್ಟು ಸಂತೈಸಬೇಕು. ಅನಂತರ ಮೆರವಣಿಗೆ ಇರುತ್ತದೆ. ಗಂಡನ ಮನೆ ತಲುಪಿದಾಗ ವಧುವು ಕೆಂಪು ಮುಸುಕು ಧರಿಸಬೇಕು.[೨೪೦] ಇವರು ವಿವಾಹ ಪದ್ಧತಿಗೂ ಇನ್ನಿತರೆ ಯಾವುದೇ ಸಂಸ್ಕಾರಗಳಿಗೂ ಸಹ ಬ್ರಾಹ್ಮಣ ಅಥವಾ ಇತರ ಜಾತಿಯ ಪುರೋಹಿತರ ಅವಶ್ಯಕತೆ ಇರುವುದಿಲ್ಲ.[೨೪೧] ಇವರು ಮದುವೆ ಸಂದರ್ಭದಲ್ಲಿ ಹಂದಿಮಾಂಸದ ಅಡುಗೆ, ಮದ್ಯವಿರುತ್ತದೆ. ಅಲ್ಲದೆ ಮದುವೆ ಸಂದರ್ಭದಲ್ಲಿ ಹಳೆಯ ಜಾತಿಪದ್ಧತಿಯ ಮದುವೆ ಹಾಡುಗಳನ್ನು ಹಾಡುತ್ತಾರೆ. Mr. A. Gracter ಅವರು ಕೊಡಗು ಮದುವೆ ಹಾಡುಗಳನ್ನು ಅನುವಾದಿಸಿರುವುದನ್ನು ಕೊಡಗು ಗ್ಯಾಸೆಟಿಯರ್‌ನಲ್ಲಿ ಬಿ.ಎಲ್. ರೈಸ್ ಅವರು ದಾಖಲಿಸಿರುವುದು ನೋಡಬಹುದು.[೨೪೨]

ವಿವಾಹ ವಿಚ್ಛೇದನ: ಕೊಡವರಲ್ಲಿಯೂ ವಿವಾಹ ವಿಚ್ಛೇದನಕ್ಕೆ ಅವಕಾಶವಿದೆ. ಕೊಡವ ವಿಧವೆಯು ಪುನರ್ವಿವಾಹವಾಗಲು ಇಷ್ಟಪಟ್ಟರೆ ಗಂಡನ ತಮ್ಮನನ್ನೋ ಇಲ್ಲವೇ ಇತರರನ್ನೋ ವಿವಾಹವಾಗಬಹುದು. ಕೂಡಾವಳಿಯು ಕೇವಲ ಒಂದು ಸಣ್ಣ ಸಮಾರಂಭವಾಗಿರುತ್ತದೆ. ದೇವಸ್ಥಾನದಲ್ಲಿ ರಾತ್ರಿ ನಡೆಯುತ್ತದೆ. ಮದುವೆಯನ್ನು ಮದುವೆಯಾಗುವವರು ಹೊಸ ಬಟ್ಟೆಗಳನ್ನು ತಂದು, ಒಂದು ಊಟ ಹಾಕಿಸುವುದರ ಮೂಲಕ ಮುಗಿದುಹೋಗುತ್ತದೆ. ತೆರಪದ್ಧತಿ ಕೊಡುವ ಜಾತಿಗಳಲ್ಲಿ ಮದುವೆಯಾಗುವಾಗ ಅರ್ಧದಷ್ಟು ಹಣವನ್ನು ಮಾತ್ರ ಕೊಡಬೇಕಾಗುತ್ತದೆ.[೨೪೩]

ಪ್ರಮುಖವಾಗಿ ವಿವಾಹ ವಿಚ್ಛೇದಿತರಲ್ಲಿ 'ಕೂಡಾವಳಿ ಮಂಗಲ' ಒಕ್ಕಪರಿಜೆ ಮತ್ತು ಮಕ್ಕಪರಿಜೆ ಎಂಬುದು ಪ್ರಮುಖವಾದವು.

ಕೂಡಾವಳಿ ಮಂಗಲ ಎಂದರೆ ಒಂದನೆಯದು ಗಂಡ ಸತ್ತುಹೋದ ಮೇಲೆ ವಿಧವೆಯು ಸತ್ತ ಗಂಡನ ಸಹೋದರ ಇಲ್ಲವೆ ಆ ಕುಟುಂಬದ ಇತರರನ್ನು ವಿವಾಹವಾಗುವುದು.[೨೪೪] ಒಕ್ಕಪರಿಜೆ ಅಂದರೆ ಕುಟುಂಬದ ಉಳಿಯುವಿಕೆಗಾಗಿ ಮಾಡುವ ವಿವಾಹ. ಒಂದು ಕುಟುಂಬದಲ್ಲಿ ಗಂಡುಮಕ್ಕಳಿಲ್ಲದೆ, ಇಲ್ಲವೇ ಇದ್ದ ಗಂಡು ಮಕ್ಕಳೆಲ್ಲಾ ಸತ್ತುಹೋಗಿ ಒಂದು ಹೆಣ್ಣು ಮಾತ್ರ ಇಡೀ ಮನೆತನಕ್ಕಾಗಿ ಉಳಿದಿದ್ದರೆ, ಆಕೆಯನ್ನು ಬೇರೆ ಮನೆತನಕ್ಕೆ ಮದುವೆ ಮಾಡಿ ಕೊಡುವುದರಿಂದ ಆಕೆ ಹುಟ್ಟಿದ ಕುಟುಂಬ ನಿಸ್ಸಂತತಿಯಾಗಿ ನಿರ್ನಾಮವಾಗುವ ಕಾರಣ ಈ ಒಕ್ಕಪರಿಜೆಯ ಏರ್ಪಾಡು ಮಾಡಲಾಗಿದೆ. ಈ ಪದ್ಧತಿಯಂತೆ ಆಕೆಯನ್ನು ಮದುವೆಯಾಗುವ ಗಂಡು ತನ್ನ ಕುಟುಂಬ ಬಿಟ್ಟು ಈಗ ಆಕೆಯೊಡನೆ ಆಕೆಯ ಕುಟುಂಬದಲ್ಲಿರಬೇಕು.

ಮಕ್ಕಪರಿಜೆ ಎಂಬ ವಿವಾಹವು ಇದು ಮೇಲಿನ ಪದ್ಧತಿಯಂತೆ ಆದರೂ ಗಂಡು-ಹೆಣ್ಣಿನ ಮನೆಯಲ್ಲೇ ಸರ್ವದಾ ಇರಬೇಕಾಗಿಲ್ಲ. ತನ್ನ ಹೆಂಡತಿ, ಮಕ್ಕಳೊಡನೆ ಇರಬಹುದು. ಆತ ಈ ಸ್ತ್ರೀಯರಿಗೂ ಕೂಡ ಇದ್ದು ಆಕೆಗೆ ಸಂತಾನ ಆಗುವಂತೆ ಮಾಡಬೇಕು.[೨೪೫] ಈ ರೀತಿಯ ವಿವಾಹವು ಕೊಡವರಲ್ಲಿದೆ. ಆದರೂ ಸಹ ಬ್ರಾಹ್ಮಣ, ವೈಶ್ಯ, ಕೊಡವ ಮೊದಲಾದವರಲ್ಲಿ ವಿವಾಹ ವಿಚ್ಛೇದನ ಅತಿ ವಿರಳ ಎನ್ನಬಹುದು.

ಮಗುವಿನ ನಾಮಕರಣ: ಕೊಡವರಲ್ಲಿ ಮಗು ಹುಟ್ಟಿದ ಕೂಡಲೇ ಮನೆಯು ಸೂತಕವಾಯಿತೆಂದು ಭಾವಿಸಲಾಗುತ್ತದೆ. ಏಳು ದಿನಗಳವರೆಗೆ ಸೂತಕವಿರುತ್ತದೆ. ತಾಯಿಯು ಎರಡು ತಿಂಗಳವರೆಗೆ ಯಾವುದೇ ಕೆಲಸವನ್ನು ಮಾಡಕೂಡದು. ಈ ಸಂದರ್ಭದಲ್ಲಿ ಮಗು ಹುಟ್ಟಿದ ಕೂಡಲೇ ಗಂಡಾದರೆ ಒಂದು ಗುಂಡು ಹಾರಿಸಿ ಜನನವನ್ನು ಸೂಚಿಸುತ್ತಾರೆ. ಹೆಣ್ಣಾದರೆ ಗಂಟೆಯನ್ನೊ, ತಳಿಯ ಮಣಿಯನ್ನೊ ಬಾರಿಸುತ್ತಾರೆ. ಹಿಂದೆ ಅರಳಿ ಗಿಡದ ಎಲೆಯ ದಂಟಿನಿಂದ ಬಿಲ್ಲು, ಬಾಣ ಮಾಡಿ ಗಂಡುಮಗುವಿನ ಕೈಗೆ ಕೊಡುತ್ತಿದ್ದರು. ಮಗುವಿಗೆ ಸ್ನಾನ ಮಾಡಿಸಿ ಬಾಯಿಗೆ ಬೆಲ್ಲ, ತುಪ್ಪ, ಕಾಳುಮೆಣಸಿನ ಪುಡಿಯನ್ನು ತೀಡುತ್ತಾರೆ. ಕೊಠಡಿಯಲ್ಲಿ ಹರಳೆಣ್ಣೆ ದೀಪವಿರುತ್ತದೆ. ಹುಟ್ಟಿದ ಮಗುವನ್ನು ಬಾಳೆ ಎಲೆಯ ಮೇಲೆ ಮಲಗಿಸುತ್ತಾರೆ. ಕುಟುಂಬವು ಹನ್ನೆರಡು ದಿನಗಳ ಸೂತಕವನ್ನು ಆಚರಿಸುತ್ತದೆ. ಸೂತಕದಲ್ಲಿ ಕುಟುಂಬದವರು ಗ್ರಾಮದ ಹಬ್ಬಗಳಲ್ಲಿ ಭಾಗವಹಿಸುವುದಿಲ್ಲ.[೨೪೬]

೧೩ನೇ ದಿನ ಸ್ನಾನ ಮಾಡಿ ಮನೆ ಶುದ್ಧಿ ಮಾಡಿ, ತೀರ್ಥ ಪ್ರೋಕ್ಷಣೆ ಮಾಡುತ್ತಾರೆ. ಆ ದಿನವೇ ಮಗುವಿಗೆ ನಾಮಕರಣ ಮಾಡಿ ತೊಟ್ಟಿಲಿಗೆ ಹಾಕುತ್ತಾರೆ. ಯಾರು ಮಗುವಿಗೆ ಹೆಸರು ಇಡುತ್ತಾರೋ ಅವರು ಉಡುದಾರ ಕಟ್ಟುತ್ತಾರೆ. ಹೆಣ್ಣುಮಗುವಿಗೆ ಉಡುದಾರವಿಲ್ಲ. ಮಗುವನ್ನು ತೊಟ್ಟಿಲಲ್ಲಿ ಹಾಕಲು ಮುತ್ತೈದೆಯರು ಅಥವಾ ಮೂರು ಜನ ಯುವತಿಯರು ಮಾಡಬೇಕಾಗುತ್ತದೆ.[೨೪೭] ಮಗುವಿಗೆ ಸಾಮಾನ್ಯ ಗಂಡುಮಗುವಾದರೆ ಬೆಳ್ಳಿಯಪ್ಪ, ಪೊನ್ನಪ್ಪ, ಮಂದಣ್ಣ ಎಂದು; ಹುಡುಗಿಯರಿಗೆ ಪೂವಕ್ಕ, ಮುತ್ತಕ್ಕ, ಚಿನ್ನವ್ವ ಎಂಬ ಹೆಸರಿಡುತ್ತಾರೆ. ಜೊತೆಗೆ ಈ ಸಂದರ್ಭದಲ್ಲಿ ಜೋಗುಳ ಹಾಡುವ ಪದ್ಧತಿ ಇರುತ್ತವೆ. ಅವುಗಳ ಸಾಲುಗಳು ಕೂರ್ಗ್ ಗ್ಯಾಸೆಟಿಯರ್‌ನಲ್ಲಿ ಕಂಡುಬರುತ್ತವೆ.[೨೪೮]

ಬಾಣಂತಿಯು ದೈನಂದಿನ ಕಾರ್ಯಗಳಿಗೆ ಹಿಂತಿರುಗುವ ಮೊದಲ ಗಂಗಾಪೂಜೆಯನ್ನು ಮಾಡುತ್ತಾಳೆ. ನೆಲ್ಲಕ್ಕಿ, ಹರಳೆಣ್ಣೆ ದೀಪಕ್ಕೆ ಅಕ್ಕಿ ಹಾಕಿ ಹಿರಿಯರನ್ನು ನಮಸ್ಕರಿಸುತ್ತಾಳೆ. ಹಿಂದೆ ಚಿಕ್ಕಮಕ್ಕಳಿಗೆ 'ಕೋವಿ ಮಂಗಲ' ಎನ್ನುವ ಪ್ರೀತಿಯ ಮದುವೆಯನ್ನು ಮಾಡುತ್ತಿದ್ದರು. ಈಗ ಅದು ರೂಢಿಯಲಿಲ್ಲ. ಗಂಡುಮಗುವಿಗೆ ಕಿವಿ ಚುಚ್ಚುವುದನ್ನು 'ಕೊಮಿಕುತ್ತಿ ಮಂಗಲ'ವೆನ್ನುತ್ತಾರೆ. ಇದನ್ನು ಒಂದು ದೊಡ್ಡ ಸಮಾರಂಭದಲ್ಲಿ ಆಚರಿಸುತ್ತಿದ್ದರು. ಹೆಣ್ಣುಮಕ್ಕಳಿಗೆ ಈ ಅವಕಾಶವಿಲ್ಲ. ಕಿವಿ ಚುಚ್ಚದೇ ಸತ್ತವರನ್ನು ಶವಸಂಸ್ಕಾರದ ಕಾಲದಲ್ಲಾದರೂ ಕಿವಿ ಚುಚ್ಚಿ ಶವಸಂಸ್ಕಾರ ಮಾಡುತ್ತಿದ್ದರು ಎಂಬುದು ವಿಶೇಷವಾದುದ್ದಾಗಿದೆ.[೨೪೯]

**೩.೬.೭. ಕೊಡಗಿನ ಧಾರ್ಮಿಕ ಆಚರಣೆಗಳು**

ಕೊಡಗರಲ್ಲಿ ವರ್ಷದಲ್ಲಿ ಮುಖ್ಯವಾಗಿ ಮೂರು ಹಬ್ಬಗಳನ್ನು ಆಚರಿಸುತ್ತಾರೆ. ಈ ಹಬ್ಬಗಳು ಸೆಪ್ಟೆಂಬರ್ ತಿಂಗಳಲ್ಲಿ ಬರುವ ಕೈಲ್ ಮುಹೂರ್ತ, ಅಕ್ಟೋಬರ್‌ನಲ್ಲಿ ಬರುವ 'ಕಾವೇರಿ ಸಂಕ್ರಮಣ'ದ ಹಬ್ಬ ಮತ್ತು ಕೆಲವು ಸಾರಿ ನವೆಂಬರ್‌ನಲ್ಲಿ, ಕೆಲವು ಸಾರಿ ಡಿಸೆಂಬರ್‌ನಲ್ಲಿ ಬರುವ 'ಹುತ್ತರಿ ಹಬ್ಬಗಳು' ಹಾಗೂ 'ಭಗವತಿ ಹಬ್ಬ' ಪ್ರಮುಖವಾದದ್ದು. ಕಾವೇರಿ ಹಬ್ಬ(ಜಾತ್ರೆ) ಅಕ್ಟೋಬರ್ ತಿಂಗಳ ಮಧ್ಯಭಾಗದಲ್ಲಿ ಆಗುವ ಕಾವೇರಿ ಹಬ್ಬಕ್ಕೆ ಎಲ್ಲಾ ಕೊಡಗರು ಹವಣಿಸುತ್ತಾರೆ. ಈ ಕಾಲದಲ್ಲಿ ಮಳೆ, ಮೋಡಗಳೆಲ್ಲಾ ಹರಿದು ಸೂರ್ಯನು ಪ್ರಕಾಶಿಸಲಿಕ್ಕೆ ತೊಡಗುತ್ತಾನೆ. ಗದ್ದೆಗಳಲ್ಲೆಲ್ಲಾ ಹಸುರಾದ ಭತ್ತದ ಪೈರು ಮನೋಹರವಾಗಿ ಕಾಣಿಸುತ್ತದೆ. ಕಾಡುಗಳೆಲ್ಲಾ ಹಸಿರಾಗಿ ಕಾಣಿಸುತ್ತದೆ. ಕೊಡಗರ ಪ್ರತಿಯೊಂದು ಮನೆಯಿಂದಲೂ ಒಬ್ಬೊಬ್ಬರಾದರೂ ಕಾವೇರಿಗೆ ಹೋಗುತ್ತಾರೆ.[೨೫೦] ತುಳುವ, ಮಲಯಾಳ ಮೈಸೂರು ರಾಜ್ಯಗಳಿಂದ ತಮಿಳುನಾಡಿನವರೂ ಕಾವೇರಿ ನದಿಯು ಕನಿಕೆ ನದಿಯೊಡನೆ ಸಂಗಮವಾಗುವ ಭಾಗಮಂಡಲವೆಂಬ ಕ್ಷೇತ್ರಕ್ಕೂ ಈ ಸ್ಥಳದಿಂದ ಕಾಲ್ನಡಿಗೆಯಲ್ಲಿ ಸುಮಾರು ನಾಲ್ಕು ಮೈಲುಗಳ ದೂರದಲ್ಲಿ ಬ್ರಹ್ಮಗಿರಿಯ ಮಧ್ಯದ ಕಾವೇರಿಯ ನದಿಯ ಉಗಮಸ್ನಾನಕ್ಕೂ, ತೀರ್ಥಸ್ನಾನಕ್ಕೂ ಬರುತ್ತಾರೆ. ಈ ಕಾವೇರಿ ನದಿಯಲ್ಲಿ ಮುಳುಗಿ ದೇವರ ದರ್ಶನ ಪಡೆಯುತ್ತಾರೆ. ಕೆಲವೊಬ್ಬರು ಹೋಗಲು ಆಗದಿದ್ದವರು ಮನೆಯಲ್ಲಿಯೇ ಪೂಜೆಯನ್ನು ಮಾಡುವರು.[೨೫೧]

'ಹುತ್ತರಿ ಹಬ್ಬವು' ಪ್ರತಿವರ್ಷ ನಡೆಯುವ ಸುಗ್ಗಿ ಹಬ್ಬ. ಹುತ್ತರಿ ಎಂಬ ಪದ ಪುತ್ತರಿ ಎಂಬ ಪದದಿಂದ ಬಂದಿದೆ. ಪುತ್ತರಿ ಎಂದರೆ ಹೊಸ ಅಕ್ಕಿ ಎಂದರ್ಥ. 'ಅರಿ' ಎಂದರೆ ಮಲಯಾಳದಲ್ಲೂ 'ಅಕ್ಕಿ' ಎಂದರ್ಥ.

ಪುದಿಅರೆ ಎಂದರೆ ಹೊಸ ಅಕ್ಕಿ ಮನೆಗೆ ತರುವಾಗಿನ ಸಂಭ್ರಮವೇ ಈ ಹುತ್ತರಿ. ಇದು ಸಾಧಾರಣವಾಗಿ ನವೆಂಬರ್ ಅಥವಾ ಡಿಸೆಂಬರ್ ತಿಂಗಳಲ್ಲಿ ಪೂರ್ಣಿಮೆಯ ದಿನ ನಡೆಯುತ್ತದೆ.[೨೫೨] ಈ ಸಂದರ್ಭದಲ್ಲಿ ಕೊಡಗಿನಲ್ಲಿ ಕೊಡಗರೆಲ್ಲಾ ಬಹಳ ಸಂತೋಷದಿಂದಿರುತ್ತಾರೆ. ಈ ಹಬ್ಬವು ಏಳು ದಿವಸ ನಡೆಯುವುದು. ಆದರೆ ಕೊಡಗರು, ಇವರ ಆಳುಗಳಾದ ಹೊಲೆಯ ಮುಂತಾದವರು ಈ ಹಬ್ಬವನ್ನು ಮೂರು, ನಾಲ್ಕು ದಿನ ಹೆಚ್ಚಾಗಿ ಮಾಡುತ್ತಾರೆ. ಹಿಂದೂಗಳಲ್ಲಿ ಆಚರಿಸುವ ಸಂಕ್ರಾಂತಿ ಹಬ್ಬವು ಸುಗ್ಗಿಹಬ್ಬವನ್ನು ಈ ಹಬ್ಬಕ್ಕೆ ಹೋಲಿಸಬಹುದು. ಈ ಕಾಲದಲ್ಲಿ ಕೊಡಗರು ತಮ್ಮ ಊರುಮಂದಿಯಲ್ಲಾ ಮೈದಾನಗಳಲ್ಲಿ ಹಗಲೆಲ್ಲಾ ಹಾಡುವುದು, ಕುಣಿಯುವುದು, ಇತರ ಆಟಗಳನ್ನು ಆಡುವುದು, ತಮಾಷೆ ಮಾಡುವುದು ಮುಂತಾದವು ಗಳಲ್ಲಿಯೇ ಕಾಲವನ್ನು ಕಳೆಯುತ್ತಾರೆ. ಈ ಹಬ್ಬದ ದಿನಗಳಲ್ಲಿ(ಮುಖ್ಯವಾಗಿ ಏಳನೆಯ ದಿನದಲ್ಲಿ) ಕೊಡಗರು ಪೂರ್ವಾಚಾರಕ್ಕನುಗುಣವಾಗಿ ಕದರು ತರುತ್ತಾರೆ. ಎಂಟನೆಯ ದಿನ ಊರುಕೋಲು, ಒಂಬತ್ತನೆಯ ದಿನ ನಾಡುಕೋಲು, ಹತ್ತನೆಯ ದಿನ ದೇವರ ಕೋಲು ಎಂದು ಕೋಲು ಹೊಡೆಯುವುದುಂಟು.[೨೫೩] ಆದರೆ ಆರನೆಯ ದಿನ ಎಲ್ಲಾ ಗಂಡಸರು ಆರು ವರ್ಷದಿಂದ ಅರವತ್ತು ವರ್ಷದವರು 'ಮಂಡೂಸ್' ಎಂಬ ಗ್ರಾಮದಲ್ಲಿ(ಇದೊಂದು ಸಾರ್ವಜನಿಕ ಸ್ಥಳ). ಹಬ್ಬವನ್ನು ಆಚರಿಸುತ್ತಾರೆ. ಇದು ಸಂಜೆ ಆರರಿಂದ ರಾತ್ರಿ ೧೧ರವರೆಗೆ ನಡೆಯುತ್ತದೆ. ಊರಿನ ಮತ್ತು ನಾಡಿನ ಮೈದಾನಗಳಲ್ಲಿ ವಾದ್ಯಸಹಿತವಾದ ಕುಣಿತಗಳಿಂದ ಆಚರಿಸಲ್ಪಡುತ್ತದೆ.[೨೫೪]

ಭಗವತಿ ಹಬ್ಬ: ಈ ಹಬ್ಬವು ಮಳೆಗಾಲಕ್ಕೆ ಎರಡು ತಿಂಗಳು ಮುಂಚಿತವಾಗಿ ಬೇರೆ-ಬೇರೆ ನಾಡುಗಳಲ್ಲಿ ಅನುಕೂಲವಿದ್ದಂತೆ ಬೇರೆ-ಬೇರೆ ಕಾಲದಲ್ಲಿ ನಡೆಯುತ್ತದೆ. ಈ ಹಬ್ಬದ ಆಚರಣೆಯು ತುಳು ಬ್ರಾಹ್ಮಣರ ಮೂಲಕವಾಗಿ ಬಂದಂತೆ ತೋರುತ್ತದೆ. ಇದು ಭಗವತಿ ದೇವಸ್ಥಾನದಲ್ಲಿ ಒಂಬತ್ತು ದಿನಗಳವರೆಗೆ ನಡೆಯುವುದು.

ಕೈಲ್ ಮುಹೂರ್ತ ಹಬ್ಬವು(ಕೈಲ್ ಪೊಳದು) ಹುತ್ತರಿಯಂತೆ ಕೊಡಗರ ಹಬ್ಬವಾಗಿದೆ. ಆಗಸ್ಟ್ ತಿಂಗಳಲ್ಲಿ ನಾಟಿ ಕೆಲಸ ಪೂರೈಸಿದ ನಂತರ ಸ್ವಲ್ಪ ನಿಧಾನವಾದಾಗ ಈ ಹಬ್ಬವು ನಡೆಯುತ್ತದೆ. ಆಗ ಮನೆಯಲ್ಲಿದ್ದ ಕೋವಿ, ಕತ್ತಿ, ಈಟಿ ಮುಂತಾದವುಗಳನ್ನೆಲ್ಲಾ ಚೆನ್ನಾಗಿ ಉಜ್ಜಿ ತೊಳೆದು ಅವುಗಳಿಗೆ ಪೂಜೆ ಮಾಡಿ ಭೋಜನ ನಂತರ ಗಂಡಸರು ತಮ್ಮ ಆಯುಧಗಳೊಡನೆ ಊರುಮನೆಗಳಿಗೆ ಹೋಗಿ ಗುರಿ ಹೊಡೆಯುವುದೇ ಮೊದಲಾದ ಆಯುಧವಿದ್ಯಾ ಕೌಶಲ್ಯವನ್ನು ಮೆರೆಸುತ್ತಾರೆ. ಇದೊಂದು ಹಿಂದುಗಳ ಆಯುಧಪೂಜೆ, ದಸರಾ ಹಬ್ಬವನ್ನು ನೆನಪಿಸುತ್ತದೆ. ಮೂರನೆಯ ದಿನ ಊರವರು ಕೂಡಿ ಊರು ಬೇಟೆ ಆಡುವುದುಂಟು. ಅನಂತರ ನಾಡವರೆಲ್ಲರೂ ಸೇರಿ ನಾಡು ಬೇಟೆ ಆಡುತ್ತಾರೆ. ಈ ಹಬ್ಬವು ಕೊಡಗು ಹಬ್ಬಗಳಲ್ಲಿ ವಿಶೇಷವಾದುದೆಂದು ಯುವಕರು ಹೇಳುತ್ತಾರೆ.[೨೫೫]

ಈ ಹಬ್ಬಗಳಲ್ಲದೆ ವರ್ಷಕ್ಕೊಮ್ಮೆ ಕೊಡಗಿನಲ್ಲಿ ಪ್ರತಿಯೊಂದು ಕುಟುಂಬದವರು ತಮ್ಮ ಕುಟುಂಬದ ಮೂಲ ಪುರುಷನನ್ನು ಒಟ್ಟು ಸೇರಿ ಪೂಜಿಸುತ್ತಾರೆ. ಕೊಡಗರು ತಮ್ಮ ಮೂಲಪುರುಷನಿಗೆ 'ಕಾರಣ'ನೆಂದು ಕರೆಯುತ್ತಾರೆ. ಮೂಲಪುರುಷನನ್ನು ಪ್ರತ್ಯೇಕ ಕೋಣೆಯಲ್ಲಿಟ್ಟು ಪೂಜಿಸುತ್ತಾರೆ. ಸಾಮಾನ್ಯವಾಗಿ ಕಂಚು, ತಾಮ್ರ, ಬೆಳ್ಳಿಯ ಪೂರ್ವಿಕರ ವಿಗ್ರಹಗಳನ್ನು ಮಾಡಿಸುತ್ತಾರೆ. ಈ ಸ್ಥಳಕ್ಕೆ ಕೈಮಡ ಎಂಬ ಹೆಸರಿನಿಂದ

ಕರೆಯುತ್ತಾರೆ. ಜೊತೆಗೆ ಪ್ರತಿದಿನ ಅಥವಾ ವಿಶೇಷ ದಿನಗಳಲ್ಲಿ ನೈವೇದ್ಯ ಇಡುತ್ತಾರೆ. ಈ ಮೂಲ ಪುರುಷನನ್ನು ಪೂಜಿಸುವುದು ಮಲಬಾರಿನ ನಾಯಕರುಗಳ ಸಂಪರ್ಕದಿಂದ ಬಂತೆಂದು ತೋರುತ್ತದೆ. ಕೊಡಗರು ತಮ್ಮ ಗ್ರಾಮದಲ್ಲಿನ ದೇವಸ್ಥಾನದ ಹಬ್ಬಗಳಲ್ಲಿ ಅಕ್ಕಿ ಹರಕೆಯನ್ನು ಪ್ರೀತಿಸುತ್ತಾರೆ, ನರ್ತನ ಮಾಡುತ್ತಾರೆ. ಈ ಹಬ್ಬಗಳಲ್ಲದೆ ಪ್ರಮುಖ ದೇವರಿಗೆ ನಡೆದುಕೊಳ್ಳುತ್ತಾರೆ. ಕೊಡಗರಿಗೆ ನಾಲ್ಕುನಾಡಿನ ಪಾಡಿತಗ್ಗುತಪ್ಪ ದೇವತೆಯು ಕುಲದೇವರು. ಸುಬ್ರಹ್ಮಣ್ಯ ದೇವರು ಇಗ್ಗುತಪ್ಪ ಎಂಬ ಹೆಸರಿನಿಂದ ಕೊಡವರಿಂದ ಪೂಜಿಸಲ್ಪಡುವುದು ಒಂದು ವಿಶೇಷ.

ಕೊಡವರು ಮೊಟ್ಟಮೊದಲು ಪೂಜಿಸಲು ಆರಂಭಿಸಿದ ದೇವತೆಗಳಲ್ಲಿ ಇಗ್ಗುತಪ್ಪದೇವರು ಸೇರಿರ ಬೇಕೆಂದು ತೋರುತ್ತದೆ. ಏಕೆಂದರೆ ಹುತ್ತರಿ ಹಾಡಿನ ಪ್ರಕಾರ ಹುತ್ತರಿಹಬ್ಬ ಆರಂಭವಾದದ್ದೇ ಇಗ್ಗುತಪ್ಪ ದೇವರು ಮಲಯಾಳಕ್ಕೆ ಹೋಗಿ ಬಂದಂದಿನಿಂದ. ಆದ್ದರಿಂದ ಅದರ ಪ್ರಕಾರ ಹುತ್ತರಿ ಆಚರಣೆ ಪ್ರಾರಂಭ ವಾಗುವುದರಿಂದ ಕೊಡವರು ಬಹಳ ಹಿಂದಿನಿಂದಲೇ ಇಗ್ಗುತಪ್ಪನ ಆರಾಧಕರು ಎನ್ನಬಹುದು ಅಥವಾ ಅವರು ಇಂದಿನ ಕೊಡಗಿಗೆ ಬಂದ ಕೂಡಲೇ ಸುಬ್ರಹ್ಮಣ್ಯನ ಭಕ್ತರಾದರು ಎನ್ನಬಹುದು. ಜೊತೆಗೆ ಈ ಸುಬ್ರಹ್ಮಣ್ಯ ದೇವರ ಕುರಿತು ಸಾಕಷ್ಟು ಐತಿಹಾಸಿಕ ಹಿನ್ನೆಲೆಯಿದೆ. ಈ ಸುಬ್ರಹ್ಮಣ್ಯ ದೇವರನ್ನು ಬಿಟ್ಟರೆ ಮಹಾದೇವ ಅಥವಾ ಶಿವನನ್ನು, ಭಗವತಿ ದೇವರನ್ನು ಆರಾಧಿಸುತ್ತಾರೆ. ಜೊತೆಗೆ ಭೂತಾರಾಧನೆಯು ತುಳುವರಿಂದ ಬಂದಿರ ಬಹುದೆಂದು ಊಹಿಸಬಹುದು. ನಾಗಪೂಜೆಯನ್ನು ಇಲ್ಲಿ ಸಾವಿರಾರು ವರ್ಷದಿಂದ ಮಾಡುತ್ತಾರೆ. ಬನ್ನಿ ಇತರೇ ಮರಗಳ ಪೂಜೆಗಳನ್ನು ಮಾಡುತ್ತಾರೆ. ಜೊತೆಗೆ ಎಲ್ಲಾ ಕಡೆ ಆರಾಧಿಸುವಂತೆ ಗ್ರಾಮದೇವತೆ ಗಳನ್ನು ಇವರು ಆರಾಧಿಸುತ್ತಾರೆ. ಮುಖ್ಯವಾಗಿ ಗ್ರಾಮದೇವತೆಗಳೆಂದರೆ ಮರಿಯಮ್ಮ, ದುರ್ಗಾ, ಭದ್ರಕಾಳಿ ದೇವರಿಗೆ ಪೂಜಿಸುತ್ತಾರೆ. ಯಾವುದೇ ರೋಗರುಜಿನಗಳು ಬರುವುದಿಲ್ಲ ಎಂಬ ನಂಬಿಕೆಯು ಕೊಡಗರದಾಗಿದೆ.[೨೫] ಒಟ್ಟಿನಲ್ಲಿ ಕೊಡಗರು ಆಚರಿಸುವ ಹಬ್ಬಗಳೆಲ್ಲವೂ ಸಹ ಪ್ರಾಕೃತಿಕ ಆರಾಧನೆಗಳ ಹಬ್ಬಗಳೆನ್ನಬಹುದು.

**೩.೬.೮. ಕೊಡಗಿನ ಶವಸಂಸ್ಕಾರ ಪದ್ಧತಿ**

ಕೊಡವರ ಮೂಲವನ್ನು ಹುಡುಕುವಾಗ ಪ್ರತಿಯೊಂದು ಸಮುದಾಯದಲ್ಲಿ ನಡೆಯುವಂತೆ ಇಲ್ಲಿ ನಡೆಯುತ್ತದೆ. ಆದರೆ ಕೆಲವೊಂದು ವಿಶಿಷ್ಟವಾದ ವಿಧಿಗಳಿವೆ. ಸೂತಕ, ತಿಥಿ ಇತ್ಯಾದಿಗಳೆಲ್ಲಾ ಅವರಲ್ಲಿದೆ. ಆದರೆ ಅವಕ್ಕೆ ಒಂದು ವಿಶಿಷ್ಟವಾದ ಸ್ವರೂಪವಿದೆ. ಒಂದು ಕುಟುಂಬದಲ್ಲಿ ಮದುವೆಯಾಗದೆ ವಯಸ್ಸಾಗಿದ್ದು, ಮದುವೆಯಾಗದವರು ಯಾರಾದರೂ ಸತ್ತರೆ ಒಂಟಿ ಗುಂಡು ಹಾರಿಸುತ್ತಾರೆ ಅಥವಾ ಸತ್ತವರು ಮದುವೆಯಾದವರಾಗಿದ್ದು ಅಥವಾ ತುಂಬಾ ವಯಸ್ಸಾದವರಾಗಿದ್ದರೆ ಜೋಡಿಗುಂಡು ಹಾರಿಸುತ್ತಾರೆ ಆಗ ಊರಿನವರಿಗೆಲ್ಲಾ ಇದು ತಿಳಿಯುತ್ತದೆ. ಮರಣ ವಾರ್ತೆಯನ್ನು ಎಲ್ಲರಿಗೂ ತಿಳಿಸಲು ಇದೊಂದು ಏರ್ಪಾಡು. ಪರ್ವತ ಪ್ರಾಂತ್ಯವಾದ್ದರಿಂದ ಹಿಂದೆ ಈ ಕ್ರಮದಿಂದ ಮಾತ್ರ ಮರಣ ವಾರ್ತೆ ಎಲ್ಲರಿಗೂ ತಿಳಿಸುವುದು ಸುಲಭವಾಗಿ ಈ ಪದ್ಧತಿ ಉಂಟಾಗಿರಬೇಕು. ಈ ಗುಂಡುಗಳನ್ನು ಹಾರಿಸಿದ ಶಬ್ದ ಕೇಳಿದೊಡನೆಯೇ ಗ್ರಾಮಸ್ಥರು ಯಾವ ಕೆಲಸ ಮಾಡುತ್ತಿದ್ದರೂ ಅದನ್ನು ಹಾಗೆಯೇ ಬಿಟ್ಟು ಮರಣ ಸಂಭವಿಸಿದ ಮನೆಗೆ ಬಂದುಬಿಡಬೇಕು.

ಕೊಡವರಲ್ಲಿ ಸಾವು ಸಮೀಪಿಸಿದಾಗ ಅವರನ್ನು ಮನೆಯ ವಿಶಾಲವಾದ ಅಂಗಳದಲ್ಲಿ(ಬಾಡೆ) ಮಲಗಿಸುತ್ತಾರೆ. ಪಕ್ಕದಲ್ಲಿ ತೆಂಗಿನಕಾಯಿ, ತುಳಸಿ, ಗರಿಕೆಹುಲ್ಲು ಮತ್ತು ಚಿನ್ನದ ನಾಣ್ಯವಿಟ್ಟಿರುತ್ತಾರೆ. ತೆಂಗಿನಕಾಯಿಯನ್ನು ಒಡೆದು ಅದರ ನೀರನ್ನು ಕಂಚಿನ ಪಾತ್ರೆಯಲ್ಲಿಟ್ಟು ತುಳಸಿ ಮತ್ತು ಗರಿಕೆಹುಲ್ಲನ್ನು ನೀರಿನಲ್ಲಿ ಅದ್ದಿ ಅವನ ಬಾಯಿಗೆ ಬಿಡುತ್ತಾ ತುಳಸಿಯೂ ಹಿಂದುಗಳೆಲ್ಲರಿಗೂ ಪವಿತ್ರವಾದ ಗಿಡವೆಂದು ಭಾವಿಸಲಾಗಿದೆ. ತುಳಸಿ ಬಿಲ್ವಪತ್ರೆಗಳು ಪವಿತ್ರವಾದ ಗಿಡಗಳು. ಈ ರೀತಿಯ ಶುಭ-ಅಶುಭ ಕರ್ಮಗಳಲ್ಲೆಲ್ಲಾ ದರ್ಭೆಯನ್ನು ಉಪಯೋಗಿಸುತ್ತಾರೆ.[೨೧೭]

ರಾತ್ರಿ ಶವವನ್ನು ಇಡಬೇಕಾಗಿ ಬಂದರೆ ಅದನ್ನು ಬೋರಲು ಹಾಕಿ ಮುಖಕ್ಕೆ ಕಂಚಿನ ಗಂಗಾಳವೊಂದನ್ನು ಇಡುತ್ತಾರೆ. ಶರೀರವನ್ನು ಬಿಳಿಬಟ್ಟೆಯಿಂದ ಹೊದಿಸುತ್ತಾರೆ.[೨೧೮]

ಶವ ಸಂಸ್ಕಾರ ಮಾಡುವ ಮೊದಲು ಕೆಲವು ಸಂಪ್ರದಾಯಗಳು ಕೊಡವರಲ್ಲಿವೆ. ಪುರುಷರು ಮೃತನಾದರೆ ಶವಕ್ಕೆ ಮುಖಕ್ಷೌರ ಮಾಡಿ ಎಣ್ಣೆ, ಅರಿಶಿನ ಹಾಕಿ ಸ್ನಾನ ಮಾಡಿಸುತ್ತಾರೆ. ಅನಂತರ ಒಳ್ಳೆಯ ಉಡುಪಿನಿಂದ ಶೃಂಗಾರ ಮಾಡುತ್ತಾರೆ. ವಿಭೂತಿ ಹಾಕುತ್ತಾರೆ. ಹಣೆಗೆ ಚಿನ್ನದ ನಾಣ್ಯವೊಂದನ್ನು ಅಂಟಿಸುತ್ತಾರೆ. ಕೈಗೆ ಕನ್ನಡಿ ಹಿಡಿಸುತ್ತಾರೆ. ಪೀಚೆಕತ್ತಿ ಸಹಿತ ಸಂಪೂರ್ಣ ಉಡುಪು ಹಾಕುತ್ತಾರೆ. ಶವಕ್ಕೆ ಸ್ನಾನ ಮಾಡಿಸಿ ಅಲಂಕರಿಸಿದಾಗ ಐಮರ ಮೇಲೆ ಅಥವಾ ಮಂಚದ ಮೇಲೆ ಹೆಂಗಸಾದರೆ ಮಲಗಿಸುತ್ತಾರೆ. ಗಂಡಸಾದರೆ ಕೂರಿಸುತ್ತಾರೆ.[೨೧೯] ಈ ಎಲ್ಲ ಪದ್ಧತಿಗಳು ಸತ್ತವರನ್ನು ರಾಜವೈಭವದಿಂದ ಕಳಿಸಿಕೊಡುವುದೇ ಆಗಿದೆ ಎಂದು ಹೇಳಲಾಗುತ್ತದೆ. ಅಲ್ಲದೆ ಒಬ್ಬ ಕೊಡವ ವ್ಯಕ್ತಿ ಯಾವ ರೀತಿ ಬದುಕಿದನೋ ಅದೇ ರೀತಿ ಸಾವಿನಲ್ಲೂ ಇರಲಿ ಎಂಬುದಾಗಿರಬೇಕು.

ಕೊಡವರಲ್ಲಿ ಶವವನ್ನು ಕೊಡವರೇ ಹೊರಬೇಕು. ಶವದ ಗುಂಡಿಯನ್ನು ಉತ್ತರ, ದಕ್ಷಿಣವಾಗಿ ತೆಗೆದಿಡುತ್ತಾರೆ. ಶವದ ತಲೆ ದಕ್ಷಿಣಾಭಿಮುಖವಾಗಿ ಇರಬೇಕು. ಎಲ್ಲರಂತೆ ಇವರಲ್ಲಿಯೂ ಸಹ ಶವವನ್ನು ಸುಡುವುದು ಅಥವಾ ಹೂಳುವುದು ಸಾಮಾನ್ಯ. ಆದರೆ ೧೬ ವರ್ಷಕ್ಕಿಂತ ಚಿಕ್ಕವರನ್ನು ಹೂಳುವರು. ಉಳಿದವರನ್ನು ಸುಡುವರು.[೨೨೦] ಗಂಡಸು ಸತ್ತರೆ ಹಿರಿಮಗನೇ ಕೊಳ್ಳಿ ಹಚ್ಚಬೇಕು. ಗಂಡ ಸತ್ತಾಗ ಹೆಂಡತಿಯು ಈ ಸಂದರ್ಭದಲ್ಲಿ ಏಳುತಿಂಗಳ ಗರ್ಭಿಣಿಯಾಗಿದ್ದರೆ ಅಥವಾ ಅನಾರೋಗ್ಯದಿಂದ ಅಶಕ್ತಳಾಗಿದ್ದರೆ ಕಾರ್ಯಗಳನ್ನೆಲ್ಲಾ ಮನೆಯಲ್ಲಿ ಮಾಡುತ್ತಾರೆ. ಸಂಸ್ಕಾರ ಮಾಡಿ ಹಿಂದಿರುಗುವಾಗ ಇವರು ತಾವು ಬಂದ ದಾರಿಗೆ ಅಡ್ಡವಾಗಿ ಮುಳ್ಳುಹಾಕಿ ನೀನು ಹೋದ ದಾರಿಯಲ್ಲಿ ಯಾರು ಬರದಂತೆ ಕಲ್ಲುಮುಳ್ಳು ಹಾಕಿಕೊಂಡು ಹೋಗು ಎಂದರ್ಥವಾಗಿದೆ. ಸ್ನಾನ ಮಾಡಿದ ನಂತರ ಮನೆಗೆ ಹೋಗುತ್ತಾರೆ. ಸತ್ತ ದಿವಸದಿಂದ ಹನ್ನೊಂದು ದಿವಸದವರೆಗೆ ಸೂತಕವಿರುತ್ತದೆ. ಗಂಡ-ಹೆಂಡತಿ ಇಬ್ಬರ ಸಂಬಂಧಿಕರೂ ಸಹ ಸತ್ತವರಿಗಿಂತ ಕಿರಿಯವರಾದ ಸಂಬಂಧಿಕರಾದ ಗಂಡಸರೆಲ್ಲರೂ ದೀಕ್ಷೆ ನಿಂತು ತಲೆಗೂದಲು, ಗಡ್ಡಮೀಸೆಗಳನ್ನು ಬೋಳಿಸಿಬಿಡುತ್ತಾರೆ. ಯಾವ ಆಭರಣಗಳನ್ನೂ ಆ ಸಂದರ್ಭದಲ್ಲಿ ಧರಿಸುವುದಿಲ್ಲ. ಕೆಂಪು ಬಟ್ಟೆ ಹಾಕುವುದಿಲ್ಲ. ತಿಥಿಯೆಲ್ಲ ಮುಗಿಯುವವರೆಗೆ ಕ್ಷೌರವಿಲ್ಲ, ಕುಪ್ಪಸಚೇಲೆವಿಲ್ಲ. ಈ ಪದ್ಧತಿಯು ಹೆಂಗಸರಿಗೆ ಅನ್ವಯಿಸುವುದಿಲ್ಲ,

ವಿಧವೆಯರು ಇತರೇ ಹಿಂದುಗಳಂತೆ ಪದ್ಧತಿ ಅನುಸರಿಸುತ್ತಾರೆ. ಈ ಸಂದರ್ಭದಲ್ಲಿ ಮನೆಯವರು ಜೇನು, ಹಾಲು, ಮಾಂಸ, ಮೀನು ಇವುಗಳನ್ನು ತಿನ್ನಬಾರದು. ಎಲೆ, ಅಡಿಕೆ ಇಲ್ಲ.[೨೬೧] ಮುಖ್ಯವಾಗಿ ದಿನಕ್ಕೆ ಎರಡು ಬಾರಿ ಊಟ ಮಾಡುತ್ತಾರೆ. ಆಹಾರವನ್ನು ಇವರೇ ತಯಾರಿಸುತ್ತಾರೆ. ಮುಖ್ಯವಾಗಿ ಅನ್ನ, ಸ್ವಲ್ಪ ಉಪ್ಪಿನಕಾಯಿ, ತರಕಾರಿಗಳು ಮಾತ್ರ ತಿಥಿ ಮುಗಿಯುವವರೆಗೆ ಈ ಪದ್ಧತಿಯನ್ನು ಅನುಸರಿಸುತ್ತಾರೆ. ಸೂತಕ ಹನ್ನೊಂದು ದಿನವಿರುತ್ತದೆ. ಕೆಲವೊಂದು ಸಮಯದಲ್ಲಿ ತಿಥಿಕಾರ್ಯವನ್ನು ಮಾಡಲಾಗದಿದ್ದರೆ ೨೮ ದಿನಗಳವರೆಗೆ ಮಾಡುತ್ತಾರೆ. ಈ ಸಂದರ್ಭದಲ್ಲಿ ಇಡೀ ಸಮುದಾಯ, ಗ್ರಾಮದವರನ್ನು ಕರೆದು ಊಟ ಹಾಕಿಸುತ್ತಾರೆ. ಇದರಿಂದ ಸತ್ತವರ ಆತ್ಮಕ್ಕೆ ಶಾಂತಿ ದೊರಕುತ್ತದೆ ಎನ್ನುವರು. ಮುಖ್ಯವಾಗಿ ಸತ್ತ ಸಂದರ್ಭದಲ್ಲಿ ಆತ್ಮಕ್ಕೆ ಶಾಂತಿ ಸಿಗಲೆಂದು ಹಾಡುಗಳನ್ನು ಹಾಡುತ್ತಾರೆ. ಇದು ಹೃದಯವನ್ನು ಕಲಕುತ್ತದೆ ಎಂದು ರಿಕ್ಟರ್ .ಜಿ ಅವರು ಅಭಿಪ್ರಾಯಪಡುತ್ತಾರೆ.[೨೬೨]

ವಸಾಹತುಶಾಹಿ ಕಾಲಘಟ್ಟದ ಅಂದಿನ ಸಮಾಜವು ಹೇಗೆ ಭಿನ್ನವಾಗಿತ್ತು ಎಂಬುದನ್ನು ಗ್ಯಾಸೆಟಿಯರ್‌ಗಳ ಮೂಲಕ ತಿಳಿಯಬಹುದಾಗಿದೆ. ಗ್ಯಾಸೆಟಿಯರ್‌ಗಳಲ್ಲಿ ದಾಖಲಿಸಿರುವ ಅಂಶವು ಆಂಗ್ಲರಿಗೆ ಒಂದು ರೀತಿಯಲ್ಲಿ ಕುತೂಹಲಕಾರಿಯೂ, ಆಶ್ಚರ್ಯಕರವಾಗಿಯೂ ಇಲ್ಲಿನ ಜನರ ಕುರಿತು ಕಂಡುಬಂದಿರುವುದರಿಂದಾಗಿ ಅವರು ಪ್ರತಿಯೊಂದು ಅಂಶವನ್ನು ದಾಖಲಿಸುವ ಪ್ರಯತ್ನ ಮಾಡಿರುತ್ತಾರೆ. ಆಂಗ್ಲರ ಗ್ಯಾಸೆಟಿಯರ್‌ಗಳಲ್ಲಿ ಮುಖ್ಯವಾಗಿ ಗಮನಿಸುವಂತೆ ಮುಂಬಯಿ ಕರ್ನಾಟಕಕ್ಕೆ ಸಂಬಂಧಿಸಿದಂತೆ ಆ ಸಮಾಜದ ಅಲ್ಲಿನ ಜನಜೀವನ ಇತ್ಯಾದಿ ಮಾಹಿತಿಯನ್ನು ಕ್ಯಾಂಬೆಲ್ ಅವರ ಗ್ಯಾಸೆಟಿಯರ್‌ಗಳ ಹೆಚ್ಚಿನ ಮಾಹಿತಿಯ ಮೂಲಕ ತಿಳಿದುಕೊಳ್ಳಬಹುದಾಗಿದೆ. ಆದರೆ ಮೈಸೂರು ಪ್ರಾಂತ್ಯದ ಬೆಂಜ್‌ಮಿನ್ ಲೂಯಿ ರೈಸ್ ಅವರು ಸಾಮಾಜಿಕ ಜೀವನಕ್ಕೆ ಸಂಬಂಧಿಸಿದಂತೆ ಹೆಚ್ಚು ಮಾಹಿತಿಗಳು ಸಿಗುವುದಿಲ್ಲ. ಅವನ್ನು ಹೆಚ್ಚಾಗಿ ಆಡಳಿತಾತ್ಮಕ ಹಾಗೂ ಆರ್ಥಿಕ ದೃಷ್ಟಿಕೋನದಿಂದಲೇ ನೋಡಲಾಗಿದೆ. ಆದರೆ ಸಿ. ಹಯವದನರಾವ್ ಅವರು ಸಮಾಜದ ಕುರಿತು ಉತ್ತಮ ಮಾಹಿತಿಯನ್ನು ಕಲೆ ಹಾಕಿದ್ದಾರೆ. ಮದ್ರಾಸ್ ಕರ್ನಾಟಕಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಮಾಹಿತಿಗಳು ಲಭ್ಯವಾಗುವುದಿಲ್ಲ. ಆದರೂ ಸಹ ಒಳಗೊಂಡಿರುವ ಮಾಹಿತಿಗಳು ಸಮಾಜದ ಕುರಿತ ಹೆಚ್ಚಿನ ಬೆಳಕು ಚೆಲ್ಲುತ್ತವೆ. ಕೊಡಗು ಪ್ರಾಂತ್ಯದ ಕುರಿತು ರಿಚ್ಟರ್ ಅವರ ಗ್ಯಾಸೆಟಿಯರ್‌ನಿಂದಲೇ ಹೆಚ್ಚಿನ ಮಾಹಿತಿ ಸಿಗುತ್ತದೆ. ಇದೇ ಮಾಹಿತಿಯು ಬಿ.ಎಲ್. ರೈಸ್ ಅವರ ಕೂರ್ಗ್ ಗ್ಯಾಸೆಟಿಯರ್‌ನಲ್ಲೂ ಕಾಣಬರುತ್ತದೆ. ಇನ್ನು ಹೈದರಾಬಾದ್ ಸಂಸ್ಥಾನದ ಕುರಿತ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ. ೧೩ರಲ್ಲಿನ ಮಾಹಿತಿಯಿಂದ ತಿಳಿಯಬೇಕಾಗಿದೆ. ಇದರಿಂದಾಗಿ ಇಲ್ಲಿ ಮಾಹಿತಿ ಕೊರತೆ ಇರುವುದನ್ನು ಗಮನಿಸಬಹುದು. ಇದರಿಂದಾಗಿ ಸಾಮಾಜಿಕ ಜೀವನದ ಕುರಿತ ಹೆಚ್ಚಿನ ಮಾಹಿತಿಯನ್ನು ರಿಚ್ಟರ್. ಜಿ. ಜೇಮ್ಸ್ ಎಂ. ಕ್ಯಾಂಬೆಲ್, ಸಿ. ಹಯವದನರಾವ್ ಅವರ ಕೃತಿಗಳಿಂದ ದೊರಕುತ್ತದೆ ಎಂದು ಹೇಳಬಹುದು.

**ಟಿಪ್ಪಣಿಗಳು**

೧. ಗುರುಪ್ರಸಾದ್ ಸಿ.ಟಿ, ನೀಲಗಾರರು: ಒಂದು ಧಾರ್ಮಿಕ ಸಮುದಾಯದ ಅಧ್ಯಯನ, ೨೦೦೨, ಪು.೫೨.

೨. ಶಂಕರರಾವ್ ಚ.ನ, ಸಮಾಜಶಾಸ್ತ್ರದ ಮೂಲತತ್ವಗಳು, ೨೦೦೭, ಪು. ೩೭, ೩೮.

೩. ಗೋವಿಂದರಾಜು ಸಿ.ಆರ್, ಕರ್ನಾಟಕ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ, ೨೦೦೬, ಪು.೩೦.

೪. ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರ್‌ಗಳ ಧೀಮಂತ ಹೆಜ್ಜೆ(ಇಲಾಖೆಯದು).

೫. ವೆಂಕಟರಂಗೋಕಟ್ಟಿ, ಗ್ಯಾಸೆಟಿಯರ್ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ೧೮೯೩, ಪು. ೬೭.೬೮.

೬. ವೆಂಕಟರಂಗೋಕಟ್ಟಿ, ಗ್ಯಾಸೆಟಿಯರ್ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ೧೮೯೩, ಪು. ೬೭, ೭೧.

೭. ವೆಂಕಟರಂಗೋಕಟ್ಟಿ, ಮೇಲಿನದೇ ಪು. ೭೧, ೮೯.

೮. ವೆಂಕಟರಂಗೋಕಟ್ಟಿ ಮೇಲಿನದೇ ಪು. ೯೧.

೯. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಗ್ಯಾಸೆಟಿಯರ್, ಸಂ. ೧೮೮೪, ಪು. ೧೦೩.

೧೦. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೧೦೦, ೧೦೧.

೧೧. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೧೨೧, ೧೨೨.

೧೨. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೨೦೨.

೧೩. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೧೫೮.

೧೪. ವೆಂಕಟರಂಗೋಕಟ್ಟಿ, ಮೇಲಿನದೇ ಪು. ೧೬೯.

೧೫. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೩೦೦.

೧೬. ವೆಂಕಟರಂಗೋಕಟ್ಟಿ, ಮೇಲಿನದೇ, ೧೯೪, ೧೯೭.

೧೭. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೧೮೯, ೧೯೧.

೧೮. ಚಿನ್ನಸ್ವಾಮಿ ಸೋಸಲೆ ಎನ್, ಭಾರತೀಯ ಸಮಾಜ ಮತ್ತು ದಲಿತರು, ೨೦೦೮, ಪು. ೪೪.

೧೯. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೧೯೮, ೨೦೫.

೨೦. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೨೦೬.

೨೧. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೨೦೬, ೨೧೬, ೨೩೧, ೨೪೬.

೨೨. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೨೪೬.

೨೩. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೨೨೨.

೨೪. ನಾರಾಯಣ ಪ್ರಸಾದ್ ಕೆ.ಜಿ, ಕನ್ನಡ ವ್ಯಾಕರಣ ಪರಂಪರೆ(ನಾರಾಯಣ ಕೆ.ವಿ(ಸಂ), ವಿಶ್ವಕೋಶ-೧, ಭಾಷೆ), ೨೦೦೦, ಪು. ೩೩೧.

೨೫. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೬೮.

೨೬. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೪೬, ೨೨೩.

೨೭. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೨೨೭.

೨೮. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೭೦, ೭೧.

೨೯. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೪೮.

೩೦. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೨೮೬, ೨೮೭.

೩೧. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೩೨೨.

೩೨. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೩೨೨.

೩೩. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೯೨, ೯೩.

೩೪. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೧೧೧.

೩೫. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೧೯೯.

೩೬. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೧೭೬.

೩೭. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೧೯೯, ೨೦೦.

೩೮. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೪೮.

೩೯. ಗುರುಪ್ರಸಾದ್ ಸಿ.ಟಿ. ನೀಲಗಾರರು: ಒಂದು ಧಾರ್ಮಿಕ ಸಮುದಾಯದ ಅಧ್ಯಯನ, ೨೦೦೨, ಪು.೬೩.

೪೦. ವೆಂಕಟರಂಗೋಕಟ್ಟಿ, ಮೇಲಿನದೇ, ೧೮೯೩, ಪು. ೮೩, ೮೫, ೧೦೪, ೧೧೨, ೧೧೫, ೧೯೧.

೪೧. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೯೫, ೯೬.

೪೨. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೨೬೧, ೧೧೯, ೨೬೧.

೪೩. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು.೯೦,೩೩೬,೩೪೬.

೪೪. ವೆಂಕಟರಂಗೋಕಟ್ಟಿ, ಮೇಲಿನದೇ, ೧೮೯೩, ಪು. ೧೧೪.

೪೫. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೧೯೯.

೪೬. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೨೨೪.

೪೭. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೨೨೭, ೨೨೮.

೪೮. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೪೦೩.

೪೯. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೩೯೭.

೫೦. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೨೪೮.

೫೧. ಗುರುಪ್ರಸಾದ್ ಸಿ.ಟಿ. ನೀಲಗಾರರು: ಒಂದು ಧಾರ್ಮಿಕ ಸಮುದಾಯದ ಅಧ್ಯಯನ, ೨೦೦೨, ಪು.೫೨.

೫೨. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೮೦, ೨೮.

೫೩. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೧೩೦, ೧೭೪.

೫೪. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೯೩.

೫೫. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೧೩೩.

೫೬. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೧೯೭.

೫೭. ವೆಂಕಟರಂಗೋಕಟ್ಟಿ, ಬೆಳಗಾಂ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್ ಪು. ೧೯೭, ೧೯೮.

೫೮. ವೆಂಕಟರಂಗೋಕಟ್ಟಿ, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೪೦೨.

೫೯. ವೆಂಕಟರಂಗೋಕಟ್ಟಿ, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೩೮೧.

೬೦. ವೆಂಕಟರಂಗೋಕಟ್ಟಿ, ಮೇಲಿನದೇ, ೧೮೯೩, ಪು. ೮೭.

೬೧. ನಾಯಕ ಎಸ್. ಆರ್, ಉತ್ತರ ಕನ್ನಡ ಜಿಲ್ಲೆಯ ನಾಡವರ ಸಂಸ್ಕೃತಿ, ಪು. ೪೬.

೬೨. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೭೮, ೧೦೭.

೬೩. ನಾಯಕ ಎಸ್. ಆರ್, ಉತ್ತರ ಕನ್ನಡ ಜಿಲ್ಲೆಯ ನಾಡವರ ಸಂಸ್ಕೃತಿ, ಪು. ೪೬, ೪೭.

೬೪. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೧೫೭.

೬೫. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೭೭, ೮೬, ೯೬, ೯೭.

೬೬. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೧೦೬, ೧೦೭, ೧೦೮, ೧೧೪, ೧೨೦, ೧೩೩.

೬೭. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೧೩೬, ೧೩೭, ೨೧೭.

೬೮. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೨೩೪, ೨೩೫.

೬೯. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೧೪೨.

೭೦. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೧೯೫.

೭೧. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೨೦೪.

೭೨. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೧೪೭.

೭೩. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೧೮೦, ೧೯೨.

೭೪. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೧೧೦, ೪೦೮.

೭೫. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೨೫೦, ೨೫೧.

೭೬. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೫೧.

೭೭. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೧೩೪, ೧೭೯.

೭೮. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೫೧.

೭೯. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೨೪೯, ೨೫೦.

೮೦. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೭೪, ೭೫.

೮೧. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೭೪, ೭೫, ೧೪೧, ೨೦೬.

೮೨. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೧೦೮, ೧೦೯.

೮೩. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೧೬೪.

೮೪. ಚಿತ್ತರಂಜನ್ ಎಚ್ (ಸಂ), ಕೋಲಾರ ಜಿಲ್ಲಾ ಗ್ಯಾಸೆಟಿಯರ್, ೨೦೦೫, ಪು. ೧೮೭.

೮೫. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೧೧೦.

೮೬. ಚಿತ್ತರಂಜನ್ ಎಚ್.(ಸಂ), ಕೋಲಾರ ಜಿಲ್ಲಾ ಗ್ಯಾಸೆಟಿಯರ್, ೨೦೦೫, ಪು. ೧೮೮.

೮೭. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೭೬, ೯೦, ೧೫೭, ೨೧೮, ೨೨೪.

೮೮. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೨೨೯, ೨೩೬, ೨೫೩.

೮೯. ವೆಂಕಟರಂಗೋಕಟ್ಟಿ, ಮೇಲಿನದೇ, ಪು. ೨೫೫.

೯೦. ಜಾವೇದ ಎಸ್.ಎ(ಮೂಲ), ಅನಂತರಾಮಯ್ಯ ಆರ್.ಎಲ್(ಅನು), 'ಏಕೀಕರಣ', **ಚರಿತ್ರೆ ವಿಶ್ವಕೋಶ ೪**, ವಿಜಯ್ ತಂಬಂಡ ಪೂಣಚ್ಚ(ಸಂ), ೨೦೦೧, ಪು. ೭೯೩.

೯೧. ಚಂದ್ರಶೇಖರ್ ಎಸ್, ವಸಾಹತುಕಾಲೀನ ಕರ್ನಾಟಕ, ೨೦೦೬, ಪು. ೮೧, ೮೨.

೯೨. ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರುಗಳ ಧೀಮಂತ ಹೆಜ್ಜೆ(ಇಲಾಖೆಯದು).

೯೩. ಮುತ್ತಣ್ಣ ಐ.ಮಾ, ೧೯ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ, ಭಾಗ ೧, ೧೯೭೯, ಪು. ೪೮೭.

೯೪. ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರುಗಳ ಧೀಮಂತ ಹೆಜ್ಜೆ(ಇಲಾಖೆಯದು).

೯೫. ರೈಸ್ ಬಿ.ಎಲ್, ಮೈಸೂರು ಅಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೯೭, ಪು. ೮.

೯೬. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೨೧೭, ೨೧೮.

೯೭. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೨೨೦.

೯೮. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೨೧೯.

೯೯. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್, ಸಂ. ೧, ೧೯೨೭, ಪು. ೩೬೦.

೧೦೦. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೨೨೦.

೧೦೧. ಗುಂಡಣ್ಣ ಎಂ, ಮೈಸೂರಿನ ಕೈಗನ್ನಡಿ ಎಂಬ ವಾರ್ಷಿಕ ವರದಿ, ೧೯೩೮, ಪು. ೨೩, ೨೪.

೧೦೨. ಎಡ್ಗರ್ ಥರ್ಸ್ಟನ್, ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್, ಸಂ. ೫. ಪು.

೧೦೩. ಸೂರ್ಯನಾಥ ಕಾಮತ್, ಕರ್ನಾಟಕ ಇತಿಹಾಸದ ಹಲವು ಮುಖಗಳು, ೨೦೦೬, ಪು. ೨೩, ೨೪.

೧೦೪. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್, ಸಂ. ೧, ೧೯೨೭-೩೦, ಪು. ೧೭೮.

೧೦೫. ಸೂರ್ಯನಾಥ ಕಾಮತ್, ಕರ್ನಾಟಕ ಇತಿಹಾಸದ ಹಲವು ಮುಖಗಳು, ೨೦೦೬, ಪು. ೧೩೨.

೧೦೬. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್, ಸಂ. ೧, ೧೯೨೭-೩೦, ಪು. ೧೭೯, ೧೮೦.

೧೦೭. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೨೨, ೨೪.

೧೦೮. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೨೨೫.

೧೦೯. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೨೨೬, ೨೨೭.

೧೧೦. ಹಯವದನ್‌ರಾವ್ ಸಿ, ಮೈಸೂರು ಗ್ಯಾಸೆಟಿಯರ್, ಸಂ. ೧, ೧೯೨೭-೩೦, ಪು. ೧೭೯, ೨೧೭.

೧೧೧. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್, ಸಂ. ೧, ೧೯೨೭-೩೦, ಪು. ೪೦೬.

೧೧೨. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೨೭೦.

೧೧೩. ಗುಂಡಣ್ಣ ಎಂ, ಮೈಸೂರಿನ ಕೈಗನ್ನಡಿ ಎಂಬ ವಾರ್ಷಿಕ ವರದಿ, ೧೯೩೮, ಪು. ೩೧.

೧೧೪. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೪೯೦.

೧೧೫. ಗುಂಡಣ್ಣ ಎಂ, ಮೈಸೂರಿನ ಕೈಗನ್ನಡಿ ಎಂಬ ವಾರ್ಷಿಕ ವರದಿ, ೧೯೩೮, ಪು. ೩೦.

೧೧೬. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೪೮೮.

೧೧೭. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೨೬೩.

೧೧೮. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್ ಸಂ. ೧, ೧೯೨೭-೩೦, ಪು. ೪೧೭, ೪೧೮.

೧೧೯. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೧೧೨.

೧೨೦. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೨, ೧೮೯೭, ಪು. ೨೨೯.

೧೨೧. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೫೦೭.

೧೨೨. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್ ಸಂ. ೧, ೧೯೯೭-೩೦, ಪು. ೩೬೩.

೧೨೩. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೨೬೪.

೧೨೪. ಅನಂತಕೃಷ್ಣ ಅಯ್ಯರ್, ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್, ಸಂ. ೫, ೧೯೩೫, ಪು. ೧೭.

೧೨೫. ಅನಂತಕೃಷ್ಣ ಅಯ್ಯರ್, ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್, ಸಂ. ೫, ೧೯೩೫, ಪು. ೭೩.

೧೨೬. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್, ಸಂ. ೧, ೧೯೨೭, ಪು. ೪೨೦.

೧೨೭. ಅನಂತಕೃಷ್ಣ ಅಯ್ಯರ್, ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್, ಸಂ. ೫, ೧೯೩೫, ಪು. ೭೩.

೧೨೮. ಚಿನ್ನಸ್ವಾಮಿ ಸೋಸಲೆ ಎನ್, ಸಾಮ್ರಾಜ್ಯ ಮತ್ತು ಸಂಸ್ಥಾನ, ೨೦೦೪, ಪು. ೨೭೯.

೧೨೯. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೫೨೯.

೧೩೦. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್, ಸಂ. ೧, ೧೯೨೭, ಪು. ೪೨೬.

೧೩೧. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್, ಸಂ. ೧, ೧೯೨೭, ಪು. ೪೨೮.

೧೩೨. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೪೫೪, ೪೫೭.

೧೩೩. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೨, ೧೮೯೭, ಪು. ೩೦, ೧೧೩, ೧೧೪, ೧೭೦, ೨೩೦, ೨೩೧, ೩೩೭, ೩೮೩, ೩೮೪, ೪೪೧, ೪೪೨, ೫೦೮.

೧೩೪. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್, ಸಂ. ೧, ೧೯೩೦, ಪು. ೨೦೮, ೨೦೯.

೧೩೫. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್, ಸಂ. ೧, ೧೯೨೭-೩೦, ಪು. ೧೮೮, ೧೮೯, ೧೯೦, ೧೯೨, ೧೯೮, ೨೦೨, ೨೦೩.

೧೩೬. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್, ಸಂ. ೧, ೧೯೨೭-೩೦, ಪು. ೨೦೮, ೨೦೯.

೧೩೭. ಗೋವಿಂದರಾಜು ಸಿ.ಆರ್, ಕರ್ನಾಟಕ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ, ೨೦೦೬, ಪು. ೨೮, ೨೯.

೧೩೮. ಶ್ರೀನಿವಾಸಮೂರ್ತಿ ಕೆ.ಎಂ, ಕನ್ನಡಪರ ಚಿಂತನೆ ಮತ್ತು ಪರಂಪರೆ, ೨೦೦೩, ಪು. ೨೯.

೧೩೯. ಗೋವಿಂದರಾಜು ಸಿ.ಆರ್, ಕರ್ನಾಟಕ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ, ೨೦೦೬, ಪು. ೨೯.

೧೪೦. ಅಮರೇಶ ನುಗಡೋಣಿ ಎನ್, ಹೈದರಾಬಾದ್ ಕರ್ನಾಟಕದ ಹಾಡು-ಪಾಡು, ೨೦೦೩, ಪು. ೪೬.

೧೪೧. ಗೋಪಾಲರಾವ್ ಹೇಜೀಬ್, ಹೈದರಾಬಾದ್ ಮುಕ್ತಿ ಸಂಘರ್ಷ, ೨೦೦೧, ಪು. ೧.

೧೪೨. ಗೋಪಾಲರಾವ್ ಎಚ್.ಎಸ್, ಕರ್ನಾಟಕ ಏಕೀಕರಣ ಇತಿಹಾಸ, ೨೦೦೧, ಪು. ೧.

೧೪೩. ಗೋಪಾಲರಾವ್ ಹೇಜೀಬ್, ಹೈದರಾಬಾದ್ ಮುಕ್ತಿ ಸಂಘರ್ಷ, ೨೦೦೧, ಪು. ೧೩.

೧೪೪. ಅಮರೇಶ ನುಗಡೋಣಿ ಎನ್, ಹೈದರಾಬಾದ್ ಕರ್ನಾಟಕದ ಹಾಡು-ಪಾಡು, ೨೦೦೩, ಪು. ೬೯.

೧೪೫. ಅಮರೇಶ ನುಗಡೋಣಿ ಎನ್, ಹೈದರಾಬಾದ್ ಕರ್ನಾಟಕದ ಹಾಡು-ಪಾಡು, ೨೦೦೩, ಪು. ೪೯.

೧೪೬. ಪಾಟೀಲ್ ಎಂ.ಬಿ(ಮು.ಸಂ), 'ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್', ೧೯೯೭, ಪು. ೫.

೧೪೭. ಅಮರೇಶ ನುಗಡೋಣಿ ಎನ್, ಹೈದರಾಬಾದ್ ಕರ್ನಾಟಕದ ಹಾಡು-ಪಾಡು, ೨೦೦೩, ಪು. ೬೬.

೧೪೮. ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ, ಸಂ. ೧೩, ೧೯೦೮, ಪು. ೨೩೪.

೧೪೯. ಹಂಟರ್ ಡಬ್ಲ್ಯು, ಡಬ್ಲ್ಯು(ಸಂ), ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ. ೧೩, ೧೯೦೮, ಪು. ೨೩೪.

೧೫೦. ಹಂಟರ್ ಡಬ್ಲ್ಯು, ಡಬ್ಲ್ಯು(ಸಂ), ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ. ೧೩, ೧೯೦೮, ಪು. ೨೪೪.

೧೫೧. ಪಾಟೀಲ್ ಎಂ.ಬಿ(ಮು.ಸಂ), 'ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್', ೧೯೯೭, ಪು. ೫.

೧೫೨. ಹಂಟರ್ ಡಬ್ಲ್ಯು, ಡಬ್ಲ್ಯು(ಸಂ), ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ.೧೩, ೧೯೦೮, ಪು. ೨೪೬.

೧೫೩. ಗೋಪಾಲರಾವ್ ಹೇಜೀಬ್, ಹೈದರಾಬಾದ್ ಮುಕ್ತಿ ಸಂಘರ್ಷ, ೨೦೦೧, ಪು. ೧೩.

೧೫೪. ಪಾಟೀಲ್ ಎಂ.ಬಿ(ಮು.ಸಂ), 'ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್', ೧೯೯೭, ಪು. ೫.

೧೫೫. ಹಂಟರ್ ಡಬ್ಲ್ಯು, ಡಬ್ಲ್ಯು(ಸಂ), ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ.೧೩, ೧೯೦೮, ಪು. ೨೪೭.

೧೫೬. ಗೋಪಾಲರಾವ್ ಹೇಜೀಬ್, ಹೈದರಾಬಾದ್ ಮುಕ್ತಿ ಸಂಘರ್ಷ, ೨೦೦೧, ಪು. ೧೩.

೧೫೭. ಹಂಟರ್ ಡಬ್ಲ್ಯು, ಡಬ್ಲ್ಯು(ಸಂ), ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ.೧೩, ೧೯೦೮, ಪು. ೧೩.

೧೫೮. ಹಂಟರ್ ಡಬ್ಲ್ಯು, ಡಬ್ಲ್ಯು(ಸಂ), ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ.೧೩, ೧೯೦೮, ಪು. ೨೪೭.

೧೫೯. ಗೋಪಾಲರಾವ್ ಹೇಜೀಬ್, ಹೈದರಾಬಾದ್ ಮುಕ್ತಿ ಸಂಘರ್ಷ, ೨೦೦೧, ಪು. ೧೪, ೧೫.

೧೬೦. ಹಂಟರ್ ಡಬ್ಲ್ಯು, ಡಬ್ಲ್ಯು(ಸಂ), ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ.೧೩, ೧೯೦೮, ಪು. ೨೫೦.

೧೬೧. ಹಂಟರ್ ಡಬ್ಲ್ಯು, ಡಬ್ಲ್ಯು(ಸಂ), ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ.೧೩, ೧೯೦೮, ಪು. ೨೪೯.

೧೬೨. ಹಂಟರ್ ಡಬ್ಲ್ಯು, ಡಬ್ಲ್ಯು(ಸಂ), ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ.೧೩, ೧೯೦೮, ಪು. ೨೪೯.

೧೬೩. ಹಂಟರ್ ಡಬ್ಲ್ಯು, ಡಬ್ಲ್ಯು(ಸಂ), ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ.೧೩, ೧೯೦೮, ಪು. ೨೫೦.

೧೬೪. ಹಂಟರ್ ಡಬ್ಲ್ಯು, ಡಬ್ಲ್ಯು(ಸಂ), ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ.೧೩, ೧೯೦೮, ಪು. ೨೫೦.

೧೬೫. ಗೋವಿಂದರಾಜು ಸಿ.ಆರ್, ಕರ್ನಾಟಕದ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ, ೨೦೦೬, ಪು. ೩೦.

೧೬೬. ಮ್ಯಾಕ್ಲೀನ್ ಸಿ.ಡಿ(ಸಂ), ಮ್ಯಾನ್ಯುಯಲ್ ಆಫ್ ದಿ ಅಡ್ಮಿನಿಷ್ಟ್ರೇಷನ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ, ಸಂ. ೧, ೧೮೮೫, ಪು. ೯.

೧೬೭. ಜಾನ್‌ಕೆಲ್‌ಸಾಲ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೧, ೧೮೭೨, ಪುಟ. ೮೬.

೧೬೮. ಹಾಲ್ ಜೆ.ಎಫ್, ಕೃಷ್ಣಯ್ಯಂಗಾರ್, ಮದ್ರಾಸ್ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್ಸ್ ಸ್ಟಡಿ ಸ್ಪಿಂಕ್ಸ್ ಅಪೆಂಡಿಕ್ಸ್ ಟುಗೆದರ್ ವಿತ್ ಎ ಸಪ್ಲಿಮೆಂಟ್ ಡಿಸ್ಟ್ರಿಕ್ಟ್ ಮ್ಯಾನ್ಯುಯಲ್ ಪಾರ್ ದಿ ಸೌತ್‌ಕೆನರಾ ಡಿಸ್ಟ್ರಿಕ್ಟ್, ೧೯೩೮, ಪು. ೭.

೧೬೯. ಜಾನ್ ಸ್ಟರ್ರೋಕ್, ಸೌತ್‌ಕೆನರಾ ಮ್ಯಾನ್ಯುಯಲ್ ಸಂ. ೧, ೧೮೯೪, ಪುಟ. ೧೩೭.

೧೭೦. ಹೆರಾಲ್ಡ್ ಎ ಸ್ಟೂವರ್ಟ್, ಸೌತ್‌ಕೆನರಾ ಮ್ಯಾನ್ಯುಯಲ್ ಸಂ. ೨, ೧೮೯೫, ಪು. ೧೫, ೧೬.

೧೭೧. ವಿಲಿಯಂ ಫ್ರಾನ್ಸಿಸ್, ಬಳ್ಳಾರಿ ಮ್ಯಾನ್ಯುಯಲ್ ಸಂಪುಟ. ೨, ೧೯೦೫, ಪು. ೧೨೫.

೧೭೨. ಮ್ಯಾಕ್ಲೀನ್ ಸಿ.ಡಿ(ಸಂ), ಮ್ಯಾನ್ಯುಯಲ್ ಆಫ್ ದಿ ಅಡ್ಮಿನಿಷ್ಟ್ರೇಶನ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ, ಸಂ. ೧, ೧೮೮೫, ಪು. ೬೬.

೧೭೩. ಜಾನ್‌ಕೆಲ್‌ನಾಲ್ ಬಳ್ಳಾರಿ ಮ್ಯಾನ್ಯುಯಲ್ ಸಂಪುಟ. ೧, ೧೮೭೨, ಪು. ೮೧.

೧೭೪. ಹೆರಾಲ್ಡ್ ಎ ಸ್ಟೂವರ್ಟ್, ಸೌತ್‌ಕೆನರಾ ಮ್ಯಾನ್ಯುಯಲ್ ಸಂ. ೭, ೧೮೯೫, ಪು. ೧೪೬.

೧೭೫. ಮ್ಯಾಕ್ಲೀನ್ ಸಿ.ಡಿ(ಸಂ), ಮೇಲಿನದೇ, ೧೮೮೫, ಪು. ೬೭.

೧೭೬. ಹೆರಾಲ್ಡ್ ಎ ಸ್ಟೂವರ್ಟ್, ಸೌತ್‌ಕೆನರಾ ಮ್ಯಾನ್ಯುಯಲ್ ಸಂಪುಟ. ೨, ೧೮೯೫, ಪು. ೧೪೬.

೧೭೭. ವಿಲಿಯಂ ಫ್ರಾನ್ಸಿಸ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೨, ೧೯೦೫, ಪುಟ. ೭೭, ೮೮.

೧೭೮. ವಿಲಿಯಂ ಫ್ರಾನ್ಸಿಸ್, ಬಳ್ಳಾರಿ ಮ್ಯಾನ್ಯುಯಲ್ ಸಂಪುಟ. ೨, ಪುಟ. ೧೫೪, ೧೫೭.

೧೭೯. ಮ್ಯಾಕ್ಲೀನ್ ಸಿ.ಡಿ(ಸಂ), ಮೇಲಿನದೇ ಸಂ. ೧, ೧೮೮೫ ಪುಟ.

೧೮೦. ಹೆರಾಲ್ಡ್ ಎ ಸ್ಟೂವರ್ಟ್, ಸೌತ್‌ಕೆನರಾ ಮ್ಯಾನ್ಯುಯಲ್ ಸಂ. ೨, ೧೮೯೫, ಪು. ೨೬.

೧೮೧. ವಿಲಿಯಂ ಫ್ರಾನ್ಸಿಸ್, ಬಳ್ಳಾರಿ ಮ್ಯಾನ್ಯುಯಲ್ ಸಂ.೨, ೧೯೦೫ ಪು. ೨೭, ೪೧, ೪೭, ೫೩, ೫೯.

೧೮೨. ಜಾನ್‌ಕೆಲ್‌ಸಾಲ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೧, ೧೮೭೨, ಪುಟ. ೨೮೬.

೧೮೩. ಜಾನ್‌ಕೆಲ್‌ಸಾಲ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೧, ೧೮೭೨ ಪು. ೫೭.

೧೮೪. ಹೆರಾಲ್ಡ್ ಎ ಸ್ಟೂವರ್ಟ್, ಸೌತ್‌ಕೆನರಾ ಮ್ಯಾನ್ಯುಯಲ್ ಸಂ. ೨, ೧೮೯೫, ಪುಟ. ೩.

೧೮೫. ಹೆರಾಲ್ಡ್ ಎ ಸ್ಟೂವರ್ಟ್, ಸೌತ್‌ಕೆನರಾ ಮ್ಯಾನ್ಯುಯಲ್ ಸಂ. ೨, ೧೮೯೫, ಪು. ೪.

೧೮೬. ಜಾನ್‌ಕೆಲ್‌ಸಾಲ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೧, ೧೮೭೨, ಪುಟ. ೨೮೫.

೧೮೭. ವಿಲಿಯಂ ಫ್ರಾನ್ಸಿಸ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೨, ೧೯೦೪, ಪುಟ. ೫೮, ೫೯.

೧೮೮. ಜಾನ್‌ಕೆಲ್‌ಸಾಲ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೧, ೧೮೭೨, ಪುಟ. ೨೮೫.

೧೮೯. ಜಾನ್‌ಸ್ಟರ್ರೋಕ್, ಸೌತ್‌ಕೆನರಾ ಮ್ಯಾನ್ಯುಯಲ್ ಸಂ. ೧, ೧೮೯೪, ಪುಟ. ೧೫೯.

೧೯೦. ವಿಲಿಯಂ ಫ್ರಾನ್ಸಿಸ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೨, ೧೯೦೪, ಪು. ೫೯.

೧೯೧. ಜಾನ್‌ಸ್ಟರ್ರೋಕ್, ಸೌತ್‌ಕೆನರಾ ಮ್ಯಾನ್ಯುಯಲ್ ಸಂ. ೧, ೧೮೯೪, ಪುಟ. ೧೬೦.

೧೯೨. ವಿಲಿಯಂ ಫ್ರಾನ್ಸಿಸ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೨, ೧೯೦೪, ಪುಟ. ೬೪.

೧೯೩. ಜಾನ್‌ಸ್ಟರ್ರೋಕ್, ಸೌತ್‌ಕೆನರಾ ಸಂ. ೧, ೧೮೯೪, ಪುಟ. ೧೬೦.

೧೯೪. ಜಾನ್‌ಸ್ಟರ್ರೋಕ್, ಸೌತ್‌ಕೆನರಾ ಸಂ. ೧, ೧೮೯೪, ಪುಟ. ೧೫೧.

೧೯೫. ಜಾನ್‌ಸ್ಟರ್ರೋಕ್, ಸೌತ್‌ಕೆನರಾ ಸಂ. ೧, ೧೮೯೪, ಪುಟ. ೧೬೦.

೧೯೬. ವಿಲಿಯಂ ಫ್ರಾನ್ಸಿಸ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೨, ೧೯೦೪, ಪುಟ. ೬೬.

೧೯೭. ಜಾನ್‌ಸ್ಟರ್ರೋಕ್, ಸೌತ್‌ಕೆನರಾ ಸಂ. ೧, ೧೮೯೪, ಪುಟ. ೧೫೧.

೧೯೮. ಜಾನ್‌ಸ್ಟರ್ರೋಕ್, ಸೌತ್‌ಕೆನರಾ ಮ್ಯಾನ್ಯುಯಲ್ ಸಂ. ೧, ೧೮೯೪, ಪುಟ. ೧೩೮.

೧೯೯. ಮ್ಯಾಕ್ಲೀನ್ ಸಿ.ಡಿ, ಮೇಲಿನದೇ, ಸಂ. ೧, ೧೮೮೫, ಪುಟ. ೮೨.

೨೦೦. ಜಾನ್‌ಸ್ಟರ್ರೋಕ್, ಸೌತ್‌ಕೆನರಾ ಮ್ಯಾನ್ಯುಯಲ್ ಸಂ. ೧, ೧೮೯೪, ಪುಟ. ೧೪೦.

೨೦೧. ಮ್ಯಾಕ್ಲೀನ್, ಮೇಲಿನದೇ, ಸಂ. ೧, ೧೮೮೫, ಪುಟ. ೮೨.

೨೦೨. ವಿಲಿಯಂ ಫ್ರಾನ್ಸಿಸ್, ಬಳ್ಳಾರಿ ಮ್ಯಾನ್ಯುಯಲ್ ಸಂಪುಟ. ೨, ೧೯೦೪, ಪುಟ. ೬೦, ೬೧.

೨೦೩. ಜಾನ್‌ಕೆಲ್‌ಸಾಲ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೧, ೧೮೭೨, ಪುಟ. ೨೯೩, ೨೯೫.

೨೦೪. ಮ್ಯಾಕ್ಲೀನ್ ಸಿ.ಡಿ, ಮೇಲಿನದೇ, ಸಂ. ೧, ೧೮೮೫, ಪುಟ. ೯೩.

೨೦೫. ಮ್ಯಾಕ್ಲೀನ್ ಸಿ.ಡಿ, ಮೇಲಿನದೇ, ಸಂ. ೨, ೧೮೮೫, ಪುಟ. ೨೩೭.

೨೦೬. ವಿಜಯ್ ತಂಬಂಡ ಪೂಣಚ್ಚ (ಸಂ), 'ಆಧುನಿಕ ಕೊಡಗು', ೨೦೦೦, ಪು. ೧೮, ೧೯.

೨೦೭. ವಿಜಯ್ ತಂಬಂಡ ಪೂಣಚ್ಚ(ಸಂ), 'ಆಧುನಿಕ ಕೊಡಗು', ೨೦೦೦, ಪು. ೨೦, ೨೧.

೨೦೮. ವಿಜಯ್ ತಂಬಂಡ ಪೂಣಚ್ಚ(ಸಂ), ಕೊಡಗು ವಿವರಣೆ, ೨೦೦೫, ಪು. ೧.

೨೦೯. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್, ಸಂ.೩, ೧೮, ೭೮, ಪು. ೨೩೦.

೨೧೦. ರಾಮಾನುಜಂ ಟಿ.ಎಸ್, 'ಕೊಡವರು', ೧೯೭೫, ಪು. ೧, ೨.

೨೧೧. ಕೃಷ್ಣಪ್ಪ ಡಿ.ಎನ್, ಕೊಡಗಿನ ಇತಿಹಾಸ, ೧೯೯೫, ಪು. ೬೧೩, ೬೧೪.

೨೧೨. ಕೃಷ್ಣಪ್ಪ ಡಿ.ಎನ್, ಕೊಡಗಿನ ಇತಿಹಾಸ, ೧೯೯೫, ಪು. ೬೧೩.

೨೧೩. ವಿಜಯ್ ತಂಬಂಡ ಪೂಣಚ್ಚ(ಸಂ), 'ಆಧುನಿಕ ಕೊಡಗು', ೨೦೦೦, ಪು. ೨೧, ೨೩.

೨೧೪. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೧೬.

೨೧೫. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮, ಪು. ೨೦೪.

೨೧೬. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೧೦.

೨೧೭. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮, ಪು. ೨೧೨.

೨೧೮. ಭೀಮಂಡ ಕುಶಾಲಪ್ಪ, 'ಕೊಡಗು'(ಚರಿತ್ರೆ ನಿವಾಸಿಗಳು ಮತ್ತು ಪ್ರಭಾವ), ೧೯೯೩, ಪು. ೭೧.

೨೧೯. ವಿಜಯ್ ತಂಬಂಡ ಪೂಣಚ್ಚ(ಸಂ), ಕೊಡಗು ವಿವರಣೆ, ೨೦೦೫, ಪು. ೨೧, ೨೩, ೨೫.

೨೨೦. ರಿಕ್ಟರ್ .ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೧೭.

೨೨೧. ವಿಜಯ್ ತಂಬಂಡ ಪೂಣಚ್ಚ(ಸಂ), ಆಧುನಿಕ ಕೊಡಗು, ೨೦೦೦, ಪು. ೮.

೨೨೨. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್, ೧೮೭೮, ಪು. ೨೭೯.

೨೨೩. ವಿಜಯ್ ತಂಬಂಡ ಪೂಣಚ್ಚ(ಸಂ), 'ಆಧುನಿಕ ಕೊಡಗು', ೨೦೦೦, ಪು. ೩೦.

೨೨೪. ಸೂರ್ಯನಾಥ ಯು ಕಾಮತ್, ಕೊಡಗು ಗ್ಯಾಸೆಟಿಯರ್, ೧೯೯೨, ಪು. ೨೦೯, ೨೧೦.

೨೨೫. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೨೯, ೧೩೦.

೨೨೬. ಮೇಲಿನದೇ, ಪು. ೧೩೧.

೨೨೭. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮, ಪು. ೨೪೦.

೨೨೮. ಸೂರ್ಯನಾಥ ಯು ಕಾಮತ್, ಕೊಡಗು ಗ್ಯಾಸೆಟಿಯರ್, ೧೯೯೨, ಪು. ೨೧೪.

೨೨೯. ಕೃಷ್ಣಪ್ಪ ಡಿ.ಎನ್, ಕೊಡಗಿನ ಇತಿಹಾಸ, ೧೯೯೫, ಪು. ೬೨೦.

೨೩೦. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮, ಪು. ೨೨೧.

೨೩೧. ಸೂರ್ಯನಾಥ ಯು ಕಾಮತ್, ಕೊಡಗು ಗ್ಯಾಸೆಟಿಯರ್, ೧೯೯೨, ಪು. ೨೧೪

೨೩೨. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮, ಪು. ೨೨೧.

೨೩೩. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೫೧.

೨೩೪. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮, ಪು. ೨೨೩.

೨೩೫. ಸೂರ್ಯನಾಥ ಯು ಕಾಮತ್, ಕೊಡಗು ಗ್ಯಾಸೆಟಿಯರ್, ೧೯೯೨, ಪು. ೨೧೨.

೨೩೬. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೨೩.

೨೩೭. ಸೂರ್ಯನಾಥ ಯು ಕಾಮತ್, ಕೊಡಗು ಗ್ಯಾಸೆಟಿಯರ್, ೧೯೯೨, ಪು. ೨೧೨.

೨೩೮. ರಾಮಾನುಜಂ ಟಿ.ಎಸ್, 'ಕೊಡವರು', ಪು. ೭೦, ೭೩.

೨೩೯. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ.೩, ೧೮೭೮, ಪು.೨೨೧,೨೩೪.

೨೪೦. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ.೩, ೧೮೭೮, ಪು.೨೨೧,೨೩೪.

೨೪೧. ಕೃಷ್ಣಪ್ಪ ಡಿ.ಎನ್, ಕೊಡಗಿನ ಇತಿಹಾಸ, ೧೯೭೫, ಪು. ೬೨೦.

೨೪೨. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೩೨, ೧೩೩.

೨೪೩. ಸೂರ್ಯನಾಥ ಯು ಕಾಮತ್, ಕೊಡಗು ಗ್ಯಾಸೆಟಿಯರ್, ೧೯೯೨, ಪು. ೨೦೪.

೨೪೪. ರಾಮಾನುಜಂ ಟಿ.ಎಸ್, 'ಕೊಡವರು', ಪು. ೭೨, ೭೩.

೨೪೫. ಸೂರ್ಯನಾಥ ಯು ಕಾಮತ್, ಕೊಡಗು ಗ್ಯಾಸೆಟಿಯರ್, ೧೯೯೨, ಪು. ೨೦೪.

೨೪೬. ರಾಮಾನುಜಂ ಟಿ.ಎಸ್, 'ಕೊಡವರು', ಪು. ೬೫, ೬೬.

೨೪೭. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೪೧, ೧೪೨.

೨೪೮. ಸೂರ್ಯನಾಥ ಕಾಮತ್, ಕೊಡಗು ಗ್ಯಾಸೆಟಿಯರ್, ೧೯೯೨, ಪು. ೨೦೩.

೨೪೯. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮, ಪು. ೨೨೧.

೨೫೦. ಕೃಷ್ಣಪ್ಪ ಡಿ.ಎನ್, ಕೊಡಗಿನ ಇತಿಹಾಸ, ೧೯೭೫, ಪು. ೬೨೦.

೨೫೧. ರಾಮಾನುಜಂ ಟಿ.ಎಸ್, 'ಕೊಡವರು', ೧೯೭೫, ಪು. ೧೦೪, ೧೦೫.

೨೫೨. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೪೦.

೨೫೩. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೫೧, ೧೫೨.

೨೫೪. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೫೮.

೨೫೫. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೬೨, ೧೬೩.

೨೫೬. ರಾಮಾನುಜಂ ಟಿ.ಎಸ್, 'ಕೊಡವರು', ೧೯೭೫, ಪು. ೪೯.

೨೫೭. ಸೂರ್ಯನಾಥ ಯು ಕಾಮತ್, ಕೊಡಗು ಗ್ಯಾಸೆಟಿಯರ್, ೧೯೯೨, ಪು. ೨೦೫

೨೫೮. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೪೩.

೨೫೯. ಸೂರ್ಯನಾಥ ಯು ಕಾಮತ್, ಕೊಡಗು ಗ್ಯಾಸೆಟಿಯರ್, ೧೯೯೨, ಪು. ೨೦೬

೨೬೦. ರಾಮಾನುಜಂ ಟಿ.ಎಸ್, 'ಕೊಡವರು', ೧೯೭೫, ಪು. ೧೨೭, ೧೨೯.

೨೬೧. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್, ಸಂ. ೩, ೧೮೭೮, ಪು. ೨೪೧.

೨೬೨. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೧೪೩, ೧೪೪.

# ಅಧ್ಯಾಯ ನಾಲ್ಕು

# ಆಡಳಿತ, ಭೂಪರಿಸರ ಮತ್ತು ಆರ್ಥಿಕತೆಯ ನೆಲೆಗಳಲ್ಲಿ ಗ್ಯಾಸೆಟಿಯರ್‌ಗಳ ವಿಶ್ಲೇಷಣೆ

## ಆಡಳಿತ, ಭೂಪರಿಸರ ಮತ್ತು ಆರ್ಥಿಕತೆಯ ನೆಲೆಗಳಲ್ಲಿ ಗ್ಯಾಸೆಟಿಯರ್‌ಗಳ ವಿಶ್ಲೇಷಣೆ

ನಮ್ಮ ಅನೇಕ ಆಡಳಿತಾತ್ಮಕ ವ್ಯವಸ್ಥೆಗಳು ಹಿಂದಿನ ಪರಂಪರೆಯಿಂದ ಮುಂದುವರೆದಿವೆ. ಭಾರತದ ಯಾವುದೇ ಭಾಗ, ಹಿಂದೂ ರಾಜ್ಯಶಾಸ್ತ್ರ ಗ್ರಂಥಗಳಾದ 'ಮನುಸ್ಮೃತಿ', 'ಅರ್ಥಶಾಸ್ತ್ರ' ಮತ್ತು ಕಮಂಡಕನ 'ನೀತಿಸಾರ'ಗಳಿಂದ ಪ್ರಭಾವಗೊಂಡಂತೆ ಕರ್ನಾಟಕದಲ್ಲಿ ಆಡಳಿತ ಪದ್ಧತಿ ಸಹ ಪ್ರಭಾವಕ್ಕೆ ಒಳಪಟ್ಟಿತ್ತು ಎನ್ನುವ ಅಂಶ ೧,೨೦೦ ವರ್ಷಗಳಿಗಿಂತಲೂ ಹಿಂದಿನ ಶಾಸನಗಳಿಂದ ತಿಳಿದುಬರುತ್ತದೆ. 'ನಾಡು' ಎಂಬುದು ೨೦ ಅಥವಾ ೩೦ ಹಳ್ಳಿಗಳನ್ನು ಹೊಂದಿದ ಆಡಳಿತ ಘಟಕವಾಗಿತ್ತು.

ಹಿಂದಿನ ಕಾಲದಲ್ಲಿ ರಾಜರ ಆಡಳಿತಕ್ಕೆ ಅನುಕೂಲವಾಗುವಂತೆ ರಾಜ್ಯದಲ್ಲಿ ಪ್ರಾಂತ, ಮಂಡಲ, ದೇಶ ಅಥವಾ ರಾಷ್ಟ್ರ ಮತ್ತು ರಾಷ್ಟ್ರೀಯ(ವಲಯ)ವೆಂದು ವಿಭಾಗಿಸಲಾಗಿತ್ತು. ಪ್ರಾಂತ್ಯಗಳಿಗೆ ಗೊತ್ತಾದ ಕೆಲವು ಸಂಖ್ಯೆಯ ಗ್ರಾಮಗಳನ್ನು ಹೊಂದಿತ್ತು. ನಾಡನ್ನು ವಿಷಯ ಎಂದು ಕರೆಯಲಾಗಿತ್ತು. ಪ್ರತಿ ಪ್ರಾಂತ್ಯದ ಆಡಳಿತ ಸೌಕರ್ಯಕ್ಕೆ ಈ ಘಟ್ಟದಲ್ಲಿ ಸ್ಥಳೀಯ ವಂಶಪರಂಪರೆಯ ಅಧಿಕಾರಿಗಳ ಜೊತೆಗೆ ಹಿರಿಯ ರಾಜ್ಯ ಪ್ರತಿನಿಧಿ ಅಥವಾ ರಾಜ್ಯಪಾಲರ ನೇಮಕವೂ ಆಗಿತ್ತು. ಜಿಲ್ಲೆಯ ಆಡಳಿತಕ್ಕಾಗಿ ಕೆಲವು ನಿರ್ದಿಷ್ಟ ಅಧಿಕಾರ ಹೊಂದಿದ್ದ ನಾಡಗಾವುಂಡರನ್ನು ನೇಮಿಸಲಾಗಿತ್ತು. ಗ್ರಾಮಮಟ್ಟದಲ್ಲಿ ಹಲವಾರು ಅಧಿಕಾರಿಗಳಿದ್ದು ಅವರನ್ನು ಪಟೇಲ ಅಥವಾ ಗೌಡರು ಎಂದು ಕರೆಯುತ್ತಿದ್ದರು. ಗ್ರಾಮದ ಮುಖ್ಯಸ್ಥ ಅಲ್ಲಿಯ ಪೊಲೀಸ್ ಅಧಿಕಾರಿ ಆಗಿದ್ದನು. ಗ್ರಾಮದ ದಾಖಲೆಗಳನ್ನು(ಭೂಕಂದಾಯ) 'ಶಾನುಭೋಗ', 'ಸೇನಭೋವ' ಅಥವಾ 'ಕುಲಕರ್ಣಿ' (ಕರಣಿಕ) ಇವರು ನೋಡಿಕೊಳ್ಳುತ್ತಿದ್ದರು ಎಂದು ಶಾಸನಗಳು ತಿಳಿಸುತ್ತವೆ. ಈ ದಾಖಲೆಗಳನ್ನು 'ಕಡತ' ಎಂದು ನಮೂದಿಸಿ ಇದನ್ನು ಅಧಿಕಾರಿಯೊಬ್ಬರ ಎಲ್ಲ ಆಡಳಿತಾತ್ಮಕ ವಿಷಯಕ್ಕೆ ನೀಡುತ್ತಿದ್ದರು. ಇದು 'ಭೂ ಆಡಳಿತ(ರೆವಿನ್ಯೂ) ವ್ಯವಸ್ಥೆಯ ಅಡಿಪಾಯವಾಗಿತ್ತು. ಗ್ರಾಮದ ಮುಖ್ಯಸ್ಥನ ಕೈಕೆಳಗೆ 'ತೋಟಿ', 'ತಳವಾರ', 'ಸನದಿ', ಅಥವಾ 'ಉಗ್ರಾಣಿ'ಗಳಿದ್ದರು. ಇವರು ಗ್ರಾಮರಕ್ಷಕರು(ಸಿಪಾಯಿ) ಸಹ ಆಗಿದ್ದರು. ಇದು ಪ್ರಾಚೀನ ಕಾಲದ ಆಡಳಿತ ಪದ್ಧತಿಯಾಗಿತ್ತು. ಅಂದರೆ ಪಾಶ್ಚಾತ್ಯರು ಬರುವ ಪೂರ್ವದಲ್ಲಿದ್ದಂತಹ ಆಡಳಿತವಾಗಿತ್ತು.[೧]

ಬ್ರಿಟಿಷರು ಕನ್ನಡ ಪ್ರಾಂತ್ಯಗಳನ್ನು ವಶಪಡಿಸಿಕೊಂಡಾಗ ತಮಗೆ ಅನುಕೂಲವಾದ ರೀತಿಯಲ್ಲಿ ಆಡಳಿತವನ್ನು ನಡೆಸುತ್ತಿದ್ದ ಬಗ್ಗೆ ತಿಳಿದುಬರುತ್ತದೆ. ಮುಖ್ಯವಾಗಿ ಜಿಲ್ಲಾಮಟ್ಟದಲ್ಲಿ ಕಲೆಕ್ಟರನನ್ನು ನೇಮಿಸಲಾಗುತ್ತಿತ್ತು. ತಾಲೂಕು ಮಟ್ಟದ ಆಡಳಿತ ಸುಗಮಕಾರ್ಯಕ್ಕೆ 'ಮಾಮಲತಾದಾರ್' ಅಥವಾ 'ಮಾಮಲೇದಾರ್' ಎಂದು ಈಗಿನ ತಹಸೀಲ್ದಾರ ಹುದ್ದೆಗೆ ಸಮವೆಂದು ಪರಿಗಣಿಸಲ್ಪಡುತ್ತದೆ. ವೃತ್ತ ಘಟಕಗಳಿಗೆ(ಸರ್ಕಾರ) ಕಂದಾಯ ಅಧಿಕಾರಿಗಳನ್ನು ನೇಮಕ ಮಾಡಲಾಯಿತು. ಇದರ ಜೊತೆಗೆ ವಂಶಪರಂಪರೆಯ ಗ್ರಾಮ ಅಧಿಕಾರಿಗಳನ್ನು ಮುಂದುವರೆಸಲಾಗುತ್ತಿತ್ತು. ಜೊತೆಗೆ ಆಂಗ್ಲರ ಆಡಳಿತದಿಂದ ಕೆಲವೊಂದು ಆಡಳಿತಾತ್ಮಕ ಬದಲಾವಣೆಗಳು ಸಹ ಕಂಡುಬಂದವು. ಪ್ರಮುಖ ಹುದ್ದೆಗಳಿಗೆ ಆಯ್ಕೆಯಾಗುತ್ತಿದ್ದ ಬಗ್ಗೆ, ಆಡಳಿತ ನಿರ್ವಹಣಾ ವಿಧಾನ ಇತ್ಯಾದಿಗಳ ಬಗ್ಗೆ ಅರಿಯುವುದು ಅಗತ್ಯವಾದದ್ದು. ಬ್ರಿಟಿಷರ ಆಡಳಿತ ದಲ್ಲಿ ಆಯಾ ಪ್ರಾಂತ್ಯಗಳಿಗೆ ಸಂಬಂಧಿಸಿದಂತೆ ಪ್ರತಿಯೊಂದು ಜಿಲ್ಲೆಗೆ ಒಬ್ಬ ಕಲೆಕ್ಟರನು ಇರುತ್ತಿದ್ದರು. ಇವನು ಆಡಳಿತದ ಕೇಂದ್ರ ವ್ಯಕ್ತಿಯಾಗಿದ್ದರೂ, ಇವನ ಕೈಕೆಳಗೆ ಅನೇಕ ಅಧಿಕಾರಿಗಳು ಬರುತ್ತಿದ್ದರೂ, ಈತನು ಜಿಲ್ಲೆಯ ಸಾರ್ವಭೌಮತ್ವ ವ್ಯಕ್ತಿಯಾಗಿದ್ದನು. ಕಲೆಕ್ಟರ್ ಎಂದರೆ ಕಂದಾಯ ಸಂಗ್ರಹಿಸುವ, ಕೂಡಿಸುವ ಮತ್ತು ತೀರ್ವ ವಸೂಲಿ ಮಾಡುವವ(ಆಡಳಿತಗಾರ) ಎಂಬಿತ್ಯಾದಿ ಅರ್ಥಗಳುಂಟು. ಬ್ರಿಟಿಷರ ಕಲೆಕ್ಟರ್ ಹುದ್ದೆ ಇಂದಿನ ಜಿಲ್ಲಾಧಿಕಾರಿ ಹುದ್ದೆಗೆ ಸಮವೆಂದು ಸಾಮಾನ್ಯವಾಗಿ ತಿಳಿಯಬಹುದು. ಈಗಲೂ ಕೆಲವು ರಾಜ್ಯಗಳಲ್ಲಿ 'ಕಲೆಕ್ಟರ್' ಎಂದು ಕರೆಯುತ್ತಾರೆ. ಉದಾಹರಣೆಗೆ: ಆಂಧ್ರಪ್ರದೇಶ. ಕಲೆಕ್ಟರುಗಳ ಆಡಳಿತ ಪ್ರಾರಂಭವಾದಾಗ ಅವರ ಅರ್ಹತೆ, ನೇಮಕ ನೋಡುವುದು. ಅಂದರೆ ಇವರು ನೇರವಾಗಿ ಕಲೆಕ್ಟರ್ ಹುದ್ದೆಗೆ ನೇಮಕಗೊಳ್ಳುತ್ತಿರಲಿಲ್ಲ.

ಬದಲಾಗಿ ಈಸ್ಟ್ ಇಂಡಿಯಾ ಕಂಪನಿಯ ಸಾಮಾನ್ಯ ಆಡಳಿತಗಾರರನ್ನು ಮತ್ತು ಬ್ರಿಟಿಷ್ ಸೇನಾಪಡೆಯಲ್ಲಿ ಪ್ರಾಮಾಣಿಕ, ದಕ್ಷ ಸೇವೆ ಸಲ್ಲಿಸಿದವರನ್ನು ಸರ್ಕಾರ ನೇಮಿಸುತ್ತಿತ್ತು. ಜಿಲ್ಲಾ ನ್ಯಾಯಾಧೀಶರು, ಇತರ ಜಿಲ್ಲಾಮಟ್ಟದ ಅಧಿಕಾರಿಗಳು ಒಮ್ಮೊಮ್ಮೆ ಕಲೆಕ್ಟರ್ ಆಗಿ ಆಡಳಿತ ನಡೆಸಿದ್ದಾರೆ. ಕಲೆಕ್ಟರ್ ಮೂಲತಃ ಯುರೋಪಿಯನ್(ಆಂಗ್ಲ) ನಿವಾಸಿಯಾಗಬೇಕಿತ್ತು.[೨]

ಈ ವ್ಯವಸ್ಥೆ ೧೯೨೧ರ ವರೆಗಿದ್ದು, ಆಂಗ್ಲರೇ ಕಲೆಕ್ಟರುಗಳಾಗುತ್ತಿದ್ದರು. ಕೆಲವು ಆಂಗ್ಲ ಅಧಿಕಾರಿಗಳು ಐ.ಸಿ.ಎಸ್. ಪರೀಕ್ಷೆಯನ್ನು ಭಾರತದಲ್ಲಿ ಬರೆದು ತೇರ್ಗಡೆ ಹೊಂದಿ ಕಲೆಕ್ಟರ್ ಆಗಿರುವ ಉದಾಹರಣೆಗಳಿವೆ. ಐ.ಸಿ.ಎಸ್, ಐ.ಪಿ.ಎಸ್ ಪರೀಕ್ಷೆಗಳು ಈ ಸಾಲಿನಲ್ಲಿ ಜಾರಿಗೆ ಬಂದಾಗ ಭಾರತೀಯರು ಸ್ಪರ್ಧಿಸಲು ಆಸ್ಪದವಾಯಿತು. ಅನಂತರ ಭಾರತೀಯರಿಗೆ ಆದ್ಯತೆ ದೊರೆಯಿತು. ಆಗಿನಿಂದ ಮದ್ರಾಸ್ ಆಧಿಪತ್ಯದಲ್ಲಿ ಈ ಹುದ್ದೆಗೆ ಕಲೆಕ್ಟರನನ್ನು ನೇಮಿಸುತ್ತಿದ್ದರು. ಇವರಿಗೆ ಈಸ್ಟ್ ಇಂಡಿಯಾ ಕಂಪನಿಯ ಸದಸ್ಯ ಅಥವಾ ನೌಕರನಾಗಿರಬೇಕೆನ್ನುವ ನಿಯಮ ೧೮೫೮ರವರೆಗಿತ್ತು. ಅನಂತರ ಆ ನಿಯಮ ಬದಲಾಗಿ ಸಾಮಾನ್ಯವಾಗಿ ಖಾಸಗಿ ಸಂಸ್ಥೆಗಳ ಹತೋಟಿ ಕಡಿಮೆಯಾಯಿತಲ್ಲದೆ ಸರ್ಕಾರವೇ ನೇರವಾಗಿ ನೇಮಿಸುತ್ತಿತ್ತು.

ಕಲೆಕ್ಟರ್ ಹುದ್ದೆ ಪಡೆಯಬೇಕಾದರೆ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಉತ್ತೀರ್ಣನಾಗಬೇಕಿತ್ತು. ಈ ವಿಧಾನ ೧೮೫೧ರಲ್ಲಿ ಜಾರಿಗೆ ಬಂದಿತು. ಆಗ ಇಂಡಿಯನ್ ಸಿವಿಲ್‌ಸೇವಾ ಪರೀಕ್ಷೆಯಲ್ಲಿ ಭಾರತೀಯರಿಗೆ ಸಿವಿಲ್ ಸೇವಾಕಮಿಷನ್ ಇಲಾಖೆಯಿಂದ ಪರೀಕ್ಷೆಯನ್ನು ನಡೆಸಲಾಗುತ್ತಿತ್ತು. ಈ ಮೊದಲು ಇಂತಹ ಪರೀಕ್ಷೆಗಳಿರಲಿಲ್ಲ. ೧೮೬೦ರಲ್ಲಿ ಅವರ ವಯೋಮಿತಿಯನ್ನು ೨೨ ವರ್ಷಕ್ಕೆ, ೧೮೬೬ರಲ್ಲಿ ೨೧ ವರ್ಷಕ್ಕೆ, ೧೮೭೮ರಲ್ಲಿ ೧೯ ವರ್ಷಕ್ಕೆ ಇಳಿಸಲಾಯಿತು. ಇದರಿಂದ ಭಾರತೀಯರಿಗೆ ಪರೀಕ್ಷೆಗಳಲ್ಲಿ ಭಾಗವಹಿಸಲಾಗಲಿಲ್ಲ. ಭಾರತೀಯರಿಗೆ ಐ.ಸಿ.ಎಸ್ ಪರೀಕ್ಷೆ ನಿಗದಿಪಡಿಸಿದರೆ, ಆಂಗ್ಲಕಲೆಕ್ಟರ್ ತನ್ನ ದೇಶದಲ್ಲಿ ನಡೆಸುತ್ತಿದ್ದ ಪರೀಕ್ಷೆಯನ್ನು ಪಾಸು ಮಾಡಬೇಕಿತ್ತು. ಕಲೆಕ್ಟರುಗಳಿಗೆ ಪ್ರಾದೇಶಿಕ ಭಾಷೆಗಳು ಕಡ್ಡಾಯವಾಗಿತ್ತು. ಈ ವ್ಯವಸ್ಥೆ ಮೊದಲು ಇರಲಿಲ್ಲ. ಅನಂತರ ಆಡಳಿತದಲ್ಲಿ ತೊಂದರೆಯಾದಾಗ ಪ್ರಾದೇಶಿಕ ಭಾಷೆಗೆ ಮಹತ್ವ ಕೊಟ್ಟರು. ೧೮೬೧ರ ಪೂರ್ವದಲ್ಲಿ ಕಂಪನಿಯ ನೌಕರಿ ಅಥವಾ ಸೈನಿಕನಾಗಿದ್ದು ಬಡ್ತಿ ಹೊಂದಿ ಈ ಸ್ಥಾನಕ್ಕೆ ಬರುತ್ತಿದ್ದರಲ್ಲದೆ, ಪ್ರಪಂಚದ ಮಹಾ ಘಟನೆಗಳಲ್ಲಿ(ಯುದ್ಧ, ಕದನ, ದಂಗೆ) ಭಾಗಿಯಾಗಿ ಶ್ರಮಿಸಿ ಯಶಸ್ಸು ತಂದವರಿಗೆ ಆದ್ಯತೆ ಇತ್ತು. ಇಲ್ಲಿ ವೈದ್ಯರು, ಇಂಜಿನಿಯರು, ಸರ್ವೇ ಅಧಿಕಾರಿ, ಧರ್ಮಪ್ರಚಾರಕ, ವಿಭಾಗಾಧಿಕಾರಿ, ತಹಸೀಲ್ದಾರ ಇತರರು ಮುಂಬಡ್ತಿ ಪಡೆದು ಆಗಾಗ ಉನ್ನತ ಹುದ್ದೆಗಳನ್ನು ಪಡೆದಿದ್ದರು.

ಈ ಮೇಲಿನ ಎಲ್ಲಾ ಅರ್ಹತೆಗಳನ್ನು ಪರಿಗಣಿಸಿ ಕಲೆಕ್ಟರನ ನೇಮಕವನ್ನು ಇಂಗ್ಲೆಂಡಿನಲ್ಲಿ ರಾಣಿ ಮಾಡುತ್ತಿದ್ದಳು. ಒಮ್ಮೆ ರಾಣಿಯ ಸ್ಥಾನದಲ್ಲಿ ರಾಜ ಮತ್ತು ವೈಸ್‌ರಾಯ್ ಕಲೆಕ್ಟರನನ್ನು ನೇಮಿಸುತ್ತಿದ್ದರು. ಜೊತೆಗೆ ಬೋರ್ಡ್ ಆಫ್ ಡೈರೆಕ್ಟರ್ ಮತ್ತು ಕಂಟ್ರೋಲರ್ಸ್ ಹಾಗೂ (ಈಸ್ಟ್ ಇಂಡಿಯಾ ಕಂಪನಿ) ಗವರ್ನರ್ ಜನರಲ್ ನೇಮಿಸುತ್ತಿದ್ದರು. ೧೮೫೮ರ ನಂತರ ನೇಮಕವಾಗಿ ಅವನು ಇಲ್ಲಿಗೆ ಬಂದಾಗ ಮೊದಲು ಮದ್ರಾಸ್ ಪ್ರಾಂತ್ಯದ ಗವರ್ನರ್‌ನನ್ನು ಭೇಟಿ ಮಾಡಬೇಕಿತ್ತು. ಕಾರಣ ಜಿಲ್ಲೆಯ ಆಡಳಿತ, ಭಾಷೆ, ಪರಿಸ್ಥಿತಿಗಳು ಈ ಕುರಿತಂತೆ ಗವರ್ನರ್‌ನಿಂದ ಪೂರ್ವಸಿದ್ಧತೆ ತರಬೇತಿ ಕೊಡಲಾಗುತ್ತಿತ್ತು.[೩]

ಏಕೆಂದರೆ ‘ಕಲೆಕ್ಟರ್’ನ ಆಡಳಿತವೆಂದರೆ ಸಾರ್ವಜನಿಕ ಸೇವೆಯಾಗಿತ್ತು(ಸಿವಿಲ್ ಸರ್ವೀಸ್). ಈ ಆಂಗ್ಲರ ಆಡಳಿತದಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿತ್ತು. ಹಿಂದೆ ರೂಢಿಯಲ್ಲಿದ್ದ ದೇಶೀಯ ಪದ್ಧತಿಗಳನ್ನು ಗಮನದಲ್ಲಿಟ್ಟುಕೊಂಡು ಅನುಕೂಲತೆಗೆ ಯೋಗ್ಯವೆನಿಸುವ ರೀತಿಯಲ್ಲಿ ಸೇವಾನಿಯಮವನ್ನು ಸೃಷ್ಟಿಸುವ ಪ್ರಯತ್ನಗಳು ಆ ಕಾಲದ ದಾಖಲೆಗಳನ್ನು ಗಮನಿಸಿದರೆ ಗೋಚರವಾಗುತ್ತದೆ.

೧೮೦೮ ಅಕ್ಟೋಬರ್ ೨೪ರಂದು ಮದ್ರಾಸ್ ಸರ್ಕಾರ ಮೊಟ್ಟಮೊದಲಿಗೆ ಸೇವಾನಿಯಮಕ್ಕೆ ಸಂಬಂಧಿಸಿದ ಗೊತ್ತುವಳಿ ಪತ್ರವನ್ನು ಜಾರಿಗೊಳಿಸಿತು. ಅದರ ಪ್ರಕಾರ ಮದರಾಸು ಸರ್ಕಾರದ ವ್ಯಾಪ್ತಿಯಲ್ಲಿ ಅಧಿಕಾರಿಯಾಗ ಬಯಸುವ ಅಭ್ಯರ್ಥಿ ಆ ಪ್ರಾಂತ್ಯಕ್ಕೆ ಬಂದ ತರುವಾಯ ಕೊನೆಯಪಕ್ಷ ಒಂದು ಪ್ರಾದೇಶಿಕ ಭಾಷೆಯನ್ನಾದರೂ ಕಲಿಯಲು ಪ್ರಾರಂಭಿಸಬೇಕು. ದೇಶೀಯ ಶಿಕ್ಷಕನೊಬ್ಬನನ್ನು ನೇಮಕ ಮಾಡಿಕೊಂಡು ಕಲಿತ ಆ ಭಾಷೆಯಲ್ಲಿನ ಮಟ್ಟವನ್ನು ಮೂರು ತಿಂಗಳಿಗೊಮ್ಮೆ ನಡೆಸುವ ಪರೀಕ್ಷೆಯಿಂದ ನಿರ್ಧರಿಸಿ, ಅನಂತರ ಆ ಭಾಷೆ ಎಲ್ಲಾ ಬಹುಜನರ ಭಾಷೆಯಾಗಿರುತ್ತದೆಯೋ ಅಲ್ಲಿ ಆತನನ್ನು ತಕ್ಕ ಹುದ್ದೆಗೆ ನೇಮಕ ಮಾಡಬೇಕು.[೪]

ತಮಿಳು, ಕನ್ನಡ, ತೆಲುಗು, ಮಲಯಾಳಂ ಮತ್ತು ಮರಾಠಿ ಭಾಷೆಗಳು ಐಚ್ಛಿಕ ಭಾಷೆಗಳಾಗಿದ್ದು, ಕಲಿಸುವ ಮಂಡಳಿಯ (೧೮೨೭) ಆಯಾ ಭಾಷೆಯ ಶಿಕ್ಷಕರನ್ನು ಒದಗಿಸುವ ಜವಾಬ್ದಾರಿಯನ್ನು ಹೊಂದಿತ್ತು. ಪರೀಕ್ಷೆ ಮಂಡಳಿಯ ಶಿಫಾರಸ್ಸಿನ ಮೇರೆಗೆ ಕಿರಿಯ ಸಾರ್ವಜನಿಕ ಸೇವಾ ಅಧಿಕಾರಿಗಳ (ಜೂನಿಯರ್ ಸಿವಿಲ್ ಸರ್ವೆಂಟ್ಸ್) ಹುದ್ದೆಗಳ ನೇಮಕಾತಿ ತೀರ್ಮಾನವಾಗುತ್ತಿತ್ತು.

ಅನುವಾದ ಅಥವಾ ವಿವರಣೆಯ ಅಗತ್ಯವಿಲ್ಲದೆ ಒಂದು ಪ್ರಾದೇಶಿಕ ಭಾಷೆಯಲ್ಲಿ ಸಾರ್ವಜನಿಕ ವ್ಯವಹಾರಗಳನ್ನು ನಿರ್ವಹಿಸಬಲ್ಲವನಾದರೆ ಅಂಥವನಿಗೆ ಅಧೀನ ದರ್ಜೆಯ ಹುದ್ದೆಯನ್ನು ಎರಡು ಪ್ರಾದೇಶಿಕ ಭಾಷೆಗಳನ್ನು ಬಲ್ಲವನಾಗಿದ್ದರೆ ಯಾವುದೇ ವರ್ಗದ ಉನ್ನತ ಹುದ್ದೆಯನ್ನು ಪಡೆಯುವ ಅವಕಾಶವಿರುತ್ತಿತ್ತು. ಸೇವೆಗೆ ಅಗತ್ಯವಾದ ಪ್ರಾದೇಶಿಕ ಭಾಷೆಗಳನ್ನು ಎರಡು ವರ್ಷದೊಳಗೆ ಕಲಿಯಬೇಕಿತ್ತು. ಆ ಅವಧಿಯಲ್ಲಿ ಕಲಿಯಲಾಗದಿದ್ದವರು ಕಾಲೇಜನ್ನು ಬಿಡಬೇಕಿತ್ತಲ್ಲದೆ ಆ ಪ್ರಾಂತ್ಯದಲ್ಲಿ ಹುದ್ದೆಗೆ ನೇಮಕವಾಗಲು ಅನರ್ಹರೆಂದು ಪರಿಗಣಿಸಲಾಗುತ್ತಿತ್ತು.

ಮದ್ರಾಸ್ ಪ್ರಾಂತದಲ್ಲಿ ೧೮೧೨ರಲ್ಲಿ ಆರಂಭವಾದ ಕಾಲೇಜಿನ ಮಾದರಿಯಲ್ಲಿ ಮುಂಬೈ ಪ್ರಾಂತದಲ್ಲೂ ಭಾಷೆಗಳ ಅಧ್ಯಯನಕ್ಕೆ ಕಾಲೇಜೊಂದನ್ನು ಸ್ಥಾಪಿಸಲು ಹಾಗೂ ಆ ಸಂಬಂಧ ಮಿತವ್ಯಯ ಯೋಜನೆಯನ್ನು ರೂಪಿಸಲು ೧೮೧೯ರಲ್ಲಿ ಲಂಡನ್ನಿನ ವರಿಷ್ಠ ನಿರ್ದೇಶಕರ ಮಂಡಳಿಯು ಕೇಳಿತು. ಪೂರ್ಣಯೋಜನೆಯನ್ನು ಒಪ್ಪದಿದ್ದರೂ ೧೮೨೭ರ ಹೊತ್ತಿಗೆ ಪರೀಕ್ಷೆ ಮಂಡಳಿಯನ್ನು ಮಾತ್ರ ರಚಿಸಲು ಒಪ್ಪಿಗೆ ದೊರೆಯಿತು. ಮುಂಬಯಿ ಪ್ರಾಂತ್ಯದ ಪ್ರಾಂತ್ಯಾಧಿಕಾರಿಯು ಸಾರ್ವಜನಿಕ ಸೇವಾ ಅಧಿಕಾರಿಗಳು ಬಡ್ತಿಯನ್ನು ಪಡೆಯಬೇಕಾದರೆ ಪರೀಕ್ಷೆಮಂಡಳಿ ನಡೆಸುವ ಭಾಷಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಲೇಬೇಕೆಂಬ ನಿಯಮವನ್ನು ಕಡ್ಡಾಯವಾಗಿ ಅನುಷ್ಠಾನಕ್ಕೆ ತರಲು ಆದೇಶ ನೀಡಲಾಗಿತ್ತು.

ಪ್ರಾದೇಶಿಕ ಭಾಷೆಯನ್ನು ಆಡಳಿತದಲ್ಲಿ ಅಳವಡಿಸುವುದು ಮತ್ತು ಅರ್ಹ ಪ್ರಾದೇಶಿಕಾ ಜನರನ್ನು ನೌಕರಿಯಲ್ಲಿ ಸೇರಿಸಿಕೊಳ್ಳುವುದು ಈ ಕ್ರಮಗಳಿಂದ ಆಡಳಿತದಲ್ಲಿ ಯಶಸ್ಸು ಕಾಣಬಹುದೆಂಬುದು ಸರ್. ಥಾಮಸ್ ಮನ್ರೋವಿನ ಸ್ಪಷ್ಟ ಅಭಿಪ್ರಾಯವಾಗಿತ್ತು.[೫]

೧೮೪೬ರಷ್ಟು ಹಿಂದೆಯೇ ಆ ಬಗ್ಗೆ ಆತ ನೀಡಿದ ಅಭಿಪ್ರಾಯಗಳು ವಿಚಾರಯೋಗ್ಯ. ಆತನ ಪ್ರಕಾರ ಜಿಲ್ಲಾಧಿಕಾರಿಯಾಗಬೇಕಾದವನು ಜಿಲ್ಲೆಯ ಭಾಷೆಯ ಪರಿಜ್ಞಾನವುಳ್ಳವನಾಗಿರಬೇಕು. ಹಾಗಿಲ್ಲದಿದ್ದರೆ ಕೆಳದರ್ಜೆಯ ನೌಕರರ ಕೈಗೊಂಬೆಯಾಗಬೇಕಾಗುತ್ತದೆ ಹಾಗೂ ಜಿಲ್ಲೆಯ ಅದೆಷ್ಟೋ ಆಡಳಿತದ ವಿಚಾರಗಳು ಅವನ ಗಣನೆಗೆ ಬಾರದೆಯೂ ಹೋಗಬಹುದೆಂಬ ಮನ್ರೋವಿನ ಅಭಿಪ್ರಾಯವನ್ನು ಪರಿಗಣಿಸಿ ಜನವರಿ ೧, ೧೮೪೬ರಲ್ಲಿ ಸರ್ ಚಾರ್ಸ್ ಓಕ್ಲೆ ಎಂಬುವನು ಪ್ರಾದೇಶಿಕ ಭಾಷೆಯ ಪರಿಜ್ಞಾನವಿಲ್ಲದವನನ್ನು ಜಿಲ್ಲಾಧಿಕಾರಿಯಾಗಿ ನೇಮಿಸಕೂಡದು ಎಂಬ ಆದೇಶವನ್ನು ಹೊರಡಿಸಿದನು.[೬]

ಆಡುಭಾಷೆಯ ಜ್ಞಾನ, ಶಿಕ್ಷಣ, ಆಡಳಿತದಲ್ಲಿ ಅನಿವಾರ್ಯ ಹಾಗೂ ಕಡ್ಡಾಯವೂ ಆಗಿದ್ದು, ಪ್ರಾದೇಶಿಕ ಭಾಷೆಯಲ್ಲಿ ಹೆಚ್ಚಿನ ಪರಿಣತಿ ಪಡೆದವರಿಗೆ ಉತ್ತೇಜನ ಬಹುಮಾನಗಳನ್ನು ಕೊಡುವ ವ್ಯವಸ್ಥೆ ಇದ್ದಿತೆಂದು

ಪ್ರಕಟಣೆಯಿಂದ ತಿಳಿಯುತ್ತದೆ. ಬ್ರಿಟಿಷ್ ಇಂಡಿಯಾದಲ್ಲಿ ನೇಮಕಾತಿ ಮಾಡುವ ಸಂಬಂಧ ಸುಧಾರಣೆ ಮತ್ತು ಬಿಗಿ ಕ್ರಮಗಳನ್ನು ಜಾರಿಗೆ ತರಲು ಮಹಾರಾಣಿಯ ಆಜ್ಞೆಯ ಮೇರೆಗೆ ೧೮೮೬-೮೭ರಲ್ಲಿ ಲೋಕಸೇವಾ ಆಯೋಗವು ವರದಿಯನ್ನು ಸಿದ್ಧಗೊಳಿಸಿ ಬ್ರಿಟನ್ನಿನ ಎರಡೂ ಸದನಗಳಲ್ಲಿ ಮಂಡಿಸಿತು. ಪ್ರಾದೇಶಿಕ ಆಯೋಗಗಳನ್ನು ರಚಿಸಿ ಅವುಗಳ ಮುಖಾಂತರ ಪ್ರಾದೇಶಿಕ ಜನರನ್ನು ಮೇಲ್ದರ್ಜೆಯ ಹುದ್ದೆಗಳಿಗೆ ನೇಮಕ ಮಾಡಿಕೊಳ್ಳಬೇಕು. ಇದರಿಂದ ಆಡಳಿತ ವ್ಯವಸ್ಥೆಯಲ್ಲಿ ಸರಳತೆ ಹಾಗೂ ಸುಧಾರಣೆಗಳನ್ನು ಕಾಣಲು ಸಾಧ್ಯ ಎಂದು ವರದಿಯಲ್ಲಿ ಮಾಡಿದ್ದ ಶಿಫಾರಸ್ಸುಗಳು ಪ್ರಮುಖ ಅಂಶಗಳಾಗಿದ್ದವು.

ಅಂತಿಮವಾಗಿ ನೇಮಕ ಬಯಸುವ ಅಭ್ಯರ್ಥಿಗಳು ಕೊನೆಯಪಕ್ಷ ಮೂರು ವರ್ಷಗಳ ಕಾಲ ಆ ಪ್ರದೇಶದಲ್ಲಿ ನೆಲೆಸಿದ್ದಿರಬೇಕು ಎಂಬುದನ್ನು ಅಗತ್ಯ ಅರ್ಹತೆಯನ್ನಾಗಿ ಮಾಡಬೇಕೆಂದು ಹೇಳಿದೆ; ಇದೇ ಮಾದರಿಯ ಮತ್ತೊಂದು ದಾಖಲೆ ಈ ರೀತಿ ಇದೆ: ಈಸ್ಟ್ ಇಂಡಿಯಾದ ವಿವಿಧ ಪ್ರಾಂತ್ಯಗಳಲ್ಲಿನ ಕಚೇರಿಗಳಲ್ಲಿ ಅಭ್ಯರ್ಥಿಗಳನ್ನು ನೇಮಕಾತಿ ಮಾಡುವುದರ ಬಗ್ಗೆ ಹೊರಡಿಸಿದ್ದ ನಿಬಂಧನೆಗಳ ಪ್ರಕಾರ ನೇಮಕಗೊಂಡವರನ್ನು ಅಂಗೀಕರಿಸುವುದು, ಚಾಲ್ತಿಯಲ್ಲಿದ್ದ ಕೆಲವು ನಿಯಮಗಳನ್ನು ತಿದ್ದುಪಡಿ ಮಾಡಿ ಬ್ರಿಟಿಷ್ ಇಂಡಿಯಾದಲ್ಲಿ ಹೊಸದಾಗಿ ನೇಮಕ ಮಾಡುವ ಅಧಿಕಾರವನ್ನು ಕೊಡುವುದು ಮತ್ತು ಇದರ ಬಗ್ಗೆ ಹೊರಡಿಸಿದ ನಿಬಂಧನೆಯಲ್ಲಿ ಕೆಲವು ಹುದ್ದೆಗಳಿಗೆ ನೇಮಕ ಬಯಸುವವರು ಕನಿಷ್ಠಪಕ್ಷ ೭ ವರ್ಷಗಳಿಂದಲೂ ಭಾರತದಲ್ಲಿ ನೆಲೆಸಿದ್ದಿರಬೇಕೆಂಬ ಷರತ್ತು ಇದೆ.

ಕಂದಾಯ ಹಾಗೂ ನ್ಯಾಯ ಇಲಾಖೆಗಳಲ್ಲಿ ನೇಮಕಗೊಂಡವರು ಆ ಜಿಲ್ಲೆಯ ಭಾಷೆಯಲ್ಲಿ ತೇರ್ಗಡೆ ಹೊಂದಬೇಕೆಂಬ ನಿಯಮವಿದ್ದು, ಮೇಲ್ಕಂಡ ಇಲಾಖೆಗಳಲ್ಲಿ ಯಾವ, ಯಾವ ಮಟ್ಟದ ಅಧಿಕಾರಿಗಳು ಕಡ್ಡಾಯ ಭಾಷಾ ಪರೀಕ್ಷೆಯನ್ನು ತೆಗೆದುಕೊಳ್ಳಬೇಕಿತ್ತು ಎಂಬುದನ್ನು ವಿವಿಧ ಪ್ರಕಾರದ ಪರೀಕ್ಷೆಗಳು(ಭಾಷಾ ಪರೀಕ್ಷೆಯೂ ಸೇರಿಸಿದಂತೆ) ಕೆಳಕಂಡ ಅಧಿಕಾರಿಗಳಿಗೆ ನಡೆಸಲಾಗುತ್ತಿತ್ತು. ಸಹಾಯಕ ಕಲೆಕ್ಟರುಗಳು ಐ.ಸಿ.ಎಸ್. ಮಟ್ಟದ ಅಭ್ಯರ್ಥಿಗಳು, ಜಿಲ್ಲಾಧಿಕಾರಿಗಳು, ಶಿಕ್ಷಣ ಅಧಿಕಾರಿಗಳು ಇತರೇ ಎಲ್ಲಾ ಅಭ್ಯರ್ಥಿಗಳು ಪ್ರಾದೇಶಿಕ ಭಾಷೆಗಳಲ್ಲಿ ತೇರ್ಗಡೆಯಾಗಬೇಕಿತ್ತು.

ಕಲೆಕ್ಟರನ ಆಡಳಿತ ವೈಖರಿ ಅಂದು ಗವರ್ನರ್ ನಿಯಂತ್ರಣದಲ್ಲಿತ್ತು. ಹಾಗಾಗಿ ವಿದೇಶಕ್ಕೆ ಹೋಗುವಾಗ ರಜೆ ಪಡೆಯಲು ಗವರ್ನರ್‌ನ ಅಪ್ಪಣೆ, ಅನುಮತಿ ಪಡೆಯಬೇಕಿತ್ತು.

೧೮೭೦ರಲ್ಲಿ ಐ.ಸಿ.ಎಸ್ ಪರೀಕ್ಷೆಗಳ ಬದಲಾಗಿ ಗೌರವಸ್ಥ ಮನೆತನದ ತರುಣನನ್ನು ನಿಯಮಿತ ಸಂಖ್ಯೆಯಲ್ಲಿ ಕಲೆಕ್ಟರ್ ಹುದ್ದೆಗೆ ನೇಮಿಸುತ್ತಿದ್ದರು. ಉದಾಹರಣೆಗೆ: ಲಾರ್ಡ್‌ಸರ್ ಸೈಂಟ್ ಇತರ ಗೌರವಾನ್ವಿತ ಪದವಿಗಳಿಂದ ನಿರ್ಧರಿಸಬಹುದು. ಆದರೆ ಇವರ ಆಡಳಿತ ಯಶಸ್ವಿಯಾಗಲಿಲ್ಲ. ೧೮೮೫ರಲ್ಲಿ ಇಂಗ್ಲೆಂಡ್ ಮತ್ತು ಭಾರತದಲ್ಲಿ ಪರೀಕ್ಷೆಗಳನ್ನು ನಡೆಸಲು ಬೇಡಿಕೆ ಸಲ್ಲಿಸಿದರು. ಆದರೆ ಅದಕ್ಕೆ ೧೮೯೩ರಲ್ಲಿ ಅನುಮತಿ ಸಿಕ್ಕಿತು. ಆಗ ಇಂಗ್ಲೆಂಡ್ ಮತ್ತು ಭಾರತದಲ್ಲಿ ಏಕಕಾಲಕ್ಕೆ ಪರೀಕ್ಷೆಗಳನ್ನು ನಡೆಸಿ ಅಭ್ಯರ್ಥಿಗಳನ್ನು ಆಯ್ಕೆ

ಮಾಡಲಾಯಿತು. ೧೯೧೮ರ ಮದ್ರಾಸ್ ಆಡಳಿತ ವರದಿ ಪ್ರಕಾರ ಭಾರತದ ಸಿವಿಲ್ ಸರ್ವಿಸ್‌ಗಳಲ್ಲಿ ಶೇಕಡ ೩೩ರಷ್ಟು ಉತ್ತಮ ಹುದ್ದೆಗಳಿಗೆ ಭಾರತೀಯರನ್ನು ನೇಮಿಸುವ ಬಗೆಗೆ ೧೮೦೦ರಿಂದ ೧೯೧೩ರವರೆಗೆ ಸಾಕಷ್ಟು ತಿದ್ದುಪಡಿ ಮಾಡಲಾಗಿದೆ.[೨]

ಒಟ್ಟಿನಲ್ಲಿ ಬ್ರಿಟಿಷ್ ಇಂಡಿಯಾದಲ್ಲಿ ಉನ್ನತ ಹುದ್ದೆಗಳನ್ನು ಹೊಂದಲು ಲಂಡನ್ನಿನಲ್ಲಿ ನಡೆಸುತ್ತಿದ್ದ ಸೇವಾಪರೀಕ್ಷೆಯಲ್ಲಿ ತೇರ್ಗಡೆ ಹೊಂದಬೇಕಾಗಿತ್ತು. ಹೀಗಾಗಿ ಇಲ್ಲಿನ ಪ್ರಾಂತ್ಯಗಳಲ್ಲಿನ ಜಿಲ್ಲಾಡಳಿತವನ್ನು ಅಂದಿನ ಕಲೆಕ್ಟರ್‌ಗಳು ನಿರ್ವಹಿಸುತ್ತಿದ್ದು ಅವರೂ ಸಹ ಐ.ಸಿ.ಎಸ್. ಪರೀಕ್ಷೆಯಲ್ಲಿ ಹೆಚ್ಚಾಗಿ ತೇರ್ಗಡೆ ಹೊಂದಿದವರಾಗಿರುತ್ತಿದ್ದರು. ಅಲ್ಲದೆ 'ಗ್ಯಾಸೆಟಿಯರ್' ಅಥವಾ 'ಮ್ಯಾನ್ಯೂಯಲ್'ಗಳ ರಚನೆಯೂ ಸಹ ಅಂದು ಕಲೆಕ್ಟರ್ ಆಗಿ ಸೇವೆ ಸಲ್ಲಿಸಿದವರು ಸಂಪಾದಿಸುತ್ತಿದ್ದರು. ಉದಾಹರಣೆಗೆ: ಹೆರಾಲ್ಡ್ ಎ. ಸ್ಟೂವರ್ಟ್ ಹಾಗೂ ಸ್ಪರ್ರೋಕರ್ ಅವರು ಸೌತ್‌ಕೆನರಾ ಮ್ಯಾನ್ಯುಯಲ್ ರಚಿಸಿರುವುದನ್ನು ಗಮನಿಸಬಹುದು. ಹೀಗಾಗಿ ಹೆಚ್ಚಿನ ಮಟ್ಟದಲ್ಲಿ ಐ.ಸಿ.ಎಸ್. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದವರನ್ನು ನೇಮಿಸಲಾಗುತ್ತಿತ್ತು. ಹೀಗೆ ಆಂಗ್ಲರ ಕೈಗೆ ಕನ್ನಡ ಪ್ರದೇಶಗಳು ಬಂದಾಗ ಆದ ಬದಲಾವಣೆಗಳು ಹಲವಾರು ವಾಣಿಜ್ಯವ್ಯಾಪಾರ, ನ್ಯಾಯಾಂಗ, ಆಡಳಿತ, ಕಂದಾಯ, ಸೈನ್ಯ, ಪೊಲೀಸ್, ಮಿಲಿಟರಿ ಇತರೇ ಹಲವು ರೀತಿಯಲ್ಲಿ ಬದಲಾವಣೆಗೆ ಒಳಗಾದದ್ದು ಸ್ಪಷ್ಟವಾಗಿದೆ.

ಆಂಗ್ಲರು ಆಡಳಿತದ ಅನುಕೂಲತೆಗಾಗಿ ತಮಗೆ ಅಗತ್ಯವೆನಿಸಿದ ರೀತಿಯಲ್ಲಿ ಬೇರೆ ಬೇರೆ ಕಾಲಘಟ್ಟದಲ್ಲಿ ಆಡಳಿತವನ್ನು ವಶಪಡಿಸಿಕೊಂಡು ಆಡಳಿತ ನಡೆಸಿರುವುದು ಸ್ಪಷ್ಟ. ಇವರ ಕಾಲದ ಆಡಳಿತವು ಹಲವು ರೀತಿಯಲ್ಲಿ ಬದಲಾವಣೆಗೆ ಒಳಗಾಗಬೇಕಾಗಿತ್ತು ಎಂಬುದು ಮುಖ್ಯ ವಿಚಾರವಾಗಿರುತ್ತದೆ. ಆಡಳಿತದ ವಿಭಜನೆಯನ್ನು ಈ ರೀತಿಯಾಗಿ ಕಾಣಬಹುದು. ಮೊದಲು ಪ್ರಾಂತ್ಯವಾಗಿ ವಿಭಾಗಿಸಿಕೊಂಡು ಅನಂತರ ಆ ಪ್ರಾಂತ್ಯದೊಳಗೆ ಜಿಲ್ಲೆಗಳನ್ನಾಗಿ ಮಾಡಿ, ಜಿಲ್ಲೆಯೊಳಗಡೆ ತಾಲೂಕುಗಳು, ತಾಲೂಕುಗಳ ಒಳಗಡೆ ಗ್ರಾಮಗಳೆಂದು ವಿಭಾಗಿಸಲಾಗುತ್ತಿತ್ತು. ಒಂದು ಪ್ರಾಂತ್ಯದಲ್ಲಿ ಹಲವು ಜಿಲ್ಲೆಗಳು ಬರುತ್ತಿದ್ದವು. ಐದು ಪ್ರಾಂತ್ಯಗಳಲ್ಲಿರುವ ಮುಂಬೈ ಕರ್ನಾಟಕ, ಮೈಸೂರು ಕರ್ನಾಟಕ, ಹೈದರಾಬಾದ್ ಕರ್ನಾಟಕ, ಮದ್ರಾಸ್ ಕರ್ನಾಟಕ ಹಾಗೂ ಕೊಡಗು ಪ್ರಾಂತ್ಯಗಳಲ್ಲಿರುವಂತೆ ಇವು ಒಳಗೊಂಡಿರುವ ತಾಲೂಕುಗಳನ್ನು, ಜಿಲ್ಲೆಗಳನ್ನು ಈ ರೀತಿಯಾಗಿ ವಿಂಗಡಿಸಲಾಗಿತ್ತು. ವಿಜಾಪುರ, ಬೆಳಗಾವಿ, ಧಾರವಾಡ ಮತ್ತು ಉತ್ತರ ಕನ್ನಡ ಎಂಬ ನಾಲ್ಕು ಜಿಲ್ಲೆಗಳು, ಮುಂಬಯಿ ಕರ್ನಾಟಕಕ್ಕೆ ಸೇರಿದ ಈ ಜಿಲ್ಲೆಗಳಲ್ಲಿರುವ ಧಾರವಾಡವು ೧೬ ತಾಲೂಕುಗಳನ್ನು, ವಿಜಾಪುರ ೧೧ ತಾಲೂಕು, ಬೆಳಗಾವಿ ೧೦ ತಾಲೂಕುಗಳು, ಉತ್ತರ ಕನ್ನಡ ೧೧ ತಾಲೂಕುಗಳನ್ನು ಒಳಗೊಂಡಿತ್ತು.[೩]

ಮೈಸೂರು ಪ್ರಾಂತ್ಯದಲ್ಲಿ ೧೮೩೧ರಲ್ಲಿ ನಗರ ಬಂಡಾಯದ ನೆಪದಲ್ಲಿ ಬ್ರಿಟಿಷರು ಸಂಸ್ಥಾನದ ಅಧಿಕಾರವನ್ನು ರಾಜರಿಂದ ಕಸಿದುಕೊಂಡರು. ಮದರಾಸು ಗವರ್ನರ್‌ರ ಅಧೀನದಲ್ಲಿ ಆಯುಕ್ತರನ್ನು (ಕಮಿಷನರುಗಳ) ನೇಮಿಸಿ ತಾವೇ ಅಧಿಕಾರ ವಹಿಸಿಕೊಂಡು ನಂತರದ ೫೦ ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ೧೮೩೨ರ ನಂತರ ಮೈಸೂರು ಸಂಸ್ಥಾನದ ಆಯುಕ್ತರು ಮದರಾಸು ಗವರ್ನರ್‌ನ ಬದಲು ನೇರವಾಗಿ ಭಾರತ

ಸರಕಾರದ ಗವರ್ನರ್ ಜನರಲ್‌ನ ಅಧೀನರಾಗಿ ಕಾರ್ಯ ನಿರ್ವಹಿಸಿದರು. ಮೈಸೂರು ಸಂಸ್ಥಾನವನ್ನಾಳಿದ ಆಯುಕ್ತರ ಪೈಕಿ ಸರ್ ಮಾರ್ಕ್ ಕಬ್ಬನ್(೧೮೩೪-೬೧) ಮತ್ತು ಲ್ಯೂವಿಸ್ ಬೆನ್ತಮ್ ಬೌರಿಂಗ್(೧೮೬೧-೭೦) ಪ್ರಮುಖರು.

ಮಾರ್ಕ್‌ಕಬ್ಬನ್‌ನ ಆಳ್ವಿಕೆಯ ಅವಧಿಯಲ್ಲಿ ೪ ವಿಭಾಗಗಳನ್ನಾಗಿ ವಿಂಗಡಿಸಲಾಗಿತ್ತು. ರಾಜಧಾನಿಯನ್ನು ಮೈಸೂರಿನಿಂದ ಬೆಂಗಳೂರಿಗೆ ವರ್ಗಾಯಿಸಲ್ಪಟ್ಟಿತು. ಸಂಸ್ಥಾನವನ್ನು ೧೨೦ ತಾಲೂಕು ಗಳನ್ನಾಗಿ ವಿಂಗಡಿಸಲ್ಪಟ್ಟಿತು. ಆದರೆ ಬೌರಿಂಗ್ ಕಾಲದಲ್ಲಿ ಪುನರ್‌ವ್ಯವಸ್ಥೆಯನ್ನು ಮಾಡುವ ಪ್ರಯತ್ನ ಮಾಡಿದನು. ಈತನು ೧೮೬೧ರಲ್ಲಿ ರಾಜ್ಯವನ್ನು ಮೂರು ವಿಭಾಗಗಳನ್ನಾಗಿ ವಿಂಗಡಿಸಿ ಎಂಟು ಜಿಲ್ಲೆಗಳನ್ನಾಗಿ ರಚಿಸಿದನು.[೯]

ಹೈದರಾಬಾದ್ ಕರ್ನಾಟಕ ರಾಜ್ಯವನ್ನು ಐದು ಸಭಾ ಅಥವಾ ವಿಭಾಗಗಳನ್ನಾಗಿಯೂ ಮತ್ತು ಹದಿನೇಳು ಜಿಲ್ಲೆಗಳನ್ನಾಗಿ ಮಾಡಿ ನಂತರ ಐದರಿಂದ ನಾಲ್ಕಕ್ಕೆ ಇಳಿಸಲಾಯಿತು. ಕಲ್ಬುರ್ಗಿ, ಬೀದರ್, ರಾಯಚೂರು ಜಿಲ್ಲೆಗಳು ಕನ್ನಡ ಪ್ರದೇಶಗಳಾಗಿದ್ದವು.[೧೦] ಪ್ರತಿ ವಿಭಾಗಕ್ಕೂ ರೆವಿನ್ಯೂ ಕಮಿಷನರ್ ಹಾಗೂ ಜೊತೆಗೆ ಕಲೆಕ್ಟರ್‌ನನ್ನು ನೇಮಿಸಲಾಗಿತ್ತು. ಮದ್ರಾಸ್ ಪ್ರಾಂತ್ಯದಲ್ಲಿ ೨೪ ಜಿಲ್ಲೆಗಳನ್ನು ಒಳಗೊಂಡಿತ್ತು. ಆದರೆ ಆಗಿನ ಕನ್ನಡ ಪ್ರದೇಶಗಳೆಂದರೆ ಬಳ್ಳಾರಿ, ದಕ್ಷಿಣ ಕನ್ನಡ ಹಾಗೂ ಕೊಳ್ಳೇಗಾಲವನ್ನು ಒಳಗೊಂಡಿತ್ತು. ಬಳ್ಳಾರಿ ೧೮೦೦ರಲ್ಲಿ ಬ್ರಿಟಿಷರ ನೇರ ಆಳ್ವಿಕೆಗೆ ಒಳಗಾಯಿತು. ಆದರೆ ೧೮೨೬ರಲ್ಲಿ ಕೆನರಾದ ವಿಭಜನೆಯಿಂದ ಉತ್ತರ ಕನ್ನಡವು ಬಾಂಬೆ ಪ್ರೆಸಿಡೆನ್ಸಿಗೂ ದಕ್ಷಿಣ ಕನ್ನಡವು ಮದರಾಸು ಪ್ರೆಸಿಡೆನ್ಸಿಯಲ್ಲಿ ಉಳಿಯಿತು.[೧೧]

ಕೊಡಗು ೧೮೩೪ರಲ್ಲಿ ಬ್ರಿಟಿಷರ ನೇರ ಆಳ್ವಿಕೆಗೆ ಒಳಗಾಯಿತು. ಕೊಡಗು ಒಂದು ಜಿಲ್ಲೆಯೂ ಹೌದು ಹಾಗೂ ಒಂದು ಪ್ರಾಂತ್ಯವೂ ಸಹ ಆಗಿತ್ತು. ಅಂದರೆ ಕೊಡಗಿನಲ್ಲಿ ಜಿಲ್ಲೆಗಳಿರಲಿಲ್ಲ. ಅದು ಕೇವಲ ಆರು ತಾಲೂಕುಗಳನ್ನು ಒಳಗೊಂಡಿತ್ತು. ಕೊಡಗನ್ನು ಮೈಸೂರು ಕಮಿಷನರ್‌ಗಳೇ ಕೂರ್ಗ್ ಕಮಿಷನರ್ ಆಗಿ ನಿಯೋಗಗೊಂಡಿದ್ದು, ಮೈಸೂರಿನ ಮುಖ್ಯ ಕಮಿಷನರ್ ಆಗಿದ್ದು, ಅವರು ಬೆಂಗಳೂರಿನಲ್ಲಿ ವಾಸ ಮಾಡುತ್ತಿದ್ದರು. ಈ ಸಂದರ್ಭದಲ್ಲಿ ಮಾರ್ಕ್ ಕಬ್ಬನ್ ಅವರು ಕಮಿಷನರ್ ಆಗಿದ್ದರಿಂದ ಇವರು ಕೊಡಗು ಪ್ರಾಂತ್ಯದ ಕಮಿಷನರ್ ಆಗಿದ್ದರೆಂಬುದಾಗಿ ತಿಳಿಯಬಹುದು. ಅಲ್ಲದೆ ಮೈಸೂರಿನಿಂದ ನಿಯೋಗಗೊಂಡ ಯುರೋಪಿಯನ್ ಅಧಿಕಾರಿಯ ಮೂಲಕ ಕೂರ್ಗ್‌ನ ಅಧೀಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದು, ಈ ಅವಧಿಯಲ್ಲಿ ಕಾಲೋನಿಯರ್ ಫ್ರೆಜರ್ ಆಗಿದ್ದರು. ಅವರ ಮುಖ್ಯ ಸ್ಥಾನವು(ಕೇಂದ್ರಸ್ಥಳ) ಮಡಿಕೇರಿ ಆಗಿದ್ದವು. ಮಳೆಗಾಲದ ಹೊರತಾಗಿ ಆಗ ಫ್ರೇಜರ್‌ಪೇಟೆನಲ್ಲಿ ಸ್ಥಾಪಿಸಲ್ಪಟ್ಟವು. ಕೂರ್ಗನ್ನು ಆಡಳಿತದ ಸಲುವಾಗಿ ಆರು ತಾಲೂಕುಗಳಾಗಿ ವಿಭಾಗಿಸಲ್ಪಟ್ಟಿದ್ದು, ೨೪ ಹೋಬಳಿಗಳಿಂದ ಕೂಡಿದ್ದಾಗಿದೆ. ಇವು ಮತ್ತೆ ಗ್ರಾಮ ಅಥವಾ ಹಳ್ಳಿಗಳಾಗಿ ಉಪವಿಭಾಗಿಸಲ್ಪಟ್ಟಿರುತ್ತವೆ.[೧೨]

ಹೀಗಾಗಿ ಆಡಳಿತವನ್ನು ಈ ರೀತಿಯಾಗಿ ನಿರ್ವಹಿಸುತ್ತಿದ್ದರು. ಬ್ರಿಟಿಷರ ಅವಧಿಯಲ್ಲಿ ಜಿಲ್ಲೆಗಳಿಗೆ ಒಬ್ಬರಂತೆ ಕಲೆಕ್ಟರ್‌ಗಳಿರುತ್ತಾರೆ. ಈತನು ಜಿಲ್ಲೆಯ ವಸೂಲು, ಶುಲ್ಕ ಇವುಗಳ ಮುಖ್ಯಾಧಿಕಾರಿ ಇದ್ದುದಲ್ಲದೆ ಜಿಲ್ಲೆಯ ಮುಖ್ಯ ಮ್ಯಾಜಿಸ್ಟ್ರೇಟನಿರುತ್ತಾನೆ. ಲೋಕಲ್‌ಬೋರ್ಡಿನ ಅಧ್ಯಕ್ಷನಿರುತ್ತಾನೆ. ಕೆಲವು ಕಡೆಯಲ್ಲಿ

ಡಿಸ್ಟ್ರಿಕ್ಟ್ ಮುನಿಸಿಪಾಲಿಟಿಯ ಅಧ್ಯಕ್ಷನು ಕಲೆಕ್ಟರನೇ ಇರುತ್ತಾನೆ. ಅಗ್ರಿಕಲ್ಚರಲ್ ಖಾತೆಯು ಕಲೆಕ್ಟರನಿಗೆ ಅಧೀನವಾಗಿರುತ್ತದೆ. ಪೊಲೀಸ್ ಖಾತೆ ಬೇರೆ ಇದ್ದಾಗಲೂ ಪೊಲೀಸ್ ಅಧಿಕಾರಿಗಳ ಮೇಲೆ ಕಲೆಕ್ಟರ್‌ನ ಹುಕುಮು ಪೂರಾ ನಡೆಯುತ್ತದೆ. ಹೀಗೆ ಎಲ್ಲಾ ವಿಭಾಗಗಳ ಮೇಲೆ ಕಲೆಕ್ಟರ್‌ನ ಅಧೀನಕ್ಕೆ ಒಳಪಟ್ಟಿರುವುದರಿಂದ ಈತನು ಜಿಲ್ಲೆಯ ಕಲೆಕ್ಟರನು ಅರಸನಂತೆ ಇರುತ್ತಾನೆಂದು ಹೇಳಬಹುದು. ಕಲೆಕ್ಟರ್‌ನ ವರ್ಷದ ಸಂಬಳವು ೨೭,೬೦೦ ಇರುತ್ತದೆ.

ಕಲೆಕ್ಟರ್‌ನ ಕೈಕೆಳಗೆ ಮೂವರಾಗಲಿ ಅಥವಾ ನಾಲ್ಕು ಜನರಾಗಲಿ ಸನದೀ ಯುರೋಪಿಯನ್ ಅಸಿಸ್ಟೆಂಟ್ ಕಲೆಕ್ಟರರೂ, ಡಿಸ್ಟ್ರಿಕ್ಟ್ ಡೆಪ್ಯೂಟಿ, ಹುಜೂರ ಡೆಪ್ಯೂಟಿ ಎಂಬುವರಿದ್ದರು. ದೇಶೀ ಅಸಿಸ್ಟೆಂಟ್ ಕಲೆಕ್ಟರರೂ ಇರುತ್ತಾರೆ. ಸನದಿ ಅಸಿಸ್ಟ್ಯಾಂಟ್‌ರ ಸಂಬಳ ವರ್ಷಕ್ಕೆ ೬೦೦೦ದಿಂದ ೧೦,೮೦೦ರವರೆಗೆ ಇರುತ್ತದೆ. ಡೆಪ್ಯೂಟಿ ಕಲೆಕ್ಟರ್‌ನ ಸಂಬಳ ವರ್ಷಕ್ಕೆ ೩೦೦೦ದಿಂದ ೬೦೦೦ರ ವರೆಗೆ ಇರುತ್ತದೆ.

ಸನದಿ ಅಸಿಸ್ಟೆಂಟರು, ಡಿಸ್ಟ್ರಿಕ್ಟ್ ಡೆಪ್ಯೂಟಿಗಳು ತಮ್ಮತಮ್ಮ ಕೈಕೆಳಗಿನ ತಾಲೂಕುಗಳ ಮುಲಕಿ ಖಾತೆಯ ಮೇಲ್ವಿಚಾರಣೆಯನ್ನು ಮಾಡುವುದಲ್ಲದೆ ೧ನೇ, ೨ನೇ ವರ್ಗದ ಮ್ಯಾಜಿಸ್ಟ್ರೇಟರಾಗಿ ಫೌಜದಾರೀ ಗುನ್ಹೆಗಳ ಇತರೇ ಕೆಲಸ ಮಾಡುವರು.

ತಾಲೂಕುಗಳ ಮುಖ್ಯಾಧಿಕಾರಿಗಳನ್ನು ಮಾಮಲೇದಾರರು ಅಥವಾ ಅಮಲ್ದಾರರು(ಕೊಡಗಿನಲ್ಲಿ) ಎಂದು ಕರೆಯುತ್ತಾರೆ. ಈಗಿನ ಹೆಸರು ತಹಸೀಲ್ದಾರರೆಂದು ಇವರು ಅಸಿಸ್ಟ್ಯಾಂಟ್ ಕಲೆಕ್ಟರರಿಗೂ ಹಾಗೂ ಕಲೆಕ್ಟರರಿಗೂ ಅಂಕಿತರಾಗಿಯೂ ಕೆಲಸ ಮಾಡುತ್ತಾರೆ. ಮಾಮಲೇದಾರರು ತಮ್ಮತಮ್ಮ ತಾಲೂಕುಗಳ ಕಂದಾಯದ ಹಣವನ್ನು ವಸೂಲಿ ಮಾಡಿ ಕಲೆಕ್ಟರರ ಕಡೆಗೆ ಕಳಿಸುವುದಲ್ಲದೆ ತಮ್ಮ ಹಳ್ಳಿಗಳಲ್ಲಿ ನಡೆಯುವ ಮುಲಕಿ ಫೌಜದಾರೀ ವ್ಯಾಜ್ಯಗಳ ನಿರ್ಣಯವನ್ನು ಮಾಡುವರು. ಇವರಿಗೆ ೨ನೇ, ೩ನೇ ವರ್ಗದ ಮ್ಯಾಜಿಸ್ಟ್ರೇಟರ ಅಧಿಕಾರವಿರುತ್ತದೆ. ಮಾಮಲೇದಾರರ ಸಂಬಳವು ವರ್ಷಕ್ಕೆ ರೂ. ೧೮೦೦ರಿಂದ ೩೦೦ವಿರುತ್ತದೆ.

ಹಳ್ಳಿಗಳಲ್ಲಿ ಮುಲಕಿ ಫೌಜದಾರೀ ಕೆಲಸಗಳ ಅಧಿಕಾರಿಯಾಗಿ ಗೌಡ ಅಥವಾ ಪಟೇಲರು ಇರುತ್ತಾರೆ. ಇವೆರಡು ಕೆಲಸ ಒಬ್ಬನೇ ಗೌಡನ ಕೈಯಲ್ಲಿ ಇರುತ್ತದೆ. ಕೆಲವು ಕಡೆಯಲ್ಲಿ ಮುಲಕಿ ಗೌಡ ಬೇರೆ, ಫೌಜದಾರಿಗೌಡ ಬೇರೆ ಇರುತ್ತಾನೆ. ಒಂದಕ್ಕಿಂತ ಹೆಚ್ಚು ಹಳ್ಳಿಗಳ ಕೆಲಸವನ್ನು ಮಾಡಬಹುದು. ಗೌಡನಿಗೆ ಅಥವಾ ಪಟೇಲನಿಗೆ ಅವನ ಭೂಮಿಯ ಮೇಲೆ ಸರ್ಕಾರಿ ತೆರಿಗೆಯನ್ನು ಮಾಫಿ ಮಾಡುವವರಲ್ಲದೆ ವರ್ಷಕ್ಕೆ ೬ರಿಂದ ೧೩೦ರವರೆಗೆ ಸಂಬಳವೂ ಇರುತ್ತದೆ. ಗೌಡನ ಅಥವಾ ಪಟೇಲನ ಕೈಕೆಳಗೆ ಲೆಕ್ಕ ಬರೆಯುವ ಮನುಷ್ಯನು ಕುಲಕರ್ಣಿ ಅಥವಾ ಶಾನುಭೋಗ ಸಹಾಯಕನಾಗಿ ಇರುತ್ತಾನೆ. ಇವನು ಗೌಡನ ಕೈಕೆಳಗಿನ ಕಾಮದಾರನಾದಾಗ್ಯೂ ಇವನು ಸರಕಾರೀ ಕಾಗದ ಪತ್ರಗಳಿಗೆ ಗೌಡನ ಸಹಿಯಂತೆ ಕುಲಕರ್ಣಿಯ ಸಹಿಯಾದರೂ ಅವಶ್ಯವಿರುತ್ತದೆ. ಊರಿನ ಗೌಡ ಅಥವಾ ಪಟೇಲನು ವಿದ್ಯೆ ಕಲಿತವನಿರುವುದು ಅಪರೂಪ. ಹಾಗಾಗಿ ಆತನಿಗೆ ಸಹಾಯಕರಾಗಿ ಕುಲಕರ್ಣಿಯು ಅಲ್ಪಸ್ವಲ್ಪ ಕಲಿತವನಿರುತ್ತಾನೆ. ಈ ಕಾರಣಗಳಿಂದ ಊರೊಳಗೆ

ಗೌಡನಿಗಿಂತ ಕುಲಕರ್ಣಿಯ ಅಮಲು(ಅಧಿಕಾರ) ಹೆಚ್ಚು ನಡೆಯುತ್ತಿರುತ್ತದೆ. ಕುಲಕರ್ಣಿಗೆ ಗೌಡನಂತೆಯೇ ಸರಕಾರದಿಂದ ನಗದುರೂಪದ ಸಂಬಳವೂ ಇರುತ್ತದೆ. ಇವರ ಕೈಕೆಳಗೆ ತಳವಾರ ಪಟ್ಟಣವು, ಹಳಬರು, ಜ್ಯೋಯಿಸರು, ಸೊನ್ನಗಾರ, ನಾರಿಗ, ಅಗಸ ಇತರೇ ಸಹಾಯಕರು ಇರುತ್ತಾರೆ.[೧೩]

ಹೀಗಾಗಿ ಆಡಳಿತವನ್ನು ಈ ರೀತಿಯಾಗಿ ನೋಡಬಹುದು ಗವರ್ನರ್ ಪ್ರಾಂತ್ಯಕ್ಕೆ. ಕಲೆಕ್ಟರ್ ಹಾಗೂ ಜಿಲ್ಲೆಯ ಸರ್ವಾಧಿಕಾರಿಯಾಗಿರುತ್ತಾನೆ. ಈತನ ಅಧೀನದಲ್ಲಿ ಬರುವ ಕಲೆಕ್ಟರ್‌ಗಳೆಂದರೆ ಡೆಪ್ಯೂಟಿ ಕಲೆಕ್ಟರ್, ಹುಜೂರ್ ಕಲೆಕ್ಟರ್. ತಾಲೂಕು ಮಟ್ಟದಲ್ಲಿ ಮಾಮಲೇದಾರರು ಅಥವಾ ಅಮಲ್ದಾರರು ಇರುತ್ತಾರೆ. ಹಳ್ಳಿ ಅಥವಾ ಗ್ರಾಮಗಳಲ್ಲಿ ಗೌಡರು, ಪಟೇಲ, ಶಾನುಭೋಗ, ಕುಲಕರ್ಣಿ ಹಾಗೂ ಇತರೇ ಸಹಾಯಕರಿರುತ್ತಾರೆ. ಆದರೆ ಕೆಲವೊಂದು ಪ್ರದೇಶದಲ್ಲಿ ನೇರವಾಗಿ ಬ್ರಿಟಿಷ್ ಆಳ್ವಿಕೆಗೆ ಒಳಪಡದ ಸಣ್ಣ ಪ್ರಾಂತ್ಯಗಳಲ್ಲಿ ಸರ್ಕಾರದ ಪರವಾಗಿ 'ರೆಸಿಡೆಂಟ್' ಎಂಬ ಹುದ್ದೆಯನ್ನು ಸೃಷ್ಟಿಸಲಾಗಿತ್ತು. ಉದಾಹರಣೆಗೆ: ಹೈದರಾಬಾದ್ ಸಂಸ್ಥಾನದಲ್ಲೂ, ಮದ್ರಾಸ್ ಪ್ರಾಂತ್ಯದ ಸಂಡೂರು ಸಂಸ್ಥಾನದಲ್ಲಿಯೂ ರೆಸಿಡೆಂಟ್‌ರ ಆಳ್ವಿಕೆ ಇತ್ತು. ಅಲ್ಲದೆ ಗಮನಿಸುವಂತಹ ಅಂಶವೆಂದರೆ ಹೈದರಾಬಾದ್ ಮೈಸೂರಿನಲ್ಲಿಯೂ ನೇರ ಆಳ್ವಿಕೆ ಇಲ್ಲದ ಸಂದರ್ಭದಲ್ಲಿತ್ತು. ಹೀಗೆ ಅನೇಕ ಪ್ರದೇಶಗಳಲ್ಲಿಯೂ ಈ ರೀತಿ ರೆಸಿಡೆಂಟ್ ಆಳ್ವಿಕೆ ಇತ್ತು.

ಹೀಗಾಗಿ ಕಲೆಕ್ಟರನ ಆಡಳಿತವೆಂದರೆ ಹಿಂದಿನ ಕಾಲದ ಅರಸನಂತೆ ಸಾರ್ವಭೌಮತ್ವದಿಂದ ಕೂಡಿತ್ತು. ಆದರೆ ನಿರಂಕುಶ ಪ್ರಭುವಾಗಿರಲಿಲ್ಲ. ಏಕೆಂದರೆ ಕಂಪನಿ ಸರ್ಕಾರಕ್ಕೆ ಅಧೀನವಾಗಿ ಕಾರ್ಯ ನಿರ್ವಹಿಸುತ್ತಿದ್ದನು. ಆಡಳಿತದಲ್ಲಿ ಸ್ವಾತಂತ್ರ್ಯವಿದ್ದುದರಿಂದ ಸಂಪೂರ್ಣವಾದ ಆಳ್ವಿಕೆಯಿಂದ ಕೂಡಿದಾಗಿತ್ತು. ಇವನ ಕೈಕೆಳಗಿನ ಅಧಿಕಾರಿಗಳೂ ಸಹ ದಕ್ಷತೆಯಿಂದ ಆಡಳಿತ ನಿರ್ವಹಿಸಬೇಕಾಗಿತ್ತು. ಈ ಮೂಲಕವಾಗಿ ಆಡಳಿತವನ್ನು ಹಲವು ರೀತಿಯಾಗಿ ವಿಭಾಗಿಸಿದ್ದರು. ಮುಖ್ಯವಾಗಿ ಕಂದಾಯ ಆಡಳಿತ, ನ್ಯಾಯಾಡಳಿತ, ಭೂಸರ್ವೇ, ಪೊಲೀಸ್ ಸೈನ್ಯ, ಮಿಲಿಟರಿ ಸ್ಥಳೀಯ ಮುನಿಸಿಪಾಲಿಟಿಗಳು ಇತರೇ ಅನೇಕ ವಿಷಯಗಳಲ್ಲಿ ಹಲವು ರೀತಿಯಲ್ಲಿ ಹೊಸ ಬದಲಾವಣೆಗೊಳಪಟ್ಟವು.

### ಕಂದಾಯ ವ್ಯವಸ್ಥೆ

ಕಂದಾಯ ವಿಚಾರ ಬಂದಾಗ ಆಡಳಿತ ಯಂತ್ರದ ನಿರ್ವಹಣೆ ಹಾಗೂ ಸಮಾಜ ಕಲ್ಯಾಣ ಕಾರ್ಯಗಳ ಅನುಷ್ಠಾನಕ್ಕಾಗಿ ಭೂಕಂದಾಯ, ಆಸ್ತಿ ತೆರಿಗೆ, ಪ್ರವೇಶ ಶುಲ್ಕ, ವೃತ್ತಿ ತೆರಿಗೆ ಮುಂತಾದ ತೆರಿಗೆಗಳನ್ನು ಬಹು ಹಿಂದಿನಿಂದಲೂ ವಿಧಿಸಲಾಗುತ್ತಿತ್ತು. ಅದರಲ್ಲೂ ಕೃಷಿ ಪ್ರಧಾನ ಸಮಾಜದಲ್ಲಿ ಭೂಕಂದಾಯವೇ ಸರ್ಕಾರಗಳ ಪ್ರಧಾನ ಆದಾಯ ಮೂಲವಾಗಿತ್ತು.[೧೪] ಮನುವಿನ ಪ್ರಕಾರ ಶಾಂತಿಕಾಲದಲ್ಲಿ ಭೂಮಿಯ ಒಟ್ಟೂ ಹುಟ್ಟುವಳಿಯನ್ನು ನಿಗದಿ ಮಾಡಿ ಅದರ ಹನ್ನೆರಡರಲ್ಲಿ ಒಂದು ಭಾಗದಿಂದ, ಆರರಲ್ಲಿ ಒಂದು ಭಾಗದವರೆಗೆ ಸರ್ಕಾರ ಪಡೆದುಕೊಳ್ಳುತ್ತಿತ್ತು. ಯುದ್ಧದ ಕಾಲದಲ್ಲಿ ಅಥವಾ ನೈಸರ್ಗಿಕ ವಿಪತ್ತುಗಳು ಬಂದೊಂದಾಗಿದಾಗ ಸರ್ಕಾರದ ಪಾಲು ಉತ್ಪಾದನೆಯ ನಾಲ್ಕರಲ್ಲೊಂದು ಭಾಗದವರೆಗೂ ಹೆಚ್ಚುತ್ತಾ ಇತ್ತು. ಇದು ಕರ್ನಾಟಕದಲ್ಲಿ ಆಳಿದ ಮುಸಲ್ಮಾನರನ್ನೊಳಗೊಂಡಂತೆ ಎಲ್ಲಾ ರಾಜರ ಆಳ್ವಿಕೆಗೂ ಬುನಾದಿಯಾಗಿತ್ತು. ಆದರೆ ಬ್ರಿಟಿಷರ

ಆಡಳಿತ ಪದ್ಧತಿಯು ಹಲವು ಬದಲಾವಣೆಗಳಿಗೆ ಒಳಗಾಯಿತು. ಮುಖ್ಯವಾಗಿ ಲಾರ್ಡ್ ವಿಲಿಯಂ ಬೆಂಟಿಂಕ್‌ರು ಹಾಕಿಕೊಟ್ಟ 'ರೈತವಾರಿ' ಪದ್ಧತಿಯನ್ನು, ಕಂದಾಯದ ವಿಚಾರಗಳನ್ನು ಅನುಸರಿಸಲಾಯಿತು. ಹಳೆಯ ಪದ್ಧತಿಯನ್ನು ಅಗತ್ಯವೆನಿಸಿದಲ್ಲಿ ಸಡಿಲಗೊಳಿಸಲಾಯಿತು. ಧನರೂಪದಲ್ಲಿ ನಿಗದಿಯಾದ ಕಂದಾಯ ವನ್ನು ಕಡಿಮೆ ಮಾಡಲಾಯಿತು. ಕೃಷಿ ಮಾಡುವ ಸಮಯವನ್ನವಲಂಬಿಸಿ ಭೂಕಂದಾಯವನ್ನು ಐದು ಕಂತುಗಳಲ್ಲಿ ಕೊಡುವಂತೆ ಆದೇಶ ನೀಡಲಾಯಿತು. ರೈತ ಮತ್ತು ಸರ್ಕಾರದ ನಡುವೆ ಬೆಳೆಯನ್ನು ಸಮನಾಗಿ ಹಂಚಲು ನಿಗದಿಯಾದ 'ಬಟಾಯಿ' ವ್ಯವಸ್ಥೆ ಪ್ರಚಲಿತವಿದ್ದ ಕಡೆಗಳಲ್ಲಿ ಅದನ್ನು ಗಣನೀಯ ಪ್ರಮಾಣದಲ್ಲಿ ಸಡಿಲಗೊಳಿಸಲಾಯಿತು. ಅದನ್ನು ಅನಂತರ ಹಣದ ರೂಪದಲ್ಲಿ ಪರಿವರ್ತಿಸಲಾಯಿತು.

ಬ್ರಿಟಿಷ್ ಕಮಿಷನರ್ ಆಡಳಿತದಲ್ಲಿ ಭೂಕಂದಾಯ ಸಂಹಿತೆಯನ್ನು ರಚಿಸಬೇಕೆಂದು ಸರ್ಕಾರದ ಆಲೋಚನೆಯಾಗಿತ್ತು. ಆದರೆ ಅನಿರೀಕ್ಷಿತ ಪರಿಸ್ಥಿತಿಯಿಂದಾಗಿ ಇಂಥ ಸಂಹಿತೆಯನ್ನು ಶಾಸನಸ್ಥವಾಗಿ ಮಾಡುವ ಯೋಜನೆಯನ್ನು ಕೈಬಿಡಲಾಯಿತು. ೧೮೮೨ರ ಆರಂಭದಲ್ಲಿ ಮೈಸೂರು ಸಂಸ್ಥಾನದಲ್ಲಿ ಪ್ರಚಲಿತವಿದ್ದ ಭೂಕಂದಾಯ ನಿಯಮಗಳನ್ನು ಚೆನ್ನಾಗಿ ರೂಪಿಸಿ ವರದಿ ನೀಡುವುದಕ್ಕಾಗಿ ಒಬ್ಬ ವಿಶೇಷ ಅಧಿಕಾರಿಯನ್ನು ನೇಮಿಸಲಾಯಿತು.

ಈತನ ಪ್ರಕಾರ ಕಂದಾಯದ ನಿಯಮವು ಅತ್ಯಂತ ಅಸಮರ್ಪಕ ಸ್ಥಿತಿಯಲ್ಲಿವೆ ಎಂದು ವರದಿ ಮಾಡುತ್ತಾ ಆತನು ಹೊಸ ಸೂಚನೆಗಳನ್ನು ರೂಪಿಸಿದನು. ಇದಾದ ನಂತರ ಮೈಸೂರು ಸಂಸ್ಥಾನದ ಪ್ರದೇಶಗಳಿಗೆ ಯೋಗ್ಯವೆಂದು ಕಂಡುಬರುವ ಮುಂಬಯಿ ಭೂಕಂದಾಯ ಸಂಹಿತೆಯನ್ನು ತಮ್ಮ ಸಂಹಿತೆಯಾಗಿ ಆಧರಿಸ ಬೇಕೆಂದು ಮೈಸೂರು ಸರ್ಕಾರ ತೀರ್ಮಾನಿಸಿತು. ೧೮೮೩ರಲ್ಲಿ ಮೈಸೂರು ಸಂಹಿತೆಯ ಮೊದಲ ಕರಡನ್ನು ಪ್ರಕಟಿಸಿ ಅದನ್ನು ಸೂಕ್ಷ್ಮ ಪರಿಶೀಲನೆಗಾಗಿ ಸೆಲೆಕ್ಟ್ ಕಮಿಟಿಗೆ ಒಪ್ಪಿಸಲಾಯಿತು. ಕರಡು ಸಂಹಿತೆಯ ಪ್ರಮುಖ ಭಾಗಗಳನ್ನು ಕುರಿತಂತೆ ಮೈಸೂರು ಪ್ರಜಾಪ್ರತಿನಿಧಿ ಸಭೆಯ ೧೮೮೩ ಮತ್ತು ೧೮೮೪ರ ಅಧಿವೇಶನಗಳಲ್ಲಿ ಸಂಪೂರ್ಣ ಚರ್ಚೆ ನಡೆಯಿತು. ೧೮೮೫ರಲ್ಲಿ ಕರಡು ಸಂಹಿತೆಯನ್ನು ಸಾರ್ವಜನಿಕ ಅಭಿಪ್ರಾಯಕ್ಕಾಗಿ ಪ್ರಕಟಿಸ ಲಾಯಿತು. ಕೆಲವು ಅವಶ್ಯಕ ಬದಲಾವಣೆಗಳ ನಂತರ, ೧೮೮೬ರಲ್ಲಿ ಅಂತಿಮ ಕರಡನ್ನು ಭಾರತ ಸರ್ಕಾರಕ್ಕೆ ಕಳಿಸಲಾಯಿತು. ೧೮೮೮ರಲ್ಲಿ ಭಾರತ ಸರ್ಕಾರದಿಂದ ಈ ಅಂತಿಮ ಕರಡಿಗೆ ಅಂಗೀಕಾರದ ಮುದ್ರೆ ಸಿಕ್ಕಿತು.

ಮೈಸೂರು ಭೂಕಂದಾಯ ಸಂಹಿತೆ(೧೮೮೮ ಶಾಸನ iv) ಎಂಬ ನೂತನ ಅಧಿನಿಯಮ ೧೮೮೯ರ ಏಪ್ರಿಲ್ ೧ರಿಂದ ಕಾರ್ಯರೂಪಕ್ಕೆ ಬರುವಂತೆ ಜಾರಿಯಾಯಿತು. ಈ ಅಧಿನಿಯಮಕ್ಕೆ ೧೮೯೧, ೧೮೯೨, ೧೯೦೫, ೧೯೦೬, ೧೯೦೯, ೧೯೧೨, ೧೯೧೬ ಮತ್ತು ೧೯೧೯ರಲ್ಲಿ ತಿದ್ದುಪಡಿಗಳಾಗಿ ಬಹಳ ಬದಲಾವಣೆಗಳಾದವು. ಏಕೆಂದರೆ ಈ ಸಂಹಿತೆಯಲ್ಲಿ ಅನೇಕ ವಿಷಯಗಳನ್ನೊಳಗೊಂಡ ೨೩೯ ಕಲಮುಗಳಿವೆ. ಕಂದಾಯ ಇಲಾಖೆಯ ಅಧಿಕಾರಿಗಳ ಅನೇಕ ಕೆಲಸಕಾರ್ಯಗಳನ್ನು, ಕರ್ತವ್ಯಗಳನ್ನು ವಿವರಿಸುವ ಕಲಮುಗಳು ಭೂಕಂದಾಯವನ್ನು ವಸೂಲಿ ಮಾಡಲು ಅನುಸರಿಸಬೇಕಾದ ವಿವಿಧ ಉಪಾಯಗಳ ವಿವರಣೆ, ಅನೇಕ ಬಗೆಯ ಸಾಗುವಳಿಯ ವಿವರಣೆ, ಭೂಮಾಪನ ಮತ್ತು ಕಂದಾಯ ವ್ಯವಸ್ಥೆಗೊಳಿಸುವ ರೀತಿ, ಗಡಿ ಸಂಕೇತಗಳನ್ನು

ನೋಡುವ ರೀತಿ, ಭೂಕಂದಾಯ ಕೊಡದ ರೈತನ ಮೇಲೆ ವಿಧಿಸುವ ದಂಡಗಳ ವಿವರ ಮತ್ತು ಕಂದಾಯ ಇಲಾಖೆ ಸರಿಯಾಗಿ ಕೆಲಸ ಮಾಡಲು ಅಗತ್ಯವಿರುವ ಇತರ ಮಾರ್ಗದರ್ಶಕ ಸೂಚನೆಗಳನ್ನು ಒಳಗೊಂಡಿತ್ತು ಎನ್ನಬಹುದು.[೧೫]

ಕಂದಾಯವನ್ನು ಸುಬೇದಾರರು, ಪಾರುಪತ್ತೆದಾರರು ತಮಗೆ ಸಂಬಂಧಿಸಿದ ತಾಲೂಕುಗಳಲ್ಲಿ ಒಕ್ಕಲುತನಕ್ಕೆ ನಿರ್ದಿಷ್ಟವಾದ ಗಮನ ಕೊಡಬೇಕಾಗುತ್ತಿದ್ದವು. ತಾಲೂಕು ಮಟ್ಟದಲ್ಲಿ ಕಂದಾಯ ಹೆಚ್ಚಳ ಸುಬೇದಾರರು ಮತ್ತು ಪಾರುಪತ್ತೇದಾರರು ಸಂಪೂರ್ಣವಾಗಿ ಅವರ ಚಟುವಟಿಕೆಗಳ ಮೇಲೆ ಅವಲಂಬಿತವಾಗಿದ್ದು, ಅವರು ತಮ್ಮ ಎಲ್ಲ ಅತ್ಯುತ್ತಮ ಮಾರ್ಗಗಳನ್ನು ಉಪಯೋಗಿಸಿ ಒಕ್ಕಲುತನ ಹೆಚ್ಚು ಮಾಡಲು ರೈತರಿಗೆ ಎಲ್ಲಾ ಪ್ರೋತ್ಸಾಹಗಳನ್ನು ಕೊಡುವುದರ ಮೂಲಕ ಬೆಂಬಲಿಸುತ್ತಿದ್ದರು.

ಜನವರಿ ಮತ್ತು ಫೆಬ್ರವರಿ ತಿಂಗಳುಗಳಲ್ಲಿ ಸುಬೇದಾರ ಮತ್ತು ಪಾರುಪತ್ತೇದಾರರು ನಾಡು, ಹೋಬಳಿ ಯಲ್ಲಿ ಪಟೇಲರ ಮೂಲಕ ಬಂದು ವಿಚಾರಣೆ ಮಾಡಲು ರಾಜ್ಯದ ಹಳ್ಳಿಗಳೊಳಗೆ ಮತ್ತು ರೈತರ ಸ್ಥಿತಿಗತಿಗಳ ಬಗೆ ತಿಳಿದುಕೊಳ್ಳುತ್ತಿದ್ದರು. ಅವರು ಎಲ್ಲಾ ರೈತರು ಹಳ್ಳಿಯೊಳಗೆ ಉಳುಮೆ ಮಾಡಲು ಮತ್ತು ಬಿತ್ತಲಾಗದ ಭೂಮಿಯನ್ನು ಸರಿಯಾದ ರೂಪಕ್ಕೆ ತರಲು ಸಮರ್ಥರಿದ್ದಾರೆಯೋ ಎಂಬುದರ ಬಗೆ ಖಚಿತಪಡಿಸಿ ಕೊಳ್ಳುತ್ತಿದ್ದರು. ಒಂದು ವೇಳೆ ಎಲ್ಲಾ ರೈತರು ತಮ್ಮ ಹತ್ತಿರವಿದ್ದ ಭೂಮಿಯಲ್ಲಿ ಉಳುಮೆ ಮಾಡಲು ಸಾಧ್ಯ ಇಲ್ಲದಿದ್ದರೆ ಅವರನ್ನು ಪ್ರೋತ್ಸಾಹಿಸಲಾಗುತ್ತಿತ್ತು ಮತ್ತು ಅವರಿಗೆ ಎತ್ತುಗಳನ್ನು ಖರೀದಿಸಲು ಸಾಲ ಕೊಡಲಾಗುತ್ತಿತ್ತು. ಉಳುಮೆ ಮಾಡಲು ಮಡಿಕೆ ಇನ್ನಿತರ ಸಲಕರಣೆಗಳನ್ನು ಕೊಳ್ಳಲು ಸಹಾಯಕ ಕ್ರಮಗಳನ್ನು ಕೈಗೊಂಡು ಸರಕಾರಕ್ಕೆ ವರದಿ ಒಪ್ಪಿಸುತ್ತಿದ್ದರು. ಬೆಳೆ ಬಂದ ನಂತರ ಕೊಟ್ಟ ಸಾಲವನ್ನು ಮರುಪಾವತಿಸ ಬೇಕಾಗುತ್ತಿತ್ತು.

ಸುಬೇದಾರರು ಮತ್ತು ಪಾರುಪತ್ತೇದಾರರು ಸರಕಾರಕ್ಕೂ ಮತ್ತು ರೈತರಿಗೂ ಇಬ್ಬರಿಗೂ ಸಹ ಲಾಭವಾಗುವಂತಹ ಆಡಳಿತ ವ್ಯವಸ್ಥೆ ಮಾಡುತ್ತಿದ್ದರು. ತಮ್ಮ ತಾಲೂಕು ಮತ್ತು ಹೋಬಳಿಗಳ ಅಭಿವೃದ್ಧಿಯಿಂದಾಗಿ ಜನರು ಸಂತೋಷ ಮತ್ತು ನೆಮ್ಮದಿಯಿಂದ ನೆಲೆಸುವಂತೆ ನೋಡಿಕೊಳ್ಳುತ್ತಿದ್ದರು. ಸರ್ಕಾರ ಕೈಗೊಳ್ಳುವ ನಿರ್ಣಯಗಳಿಗೆ ಯಾವುದೇ ಧಕ್ಕೆ ಬಾರದಂತೆ ಸಲಹೆ ಸೂಚನೆ ಕೊಡುತ್ತಿದ್ದರು. ಈ ಒಂದು ಪರಿಹಾರ ಮಾರ್ಗದಿಂದ ಕಂದಾಯವನ್ನು ಹೆಚ್ಚಾಗುವಂತೆ ಮಾಡಿ ದೇಶದ ಆದಾಯ ಹೆಚ್ಚಾಗಲು ಅನುಕೂಲವಾಗುತ್ತಿತ್ತು.[೧೬] ಹೀಗಾಗಿ ಮಾಮಲೇದಾರರ ಮತ್ತು ಪಾರುಪತ್ತೇದಾರರು ಗ್ರಾಮಮಟ್ಟದಲ್ಲಿ ಪಟೇಲ, ಗೌಡರು, ಶ್ಯಾನುಭೋಗ ಅಥವಾ ಕರಣಿಕರ ಜೊತೆಗೆ ಇತರ ತಳವರ್ಗದವರು ಸರ್ಕಾರದ ಪರವಾಗಿ ಕಂದಾಯ ಸಂಗ್ರಹಕ್ಕೆ ಸಹಾಯ ಮಾಡುತ್ತಿದ್ದುದರಿಂದ ಅವರ ಭೂಮಿಗೆ ಯಾವುದೇ ಕಂದಾಯವನ್ನು ನಿಗದಿಪಡಿಸು ತ್ತಿರಲಿಲ್ಲ.[೧೭] ಹೀಗಾಗಿ ಸರ್ಕಾರದ ಪರವಾಗಿ ಕೆಲಸ ಮಾಡುವವರಿಗೆ ರಿಯಾಯ್ತಿ ತೋರಿಸುತ್ತಿದ್ದರೆಂಬುದು ಸಮಂಜಸವಾದ ಕಾರ್ಯವಾಗಿದೆ.

ಬ್ರಿಟಿಷರ ಆಡಳಿತ ವ್ಯವಸ್ಥೆಯಲ್ಲಿ ಸಾಮಾನ್ಯವಾಗಿ ಒಮ್ಮೆ ನಿಗದಿತ ಭೂಕಂದಾಯವನ್ನು ಮೂವತ್ತು ವರ್ಷಗಳ ನಂತರ ಪುನರ್ ಪರಿವೀಕ್ಷಣೆ ಒಳಪಡಿಸಲಾಗುತ್ತಿತ್ತು.[೧೮] ಈ ಕಂದಾಯವನ್ನು ಭೂಮಿಯ

ಫಲವತ್ತತೆಯ ಆಧಾರದ ಮೇಲೆ ವರ್ಗೀಕರಿಸುತ್ತಿದ್ದರು ಹಾಗೂ ವಿಧಿಸುತ್ತಿದ್ದರು. ಈ ಉದ್ದೇಶದಿಂದ ಕಂದಾಯ ವಸೂಲಿ ಮಾಡುವ ಮುನ್ನ ಭೂಮಾಪನ ಪದ್ಧತಿಯನ್ನು ಜಾರಿಗೆ ತಂದರು. ಆಂಗ್ಲರು ಮಾಡಿದ ಮೊದಲ ಶ್ರೇಷ್ಠತೆ ಕೆಲಸವೆಂದರೆ ಭೂಮಾಪನ ಮಾಡುವುದು. ೧೮೦೨ರಲ್ಲಿ ಸರ್ ಥಾಮಸ್ ಮನ್ರೋ ಇದನ್ನು ವ್ಯವಸ್ಥಿತವಾಗಿ ಬಳಕೆಗೆ ತಂದನು. ಕ್ರಮೇಣ ಭೂಮಾಪನ ಪದ್ಧತಿಯಿಂದ ತೆರಿಗೆ ಕಂದಾಯ ಕೃಷಿಯಲ್ಲಿ ಚಟುವಟಿಕೆ ನಡೆಸಲು ಅನುಕೂಲವಾಯಿತು. ಆಂಗ್ಲರು ಸರ್ವೇ ಮಾಡುವ ಪೂರ್ವದಲ್ಲಿ ಭೂಮಿಗೆ ಒಂದು ಕೂರಿಗೆ ಎಂದು ಹೆಸರು ಇತ್ತು. ಸರಪಣಿ, ಗೂಟ ಇತ್ಯಾದಿ ಭೂಮಿ ಅಳತೆಪಟ್ಟಿ ಬೇರೆ ರೀತಿ ಇತ್ತು. ಆಗ ಎರೆ ಭೂಮಿಯ ೨೪ರಿಂದ ೪೮ ಅಳತೆ ಮಸಬಭೂಮಿ, ೨ರಿಂದ ೧೨ರ ವರೆಗೆ ತರೀ ಭೂಮಿಗೆ ಅಳತೆ ಬೇರೆ, ಬೇರೆ ಇತ್ತು. ಜೊತೆಗೆ ರೈತರು ಇರುವ ಭೂಮಿಯು ಅವಲಂಭಿಸಿತ್ತು. ಅಂದರೆ ಆತನು ಪ್ರಬಲನಾಗಿದ್ದರೆ ಹೆಚ್ಚಿನ ಭೂಮಿಯನ್ನು ಹೊಂದಿರುತ್ತಿದ್ದನು.[೧೯]

ಹೀಗಾಗಿ ಅಳತೆ ಬೇರೆ ಇದ್ದುದರಿಂದ ಅಳತೆಮಾನವು ಹೆಚ್ಚುಕಡಿಮೆ ಇದ್ದುದರಿಂದ ಆಂಗ್ಲರಿಗೆ ಕಂದಾಯ ವಸೂಲಿಯಲ್ಲಿ ಬಹಳ ತೊಂದರೆಗಳುಂಟಾದವು. ಜೊತೆಗೆ ಸರ್ಕಾರಕ್ಕೆ ಹಣದ ಕೊರತೆಯು ಉಂಟಾಯಿತು. ಇದರಿಂದಾಗಿ ಭೂಮಿಯನ್ನು ಅಳೆಯುವ ಆಲೋಚನೆ ಕೈಗೊಂಡರು. ಇದರ ಕುರಿತು ಡಾ. ಚಂದ್ರಶೇಖರ ಕಂಬಾರ ಅವರ ಪ್ರಕಾರ "ನಮ್ಮ ದೇಶದಲ್ಲಿ ಬ್ರಿಟಿಷರ ಕಾಲಕ್ಕೆ ಭೂಮಿಯನ್ನು ಸರ್ವೇ ಮಾಡುವ ಪದ್ಧತಿ ಬಳಕೆಗೆ ಬಂದಿತ್ತು. ನೂರಾರು ಮೋಜಣಿದಾರರು ಶಂಕು, ಸರಪಣಿ, ಗೂಟಗಳನ್ನು ತೆಗೆದುಕೊಂಡು ಬಂದು ಭೂಮಿಯನ್ನು ಅಳೆದುಕೊಟ್ಟರು. ಇದರ ಪ್ರತಿಫಲ ಎಲ್ಲರಿಗೂ ಉಪಯುಕ್ತವಾಯಿತು. ಎಲ್ಲರಿಗೂ ಅನುಕೂಲವಾಗುವಂತೆ ಭೂಮಿಯನ್ನು ಅಳತೆ ಮಾಡಿದ್ದರಿಂದ ನಿರ್ದಿಷ್ಟವಾಗಿ ತೆರಿಗೆ ಕೊಡಲು ಅವಕಾಶವಾಯಿತು ಎಂದಿದ್ದಾರೆ.[೨೦] ಭೂಮಾಪನ ಕೆಲಸವು ಕರ್ನಾಟಕದ ಹಲವು ಕಡೆಗಳಲ್ಲಿ ಬೇರೆ ಬೇರೆ ಕಾಲದಲ್ಲಿ ಕೈಗೊಂಡರು. ಭೂಮಿಯನ್ನು ಅಳೆಯುವ ಆಲೋಚನೆಯನ್ನು ೧೮೨೧ರಲ್ಲಿ ರೆವಿನ್ಯೂಬೋರ್ಡಿನ ಸಂಘದ ಮೂಲಕ ಭೂಮಿಯನ್ನು ಅಳೆಯುವ ಆಲೋಚನೆ ಮಾಡಿದರೂ ಇದು ಸರಿಯಾಗಲಿಲ್ಲ. ಅನಂತರ ಇದನ್ನು ಎಲ್ಲಾ ಕಡೆ ಪ್ರತಿಸ್ಥಾಪಿಸಿದರು. ಕೆಲವೊಂದು ಕಡೆಯೂ ಸರಿಕಾಣಲಿಲ್ಲ. ೧೮೪೩ರಲ್ಲಿ ಧಾರವಾಡದಲ್ಲಿ ಪ್ರಾರಂಭವಾಗಿ ೧೮೫೬ರಲ್ಲಿ ಮುಗಿಯಿತು. ಒಟ್ಟು ೧೪೫.೯೯ ಚ.ಕಿ.ಮೀಟರ್‌ನಂತೆ ಬೆಳಗಾವಿಯಲ್ಲಿ ೧೮೪೯ರಿಂದ ೧೮೬೦ರ ವರೆಗೂ, ವಿಜಾಪುರದಲ್ಲಿ ೧೮೪೩ರಿಂದ ೧೮೬೪ರವರೆಗೆ ನಡೆಸಲಾಯಿತು. ಉತ್ತರ ಕನ್ನಡ ಜಿಲ್ಲೆಯಲ್ಲಿ ೧೮೬೪ರಿಂದ ಪ್ರಾರಂಭವಾಗಿ ೧೮೮೨ರವರೆಗೆ ನಡೆಯಿತು.[೨೧] ಹೈದರಾಬಾದ್ ಕರ್ನಾಟಕದಲ್ಲಿ ಪ್ರಪ್ರಥಮವಾಗಿ ೧೮೭೫ರ ಸುಮಾರಿಗೆ (ಸರ್ವೇಕ್ಷಣೆ) ಭೂಮಿಯನ್ನು ಅಳೆದು ಕಂದಾಯ ನಿಗದಿಗೊಳಿಸುವ ಪ್ರಕ್ರಿಯೆ ಪ್ರಾರಂಭವಾದಂತೆ ಕೊಡುತ್ತಾರೆ. ೧೮೭೮ರಿಂದ ೧೮೮೩ರವರೆಗೆ ನಡೆಯಿತು. ಅನಂತರ ಪುನರ್ ಪರಿಶೀಲನೆ ೧೯೧೫ರವರೆಗೆ ಆಯಿತು.[೨೨]

ಮದ್ರಾಸ್ ಕರ್ನಾಟಕದ ಬಳ್ಳಾರಿಯಲ್ಲಿ ೧೮೦೨ರಲ್ಲಿ ಸರ್ವೇಕ್ಷಣೆ ಆಯಿತು.[೨೩] ಮೈಸೂರು ಪ್ರಾಂತ್ಯದಲ್ಲಿ ಬೌರಿಂಗ್ ಕಾಲದಲ್ಲಿ ೧೮೬೨-೭೦ರಲ್ಲಿ ಪ್ರಾರಂಭವಾಗಿ ೧೮೭೭-೭೮ರವರೆಗೆ ಸರ್ವೇಕ್ಷಣೆ ನಡೆಯಿತು.[೨೪] ಕೊಡಗು ಪ್ರಾಂತ್ಯದಲ್ಲಿ ೧೯೦೭ ಮತ್ತು ೧೯೧೨ರಲ್ಲಿ ಸರ್ವೇಕ್ಷಣೆ ಆಯಿತು.[೨೫]

ಕಂದಾಯವನ್ನು ನಿಗದಿಪಡಿಸುವಾಗ ಬೇಸಾಯಕ್ಕೆ ಅರ್ಹವಾದ ಎಲ್ಲಾ ಭೂಮಿಯನ್ನು ಹೋಲಿಸಿ ನೋಡಲಾಯಿತು. ಕೂರಿಗೆಯನ್ನು ಎಕರೆಗಳಾಗಿ ಪರಿವರ್ತಿಸಲಾಯಿತು. ಬಂಜರು ಭೂಮಿಯನ್ನು ಸಹ ಅಳತೆ ಮಾಡಿ ಅನಂತರ ಎಕರೆಗಳಲ್ಲಿ ದಾಖಲೆ ಮಾಡಲಾಯಿತು. ಗ್ರಾಮಗಳ ಎಲ್ಲಾ ಜಮೀನುಗಳ ಚಕ್‌ಬಂದಿ (ಗಡಿಗಳ ವಿವರ) ತಯಾರಿಸಲಾಯಿತು. ಹೊಲಗಳಿಗೆ ನಂಬರುಗಳನ್ನು ನೀಡಿ ದಾಖಲೆಗಳಲ್ಲಿ ನೆರೆಯ ಹೊಲಗಳಿಗೆ ಸಂಬಂಧಿಸಿದಂತೆ ಅವುಗಳ ಸ್ಥಾನವನ್ನು ಗುರುತಿಸಲಾಯಿತು. ನೇರ ಸ್ವರೂಪದ ಪ್ರಕಾರ ತಹಸೀಲ್ದಾರನು ಎಲ್ಲಾ ಕೃಷಿಯೋಗ್ಯವಾದ ಹೊಲಗಳ ಕಂದಾಯವನ್ನು ಸಮನ್ವಯಗೊಳಿಸಿದನು. ಎಲ್ಲಾ ಜಮೀನುಗಳ ಅಳತೆ ಮಾಡಿ ಮೇರೆಗಳ ಗುರುತು ಹಾಕಿದ ಮೇಲೆ 'ಪಾವತಿ ಬುಕ್'ನಲ್ಲಿ ಅದರ ಫಲಿತಾಂಶವನ್ನು ದಾಖಲು ಮಾಡುವ ಪದ್ಧತಿಯನ್ನು ಪ್ರಾರಂಭಿಸಲಾಯಿತು.

ತಹಸೀಲ್ದಾರನ ರುಜುವಿದ್ದು ಮೊಹರ್(ಮುದ್ರೆ) ಆದ ಪಾವತಿ ಪುಸ್ತಕವನ್ನು ಭೂಮಾಲೀಕ ರೈತನಿಗೆ ಕೊಡಲಾಯಿತು. ೧೮೫೭ರಲ್ಲಿ ಪಾವತಿ ಪುಸ್ತಕಗಳನ್ನು ತಪಾಸಿಸುವ ಪದ್ಧತಿ ಜಾರಿಯಲ್ಲಿ ಬಂತು. ಉಪವಿಭಾಗಾಧಿಕಾರಿ ಅದನ್ನು ಪರಿಶೀಲಿಸುತ್ತಿದ್ದನು. ತೆರಿಗೆ ಭಾರ ಹೆಚ್ಚಾಯಿತೆಂಬ ದೂರು ಆತನ ಗಮನಕ್ಕೆ ಬಂದಾಗಲೆಲ್ಲ ಆ ಬಗ್ಗೆ ವಿಚಾರಣೆ ನಡೆಸಿ ದೂರು ಸಮರ್ಥನೀಯವೆಂದು ಕಂಡುಬಂದಲ್ಲಿ ಒಟ್ಟು ಕಂದಾಯದಲ್ಲಿ ಕಡಿತ ಮಾಡುತ್ತಿದ್ದನು.[೨೬]

ಹೀಗಾಗಿ ಆಂಗ್ಲರು ಭೂಮಿಯ ಫಲವತ್ತತೆಯನ್ನು ಆಧರಿಸಿ ಭೂ ವರ್ಗೀಕರಣ ಕೈಗೊಳ್ಳುತ್ತಿದ್ದರು. ಬಳ್ಳಾರಿ ಜಿಲ್ಲೆಯಲ್ಲಿ ಮೂರು ರೀತಿಯ ಭೂಮಿ ವರ್ಗವಿತ್ತು ಅವು ಒಣಭೂಮಿ, ಕೃಷಿಭೂಮಿ, ನೀರಾವರಿ ಭೂಮಿ. ಎಂಟು ಉತ್ತಮ ಮಟ್ಟದ ಭೂಮಿಗೆ ೧೨% ಹಣವನ್ನು ನಿಗದಿಪಡಿಸಿದರು. ಆದರೆ ಒಣ ಭೂಮಿಗೆ ಮಾತ್ರ ಶೇಕಡ ೧೦ರಂತೆ ಇತ್ತು. ಇದರಲ್ಲಿ ಸಡಿಲಿಕೆಯೂ ಇತ್ತು.[೨೭] ಈ ಮದ್ರಾಸ್ ಪ್ರಾಂತ್ಯದ ಬಳ್ಳಾರಿಯಲ್ಲಿ ಒಂದು ವರ್ಷದ ಕಂದಾಯ ೧೬ ಹಣ ಇತ್ತು. ಆದರೆ ನವೆಂಬರ್ ಮತ್ತು ಜೂನ್ ತಿಂಗಳುಗಳು ಬಿಟ್ಟು ಉಳಿದಂತೆ ಕಂದಾಯವನ್ನು ಸಲ್ಲಿಸಬೇಕಿತ್ತು. ಆದರೆ ದಕ್ಷಿಣಕನ್ನಡದಲ್ಲಿ ಶುಲ್ಕವು ಹೆಚ್ಚಿರುತ್ತಿತ್ತು. ನಾಲ್ಕು ರೀತಿ ಭೂವರ್ಗವಿತ್ತು. ಮೊದಲ ವರ್ಗದ ಭೂಮಿಗೆ ಹೆಚ್ಚು ಕೊಡಬೇಕಾಗಿತ್ತು. ಇದೊಂದು ಭತ್ತದ ಭೂಮಿಯಾಗಿತ್ತು. ೧೬ ರೂಪಾಯಿಯಿಂದ ೨೬ರವರೆಗೆ ಇತ್ತು. ಬಾಲಿಭೂಮಿಗೆ(Bali) ೮ ರೂಪಾಯಿಯಿರುವ ೧೬ ರೂಪಾಯಿವರೆಗೆ ಇತ್ತು. ಮಜಲ್(Majal) ಭೂಮಿಗೆ ೨ ರೂಪಾಯಿಯಿಂದ ೪ರವರೆಗೆ ಇತ್ತು. ಗಾರ್ಡನ್ (ತೋಟಗಾರಿಕೆ) ಭೂಮಿಗೆ ೪೦ ರೂಪಾಯಿಗಳವರೆಗೆ ಹೆಚ್ಚು ಇತ್ತು.[೨೮] ಅಲ್ಲದೆ ಹೈದರಾಬಾದ್‌ನಲ್ಲಿ ಮೂರು ರೀತಿಯ ಭೂಮಿ ಫಲವತ್ತತೆ ಇತ್ತು. ಒಣಭೂಮಿಗೆ ಒಂದು ಎಕರೆಗೆ ಒಂದು ರೂಪಾಯಿ ಎಂಟುಅಣೆಯಿಂದ ಎರಡು ರೂಪಾಯಿ ೧೨ ಅಣೆವರೆಗೆ ಇತ್ತು. ನೀರಾವರಿ ಭೂಮಿಗೆ ೧೨ರಿಂದ ೧೪ರ ವರೆಗೆ ಇತ್ತು. ಭಾಗಾಯತ ಭೂಮಿಗೆ ೫ರಿಂದ ೬ಕ್ಕೆ ಹೆಚ್ಚಿಸಲಾಗಿತ್ತು, ಇದನ್ನು ಎರಡು ಕಂತುಗಳಲ್ಲಿ ನಿಗದಿಪಡಿಸಲಾಗಿತ್ತು. ಮೊದಲ ಕಂತನ್ನು 'ಖಾರಿಫಕಿಸ್ತಿ' ಎಂತಲೂ, ಜನೆವರಿ ೧ರಿಂದ ೨೧ ದಿನಗಳವರೆಗೆ ಯಾವುದೇ ಬಾಕಿಗೆ ಅವಕಾಶ ಇಲ್ಲದಂತೆ ವಸೂಲು ಮಾಡಲಾಗುತ್ತಿತ್ತು. ಎರಡನೆಯ ಕಂತಿನ ಕಂದಾಯವನ್ನು 'ರಬಿಖಿಸ್ತಿ'ಯನ್ನು ಏಪ್ರಿಲ್

ನಂತರ ಸಂಗ್ರಹಿಸಲಾಗುತ್ತಿತ್ತು.[೨೯] ಕೊಡಗಿನಲ್ಲಿ ನೀರಾವರಿ ಭೂಮಿಗೆ ಸರಕಾರವು ಒಂದು ನಿಶ್ಚಿತವಾದ, ಸುಧಾರಿಸಿದ ಕರಪದ್ಧತಿಯನ್ನು ಜಾರಿಗೆ ತಂದಿದ್ದು, ವರ್ಷಗಳಿಗೆ ಸಂಬಂಧಿಸಿದಂತೆ ಭೂಮಿ ಉಳುಮೆಯಾಗದೇ ವ್ಯರ್ಥವಾಗಿರುವ ಭೂಮಿಗೆ ೫ ವರ್ಷದಿಂದ ೧೦ ವರ್ಷಗಳವರೆಗೆ ತೆರಿಗೆ ಮೌಲ್ಯವನ್ನು ತಂದಿದ್ದರು. ಮೊದಲನೇ ವರ್ಷ ೧ ೧/೪ ರಷ್ಟು ತೆರಿಗೆ ಇತ್ತು. ಎರಡನೆಯ ವರ್ಷ ೧/೨ ದಷ್ಟು, ಮೂರನೆಯ ವರ್ಷ ೩/೪ ರಷ್ಟು ಮತ್ತು ನಾಲ್ಕನೆಯ ವರ್ಷ ಸಾಲವನ್ನು ಪೂರ್ತಿಯಾಗಿ ಸಲ್ಲಿಸಬೇಕಿತ್ತು.[೩೦] ಇತರೇ ಭೂಮಿಗೆ, ಭತ್ತದ ಭೂಮಿಗೆ ಎಕರೆಗೆ ಎಂಟಾಣೆಯಿಂದ ಐದು ರೂಪಾಯಿವರೆಗೆ ಖುಷ್ಕಿ ಭೂಮಿಗೆ ಕಂದಾಯ ನಾಲ್ಕಾಣೆಯಿಂದ ಎರಡು ರೂಪಾಯಿಯವರೆಗೆ, ಪ್ರತಿ ಎಕರೆಗೆ ಎರಡು ರೂಪಾಯಿಯಿಂದ ಎಂಟು ರೂಪಾಯಿಯವರೆಗೆ ಕಂದಾಯವಿತ್ತು.[೩೧] ಮೈಸೂರಿನಲ್ಲಿ ಈ ರೀತಿ ಇತ್ತು. ಬಂಜರು ಭೂಮಿಗೆ ಮೊದಲ ವರ್ಷ ಯಾವುದೇ ಕಂದಾಯ ಇರಲಿಲ್ಲ. ಎರಡನೆಯ ವರ್ಷ ಎಕರೆಗೆ ಎರಡಾಣೆ, ಮೂರನೆಯ ವರ್ಷ ನಾಲ್ಕಾಣೆ(೨೫ ಪೈಸೆ), ನಾಲ್ಕನೇ ವರ್ಷ ೧/೨ ರೂಪಾಯಿ(೫೦ ಪೈಸೆ), ಐದನೆಯ ವರ್ಷ ಪೂರ್ತಿ ಕಂದಾಯ ಸಲ್ಲಿಸಬೇಕಿತ್ತು. ಅಂದರೆ ಒಂದು ರೂಪಾಯಿ ಇತ್ತು.[೩೨]

ಹೀಗಾಗಿ ಆಂಗ್ಲರಿಗೆ ಕಂದಾಯದಿಂದ ಅಧಿಕ ಆದಾಯ ದೊರಕುತ್ತಿದೆಂಬುದು ಮುಖ್ಯ ವಿಚಾರವಾಗಿದೆ. ಮುಖ್ಯವಾಗಿ ದಕ್ಷಿಣಕನ್ನಡ, ಬಳ್ಳಾರಿ, ಕೊಡಗು, ಮೈಸೂರಿನ ಭೂಕಂದಾಯದಿಂದ ಅಧಿಕ ಆದಾಯ ದೊರಕುತ್ತಿದ್ದದ್ದು ಸ್ಪಷ್ಟ. ಹೀಗಾಗಿ ಇಲ್ಲಿ ಅವರ ನೇರ ಆಳ್ವಿಕೆ ಇತ್ತು. ಆದರೆ ಬ್ರಿಟಿಷರು ಹಾಗೂ ಅವರ ಸಹವರ್ತಿಗಳ ಸಹಯೋಗದಿಂದ ಶೋಷಣೆಯನ್ನು ಪ್ರತಿಭಟಿಸುವ ಅನೇಕ ಘಟನೆಗಳು ಕೂಡ ನಡೆದವು. ಆದರೆ ಅವುಗಳ ಕುರಿತು ಗ್ಯಾಸೆಟಿಯರ್‌ಗಳಲ್ಲಿ ಮಾಹಿತಿ ದೊರೆಯುವುದಿಲ್ಲ. ೧೮೮೬ರಲ್ಲಿ ಸರಕಾರದ 'ದಿ ಕೂರ್ಗ್ ಜಮ್ಮ ರೈಟ್ಸ್ ರೆಗ್ಯುಲೇಷನ್(೧೮೮೬) ಎನ್ನುವ ಮಸೂದೆ ಹಿಟ್ಟಿಬಿಟ್ಟಿ ಚಾಕ್ರಿಯನ್ನು ಕಾನೂನುಬದ್ಧ ಗೊಳಿಸುವುದನ್ನು ಅಪ್ಪಾರಂಡ ಬೋಪಣ್ಣ ಹಾಗೂ ಅವರ ಸಹವರ್ತಿಗಳು ತೀವ್ರವಾಗಿ ಪ್ರತಿಭಟಿಸಿದ್ದು, ಗಮನಾರ್ಹವಾಗಿದೆ. ಬ್ರಿಟಿಷರು ಕೊಡಗನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡ ನಂತರ ೧೮೮೦ರ ದಶಕದವರೆಗೆ ೧೦ ಪಟ್ಟು ಕಂದಾಯವನ್ನು ಏರಿಸಿ ಅದರ ಒಂದಂಶವನ್ನು ಕೊಡಗಿನ ಪ್ರಗತಿಗೆ ಉಪಯೋಗಿಸಲಿಲ್ಲ. ಅಮಾಯಕ ಜಮ್ಮರೈತರನ್ನು ಶೋಷಣೆ ಮಾಡಿದರೆಂಬುದು ತಿಳಿದುಬರುತ್ತದೆ.[೩೩] ಆದರೆ ಇಂತಹ ಮಾಹಿತಿಗಳು ಗ್ಯಾಸೆಟಿಯರ್‌ನಲ್ಲಿ ದಾಖಲಾಗಿರುವುದಿಲ್ಲ.

## ನ್ಯಾಯಾಂಗ ವ್ಯವಸ್ಥೆ

ನ್ಯಾಯಪರಿಪಾಲನೆಯು ಇತಿಹಾಸ ಪ್ರಾಚೀನವಾದದ್ದು. ರಾಜರು, ಮಹಾಮಂಡಲೇಶ್ವರರು, ಪಾಳೆಯಗಾರರು, ಊರಗೌಡ ಮೊದಲಾದವರು ಅನುದಾರವಾದ ನ್ಯಾಯವ್ಯವಸ್ಥೆಯನ್ನು ಧರ್ಮದ ಚೌಕಟ್ಟಿನೊಳಗೆ ಅನುಸರಿಸಿಕೊಂಡು ಬಂದಿರುವುದು ಕಾಣಬಹುದು. ಪಂಚಾಯಿತಿ ಮಾಡುವುದು, ವ್ಯಾಜ್ಯಗಳು ಹುಟ್ಟಿಕೊಂಡಾಗ ವಿಷಯವನ್ನು ತಿಳಿದು ಸ್ಥಳದ ಚಾವಡಿಯಲ್ಲಿ ಅಥವಾ ದೇವಸ್ಥಾನದಲ್ಲಿ ಕುಳಿತು ಎರಡು ಪಕ್ಷಗಳ ವಾದಗಳನ್ನು ಕೇಳಿ ತೀರ್ಮಾನ ಕೊಡುವ ವಿಧಾನ. ತೀರ್ಮಾನ ಆಲಿಸಿ ವ್ಯಾಜ್ಯದ ಉಭಯತ್ರರು

ನಡೆಸುವುದು ವಾಡಿಕೆ.[೩೪] ಆದರೆ ಆಂಗ್ಲರ ಆಡಳಿತದಲ್ಲಾದ ಬದಲಾವಣೆಗಳಲ್ಲಿ ನ್ಯಾಯಾಂಗವು ಬಂದು ಕಲೆಕ್ಟರುಗಳ ಆಡಳಿತದಲ್ಲಿ ಹಲವು ರೀತಿಯ ಬದಲಾವಣೆಗಳಿಗೆ ಒಳಪಟ್ಟಿರುವುದು ಸ್ಪಷ್ಟ. ಏಕೆಂದರೆ ಇವರ ಆಳ್ವಿಕೆಯ ಕಾಲದಲ್ಲಿ ಹಲವು ಕಡೆಗಳಲ್ಲಿ ನ್ಯಾಯಾಂಗಗಳು ಸ್ಥಾಪನೆಗೊಂಡು ಜನತೆಗೆ ರಕ್ಷಣೆ ನೀಡಲು ಪ್ರಾರಂಭಿಸಿದರು. ಈ ಪ್ರಯತ್ನದ ಪೂರ್ವದಲ್ಲಿ ಯುರೋಪಿನ ನ್ಯಾಯಶಾಸ್ತ್ರಜ್ಞ, ಥಾಮಸ್ ಮಕಾಲೆ ೧೮೪೭ರಲ್ಲಿ ಇಂಡಿಯನ್ ಫಿನಲ್‌ಕೋಡ್ ರಚಿಸಿದ ಅವನ ಕ್ರಮಕ್ಕೆ ೧೮೬೦ರಲ್ಲಿ ಒಪ್ಪಿಗೆ ದೊರೆಯಿತು. ಈ ಮೊದಲು ಹಿಂದೂಗಳು ಮತ್ತು ಮುಸ್ಲಿಮರು ತಮ್ಮ ತಮ್ಮ ಧರ್ಮಶಾಸ್ತ್ರಗಳನ್ನು ಅನುಸರಿಸಿ ನ್ಯಾಯ ತೀರ್ಮಾನಿಸುವ ಪದ್ಧತಿ ಇತ್ತು. ಆದರೆ ಕಂಪನಿ ಸರ್ಕಾರ ಈ ಕಾನೂನು ದಂಡ ಸಂಹಿತೆಗಳನ್ನು ಅನುಸರಿಸಿತು. ೧೮೬೧ರಲ್ಲಿ ಭಾರತದ ಹೈಕೋರ್ಟುಗಳ ಶಾಸನ ಜಾರಿಗೆ ಬಂದು, ಮದ್ರಾಸಿನಲ್ಲಿ ಅದನ್ನು ಸ್ಥಾಪಿಸಲಾಯಿತು. ಪ್ರಾಂತ್ಯದಲ್ಲಿ ಅನುಮಾನದ ಕಾನೂನುಗಳನ್ನು ತೊರೆದು ೧೮೭೪ರ ೪ನೇ ವಿಧಿಗೆ ಸಂಬಂಧಿಸಿದಂತೆ ಸ್ಥಳೀಯ ಪ್ರದೇಶಗಳಿಗೆ ಕ್ರಿಯಾತ್ಮಕ ರಕ್ಷಣೆ ಒದಗಿಸಲಾಯಿತು.[೩೫]

ಹೀಗಾಗಿ ಆಂಗ್ಲರ ಆಡಳಿತವು ಹಲವು ರೀತಿಯ ಬದಲಾವಣೆಗಳಿಗೆ ಒಳಗಾಯಿತು. ಮುಖ್ಯವಾಗಿ ಆಧುನಿಕ ನ್ಯಾಯಾಂಗ ವ್ಯವಸ್ಥೆಯನ್ನು ಕಾಣಬಹುದು. ಜಿಲ್ಲಾಕೋರ್ಟು, ತಾಲೂಕು ಮುನ್ಸಿಫ್‌ಕೋರ್ಟು, ಬಂದಿಖಾನೆಗಳು, ರಿಜಿಸ್ಟ್ರೇಷನ್‌ಕಾಯ್ದೆ ಇನ್ನಿತರೇ ಹಲವು ಹೊಸ ರೀತಿಯ ಕಾನೂನುಗಳನ್ನು ಜಾರಿಗೆ ತಂದರು. ಆದರೆ ಆಂಗ್ಲರ ಆಡಳಿತ ಪೂರ್ವದಲ್ಲಿ ಮೈಸೂರಿನಲ್ಲಿ ಸಿವಿಲ್ ಹಾಗೂ ಕ್ರಿಮಿನಲ್ ನ್ಯಾಯಾಡಳಿತ ಅಥವಾ ನಿರ್ಣಯಗಳಲ್ಲಿ ಮಹತ್ತರವಾದ ವ್ಯತ್ಯಾಸವೇನೂ ಇರಲಿಲ್ಲ. ಐದು ಪಗೋಡ(ಚಿನ್ನನಾಣ್ಯ)ಗಳ ಮೌಲ್ಯದ ಆಸ್ತಿ ವಿವಾದಗಳನ್ನು ಮುಕ್ತನ್ಯಾಯಾಲಯದಲ್ಲಿ ತೀರ್ಮಾನಿಸುವ ಅಧಿಕಾರವನ್ನು ಅಮಲ್ದಾರನು ಹೊಂದಿದ್ದನು. ಆ ಮೊತ್ತಕ್ಕೆ ಮೇಲ್ಪಟ್ಟ ವಿವಾದಗಳು ಪಂಚಾಯಿತಿಯಲ್ಲಿ ತೀರ್ಮಾನವಾಗುತ್ತಿದ್ದವು. ಸಿವಿಲ್‌ದಾವೆಗಳ ತೀರ್ಮಾನ ಅತೃಪ್ತಿಕರವಾದಲ್ಲಿ ಯಾರು ಬೇಕಾದರೂ ದಿವಾನರುಗಳಲ್ಲಿ ಅಪೀಲು ಮಾಡಿಕೊಳ್ಳಬಹುದಿತ್ತು. ದಿವಾನರು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲೂ ಪ್ರವಾಸ ಕೈಗೊಂಡು ಪ್ರತಿ ಜಿಲ್ಲೆಯ ಸಮಗ್ರ ಮಾಹಿತಿಯುಳ್ಳವ ರಾಗಿರುತ್ತಿದ್ದರು. ೧೮೦೫ರ ವೇಳೆಗೆ ದಿವಾನ್ ಪೂರ್ಣಯ್ಯ ಅವರು ನ್ಯಾಯಾಡಳಿತಕ್ಕಾಗಿ ಒಂದು ಪ್ರತ್ಯೇಕ ಇಲಾಖೆಯ ಅಗತ್ಯವನ್ನು ಮನಗಂಡು ಬ್ರಿಟಿಷ್ ಸರ್ಕಾರಕ್ಕೆ ಇದರ ಬಗ್ಗೆ ಅಧಿಕೃತ ಸೂಚನೆಯೊಂದನ್ನು ಕಳುಹಿಸಿದರು. ಅದರಂತೆ ಬ್ರಿಟಿಷ್ ಸರ್ಕಾರ ಇಬ್ಬರು ಭಕ್ಷಿಗಳು, ಇಬ್ಬರು ಶಿರಸ್ತೇದಾರರು ಹಾಗೂ ಆರು ಮಂದಿ ಗಣ್ಯವ್ಯಕ್ತಿಗಳನ್ನೊಳಗೊಂಡ 'ಅದಾಲತ್'ನ ಸ್ಥಾಪನೆಗೆ ಅನುಮತಿ ನೀಡಿತು. ಈ ನ್ಯಾಯಾಲಯ ದಲ್ಲೂ ನ್ಯಾಯ ತೀರ್ಮಾನಗಳ ಸಮ್ಮುಖದಲ್ಲಿ ಸವಾಲು ಪ್ರತಿಸವಾಲುಗಳು ನಡೆದು ಫಿರ್ಯಾದಿ ಹಾಗೂ ಖುದ್ದಾಗಿ ಹಾಜರಾಗಿ ಅವುಗಳನ್ನು ಆಲಿಸುತ್ತಿದ್ದರು. ಸಂಬಂಧಪಟ್ಟ ದಾಖಲೆಗಳನ್ನು ಪ್ರದರ್ಶಿತಗಳನ್ನಾಗಿ ಬಳಸಲಾಗುತ್ತಿತ್ತು. ಆದರೆ ವಾದ ಪ್ರತಿವಾದಗಳ ದಾಖಲೆ ಕಾರ್ಯ ನಡೆಯುತ್ತಿರಲಿಲ್ಲ.

ಈ ಮಾದರಿಯ ನ್ಯಾಯಾಡಳಿತ ಕ್ರಮ ೧೮೩೧ರವರೆಗೆ ಮುಂದುವರೆಯಿತು. ಆ ವರ್ಷ ಮೈಸೂರು ಪ್ರದೇಶಕ್ಕಾಗಿಯೇ ಸ್ಥಾಪನೆಯಾದ ಬ್ರಿಟಿಷ್ ಕಮಿಷನರ್ ಈ ಪ್ರಾಂತ್ಯದಲ್ಲಿ ನಡೆಯುತ್ತಿದ್ದ ನ್ಯಾಯಾಡಳಿತ

ಕ್ರಮ ರಾಜ್ಯದ ಅಗತ್ಯಗಳಿಗೆ ಅಸಮರ್ಪಕ ಎಂದು ಪರಿಗಣಿಸಿ ೨೭ನೇ ಅಕ್ಟೋಬರ್ ೧೮೩೪ರಂದು ನ್ಯಾಯಾಲಯವನ್ನು ಸ್ಥಾಪಿಸಿತು. ಅದರಂತೆ ಅಮಲ್ ಹಾಗೂ ಟೌನ್‌ಮುನ್ಸಿಫ್ ನ್ಯಾಯಾಲಯಗಳು ಅಸ್ತಿತ್ವಕ್ಕೆ ಬಂದವು. ಇವುಗಳ ಮೇಲ್ಪಟ್ಟ ಅಪೀಲ್ ನ್ಯಾಯಾಲಯಗಳಾಗಿ ಪ್ರಿನ್ಸಿಪಾಲ್ ಸದರ್ ಮುನ್ಸಿಫ್ ನ್ಯಾಯಾಲಯ ಮತ್ತು ಯುರೋಪಿಯನ್ ಸೂಪರಿಂಡೆಂಟರ್ ನ್ಯಾಯಾಲಯಗಳು ಸ್ಥಾಪಿಸಲ್ಪಟ್ಟವು. ಇವುಗಳಿಗಿಂತಲೂ ಉನ್ನತ ಹಾಗೂ ಅಖೈರು ನ್ಯಾಯಾಲಯಗಳಾಗಿ ಹುಜೂರ್ ಆದಾಲತ್ ಮತ್ತು ಕಮಿಷನರ್ ನ್ಯಾಯಾಲಯಗಳು ಸ್ಥಾಪಿಸಲ್ಪಟ್ಟವು. ಇವುಗಳೊಂದಿಗೆ ಪಂಚಾಯಿತ ನ್ಯಾಯಾಲಯಗಳು ತಮ್ಮ ಕಾರ್ಯ ಚಟುವಟಿಕೆಗಳು ಮುಂದುವರೆಸಿದ್ದವು.

ಈ ಮೇಲ್ಕಂಡ ಎಲ್ಲಾ ನ್ಯಾಯಾಲಯಗಳಲ್ಲಿ ಪಂಚಾಯಿತಿಗಾಗಿ ನೇಮಿಸಲ್ಪಡುವ ಅರ್ಹ ಪಂಚಾಯಿತಿದಾರರ ಪಟ್ಟಿಯನ್ನು ಇಡಲಾಗಿದ್ದಿತು. ಒಂದು ಮೊಕದ್ದಮೆ ದಾಖಲಾದ ಬಳಿಕ ಈ ಪಟ್ಟಿಯಿಂದ ಐದು ಮಂದಿ ಪಂಚಾಯಿತಿದಾರರನ್ನು ಆರಿಸಿ ಅವರಿಗೆ ನ್ಯಾಯ ನಿರ್ಣಯ ಕೆಲಸವನ್ನು ವಹಿಸಲಾಗುತ್ತಿತ್ತು. ಪ್ರತಿ ಪಂಚಾಯಿತಿಯ ಮುಕ್ತ ನ್ಯಾಯಾಲಯದಲ್ಲಿ ಸೇರಿ ದೂರುಗಳನ್ನು ಆಲಿಸಿ, ಅಹವಾಲುಗಳನ್ನು ದಾಖಲಿಸಿಕೊಳ್ಳುತ್ತಿತ್ತು.[೩೬]

ಈಸ್ಟ್ ಇಂಡಿಯಾ ಕಂಪನಿ ಡೈರೆಕ್ಟರ್‌ಗಳು ನೇಮಿಸಿದ ಮನ್ರೋ ಆಯೋಗದ ಶಿಫಾರಸ್ಸುಗಳ ಆಧಾರದ ಮೇಲೆ ನ್ಯಾಯಾಂಗದ ವ್ಯವಸ್ಥೆಯನ್ನು ಸುಧಾರಿಸಲು ಕ್ರಮ ಕೈಗೊಳ್ಳಲಾಯಿತು. ೧೮೨೭ರಲ್ಲಿ ವ್ಯವಸ್ಥೆಯು ಹೀಗಿತ್ತು. ಪ್ರತಿಯೊಂದು ಜಿಲ್ಲೆಯಲ್ಲಿ ಜಿಲ್ಲಾ ದಿವಾನಿ ಆದಾಯತ್ತಿನ ಅಧಿಕಾರ ವ್ಯಾಪ್ತಿಯನ್ನು ಹೊಂದಿದ ಸಹಾಯಕ ಜಿಲ್ಲಾ ನ್ಯಾಯಾಲಯಗಳನ್ನು ಸ್ಥಾಪಿಸಲು ಅವಕಾಶ ಮಾಡಲಾಗಿತ್ತು. ಈ ನ್ಯಾಯಾಲಯಗಳ ತೀರ್ಮಾನದ ಮೇಲೆ ರೂ. ೧೦೦೦ಗಳವರೆಗೆ ಜಿಲ್ಲಾ ದಿವಾನಿ ಆದಾಲತ್ತಿನ ಅಪೀಲು ಆಗುತ್ತಿದ್ದವು ಮತ್ತು ರೂ. ೧೦೦೦ಗಳಿಗೆ ಮೀರಿದ ಪ್ರಕರಣಗಳಲ್ಲಿ ಪ್ರಾವಿನ್ಸಿಯಲ್ ಅಫೀಲು ಆಗುತ್ತಿದ್ದವು. ೧೮೨೭ರ ೪ನೇ ಕಾನೂನು ರೂ. ೫೦೦ವರೆಗಿನ ಪ್ರಕರಣಗಳನ್ನು ವಿಚಾರಿಸುವ ಅಧಿಕಾರ ವ್ಯಾಪ್ತಿಯೊಂದಿಗೆ (ಆಮೇಲೆ ೧೮೩೬ರ XXIVರ ಅಧಿನಿಯಮದ ಮೂಲಕ ಮುಖ್ಯೋಪಾಧ್ಯಾಯ ಅಮಾನರು ಎಂದು ಕರೆಯಲ್ಪಟ್ಟ) ದೇಶಿ ನ್ಯಾಯಾಧೀಶರ ನ್ಯಾಯಾಲಯಗಳ ಪುನರ್‌ರಚನೆಗೂ ಉಪಬದ್ಧವನ್ನು ಕಲ್ಪಿಸಿತು. ೧೮೩೩ರ ವಿಧಿನಿಯಮ III ರಿಜಿಸ್ಟ್ರಾರ್‌ರ ಅಧಿಕಾರವ್ಯಾಪ್ತಿಯನ್ನು ರೂ. ೩೦೦ವರೆಗೆ ಸದರ ಮತ್ತು ಅಧಿಕಾರ ವ್ಯಾಪ್ತಿಯನ್ನು ರೂ. ೨,೫೦೦ವರೆಗೆ ಸದರ ಮತ್ತು ಮುನ್ಸಿಫರ ಅಧಿಕಾರ ವ್ಯಾಪ್ತಿಯನ್ನು ರೂ. ೧೦೦೦ವರೆಗೆ ಹೆಚ್ಚಿಸಿತು. ೧೮೩೫ರ Vನೇ ಅಧಿನಿಯಮವು ಮುನ್ಸಿಫರಿಗೆ ನ್ಯಾಯಾಲಯಗಳ ಶುಲ್ಕಗಳ ಮೂಲಕ ಸಂಭಾವನೆ ಸಂದಾಯ ಮಾಡುವ ಬದಲು ತಿಂಗಳು-ತಿಂಗಳು ಸಂಬಳ ಗೊತ್ತುಮಾಡಿ ಸಂದಾಯ ಪದ್ಧತಿಯನ್ನು ಪರಿಷ್ಕರಿಸಿತು. ೧೮೪೩ರ VIIIನೆಯ ಅಧಿನಿಯಮವು ಪ್ರಾವಿನ್ಸಿಯಲ್ ಅಪೀಲು ನ್ಯಾಯಾಲಯಗಳನ್ನು ವಿಸರ್ಜಿಸಿತು ಮತ್ತು ಅಪರಿಮಿತ ಆರ್ಥಿಕ ಅಧಿಕಾರ ವ್ಯಾಪ್ತಿಯನ್ನು ಜಿಲ್ಲಾ ದಿವಾನಿ ಅದಾಲತ್ತಿಗೆ ವಹಿಸಿಕೊಡಲಾಯಿತು.[೩೭]

ಮದ್ರಾಸ್ ಕರ್ನಾಟಕದಲ್ಲಿ ಆಧುನಿಕ ಸಿವಿಲ್ ಮತ್ತು ಕ್ರಿಮಿನಲ್ ನ್ಯಾಯಾಲಯವು ಲಾರ್ಡ್ ಕಾರ್ನ್‌ವಾಲಿಸ್‌ನು ೧೭೯೩ರಲ್ಲಿ ಬಂಗಾಳದಲ್ಲಿ ಜಾರಿಗೆ ತಂದ ಪದ್ಧತಿಯನ್ನು ಹೋಲುವ ೧೮೦೨ರ IIನೆಯ

ವಿಧಿ ನಿಯಮದ ಮೂಲಕ ಜಾರಿಗೆ ತಂದಿತ್ತು. ಇದು ಲಾರ್ಡ್ ಕಾರ್ನ್‌ವಾಲಿಸ್‌ನ ಪದ್ಧತಿಯನ್ನು ಅನುಸರಿಸಿದ್ದಾಗಿತ್ತು. ರೂಪಾಯಿ ೮೦ರವರೆಗಿನ ಪ್ರಕರಣಗಳನ್ನು ವಿಚಾರಿಸುವ ಗ್ರಾಮಮಟ್ಟದ ಸ್ಥಳೀಯ ಕಮಿಷನರ್ ನ್ಯಾಯಾಲಯಗಳು ಅವರ ತೀರ್ಮಾನಗಳ ಮೇಲೆ ಜಿಲ್ಲೆಯ ದಿವಾನಿ ಅದಾಲತ್ತಿಗೆ, ಮೇಲ್ಮನವಿಗೆ ಅವಕಾಶವಿತ್ತು. ಪ್ರತಿಯೊಂದು ಜಿಲ್ಲೆಯಲ್ಲಿ ಜಿಲ್ಲಾ ದಿವಾನಿ ಅದಾಲತ್ತನ್ನು ಸ್ಥಾಪಿಸಲಾಗಿತ್ತು. ರೂಪಾಯಿ ೧,೦೦೦ಗಳವರೆಗಿನ ವಿಷಯಗಳಲ್ಲಿ ಆ ಅದಾಲತ್ತಿನ ತೀರ್ಮಾನವೇ ಅಂತಿಮವಾದದ್ದಾಗಿತ್ತು.[೩೮]

ಇದೇ ಮಾದರಿಯ ನ್ಯಾಯ ವ್ಯವಸ್ಥೆ ಮುಂಬೈಯಲ್ಲಿಯೂ ಇತ್ತು. ಕೊಡಗಿನಲ್ಲಿ ೧೮೬೯ರಲ್ಲಿ ಬ್ರಿಟಿಷ್ ಆಡಳಿತಗಾರರು 'ಕೂರ್ಗ್ ಕೋರ್ಟ್ ಆ್ಯಕ್ಟ'ನ್ನು ಜಾರಿಗೆ ತರುವ ಮುಂಚೆ ಗ್ರಾಮಮಟ್ಟದಲ್ಲಿದ್ದ ಅತೀ ಕೆಳಗಿನ ನ್ಯಾಯಾಲಯವೆಂದರೆ ಪಟೇಲರ ನ್ಯಾಯಾಲಯವೇ ಆಗಿತ್ತು.[೩೯]

ನ್ಯಾಯಾಧಿಕಾರವು ಕೆಳಹಂತದಿಂದ ಮೇಲ್ವರ್ಗದವರಿಗೆ ವಿಚಾರಣೆಯ ಹಂತಗಳಾಗಿದ್ದವು. ಪ್ರಾರಂಭದ ಹಂತಗಳೆಂದರೆ ಆರಂಭದಲ್ಲಿ ಸಣ್ಣಸಣ್ಣ ದಿವಾನಿ ವ್ಯಾಜ್ಯಗಳನ್ನು ಹಳ್ಳಿಗಳ ಗೌಡರು, ಶಾನುಭೋಗರು ವಿಚಾರಿಸುತ್ತಿದ್ದರು. ಅದಕ್ಕಿಂತ ಹೆಚ್ಚಿನ ವ್ಯಾಜ್ಯಗಳು ಮಾಮಲೇದಾರರ ಮುಂದೆ ಬರುವವು. ಅವುಗಳನ್ನು ಮಾಮಲೇದಾರರು ಪಂಚರ ವಿಚಾರಣೆಗೆ ಕಳಿಸಿ ಪಂಚರ ನಿರ್ಣಯದ ಮೇಲೆ ಅಪೀಲಾದರೆ ಅದನ್ನು ತಾವು ವಿಚಾರಿಸುವವರು. ಎಲ್ಲಕ್ಕೂ ಹೆಚ್ಚಿನ ದಿವಾನಿ ವ್ಯಾಜ್ಯಗಳು ಪ್ರಿನ್ಸಿಪಲ್ ಕಲೆಕ್ಟರನ ಕೋರ್ಟಿನಲ್ಲಿ ದಾಖಲಾಗುವವು. ಅವನಾದರೂ ಪಂಚರ ವಿದ್ಯಮಾನವಾಗಿ ಅವುಗಳ ನಿರ್ಣಯ ಮಾಡಿಸಿ, ಅಪೀಲುಗಳನ್ನು ತಾನು ಸ್ವತಃ ವಿಚಾರಿಸುವವನು. ಸನ್ ೧೮೨೧ನೇ ವರ್ಷದ ಸುಮಾರಿನಲ್ಲಿ ಅದಾಲತ ಪೇಷ್ಕರರೆಂಬ ಕಾಮದಾರನ್ನು ಪ್ರತಿಯೊಂದು ತಾಲೂಕಿಗೆ ನೇಮಿಸಿದರೂ ಅವನು ದಿವಾನೀ ವ್ಯಾಜ್ಯಗಳ ಕೆಲಸವನ್ನೇ ನೋಡಬೇಕೆಂದು ಸರ್ಕಾರದವರ ಉದ್ದೇಶವು. ಆದರೆ ಅವನು ವಾಡಿಕೆಯಾಗಿ ಮಾಮಲೇದಾರನ ಕೈಕೆಳಗೆ ಒಬ್ಬ ಕಾರಕೂನನಂತೆ(ಕ್ಲರ್ಕ್) ಕೆಲಸ ಮಾಡುವನು. ಸನ್ ೧೮೨೭ರಲ್ಲಿ ಹೊಸ ಕಾಯಿದೆಗಳಾದ ಬಳಿಕ ಕ್ರಮಕ್ರಮವಾಗಿ ಸದರ ಅಮೀನರನ್ನು ಮುನಸೀಫರನ್ನೂ ನೇಮಿಸಿ, ಪೇಷ್ಕರನ ದಿವಾನಿ ಕೆಲಸವನ್ನು ತೆಗೆದರು ಮತ್ತು ಫ್ರಿನ್ಸಿಪಲ್ ಕಲೆಕ್ಟರನ ಕೈಕೆಳಗೆ ರಿಜಿಸ್ಟ್ರಾರನೆಂಬ ದಿವಾನಿ ಅಮಲದಾರರನ್ನು ನೇಮಿಸಿದರು. ಸನ್ ೧೮೨೨ರಲ್ಲಿ  ದಕ್ಷಿಣ ಮಹಾರಾಷ್ಟ್ರ ದುವಾಬದ ಕೆಲವು ತಾಲೂಕುಗಳನ್ನು ತೆಗೆದುಕೊಂಡು ಸೊಲ್ಲಾಪುರ ಜಿಲ್ಲೆಯನ್ನು ಬೇರೆ ಮಾಡಿದರು. ಆಮೇಲೆ ೧೮೩೦ನೆಯ ವರ್ಷದ ೭ನೆಯ ಕಾಯ್ದೆಯಿಂದ ಉಳಿದ ತಾಲೂಕುಗಳಿಗೆಲ್ಲ ಧಾರವಾಡ ಜಿಲ್ಲೆಯೆಂಬ ಹೆಸರು ಕೊಟ್ಟು ಸನ್ ೧೮೨೭ನೆಯ ವರ್ಷದ ಕಾಯಿದೆಗಳ ಅಮಲು ಈ ಜಿಲ್ಲೆಯಲ್ಲಿ ಶುರು ಮಾಡಿದರು. ಮುಂದೆ ಕಾರಭಾರದ ಕೆಲವು ದಿನೇ ದಿನೇ ಬೆಳೆಯುತ್ತ ನಡೆದುದ್ದರಿಂದ ೧೮೩೬ರಲ್ಲಿ ಮುಲಕಿ ಫೌಜುದಾರಿ ಕೆಲಸಗಳಿಗಾಗಿ ದಕ್ಷಿಣ ಮಹಾರಾಷ್ಟ್ರದ ಉತ್ತರ ಭಾಗದಲ್ಲಿ ಹತ್ತು ತಾಲೂಕುಗಳನ್ನು ಮಾಡಿ, ಆ ಭಾಗಕ್ಕೆ ಬೆಳಗಾವಿ ಜಿಲ್ಲೆಯೆಂದು ಹೆಸರಿಟ್ಟರು. ಆದರೂ ದಿವಾನಿ ಕೆಲಸದ ಸಂಬಂಧದಲ್ಲಿ ಬೆಳಗಾವಿ ಜಿಲ್ಲೆಯ ಧಾರವಾಡ ಡಿಸ್ಟ್ರಿಕ್ಟ್ ಜಡ್ಜನ ಅಧಿಕಾರಕ್ಕೆ ಒಳಗಾಗಿತ್ತು. ಈ ಪ್ರಕಾರ ಸನ್ ೧೮೩೬ರವರೆಗೆ ದಕ್ಷಿಣ ಮಹಾರಾಷ್ಟ್ರ ದುವಾಬದಲ್ಲಿ ಧಾರವಾಡ, ಬೆಳಗಾವಿ, ಸೊಲ್ಲಾಪುರ

ಎಂಬ ಮೂರು ಬೇರೆ ಬೇರೆ ಜಿಲ್ಲೆಗಳಾದ ಬಳಿಕ ಆಯಾ ಜಿಲ್ಲೆಯ ಕೆಲಸವನ್ನು ಅಲ್ಲಲ್ಲಿಯ ಕಲೆಕ್ಟರುಗಳು ನಿರ್ವಹಿಸುತ್ತಿದ್ದರು.[೪೦] ಕೊಡಗಿನಲ್ಲಿಯೂ ಸಹ ನ್ಯಾಯಾಧಿಕರಣವು ಈ ರೀತಿ ಇತ್ತು.

| ನ್ಯಾಯಾಲಯಗಳು | ನ್ಯಾಯಾಧೀಕರಣ ಅಧಿಕಾರಿಗಳು | ಮೂಲ | | ಟ್ರೊಬೂನಲ್ | | ಕಾರ್ಯನಿರ್ವಾಹಕ ಅಥವಾ ಇತರ ಕಾರ್ಯಗಳು ಕೆಲವು ಅದೇ ಅಧಿಕಾರಿಗಳು |
|---|---|---|---|---|---|---|
| | | ಅಪರಾದಿತ್ಯ Crime | ನಾಗರಿಕ (ಸಿವಿಲ್) | ಅಪರಾಧ | ನಾಗರಿಕ | |
| ಪಾರುಪತ್ತೇದಾರರು | ಮೂರನೇ ದರ್ಜೆಯ ನ್ಯಾಯಾಧೀಶರು ಮತ್ತು | ೭ | - | - | - | ಕಂದಾಯ ಹಾಗೂ ಪೊಲೀಸ್ ಕಾರ್ಯಗಳು ಅದೇ.. ಅದೇ (a) |
| ಪಟ್ಟಣ ಸುಬೇದಾರರು | ಮೂಲತಃ ೫೦ಕ್ಕೂ ಒಳಗಿನ ಅಧಿಕಾರಿಗಳು | ೪ | ೪ | - | - | ಪೊಲೀಸ್, ಮುನ್ಸಿಪಲ್ ಮತ್ತು ನೋಂದಣಿ |
| | ಮೂಲತಃ ೩೦೦ಕ್ಕೂ ಒಳಗಿನ ನಾಗರಿಕ ಅಧಿಕಾರಿಗಳು | ೨ | ೨ | - | - | - |
| ತಾಲೂಕು ಸುಬೇದಾರರು | ಮೂಲತಃ ಮತ್ತು ಕಂದಾಯಗಳ ಮೂಲ ಅಧಿಕಾರಿಗಳು | ೬ | ೬ | - | - | - |
| ಎರಡನೆಯ ಸಹಾಯಕ ಅಧೀಕ್ಷಕರು | ನ್ಯಾಯಾಧೀಶರ ಸಂಪೂರ್ಣ ಅಧಿಕಾರಿಗಳು ಜೊತೆಗೆ ಮೂಲ ನಾಗರಿಕ ಅಧಿಕಾರಿಗಳು ರೂ. ೧೫೦೦ ಒಳಗಿನ ಮತ್ತು ವಿಶೇಷ ಅಧಿಕಾರಿಗಳು | ೧ | ೧ | ೧ | ೧ | ಖಜಾನೆಯ ಪ್ರಭಾರಿವಸ್ತು ನೋಂದಣಿ ಮುನ್ಸಿಪಲ್ ಮತ್ತು ನೋಂದಣಿ |
| ಮೊದಲನೇ ಸಹಾಯಕ ಅಧೀಕ್ಷಕರು | ನ್ಯಾಯಾಧೀಶರ ಸಂಪೂರ್ಣ ಅಧಿಕಾರಿಗಳು ಜೊತೆಗೆ ಮೂಲ ನಾಗರಿಕ ಅಧಿಕಾರಿಗಳು ರೂ. ೩೦೦೦ ಒಳಗಿನ ಮತ್ತು ವಿಶೇಷ ಅಧಿಕಾರಿಗಳು | ೧ | ೧ | ೧ | ೧ | ಅಬಕಾರಿಯ ಸಾಮಾಜಿಕ ವಿಚಾರಣೆ, ಅರಣ್ಯ ಮುನ್ಸಿಪಲ್ ಪೊಲೀಸ್ ಮತ್ತು ನೋಂದಣಿ |
| ಅಧೀಕ್ಷಕರು | ಒಬ್ಬ ಜಿಲ್ಲಾ ನ್ಯಾಯಾಧೀಶರ ಅಧಿಕಾರಿಗಳು ೩೬ರ ನಿಯಮದಡಿ ಅಪರಾಧ ಪದ್ಧತಿ ಸಂಕೇತ ಹಾಗೂ ಕಂದಾಯ ನಿರ್ಣಯದ ಅಧಿಕಾರ, ಸಾಮಾಜಿಕ ಮತ್ತು ಅಪರಾಧಗಳ ವ್ಯಾಜ್ಯ ಎರಡನ್ನು ಮೂಲ ಮತ್ತು ಮೇಲ್ವಿಚಾರಣೆ ಚಲಾಯಿಸುವವರು. | ೧ | ೧ | ೧ | ೧ | |
| ಅಪ್ಪಾಗ್ರಾಮದ ಆಯುಕ್ತರು | ಒಬ್ಬ ಎರಡನೆಯ ದರ್ಜೆಯ ನ್ಯಾಯಾಧೀಶರ ಅಧಿಕಾರಿಗಳು | ೧ | - | - | - | |
| ನ್ಯಾಯಾಧಿಕರಣ ಆಯುಕ್ತರು | ಉನ್ನತ ನ್ಯಾಯಾಲಯದ ಅಧಿಕಾರಿಗಳು (High Court) | - | - | ೧ | ೧ | |

ಈ ಮೇಲಿನ ಅಧಿಕಾರಿಗಳು ಕೊಡಗಿನೊಳಗೆ ಸಂಪೂರ್ಣ ಅಧಿಕಾರ ಹೊಂದಿದವರಾಗಿದ್ದರು. ಸೆಷನ್ಸ್ ನ್ಯಾಯಾಧೀಶರು ಗವರ್ನರ್ ಜನರಲ್‌ರಿಂದ ನೇಮಕವಾಗುತ್ತಿದ್ದರು.[೪೧]

ಈ ರೀತಿಯಾಗಿ ನ್ಯಾಯಾಂಗದ ಅಧಿಕಾರ ಹಾಗೂ ಅಧಿಕಾರಿಗಳಿದ್ದರೂ ಈ ರೀತಿಯ ಆಡಳಿತದಿಂದ ಜನರಿಗೆ ನ್ಯಾಯ ತೀರ್ಮಾನಗಳನ್ನು ಸರಳಗೊಳಿಸುವುದಕೋಸ್ಕರವಾಗಿ ಹಲವು ಕಡೆಗಳಲ್ಲಿ ಕೋರ್ಟು, ಕಚೇರಿ ಇತ್ಯಾದಿಗಳನ್ನು ರಚನೆ ಮಾಡಿದರು. ಮೈಸೂರು ಪ್ರಾಂತ್ಯದಲ್ಲಿ ೧೮೩೪ರಿಂದ ೧೮೫೪ರವರೆಗೆ ಸ್ಥಾಪನೆಗೊಂಡ ಕೋರ್ಟುಗಳು ಆರು ವರ್ಗಗಳಾಗಿದ್ದವು. ಅವುಗಳೆಂದರೆ: ೮೫ ತಾಲೂಕು ಕೋರ್ಟುಗಳು, ಎಂಟು ಪ್ರಿನ್ಸಿಪಲ್ ಸದರ್ ಮುನ್ಸಿಫ್ ಕೋರ್ಟುಗಳು, ನಾಲ್ಕು ಸೂಪರಿಂಟೆಂಡೆಂಟ್‌ರ ಕೋರ್ಟುಗಳು, ಮೂವರು ನ್ಯಾಯಾಧಿಪತಿಗಳಿಂದ ಕೂಡಿದ ಒಂದು ಹುಜೂರ್ ಅದಾಲತ್ ಕೋರ್ಟು, ಒಂದು ಕಮಿಷನರ್ ಕೋರ್ಟು ಇವುಗಳಿಂದ ಕೂಡಿದ್ದಿತು. ಮೇಲಿನ ಕೊನೆಯ ಎರಡು ಕೋರ್ಟುಗಳು ಮೇಲ್ಮನವಿಯ ನ್ಯಾಯಸ್ಥಾನ (Courts of Appeal)ಗಳಾಗಿದ್ದವು. ೧೮೫೫-೫೬ರಲ್ಲಿ ಗವರ್ನರ್ ಜನರಲ್ ಲಾರ್ಡ್ ಡೌಲ್‌ಹೌಸಿಯ ಭೇಟಿಯ ಫಲವಾಗಿ ಕೆಲವು ನ್ಯಾಯಾಂಗ ಕಾರ್ಯಗಳೇ ಕಮಿಷನರ್ ಹೊರೆಯನ್ನು ಹಗುರಗೊಳಿಸಲು ಒಬ್ಬ ಜುಡಿಷಿಯಲ್ ಕಮಿಷನರ್ ನೇಮಕವಾಯಿತು. ಸಿವಿಲ್ ಮತ್ತು ಕ್ರಿಮಿನಲ್ ವಿಚಾರಣೆಗಳಲ್ಲಿ ಪಂಚಾಯತರುಗಳನ್ನು ಬಳಸಿಕೊಂಡಿದ್ದು ನ್ಯಾಯವಿನಿಯೋಗದ ಮುಖ್ಯ ವೈಶಿಷ್ಟ್ಯ. ಕ್ರಿಮಿನಲ್ ಕೇಸ್‌ಗಳ ವಿಚಾರಣೆಯಲ್ಲಿ ಪಂಚಾಯಿತರು ಅನಿವಾರ್ಯವಾದ ಅಂಗವಾಗಿದ್ದರು. ಆದರೆ ಸಿವಿಲ್ ಕೇಸ್‌ಗಳಲ್ಲಿ ಅವರ ಸಹಾಯ ಐಚ್ಛಿಕವಾಗಿತ್ತು. ಸಂಬಂಧಿಸಿದವರಿಗೆ ಸಮಗ್ರ ನ್ಯಾಯದ ಪೂರ್ಣ ಪ್ರಯೋಜನ ದೊರೆಯಲೆಂಬ ಉದ್ದೇಶದಿಂದ ಎಲ್ಲಾ ಕೋರ್ಟುಗಳ ನ್ಯಾಯಾಧಿಕಾರ ಮತ್ತು ಆಡಳಿತ ವ್ಯಾಪ್ತಿಗಳು ನಿರ್ದಿಷ್ಟವಾಗಿ ನಿರ್ಣಯಗೊಂಡಿದ್ದವು. ಕಮಿಷನ್ನಿನ ಆಡಳಿತದಲ್ಲಿ ನ್ಯಾಯ ವಿತರಣೆಯು ಮೊದಲಿಗಿಂತ ಉತ್ತಮಗೊಂಡಿದ್ದರೂ ನ್ಯಾಯ ವಿನಿಯೋಗದಲ್ಲಿ ಅನಿವಾರ್ಯ ಸಾವಕಾಶವಾಗುತ್ತಿತ್ತೆಂಬುದು ನಿಜ. ಇದರಿಂದ ಸಂಬಂಧಿಸಿದವರಿಗೆ ಅನನುಕೂಲತೆ ಮತ್ತು ಸಂದಿಗ್ಧತೆ ಉಂಟಾಗುತ್ತಿತ್ತು ಎನ್ನಲಾಗುತ್ತದೆ.[೪೨]

ಮೈಸೂರು ಪ್ರಾಂತ್ಯದಲ್ಲಿ ಜಿಲ್ಲಾ ಜಡ್ಜ್‌ಕೋರ್ಟು ಈ ಸಂದರ್ಭದಲ್ಲಿ ಮೂರು ಇದ್ದವು. ಇವು ಬೆಂಗಳೂರು, ಮೈಸೂರು, ಶಿವಮೊಗ್ಗದಲ್ಲಿದ್ದವು. ಬೆಂಗಳೂರು ಜಿಲ್ಲೆಗೆ ಕೋಲಾರ, ತುಮಕೂರು ಒಳಪಟ್ಟರೆ, ಮೈಸೂರಿಗೆ ಹಾಸನವೂ, ಶಿವಮೊಗ್ಗಕ್ಕೆ ಕಡೂರು, ಚಿತ್ರದುರ್ಗವು ಒಳಗೊಂಡಿದ್ದವು.[೪೩] ಇಲ್ಲಿ ವ್ಯಾಜ್ಯಗಳ ವಿಚಾರಣೆ ನಡೆಯುತ್ತಿದ್ದವು.

೧೮೪೬ರಲ್ಲಿ ಧಾರವಾಡದಲ್ಲಿ ಎಂಟು ತಾಲೂಕುಗಳಿದ್ದವು. ಇದರಲ್ಲಿ ಜಿಲ್ಲಾ ಜಡ್ಜ್‌ಕೋರ್ಟು, ಅಸಿಸ್ಟೆಂಟ್ ಜಡ್ಜ್‌ಕೋರ್ಟು, ಹುಬ್ಬಳ್ಳಿಯಲ್ಲಿ ಪ್ರಿನ್ಸಿಪಲ್ ಸದರ್ ಅಮೀನನ ಕೋರ್ಟು ಇತ್ತು. ಮುಖ್ಯವಾಗಿ ಹುಬ್ಬಳ್ಳಿ, ಹಾವೇರಿ ಮುನ್ಸಿಫ್‌ಕೋರ್ಟು ಮೂರು ಇದ್ದವು. ೧೮೪೯ರಲ್ಲಿ ನಾಲ್ಕು ಇದ್ದವು. ೧೮೭೫ರಲ್ಲಿ ಹೊಸದಾಗಿ ಮತ್ತೊಂದು ಕೋರ್ಟು ಹುಬ್ಬಳ್ಳಿಯಲ್ಲಿ ನಿರ್ಮಿಸಲಾಯಿತು. ಒಟ್ಟು ಧಾರವಾಡದಲ್ಲಿ ಐದು ಕೋರ್ಟುಗಳಿದ್ದವು. ೧೮೭೦ರಿಂದ ೧೮೮೩ರವರೆಗೆ ವ್ಯಾಜ್ಯಗಳ ಪರಿಹರಿಸಿದ ಮಾಹಿತಿ ದೊರಕುತ್ತದೆ. ಬೆಳಗಾವಿ ಜಿಲ್ಲೆಯಲ್ಲಿ ೧೮೮೦ರ ಸುಮಾರಿಗೆ ಜಡ್ಜ್‌ಕೋರ್ಟು ಸಹಿತ ಐದು ದಿವಾನಿ ಕೋರ್ಟುಗಳಿದ್ದವು. ೧೮೭೦ರಲ್ಲಿ ವಿಜಾಪುರದಲ್ಲಿ ನಾಲ್ಕು ದಿವಾನಿ ಕೋರ್ಟುಗಳಿದ್ದವು. ಕೆನರಾದಲ್ಲಿ ಒಂದು ಜಿಲ್ಲಾಕೋರ್ಟು, ನಾಲ್ಕು ಸಬ್‌ಜಡ್ಜ್ ಕೋರ್ಟುಗಳಿದ್ದವು.[೪೪]

ಕೊಡಗಿನಲ್ಲಿ ಮೊಟ್ಟಮೊದಲಿಗೆ ಡಿಸೆಂಬರ್ ೧೮೬೮ರ ಅನ್ವಯ ನ್ಯಾಯಾಲಯ ಕಾನೂನು ಪರಿಚ್ಛೇದ XXVರ ೧೮೬೬ರಲ್ಲಿ ಚಲಾವಣೆಗೆ ಬಂದಿತು. ಇದು ವ್ಯಾಜ್ಯಗಳನ್ನು ಬಗೆಹರಿಸುವುದಾಗಿದೆ.[೪೫]

ಮದ್ರಾಸ್ ಪ್ರಾಂತ್ಯದ ಬಳ್ಳಾರಿಯಲ್ಲಿ ಸಹ ಜಿಲ್ಲಾಕೋರ್ಟು, ತಾಲೂಕು ಮುನ್ಸಿಫ್‌ಕೋರ್ಟು ಕಾರ್ಯ ನಿರ್ವಹಿಸುತ್ತಿದ್ದವು. ಕೊಟ್ಟೂರಿನಲ್ಲಿ ಮೊದಲಬಾರಿಗೆ ಬೆಂಚ್‌ಕೋರ್ಟು ಆರಂಭವಾಯಿತು.[೪೬]

ಹೈದರಾಬಾದ್ ರಾಜ್ಯದ ಆಡಳಿತ ವಿಭಾಗಗಳನ್ನು ೧೮೬೬ರಲ್ಲಿ ನಿಜಾಮನು ಪುನಃ ರಚಿಸಿದನು. ಅನತಿ ಕಾಲದಲ್ಲಿಯೇ ನ್ಯಾಯಾಡಳಿತದಲ್ಲಿ ಸುಧಾರಣೆಗಳನ್ನು ಮಾಡಲಾಯಿತು. ನ್ಯಾಯಾಂಗವನ್ನು ಕಾರ್ಯಾಂಗದಿಂದ ಪ್ರತ್ಯೇಕಿಸುವ ಯೋಜನೆ ೧೯೨೨ರಲ್ಲಿ ತರಲಾಯಿತು. ೧೯೩೨ರಲ್ಲಿ ಜೂರಿಪದ್ಧತಿಯನ್ನು ಜಾರಿಗೆ ತರಲಾಯಿತು. ೧೯೫೧ರವರೆಗೆ ಕಲ್ಬುರ್ಗಿ ಜಿಲ್ಲೆಯಲ್ಲಿ ಒಂದೇ ಒಂದು ಜಿಲ್ಲಾ ನ್ಯಾಯಾಲಯವಿತ್ತು. ೧೯೫೧ರ ನಂತರ ಪ್ರತಿಯೊಂದು ಜಿಲ್ಲೆಯಲ್ಲಿ ಜಿಲ್ಲಾ ಮತ್ತು ಸ್ಪೆಷಲ್ ನ್ಯಾಯಾಲಯವನ್ನು ಸ್ಥಾಪಿಸಲಾಯಿತು.[೪೭] ಹೀಗೆ ಎಲ್ಲಾ ಕಡೆಯೂ ಸಹ ಕೋರ್ಟುಗಳನ್ನು ಸ್ಥಾಪಿಸಿದ್ದರು. ಗ್ರಾಮಮಟ್ಟದ ಎಲ್ಲಾ ವ್ಯಾಜ್ಯಗಳನ್ನು ಪಟೇಲ ಅಥವಾ ಗೌಡರು ತೀರ್ಮಾನಿಸುತ್ತಿದ್ದರು. ಇವರಲ್ಲಿ ಸರಿಯಾದ ನಿರ್ಣಯವಾಗದಿದ್ದಾಗ ಮೇಲ್ಮಟ್ಟದ ನ್ಯಾಯಾಲಯವಾದ ತಾಲೂಕುಮಟ್ಟ ಮುನ್ಸಿಫ್‌ನಲ್ಲಿ, ಸರಿಯಾದ ತೀರ್ಪು ಸಿಗದಿದ್ದಾಗ ಜಿಲ್ಲಾಕೋರ್ಟು ಅಥವಾ 'ಹುಜೂರ್ ಅದಾಲತ್' ಅಥವಾ ಹೈಕೋರ್ಟಿಗೆ ಸಲ್ಲಿಸಬಹುದಾಗಿತ್ತು.

ಗ್ರಾಮಮಟ್ಟದಲ್ಲಿ ರೂ. ೮೦ಗಳಿಂದ ೫೦೦ರ ಒಳಗಿನ ವ್ಯಾಜ್ಯವನ್ನು ತಾಲೂಕು ಮಟ್ಟದಲ್ಲಿ ರೂ. ೧೦೦ಗಳಿಂದ ರೂ. ೧೦೦೦ಗಳವರೆಗಿನ ವ್ಯಾಜ್ಯವನ್ನು ಜಿಲ್ಲಾಮಟ್ಟದಲ್ಲಿ ೫೦೦೦ವರೆಗಿನ ರೂ.ಗಳ ಮೊತ್ತದ ವ್ಯಾಜ್ಯವನ್ನು ಇದನ್ನು ಕಲೆಕ್ಟರನು ನೋಡಿಕೊಳ್ಳುತ್ತಿದ್ದರು. ಇದಕ್ಕೂ ಹೆಚ್ಚಿನ ಮೊತ್ತದ ರೂ. ೨೫,೦೦೦ ಅಥವಾ ೪೫,೦೦೦ಗಳಿಗೆ ಮೀರಿದ ಮೌಲ್ಯದ ವಿಷಯದಲ್ಲಿ ಕಲ್ಕತ್ತದಲ್ಲಿರುವ ಗೌವರ್ನರ್ ಜನರಲ್ ಇನ್ ಕೌನ್ಸಿಲ್‌ಗೆ ಮೇಲ್ಮನವಿ ಮಾಡಿಕೊಳ್ಳಬಹುದಾಗಿತ್ತು ಎಂಬುದಾಗಿ ತಿಳಿದುಬರುತ್ತದೆ.

ಗ್ಯಾಸೆಟಿಯರ್‌ಗಳಲ್ಲಿ ಅನೇಕ ಕಡೆಗಳಲ್ಲಿ ವ್ಯಾಜ್ಯಗಳ ಮೌಲ್ಯ, ವ್ಯಾಜ್ಯಗಳ ಸಂಖ್ಯೆ ಹಾಗೂ ಅವುಗಳನ್ನು ಪರಿಹರಿಸಿದ ಅಂಶಗಳನ್ನು ದಾಖಲಿಸಿರುತ್ತಾರೆ. ತಿರಸ್ಕರಿಸಿದ ವ್ಯಾಜ್ಯಗಳೂ, ವ್ಯಾಜ್ಯಗಳ ಮೌಲ್ಯ ಮಾಹಿತಿ ಸಿಗುತ್ತದೆ. ರೂ. ೧೦೦ರ ಒಳಗಿನ ಮೌಲ್ಯದ ವ್ಯಾಜ್ಯವನ್ನು ಸುಬೇದಾರರಿಂದ ಸುಮಾರು ೮೨ ಪ್ರತಿಶತ ವ್ಯಾಜ್ಯಗಳು ಪರಿಹರಿಸಲ್ಪಟ್ಟ ಬಗ್ಗೆ ಮತ್ತು ೧೦ ಪ್ರತಿಶತ ಪಾರುಪತ್ಯದಾರರಿಂದ ಪರಿಹರಿಸಲ್ಪಟ್ಟಿವೆ. ಇವುಗಳ ಅವಧಿಯು ೨೪ ದಿವಸಗಳು ಎದುರಿಸಿದ ವ್ಯಾಜ್ಯಗಳು.[೪೮] ಹೀಗೆ ಪ್ರತಿಯೊಂದು ವಿಷಯದಲ್ಲಿಯೂ ಹಂತ ಹಂತವಾಗಿ ಮಾಹಿತಿಯನ್ನು ನೀಡಿರುತ್ತಾರೆ. ಮೈಸೂರಿನಲ್ಲಿಯೂ ಸಹ ೧೮೬೫ರಿಂದ ೧೮೮೦ರವರೆಗಿನ ವ್ಯಾಜ್ಯಗಳ ಮಾಹಿತಿ, ಮೌಲ್ಯ, ವಿವರಣೆ ಇದೆ. ಶೇಕಡ ೯೬ರಂತೆ ವ್ಯಾಜ್ಯಗಳಿದ್ದವು. ೫೦೦ ಮೌಲ್ಯದ್ದು ಇದರಲ್ಲಿ ಶೇಕಡಾ ೩೦ರಷ್ಟು ಪರಿಹಾರವಾಗಿದ್ದು ಶೇಕಡ ೫೩ರಷ್ಟು ಉಳಿದುಕೊಂಡಿದ್ದವು. ಸಾಮಾನ್ಯವಾಗಿ ೩ ತಿಂಗಳುಗಳು ಹೆಚ್ಚಿನ ಮೌಲ್ಯದ ವ್ಯಾಜ್ಯಗಳಿಗೆ ಕಾಲಾವಧಿ ಬೇಕಾಗುತ್ತಿತ್ತು ಎಂಬ ಮಾಹಿತಿ ಸಿಗುತ್ತದೆ.[೪೯]

ಇದೇ ರೀತಿ ಎಲ್ಲಾ ಪ್ರಾಂತ್ಯಗಳು ಒಳಗೊಂಡಿರುವ ವ್ಯಾಜ್ಯದ ಬಗ್ಗೆ ತಿಳಿದುಬರುತ್ತದೆ. ಆಂಗ್ಲರು ಭಾರತಕ್ಕೆ ಸಂಬಂಧಿಸಿದಂತೆ ೧೮೬೭ರಿಂದ ೧೮೮೦ರ ಮಧ್ಯೆ ಅನೇಕ ಕಾನೂನು ಕಾಯ್ದೆಗಳನ್ನು ಜಾರಿಗೆ ತಂದರು. ಪತ್ರಪುಸ್ತಕಗಳಿಗೆ, ಸಣ್ಣ ಕೇಸ್‌ಗಳಿಗೆ, ರೈಲ್ವೆ ವ್ಯಕ್ತಿಕಾಯ್ದೆ, ರಿಜಿಸ್ಟ್ರೇಷನ್ ಬಿಲ್ ಆ್ಯಂಡ್ ಎಕ್ಸ್‌ಚೇಂಜ್ ಇತರೇ ೭೬ ಕಾಯ್ದೆಗಳನ್ನು ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿದಂತೆ ಜಾರಿಗೆ ತಂದರು.[೫೦] ಹಾಗಾಗಿ ನ್ಯಾಯಾಲಯಗಳಲ್ಲಿನ ತೀರ್ಮಾನಗಳೇ ಆಯಾ ಪ್ರಾಂತ್ಯಗಳಿಗೆ ಸಂಬಂಧಿಸಿದಂತೆ ಬೇರೆ ಬೇರೆ ರೀತಿಯ ಮೌಲ್ಯವನ್ನು ಒಳಗೊಂಡಿತ್ತು.

**ಬಂದೀಖಾನೆಗಳು:** ಬ್ರಿಟಿಷರ ಆಡಳಿತಾವಧಿಯಲ್ಲಿ ಕಾರಾಗೃಹಗಳಿಗೆ ಒಂದೇ ರೀತಿ-ನೀತಿ, ರೂಪುರೇಷೆ ಕೊಡುವ ಕೆಲಸ ಆರಂಭವಾಯಿತು. ಅಪರಾಧ ಮಾಡಿದ ವ್ಯಕ್ತಿಗಳಿಗೆ ಶಿಕ್ಷೆ ನೀಡಲು ಅಥವಾ ಅಪರಾಧ ಸಾಬೀತು ಆಗುವವರಿಗೆ ನ್ಯಾಯಾಲಯದ ಆಧೀನದಲ್ಲಿರಲು ವ್ಯವಸ್ಥೆಯಾಗಿದೆ. ಇವರ ಆಳ್ವಿಕೆಯ ಸಂದರ್ಭದಲ್ಲಿ ಎಲ್ಲಾ ಕಡೆಯೂ ಆಧುನಿಕ ಬಂದೀಖಾನೆಗಳು ಪ್ರಾರಂಭವಾದವು. ಏಕೆಂದರೆ ಪ್ರಾಚೀನ ಪದ್ಧತಿಯಲ್ಲಿ ಆರೋಪಿಗಳನ್ನು ರಾಜರ, ಸುಲ್ತಾನರ ಕಾಲದಲ್ಲಿ ಅಪರಾಧಿಗಳನ್ನು ತಮಗೆ ಬೇಡವಾದವರನ್ನು ವಿಶಿಷ್ಟವಾದ ಸ್ಥಳಗಳಲ್ಲಿ ಚಿತ್ರವಿಚಿತ್ರವಾದ ಹಿಂಸೆಗಳಿಗೆ ಗುರಿಮಾಡಿ ಸೇಡು ತೀರಿಸಿಕೊಳ್ಳುತ್ತಿದ್ದರು. ದುರ್ಗಮ ಬೆಟ್ಟಗಳ ಮೇಲೆ ನೆಲಮಾಳಿಗೆಗಳಲ್ಲಿ ಕಾರಾಗೃಹಗಳು ಇರುತ್ತಿದ್ದವು.

ಬ್ರಿಟಿಷರ ಆಡಳಿತಾವಧಿಯಲ್ಲಿ ಕಾರಾಗೃಹಗಳಿಗೆ ಒಂದು ರೀತಿ-ನೀತಿ, ರೂಪುರೇಷೆ ಕೊಡುವ ಕೆಲಸ ಆರಂಭವಾಯಿತು.[೫೧] ಹಲವು ಕಡೆಗಳಲ್ಲಿ ಇರುವ ಜೈಲನ್ನು ಸ್ಥಾಪಿಸಿದ್ದರು. ಅವುಗಳೆಂದರೆ: ೧೮೮೦ರ ಸುಮಾರಿಗೆ ಮೈಸೂರು ಪ್ರಾಂತ್ಯದಲ್ಲಿ ಎಂಟು ಜೈಲುಗಳಿದ್ದವು. ಜೊತೆಗೆ ಒಂದು ಕ್ಯಾಂಪ್‌ಜೈಲು ಇತ್ತು ಮತ್ತು ಎಂಟು ಲಾಕಪ್‌ಗಳು ಇದ್ದವು. ೧೮೬೩ರಲ್ಲಿ ಬೆಂಗಳೂರಿನಲ್ಲಿ ಸೆಂಟ್ರಲ್ ಜೈಲನ್ನು ಸ್ಥಾಪಿಸಿದರು. ಈ ಸಂದರ್ಭದಲ್ಲಿ ೧೦೦೦ ವ್ಯಕ್ತಿಗಳಿದ್ದರು. ಕಟ್ಟಡಗಳನ್ನು ಕಲ್ಲಿನಿಂದ ಕಟ್ಟಿದ್ದರು. ಮೇಲ್ಛಾವಣಿಯನ್ನು ಹುಲ್ಲಿನಿಂದ ಕಟ್ಟಿದ್ದರು. ಇದು ಕೋಟೆಜೈಲಿನ ಸ್ವರೂಪದ್ದಾಗಿದೆ.

**ಮೈಸೂರು ಪ್ರಾಂತ್ಯದಲ್ಲಿರುವ ಪ್ರಮುಖ ಜೈಲುಗಳನ್ನು ಈ ರೀತಿಯಾಗಿ ದಾಖಲಿಸಿರುತ್ತಾರೆ.**

| ಜೈಲುಗಳು | Convicts / ವ್ಯಕ್ತಿ | Under Trail | Civil<br>ನಾಗರಿಕ ಅಪರಾಧ | ಒಟ್ಟು |
|---|---|---|---|---|
| ಸೆಂಟ್ರಲ್ ಜೈಲು | ೧.೦೪೪ | ೪ | ೧ | ೧.೦೪೯ |
| ಜಿಲ್ಲಾ ಜೈಲುಗಳು | ೧.೭೧೧ | ೬೦ | ೧೮ | ೧.೭೮೯ |
| ತಾಲೂಕು ಲಾಕಪ್‌ಗಳು | ೧೭ | ೪೦ | ೪ | ೬೧ |

ಒಟ್ಟು ಜೈಲುಗಳ ಖರ್ಚು ವರ್ಷಕ್ಕೆ ೨ ಲಕ್ಷ ಹತ್ತಿರ ಬರುತ್ತದೆ. ಪ್ರತಿಯೊಬ್ಬರ ಖರ್ಚು ೮೦-೪-೩ ಪೈಗಳಂತೆ ಇರುತ್ತದೆ. ಪ್ರತಿದಿನ ವ್ಯಕ್ತಿಗಳಿಗೆ ಆಹಾರವಾಗಿ ೧ ೧/೨ ಸೇರು ರಾಗಿ ಮತ್ತು ೧/೪ ಹಣ, ಪೆಪ್ಪರ್, ಮೆಣಸಿನಕಾಯಿಯನ್ನು ಆಹಾರವಾಗಿ ನೀಡುತ್ತಿದ್ದರೆಂಬ ಮಾಹಿತಿ ಸಿಗುತ್ತದೆ.[೫೨] ಆದರೆ ದಕ್ಷಿಣ ಕನ್ನಡ ಜಿಲ್ಲೆ

ಹಾಗಾಗಿ ಹೊಸ ಜೈಲಿನ ರಚನೆಗಾಗಿ ಶಿಫಾರಸ್ಸು ಮಾಡಲಾಗಿದೆ. ಆದರೆ ಯೋಗ್ಯ ನಿವೇಶನ ಹುಡುಕುವುದು ಕಷ್ಟವೆಂದು ಹಾಗೂ ಒಂದೇ ಒಂದು ಆಯ್ಕೆಯಾಗಿದ್ದು ಅದು ಅನಾರೋಗ್ಯಕರ ಎಂದು ಕಂಡುಬಂದಿದ್ದು, ಇದೊಂದು ಸತ್ಯಸಂಗತಿಯೆಂದು, ಪ್ರಯೋಗಾತ್ಮಕವಾಗಿ ದೃಢೀಕರಿಸಲ್ಪಟ್ಟಿದೆ ಎಂದು ಇಲ್ಲಿ ಉಲ್ಲೇಖಿಸಲಾಗಿದೆ. ಅಲ್ಲದೆ ಹಣಕಾಸಿನ ದೃಷ್ಟಿಯಿಂದ ಕಟ್ಟಡ ಕಟ್ಟುವುದನ್ನು ಮುಂದೂಡಲಾಗಿದೆ. ಜೊತೆಗೆ ಹಳೇ ಕಾರಾಗೃಹವನ್ನು ಸುಧಾರಣೆ ಮಾಡಲಾಗಿದೆ ಎಂಬ ಅಂಶ ಕಂಡುಬರುವುದರಿಂದ ಇದೊಂದು ಸತ್ಯಕ್ಕೆ ದೂರವಾದ ಸಂಗತಿ ಎಂದೇ ಭಾವಿಸಬಹುದಾಗಿತ್ತು, ಇಡೀ ಆಡಳಿತವೇ ಆಂಗ್ಲರದ್ದು ಆಗಿರುವಾಗ ನಿವೇಶನ ಹುಡುಕುವುದು ಕಷ್ಟವಾಗಿರುವುದಿಲ್ಲ. ಆದರೆ ಇವರಿಗೆ ಇದರಿಂದ ಯಾವುದೇ ಪ್ರಯೋಜನವಿರಲಿಲ್ಲವೆನ್ನಬಹುದು. ಇಲ್ಲಿ ಇಂತಹ ಆರೋಪಿಗಳ ಸಂಖ್ಯೆಯು ಈ ರೀತಿ ಇರುತ್ತದೆ.[೫೯]

| ವರ್ಷ | ಆರೋಪಿಗಳು | ಜಾಡಿನ ಅಡಿಯಲ್ಲಿ | ನಾಗರಿಕ | ಒಟ್ಟು |
|---|---|---|---|---|
| ೧೮೭೩ | ೬೩.೮೪ | ೧೧.೯೧ | ೪೬ | ೭೬.೨೧ |
| ೧೮೭೪ | ೭೮.೨ | ೧೧.೪೫ | ೨.೮೫ | ೯೨.೫ |
| ೧೮೭೫ | ೬೨.೩೮ | ೧೦.೬೪ | ೧.೯೯ | ೭೫ |

ಇವರ ಆಳ್ವಿಕೆಯಲ್ಲಿ ಆರಂಭದಿಂದ ಪ್ರಾಚೀನ ಕಾಲದಲ್ಲಿದ್ದಂತಹ ಅತೀ ಕಠಿಣ ಕಾರಾಗೃಹ ಶಿಕ್ಷೆ ಇದ್ದುದನ್ನು ಸಡಿಲಗೊಳಿಸಲಾಯಿತೆಂದು ತಿಳಿದುಬರುತ್ತದೆ. ಇಲ್ಲಿ ಮೂರು ವಿಧದ ಜೈಲು ಶಿಕ್ಷೆಗಳಿದ್ದವು. ಮೊದಲನೆಯದು ತಪ್ಪು ಮಾಡಿದವನಿಗೆ ಶಿಕ್ಷೆ ನಿಗದಿಪಡಿಸುವಾಗ ಮತ್ತು ಅವನನ್ನು ರಸ್ತೆಯ ಮೇಲೆ ಕಠಿಣ ಪರಿಶ್ರಮದ ಕೆಲಸದ ಶಿಕ್ಷೆ ಕೊಡುವರು. ಎರಡನೆಯ ಶಿಕ್ಷೆ ಅಪರಾಧಿಯನ್ನು ಜೈಲಿನಲ್ಲಿ ಇಡುವುದು ಮತ್ತು ಅವರಿಗೆ ಜೈಲಿನಲ್ಲಿ ಕೆಲಸ ಮಾಡುವ ಶಿಕ್ಷೆ ವಿಧಿಸುವುದು ಮತ್ತು ಮೂರನೆಯ ಪ್ರಕಾರವೆಂದರೆ ಯಾವುದೇ ಪರಿಶ್ರಮವಿಲ್ಲದೆ ಜೈಲಿನಲ್ಲಿ ಇಡುವ ಶಿಕ್ಷೆಯಾಗಿತ್ತು ಎಂಬ ಮಾಹಿತಿಗಳು ಸಿಗುತ್ತದೆ.[೬೦] ಹೀಗಾಗಿ ಎಲ್ಲಾ ಕಡೆಯೂ ಬಂದೀಖಾನೆಗಳಿದ್ದವು. ಆದರೆ ಹೆಚ್ಚಿನ ಸಂಖ್ಯೆಯಲ್ಲಿ ಮೈಸೂರು ಹಾಗೂ ಮದ್ರಾಸ್ ಪ್ರಾಂತ್ಯ ದಲ್ಲಿತ್ತು ಎಂಬುದಾಗಿ ತಿಳಿದುಬರುತ್ತದೆ. ಅತೀ ಕಡಿಮೆ ಎಂದರೆ ಕೊಡಗು ಆಗಿತ್ತು ಎಂಬುದಾಗಿ ತಿಳಿಯ ಬಹುದಾಗಿದೆ.

### ಪೊಲೀಸ್ ವಿಭಾಗ

ಒಂದು ಪ್ರದೇಶ ನ್ಯಾಯ ಮತ್ತು ಶಾಂತಿಯನ್ನು ಕಾಪಾಡಲು ಒಂದು ವ್ಯವಸ್ಥೆ ಇರಬೇಕಾದರೂ ರಾಜಧರ್ಮಗಳಲ್ಲಿ ಒಂದು ಅವಶ್ಯಕತೆಯಾಗಿರುತ್ತದೆ. ಹಿಂದೆ ರಾಜನು ಪ್ರಜೆಗಳ ಕ್ಷೇಮವನ್ನು ಕಾಪಾಡಲು ಅಧಿಕಾರಿಗಳನ್ನು ನೇಮಿಸುತ್ತಿದ್ದನು. ಈ ಅಧಿಕಾರಿಗಳು ಬೇರೆ ಬೇರೆ ರಾಜರ ಆಡಳಿತದಲ್ಲಿ ವಿವಿಧ ಹೆಸರುಗಳಿಂದ ಅಂದರೆ ಧರ್ಮಪಾಲಕ, ಕೊತ್ವಾಲ್, ಪಟೇಲ, ಗೌಡ ಇತ್ಯಾದಿಗಳಿಂದ ಕರೆಯಲ್ಪಡುತ್ತಿದ್ದರು. ನಾಮಧೇಯ ಏನೇ ಆದರೂ ಮಾಡಬೇಕಾದ ಕಾರ್ಯ ಒಂದೇ ಆಗಿದ್ದಿತು. ಗ್ರಾಮಮಟ್ಟದಲ್ಲಿ ಪಟೇಲ, ಗೌಡರು ಈ ಕಾರ್ಯ ನಿರ್ವಹಿಸಿದ್ದಾರೆ. ತಾಲೂಕು ಮಟ್ಟದಲ್ಲಿ ಪೊಲೀಸ್ ವ್ಯವಸ್ಥೆಗೆ ಮುಖ್ಯಸ್ಥರಾಗಿದ್ದ

ಅಮಲ್ದಾರನು ಸಹಾಯಕರಾಗಿ ಒಬ್ಬ ಬಿಲ್ಲೇದಾರ, ಒಬ್ಬ ನಾಯಕ ಬಿಲ್ಲೇದಾರ(ದಫೇದಾರ) ಹಾಗೂ ಹಲವು ಹೋಬಳಿದಾರರು ಸಹಾಯ ಮಾಡುತ್ತಿದ್ದರು.

ಪ್ರಾಚೀನ ಅರಸರ ಕಾಲದಲ್ಲಿ ಸ್ಥಳೀಯ ಪಾಳೆಯಗಾರರೇ ನಾಗರಿಕ ರಕ್ಷಣೆ ಹೊಣೆ ಹೊತ್ತಿದ್ದರು. ಇದೇ ವ್ಯವಸ್ಥೆ ಹೈದರ್ ಮತ್ತು ಟಿಪ್ಪು ಹಾಗೂ ಮೈಸೂರು ಅರಸರ ಆಡಳಿತ ಕಾಲದಲ್ಲೂ ಮುಂದುವರೆಯಿತು. ಆದರೆ ಬ್ರಿಟಿಷರ ಆಳ್ವಿಕೆಯಲ್ಲಿ ಆಧುನಿಕ ಪೊಲೀಸ್ ವ್ಯವಸ್ಥೆ ರೂಪುಗೊಂಡಿತು. ಬಂಗಾಲದಲ್ಲಿ ಅಸ್ತಿತ್ವದಲ್ಲಿದ್ದ ಪೊಲೀಸ್ ವ್ಯವಸ್ಥೆ ಮದ್ರಾಸ್ ಪದ್ಧತಿ ಮೈಸೂರಿನಲ್ಲಿಯೂ ಇತ್ತು. ೧೮೩೧ರಲ್ಲಿ ಬ್ರಿಟಿಷ್ ಕಮಿಷನರ್ ಆಡಳಿತ ಪ್ರಾರಂಭವಾದಾಗ ೧೮೩೪ರಲ್ಲಿ ಬ್ರಿಟಿಷ್ ಕಮಿಷನರು ಬಂದು ಹುಕುಂ ನಾಮೆ (ಸರ್ಕಾರಿ ಆಜ್ಞೆ) ಹೊರಡಿಸಿ ಕಂದಚಾರ್ ಪೊಲೀಸರ ದಿನನಿತ್ಯದ ಆಡಳಿತ ವ್ಯವಸ್ಥೆಗೆ ಒಂದು ವೈಜ್ಞಾನಿಕ ಆಯಾಮ ನೀಡಿದರು. ಆ ಆಜ್ಞೆಯಲ್ಲಿ ಕಂದಚಾರ್ ಸಿಪಾಯಿಗಳು ಪ್ರತ್ಯೇಕ ಪೊಲೀಸ್ ದಳಕ್ಕೆ ಸೇರಿದವರೆಂದು ನಿಗದಿಪಡಿಸಲಾಯಿತು. ಈ ಸಿಪಾಯಿಗಳನ್ನು ಎಲ್ಲಾ ತಾಲೂಕು, ಹೋಬಳಿ ಕಚೇರಿಗಳಲ್ಲಿ ಹಾಗೂ ಕೋಟೆಗಳ ಮೇಲೆ ರಕ್ಷಣೆಗಾಗಿ ನಿಯೋಜಿಸಲಾಗುತ್ತಿತ್ತು. ಈ ಕಂದಚಾರ್ ರಕ್ಷಣಾ ವ್ಯವಸ್ಥೆ ೧೮೬೧ರವರೆಗೂ ಜಾರಿಯಲ್ಲಿದ್ದಿತು.

ಪ್ರತಿ ತಾಲೂಕಿನ ಪೊಲೀಸ್ ವ್ಯವಸ್ಥೆಗೆ ಮುಖ್ಯಸ್ಥನಾಗಿದ್ದ ಅಮಲ್ದಾರನ ಸಹಾಯಕ್ಕಾಗಿ ಒಬ್ಬ ಖಿಲ್ಲೇದಾರ, ಒಬ್ಬ ನಾಯಬ್ ಖಿಲ್ಲೇದಾರ(ದಫೇದಾರ) ಹಾಗೂ ಹಲವು ಹೋಬಳಿದಾರರಿದ್ದರೂ ಇಡೀ ಪೊಲೀಸ್ ಇಲಾಖೆ ಒಬ್ಬ ಕಮಿಷನರ್ ಆಡಳಿತಕ್ಕೆ ಒಳಪಟ್ಟಿದ್ದು, ಈತನಿಗೆ 'ಭಕ್ಷಿ' ಎಂಬ ಸಹಾಯಕನಿದ್ದನು. ೧೮೪೪ರಲ್ಲಿ ಈ ಹುದ್ದೆಯನ್ನು ರದ್ದುಪಡಿಸಲಾಯಿತು. ಅದೇ ವರ್ಷ ಪೊಲೀಸ್ ಸೂಪರಿಡೆಂಡೆಂಟ್ ಹುದ್ದೆಯನ್ನು ಸೃಷ್ಟಿಸಿ ಖಿಲ್ಲೇದಾರರಿಗಿಂತ ಕೆಳಗಿನ ಅಧಿಕಾರಿಗಳ ನೇಮಕಾತಿ, ಬಡ್ತಿ, ಶಿಕ್ಷೆ ಹಾಗೂ ಬರ್ತಫ್ ಮಾಡುವ ಅಧಿಕಾರಗಳನ್ನು ಅವರಿಗೆ ನೀಡಲಾಯಿತು. ೧೮೫೬ರಲ್ಲಿ ಜುಡಿಷಿಯಲ್ ಕಮಿಷನರ್‌ರ ನೇಮಕಾತಿ ಯಾಯಿತು. ಇವರು ಪದನಿಮಿತ್ತ ರಾಜ್ಯ ಪೊಲೀಸ್ ಮುಖ್ಯಾಧಿಕಾರಿ(ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್) ಸಹ ಆಗಿದ್ದರು. ಜಿಲ್ಲಾಮಟ್ಟದಲ್ಲಿ ೧೮೭೩ರಲ್ಲಿ ಸೃಷ್ಟಿಯಾದ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಅವರು ಪೊಲೀಸ್ ಮುಖ್ಯಸ್ಥರಾಗಿದ್ದರು. ಇವರ ಸಹಾಯಕ್ಕಾಗಿ ಎಲ್ಲಾ ಜಿಲ್ಲೆಗಳಿಗೆ ೧೮೭೪ರಲ್ಲಿ ಸಹಾಯಕ ಕಮಿಷನರ್‌ಗಳನ್ನು ನೇಮಿಸಲಾಯಿತು. ೧೮೭೫ರಲ್ಲಿ ಈ ಮೇಲ್ಕಂಡ ಅಧಿಕಾರಿಗಳ ಹುದ್ದೆ, ಕರ್ತವ್ಯ ಮತ್ತು ಜವಾಬ್ದಾರಿಗಳ ಬಗ್ಗೆ ಸರ್ಕಾರಿ ಹುದ್ದೆಯನ್ನು ಹೊರಡಿಸಲಾಯಿತು. ಆದರೆ ೧೮೭೬-೭೭ರಲ್ಲಿ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಹುದ್ದೆ ರದ್ದುಪಡಿಸಲಾಯಿತು. ೧೮೭೯ರಲ್ಲಿ ಜುಡಿಷಿಯಲ್ ಕಮಿಷನರಿಗೆ ಕೊಡಮಾಡಲ್ಪಟ್ಟಿದ್ದ ಐ.ಜಿ.ಪಿ. ಅಧಿಕಾರವನ್ನು ರದ್ದುಪಡಿಸಿ ಪೊಲೀಸ್ ಇಲಾಖೆಯ ನೇರ ಆಡಳಿತವನ್ನು ಮುಖ್ಯ ಕಮಿಷನರ್ ವಹಿಸಿಕೊಂಡರು.[೬೧]

ಹೀಗೆ ವಿವಿಧ ಇಲಾಖೆಗಳ ಮೂಲಕ ಅನೇಕ ಸ್ಥಳೀಯರಿಗೆ ಇಲ್ಲಿ ಅವಕಾಶ ಕಲ್ಪಿಸಿಕೊಟ್ಟಿದ್ದರು ಎಂಬುದು ಪ್ರಮುಖವಾದದ್ದು. ಮುಖ್ಯವಾಗಿ ಇಲ್ಲಿ ಕ್ರಿಶ್ಚಿಯನ್ನರು ೨೮ ಜನ, ಮುಸ್ಲಿಮರು ೧೭೧, ಹಿಂದೂಗಳು ಹಾಗೂ ಇತರರು ೨೮೭ ಜನರಿದ್ದರೆಂದು ತಿಳಿದುಬರುತ್ತದೆ.[೬೨] ಎಲ್ಲಾ ಕಡೆಯೂ ಮೇಲಧಿಕಾರಿಯಾಗಿ, ಸೂಪರಿಡೆಂಡೆಂಟ್ ಇದ್ದರು. ಇವರಿಗೆ ಅಧೀನರಾಗಿ ಇನ್ಸ್‌ಪೆಕ್ಟರ್ ಹಾಗೂ ಕಾನ್‌ಸ್ಟೇಬಲ್‌ಗಳು ಬರುತ್ತಿದ್ದರು.

ಜನಸಂಖ್ಯೆಗೆ ಅನುಗುಣವಾಗಿ ವ್ಯತ್ಯಾಸಗಳಿದ್ದವು. ಇನ್ಸ್‌ಪೆಕ್ಟರ್ ಹಾಗೂ ಕಾನ್‌ಸ್ಟೇಬಲ್ ಹುದ್ದೆಗಳಿಗೆ ಸ್ಥಳೀಯರನ್ನು ಹೆಚ್ಚಿನ ಸಂಖ್ಯೆಯಲ್ಲಿ ನೇಮಿಸುತ್ತಿದ್ದರು. ಮುಖ್ಯವಾಗಿ ಬ್ರಾಹ್ಮಣರು, ರಜಪೂತರು, ಮುಸ್ಲಿಮರು, ಲಿಂಗವಂತರು, ಸ್ಥಳೀಯ ಕ್ರಿಶ್ಚಿಯನ್ನರು ಹಾಗೂ ಇತರೇ ಹಿಂದೂಗಳಿರುತ್ತಿದ್ದರು. ಆದರೆ ಬಳ್ಳಾರಿ ಜಿಲ್ಲೆಯ ಕೆಲ್‌ಸಾಲ್ ಅವರ ಗ್ಯಾಸೆಟಿಯರ್‌ನಲ್ಲಿ ಸ್ಥಳೀಯ ಪೊಲೀಸ್ ಕುರಿತು ಹೆಚ್ಚಿನ ಮಾಹಿತಿ ಸಿಗುತ್ತದೆ. ಪ್ರಮುಖವಾಗಿ ಇಲ್ಲಿ ಕೆಳಸ್ತರದ ಅನೇಕ ಹಿಂದೂಗಳಿದ್ದರು ಎಂಬುದನ್ನು ಸಂಖ್ಯೆಗಳ ಮೂಲಕ ವಿವರಿಸಿದ್ದಾರೆ. ಅದು ಈ ರೀತಿ ಇದೆ.

| ಜಾತಿಗಳು | ೧೮೬೫-೬೬ | | ೧೮೬೬-೬೭ | | ೧೮೬೭-೬೮ | | ೧೮೬೮-೬೯ | | ೧೮೬೯-೭೦ | | ೧೮೭೦-೭೧ | |
|---|---|---|---|---|---|---|---|---|---|---|---|---|
| | ಇನ್ಸ್‌ಪೆಕ್ಟರ್ | ಕಾನ್‌ಸ್ಟೇಬಲ್ | ಇನ್ | ಕಾನ್ | ಇನ್ | ಕಾನ್ | ಇನ್ | ಕಾನ್ | ಇನ್ | ಕಾನ್ | ಇನ್ | ಕಾನ್ |
| ಯುರೋಪಿಯನ್ನರು | ೧ | ೩ | ೧ | ೫ | ೧ | ೪ | ೧ | ೪ | ೧ | ೨ | - | ೧ |
| ಈಸ್ಟ್ ಇಂಡಿಯನ್ನರು | ೫ | ೩ | ೪ | - | ೪ | - | ೩ | - | ೩ | ೧ | ೩ | ೨ |
| ಬ್ರಾಹ್ಮಣರು | ೧೫ | ೫೨ | ೧೬ | ೭೩ | ೧೬ | ೮೬ | ೧೫ | ೬೯ | ೧೦ | ೬೩ | ೯ | ೬೮ |
| ರಜಪೂತರು | ೪ | ೮೦ | ೪ | ೮೮ | ೪ | ೯೨ | ೪ | ೮೧ | ೪ | ೧೭೦ | ೪ | ೭೬ |
| ನಾಯುಡುಗಳು | ೨ | ೨೯೧ | ೨ | ೨೯೬ | ೩ | ೨೯೩ | ೩ | ೨೭೪ | ೫ | ೧೬ | ೪ | ೭೮ |
| ಮೊದಲಿಯರ್ | ೧ | ೬೭ | ೬ | ೩ | - | ೩೨ | - | ೨೬ | - | - | - | ೫೦ |
| ಕೋಮಟಿಗಳು | ೧ | ೧ | ೧ | ೧ | ೧ | - | ೧ | - | ೧ | - | - | - |
| ಸತಾನಿಗಳು | - | - | - | - | - | - | - | | - | - | - | ೧ |
| ನೇಕಾರರು | - | - | - | - | - | - | - | - | - | ೧ | - | ೧ |
| ಗೊಲ್ಲರು | - | - | - | - | - | ೨ | - | - | - | ೯ | - | ೧ |
| ಕೊರವರು | - | - | - | ೧೫ | - | ೯ | - | ೧೨ | - | ೧೦೫ | - | - |
| ಮುಸಲ್ಮಾನರು | ೨ | ೭೫೧ | ೨ | ೮೩೭ | ೨ | ೭೩೩ | ೩ | ೩೪ | ೩ | ೩೫೩ | ೩ | ೧೧೮ |
| ಕ್ರಿಶ್ಚಿಯನ್ನರು | - | ೬ | - | ೬ | - | ೭೩೩ | ೩ | ೭೦೬ | ೧ | ೬ | - | ೫೬೨ |
| ಪರ್ಶಿಯನ್ನರು | - | ೯೭ | - | ೮೦ | - | ೮೧ | - | ೬೬ | - | ೪೦ | - | ೩೨ |

ಹೀಗೆ ಅನೇಕ ಜಾತಿಗಳ ವಿವರಣೆ ಬಳ್ಳಾರಿ ಜಿಲ್ಲೆಯಲ್ಲಿ ಸಿಗುತ್ತದೆ. ಮುಖ್ಯವಾಗಿ ನಾಯುಡುಗಳು, ಬ್ರಾಹ್ಮಣರು ಹಾಗೂ ಮುಸಲ್ಮಾನರು ಅಧಿಕ ಸಂಖ್ಯೆಯಲ್ಲಿದ್ದ ಬಗ್ಗೆ ತಿಳಿದುಬರುತ್ತದೆ.[೬೩] ಇವರ ಮುಖ್ಯ ಕೆಲಸಗಳೆಂದರೆ ಅಪರಾಧಗಳನ್ನು ಪತ್ತೆಹಚ್ಚುವುದು, ಕೊಲೆ, ಅತ್ಯಾಚಾರ ದರೋಡೆ, ಮನೆಗಳ್ಳತನ ಮೋಸದಿಂದ ಆಸ್ತಿ ಲಪಟಾಯಿಸುವುದು ಇತ್ಯಾದಿಗಳನ್ನು ತಡೆಗಟ್ಟುವುದು, ಅಲ್ಲದೆ ಶಾಂತಿಯನ್ನು ನೆಲೆಸುವಂತೆ ಮಾಡುವುದಾಗಿತ್ತು. ಹೀಗೆ ಎಲ್ಲಾ ಗ್ಯಾಸೆಟಿಯರ್‌ಗಳಲ್ಲಿಯೂ ಸಹ ಕ್ರೈಂಗಳ ವಿವರಣೆಯನ್ನು ಅಂಕಿಸಂಖ್ಯೆಯ ಮೂಲಕ ತಿಳಿಸುತ್ತಾರೆ. ಆದರೆ ಹೈದರಾಬಾದ್‌ನಲ್ಲಿ ಸ್ಥೂಲವಾಗಿ ವಿವರಿಸುತ್ತಾರೆ. ಅಲ್ಲದೆ ಇವುಗಳಿಗೆ ತಗಲುವ

ಖರ್ಚುವೆಚ್ಚಗಳ ಬಗ್ಗೆಯೂ ಸಹ ಮಾಹಿತಿ ಸಿಗುತ್ತದೆ. ಸಾಮಾನ್ಯವಾಗಿ ಪೊಲೀಸ್ ಸೂಪರಿಂಟೆಂಡೆಂಟ್‌ರ ಸಂಬಳ, ಪ್ರವಾಸದ ಖರ್ಚು, ಕುದುರೆ ಬಳಸುತ್ತಿದ್ದರಿಂದ ಅವುಗಳ ಖರ್ಚು ಸೇರಿ ಅವರಿಗೆ ೨೫.೯೧೦ ರೂ.ಗಳು ವರ್ಷ ತಗಲುವ ಖರ್ಚು ಎನ್ನಲಾಗುತ್ತದೆ.[೬೪] ಅಲ್ಲದೆ ಇಲಾಖೆಯ ಸ್ಟೇಷನ್, ಬಾಡಿಗೆ ಖರ್ಚು, ಸಮವಸ್ತ್ರದ ಖರ್ಚು, ಅವರಿಗೆ ನೀಡುವ ಸಂಬಳ ಸಾಮಾನ್ಯವಾಗಿ ಒಬ್ಬ ಕಾನ್‌ಸ್ಟೇಬಲ್‌ನ ಸಂಬಳವು ೭.೮ ಅಥವಾ ೬.೮ ರೂಪಾಯಿಗಳು ಇರುತ್ತಿದ್ದು, ಇವರಲ್ಲಿ ವಿವಿಧ ವರ್ಗಗಳಿದ್ದವು. ಪ್ರತಿ ೯೬೬ ಜನರಿಗೆ ಒಬ್ಬರಂತೆ ಪೊಲೀಸ್‌ರನ್ನು ನೇಮಿಸುತ್ತಿದ್ದರು. ೧೮೬೯-೭೦ರ ಸಂದರ್ಭದಲ್ಲಿಯೇ ೧.೩೫೧ ಜನ ಇನ್ಸ್‌ಪೆಕ್ಟರ್/ಪೊಲೀಸ್‌ರಿದ್ದರು. ಇವುಗಳಲ್ಲಿ ಎರಡು ವರ್ಗಗಳಾಗಿ ವಿಂಗಡಿಸಿದ್ದರು.

| ಇನ್ಸ್‌ಪೆಕ್ಟರ್ | | | | | | | ಕಾನ್‌ಸ್ಟೇಬಲ್ | | | | |
|---|---|---|---|---|---|---|---|---|---|---|---|
| ೧ನೇ ವರ್ಗ | ೨ನೇ ವರ್ಗ | ೩ನೇ ವರ್ಗ | ೪ನೇ ವರ್ಗ | ೫ನೇ ವರ್ಗ | ೬ನೇ ವರ್ಗ | ಯುರೋಪಿಯನ್ ಹೆಡ್‌ಕಾನ್‌ಸ್ಟೇಬಲ್ | ಸ್ಥಳೀಯ ಕಾನ್ | ಡೆಪ್ಯೂಟಿ ಕಾನ್ | ೧ನೇ ವರ್ಗ ಕಾನ್ | ೨ನೇ ವರ್ಗ ಕಾನ್ | ಒಟ್ಟು |
| ೨ | ೩ | ೬ | ೬ | ೬ | ೮ | ೩ | ೭೮ | ೯೯ | ೩೯೦ | ೭೮೧ | ೧,೩೫೧ |

ಈ ಮೇಲಿನಂತೆ ಜನರಿದ್ದರೆಂದು ತಿಳಿದುಬರುತ್ತದೆ. ಇವರ ಎತ್ತರವು ೫.೪ ಅಡಿಯಂತೆ ಹಾಗೂ ಎದೆ ಸುತ್ತಳತೆ ೩೩ ಇಂಚು ಇರಬೇಕೆಂಬ ಮಾಹಿತಿ ಸಿಗುತ್ತದೆ. ೧೮೬೯-೭೦ರಲ್ಲಿ ಪೊಲೀಸ್ ಬಜೆಟ್ ೧೪,೦೦೦ ರೂ.ಗಳಾಗಿರುತ್ತವೆ. ಬಳ್ಳಾರಿಯಲ್ಲಿಯೇ ೬೧ಕ್ಕಿಂತಲೂ ಹೆಚ್ಚು ಪೊಲೀಸ್ ಠಾಣೆಗಳಿದ್ದವೆಂಬುದು ತಿಳಿದುಬರುತ್ತದೆ.[೬೫] ಜೊತೆಗೆ ಇದೊಂದು ಕಂಟೋನ್‌ಮೆಂಟ್ ಏರಿಯವಾಗಿದ್ದರಿಂದಾಗಿ ಇಲ್ಲಿನ ಪೊಲೀಸ್ ವ್ಯವಸ್ಥೆಯು ವ್ಯವಸ್ಥಿತವಾಗಿತ್ತು ಎಂಬುದಾಗಿ ತಿಳಿಯಬಹುದು.[೬೬]

ಬೆಳಗಾಮ್‌ನಲ್ಲಿ ೧೮೮೨ರಲ್ಲಿ ಒಟ್ಟು ಒಬ್ಬ ಪೊಲೀಸ್ ಸೂಪರಿಡೆಂಡೆಂಟ್ ಸೇರಿ ೬೬೩ ಜನರಿದ್ದರು. ಧಾರವಾಡದಲ್ಲಿ ೭೮೦ ಜನ ಪೊಲೀಸರು, ಕೆನರಾದಲ್ಲಿ ೬೬೩ ಜನರು ಹೀಗೆ ಎಲ್ಲಾ ಕಡೆಯೂ ನೇಮಕಗೊಳಿಸಲಾಗಿತ್ತು. ಅಲ್ಲದೆ ಮೈಸೂರಿನಲ್ಲಿ ೧೯೦೩ರ ಕಾಯ್ದೆ Vರಂತೆ ಮತ್ತೊಮ್ಮೆ ಪರಿಶೀಲಿಸಿ ಕಾಯ್ದೆಕಾನೂನುಗಳನ್ನು ಜಾರಿಗೆ ತರಲಾಯಿತು. ಮುಖ್ಯವಾಗಿ ಸಮವಸ್ತ್ರ ಧರಿಸುವಂತೆ ಶಾಂತಿ ಕಾಪಾಡುವುದಕ್ಕೆ ಮಹತ್ವ ನೀಡುವುದು. ಅಲ್ಲದೆ ೧೯೦೮ರಲ್ಲಿ ಮತ್ತೊಮ್ಮೆ ಬದಲಾವಣೆಗೊಂಡ ಇಲಾಖೆಗಳನ್ನು ವಿಸ್ತರಿಸಲಾಯಿತು. ಜಿಲ್ಲಾ ಪೊಲೀಸ್ ಕಾಯ್ದೆ ಒಳಪಡಿಸುವುದು, ಸಿಟಿ ಕೋಲಾರ ಗೋಲ್ಡ್‌ಫೀಲ್ಡ್ ರೈಲ್ವೆ ಪೊಲೀಸ್ ಕ್ರೈಂ ಇನ್‌ವೆಸ್ಟಿಗೇಷನ್ ಡಿಪಾರ್ಟ್‌ಮೆಂಟ್ Provincial Reserve Police ಫಿಂಗರ್ ಪ್ರಿಂಟ್ ಬ್ಯೂರೋ, ಹೆಡ್‌ಕ್ವಾಟ್ರಸ್ ಪೊಲೀಸ್ ಟ್ರೈನಿಂಗ್‌ಸ್ಕೂಲ್ ಹೀಗೆ ಹಲವು ಬದಲಾವಣೆಗೆ ಒಳಪಟ್ಟಿತ್ತು. ಹಾಗೂ ಪೊಲೀಸ್ ಮ್ಯಾನ್ಯುಯಲ್‌ನ್ನು ೧೯೧೮-೧೯ರಲ್ಲಿ ಮೂರು ಸಂಪುಟಗಳಲ್ಲಿ ರಚನೆ ಮಾಡಿದರು. ಅಲ್ಲದೆ ಪೊಲೀಸ್ ಸ್ಕೂಲನ್ನು ಬೆಂಗಳೂರು, ಶಿವಮೊಗ್ಗ, ಹಾಸನ, ಚಿಕ್ಕಮಗಳೂರು ಕಡೆಗಳಲ್ಲಿ ೧೮೯೨ರಲ್ಲಿಯೇ ಸ್ಥಾಪಿಸಿದರು. ಅಲ್ಲದೆ ಪೊಲೀಸ್ ಕ್ರಿಮಿನಲಾಜಿಕಲ್ ಮ್ಯೂಜಿಯಂ ಸ್ಕೂಲನ್ನು ಪ್ರಾರಂಭಿಸಿದರು. ಅಲ್ಲದೆ ಕ್ರಿಮಿನಲ್ ಟ್ರೈಬ್ ಆ್ಯಕ್ಟ್ VIIನ್ನು ೧೯೧೬ರಲ್ಲಿ ಪರಿಚಯಿಸಿ ಪೊಲೀಸ್ ಅವರಿಗೆ ಪೂರ್ತಿ ಅಧಿಕಾರ ನೀಡಲಾಯಿತು. ಹೀಗೆ ಹಲವು ವಿಚಾರಗಳಲ್ಲಿ ಪೊಲೀಸ್ ಇಲಾಖೆ ಗಣನೀಯವಾಗಿ ಬದಲಾವಣೆ

ಗೊಳಗಾಯಿತು.[೬೭] ಜೊತೆಗೆ ವಸಾಹತುಶಾಹಿಗಳು ತಮ್ಮ ಸುರಕ್ಷತೆಗಾಗಿಯೇ ಇವುಗಳನ್ನೆಲ್ಲಾ ಜಾರಿಗೆ ತಂದರೆಂಬುದು ಸುಳ್ಳಲ್ಲ.

**ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಗಳು**

ಬ್ರಿಟಿಷ್ ಸರ್ಕಾರ ತನ್ನ ಅನುಕೂಲಕ್ಕಾಗಿ ಏಕ ರೀತಿಯ ಆಡಳಿತ ನೀತಿ, ಕಾನೂನುಗಳನ್ನು ಜಾರಿಗೊಳಿಸುವ ಪ್ರಯತ್ನವನ್ನು ಮಾಡಿತು. ಆಂಗ್ಲರ ಆಡಳಿತದಲ್ಲಿ ವಿವಿಧ ಘಟಕಗಳಾಗಿ ವಿಭಜನೆಗೊಂಡಿದ್ದರಿಂದಾಗಿ ಲೋಕಲ್‌ಫಂಡ್, ಮುನಿಸಿಪಾಲಿಟಿ ಮತ್ತು ಇತರೇ ಸ್ಥಳೀಯ ಆಡಳಿತ ಘಟಕದ ಮೂಲಕ ಏಕರೂಪಗೊಳಿಸುವ ಅನಿವಾರ್ಯತೆ ಇತ್ತು. ಹೀಗಾಗಿ ಸ್ವಯಂ ಆಡಳಿತ ಸಂಸ್ಥೆಗಳ ಮೂಲಕ ಆದಾಯ ಹಾಗೂ ಮೂಲವನ್ನು ಹೆಚ್ಚಿಸುವ ಉದ್ದೇಶದಿಂದ ಸ್ಥಳೀಯ ಆಡಳಿತಕ್ಕೆ ಹೆಚ್ಚು ಒತ್ತು ಕೊಟ್ಟಿದ್ದು, ಜೊತೆಗೆ ತಮ್ಮ ಆಡಳಿತದ ಜವಾಬ್ದಾರಿಯನ್ನು ಕಡಿಮೆ ಮಾಡುವುದಾಗಿತ್ತು. ಹೀಗಾಗಿ ಬೇರೆ ಬೇರೆ ಕಾಲಾವಧಿಯಲ್ಲಿ ಸ್ಥಾಪನೆಗೊಳಿಸಿದರು. ಮೈಸೂರು ಸಂಸ್ಥಾನದಲ್ಲಿ ೧೮೫೦ರ ಭಾರತ ಸರ್ಕಾರದ ೨೬ನೇ ಅಧಿನಿಯಮದ ಮಾದರಿಯಲ್ಲಿ ಬೆಂಗಳೂರು, ಮೈಸೂರು ಸಂಸ್ಥಾನದಲ್ಲಿ ನಗರಾಡಳಿತಕ್ಕೆ ಸಂಪಾದಿಸಿದರಂತೆ. ಮುನಿಸಿಪಾಲಿಟಿ ಕಮಿಟಿಗಳು(ಪೌರ ಸಮಿತಿಗಳು) ೧೮೬೨ರಲ್ಲಿ ರಚನೆಗೊಂಡವು. ೧೯೦೩ರಲ್ಲಿ ಮೈಸೂರು ಸ್ಥಳೀಯ ಮಂಡಳಿಗಳನ್ನು ಕ್ರಮಬದ್ಧಗೊಳಿಸಲಾಯಿತು. ಇದಕ್ಕೆ ಪ್ರಯತ್ನಗಳು ೧೮೮೩ರಿಂದಲೇ ಆರಂಭಗೊಂಡವು. ಅದರ ಪ್ರಕಾರ ೧೯೦೩ರಲ್ಲಿ ೮ ಜಿಲ್ಲಾ ಮಂಡಳಿಗಳು, ೭೭ ತಾಲೂಕು ಮಂಡಳಿಗಳು ಮತ್ತು ೩೮ ಯೂನಿಯನ್ ಕೋರ್ಟ್‌ಗಳನ್ನು ರಚಿಸಲಾಯಿತು. ತಲಾ ೩,೦೦೦ಗಳಿಗಿಂತ ಕಡಿಮೆ ಜನಸಂಖ್ಯೆ ಹೊಂದಿದ ಹಿಂದಿನ ಪುಟ್ಟ ಪುರಸಭೆಗಳನ್ನು ಕೂಟ(ಸಂಘ)ಗಳಾಗಿ ಪರಿವರ್ತಿಸಲಾಯಿತು. ಮೈಸೂರು ನಗರದ ಅಭಿವೃದ್ಧಿಗಾಗಿ ೧೯೦೩ರಲ್ಲಿ ಅಧಿನಿಯಮದ ಪ್ರಕಾರ ಹಲವಾರು ಪುರಸಭೆಗಳು ಅಸ್ತಿತ್ವಕ್ಕೆ ಬಂದವು.

೧೮೮೦-೮೧ರಲ್ಲಿ ಮುನಿಸಿಪಾಲಿಟಿಯ ಕಂದಾಯ ೪.೨೧ ಲಕ್ಷವಿತ್ತು. ಮೈಸೂರು ಸಂಸ್ಥಾನದಲ್ಲಿ ಒಟ್ಟು ೮೪ ಮುನಿಸಿಪಾಲಿಟಿಗಳಿದ್ದವು. ಇಡೀ ೮ ಜಿಲ್ಲೆಗಳಿಗೆ ಒಳಗೊಂಡಂತೆ ಈ ರೀತಿ ಇವೆ. ಬೆಂಗಳೂರು ೧೭, ಕೋಲಾರ ೧೧, ಕಡೂರು ೨, ಚಿತ್ರದುರ್ಗ ೬ ಇದ್ದವು. ಒಟ್ಟು ೩೪೧ ಜನ ಸದಸ್ಯರನ್ನು ಒಳಗೊಂಡಿದ್ದು, ೮೨ ಜನ ಸರ್ಕಾರಿ ಅಧಿಕಾರಿಗಳು ೨೫೨ ಜನ, ಇತರೇ ಚುನಾವಣೆಗೊಂಡ ಅಭ್ಯರ್ಥಿಗಳು, ಬೆಂಗಳೂರು, ಮೈಸೂರು ಹಾಗೂ ಕಂಟೋನ್‌ಮೆಂಟ್ ಏರಿಯಾದಲ್ಲಿ ಆದಾಯ ಹೆಚ್ಚು ಇತ್ತು.[೬೮]

ಮದ್ರಾಸ್ ಪ್ರಾಂತ್ಯದ ಬಳ್ಳಾರಿಯಲ್ಲಿ ಹಾಗೂ ಆದೋನಿಯಲ್ಲಿ ಮುನಿಸಿಪಾಲಿಟಿಯನ್ನು ಮದ್ರಾಸ್ ಕಾಯ್ದೆ Xರಂತೆ ಅಧಿನಿಯಮದ ಪ್ರಕಾರ ೧೮೬೫ರಲ್ಲಿ ಜಾರಿಗೆ ತರಲಾಯಿತು.[೬೯]

ದಕ್ಷಿಣ ಕನ್ನಡದಲ್ಲಿ ಸ್ಥಳೀಯ ಸರ್ಕಾರ ಇಡೀ ಜಿಲ್ಲೆಗೆ ಸಂಬಂಧಿಸಿದಂತೆ ಒಂದೇ ಒಂದು ಇತ್ತು. ಇದು ಸರ್ಕಾರಿ ಆಡಳಿತಕ್ಕೆ ಒಳಪಟ್ಟಿತ್ತು. ಇದು ೩೧ ಮಾರ್ಚ್, ೧೮೯೩ರಲ್ಲಿ ಸ್ಥಾಪನೆಯಾಯಿತು. ಇದರಲ್ಲಿ ಒಟ್ಟು ೨೦ ಜನ ಸದಸ್ಯರಿದ್ದರು. ೧ ಕಮಿಷನರ್, ೪ ನಾಮಿನೇಟೆಡ್, ೧೫ ಜನ ಚುನಾಯಿತರು, ೮ ಜನ ಅಧಿಕಾರಿಗಳು ಒಟ್ಟಿನಲ್ಲಿ ಯುರೋಪಿಯನ್ನರು ಹಾಗೂ ೧೬ ಜನ ಸ್ಥಳೀಯರು ಇದ್ದರು. ೧೮೯೨-೯೩ರಲ್ಲಿ ಒಟ್ಟು ಆದಾಯ ೪.೮೧೧ ರೂಗಳು ಇತ್ತು.[೭೦]

ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ಬೇರೆ ಬೇರೆ ಕಾಲದಲ್ಲಿ ಪುರಸಭೆಗಳು ಸ್ಥಾಪನೆಗೊಂಡಿರುತ್ತವೆ. ಭಾರತ ಸರ್ಕಾರದ ಕಾನೂನು ೧೮೫೦, ೨೬ನೆಯ ನಿಯಮಾನುಸಾರ ಪ್ರಥಮ ಬಾರಿಗೆ ಸ್ಥಳೀಯ ಸಂಸ್ಥೆಗಳು ರಚನೆಗೊಂಡವು. ೧೮೭೩ರಲ್ಲಿ ಕಾನೂನಿನ ಪ್ರಕಾರ ತಾತ್ಕಾಲಿಕ ಪುರಸಭಾ ಸಮಿತಿಗಳು ರಚನೆಗೊಂಡವು. ೧೯೦೧ರಲ್ಲಿ ಮುಂಬೈ ಜಿಲ್ಲಾ ಪುರಸಭೆಗಳ ಅಧಿನಿಯಮ ೧೯೦೧ರಲ್ಲಿ ತೃತೀಯದ ಪ್ರಕಾರ ಪುರಸಭೆಯನ್ನು ರೂಪಿಸಲಾಯಿತು.

೧೯೦೧ರಲ್ಲಿ ಈ ಅಧಿನಿಯಮಕ್ಕೆ ಒಳಪಟ್ಟ ಪುರಸಭೆಗಳಿಗೆ ಹಿಂದಿಗಿಂತ ಹೆಚ್ಚಿನ ಅಧಿಕಾರವನ್ನು ೧೯೨೫ರಲ್ಲಿ ರೂಪಗೊಂಡ ಅಧಿನಿಯಮವು ಒದಗಿಸಿತು. ಇದರ ಪರಿಣಾಮವಾಗಿ ಕೆಲವು ಪುರಸಭೆಗಳನ್ನು ಹಿರಿಯ ನಗರಸಭೆಗಳ ಮಟ್ಟಕ್ಕೆ ಏರಿಸಲಾಯಿತು.[೬೧]

ಹೈದರಾಬಾದ್ ಕರ್ನಾಟಕದಲ್ಲಿ ೧೮೮೭-೮೮ರಲ್ಲಿ ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಗಳ ಉಗಮವಾಯಿತು. ಬೀದರ್, ಗುಲ್ಬರ್ಗಾ, ರಾಯಚೂರು ಜಿಲ್ಲೆಗಳು ಅವರ ಭಾಗಗಳಾಗಿದ್ದವು. ಪುರಸಭೆಗಳಿಗೆ ಸಂಬಂಧಿಸಿದಂತೆ ೧೯೦೦ರಲ್ಲಿ ಅಧಿನಿಯಮವೊಂದನ್ನು ಜಾರಿಗೊಳಿಸಲಾಯಿತು. ಈ ಅಧಿನಿಯಮವು ಪುರಸಭೆಯ ತೆರಿಗೆ ಹಾಗೂ ವಿಶೇಷ ತೆರಿಗೆಗಳನ್ನು ವಿಧಿಸಲು ಅವಕಾಶವಿದ್ದಿತು. ಜಿಲ್ಲಾ ಕೇಂದ್ರ ಸ್ಥಳಗಳಿಗೆ ಸೇರಿದಂತೆ ೫,೦೦೦ಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ಪ್ರದೇಶಗಳಲ್ಲಿ ನೈರ್ಮಲ್ಯೀಕರಣ ಸಮಿತಿಯನ್ನು ರಚಿಸುವ ಅಧಿಕಾರ ಸರಕಾರಕ್ಕೆ ಸಿಕ್ಕಿತು. ಬೆಳೆಯುತ್ತಿದ್ದ ಪಟ್ಟಣಗಳೇ ಬದಲಾಗುತ್ತಿದ್ದ ಪರಿಸ್ಥಿತಿಗನುಗುಣವಾಗಿ ೧೯೦೪, ೧೯೧೦ ಮತ್ತು ೧೯೩೩-೩೪ರಲ್ಲಿ ಈ ಅಧಿನಿಯಮದಲ್ಲಿ ಸೂಕ್ತ ತಿದ್ದುಪಡಿಗಳನ್ನು ಮಾಡಲಾಯಿತು.[೬೨]

ಕೊಡಗಿನಲ್ಲಿ ಪ್ರಥಮ ಬಾರಿಗೆ ೧೮೭೦ರಲ್ಲಿ 'ಮಡಿಕೇರಿ' ಮತ್ತು ವಿರಾಜಪೇಟೆಗಳಲ್ಲಿ ಅಧಿಕೃತ ಮುನಿಸಿಪಾಲ್ ಕಮಿಟಿಗಳನ್ನು ರಚಿಸುವ ಮೂಲಕ ಆರಂಭವಾಯಿತು. ಮುಂದಿನ ಮೂರು ದಶಕಗಳ ನಂತರ ಗ್ರಾಮೀಣ ಪ್ರದೇಶಕ್ಕೆ ಅನ್ವಯಿಸುವಂತೆ ಲೋಕಲ್‌ಫಂಡ್ ಬೋರ್ಡ್‌ಗಳನ್ನು ರಚಿಸಲಾಯಿತು. ಪ್ರಾರಂಭದಲ್ಲಿ ಸ್ಥಳೀಯ ಸಮಿತಿಗಳು(ಮುನಿಸಿಪಾಲ್ ಕಮಿಟಿಗಳು) ೧೯ ಜನ ಸದಸ್ಯರಿಂದ ಕೂಡಿದ್ದು, ಅದರಲ್ಲಿ ಮೂವರು ಸರ್ಕಾರದ ಪದನಿಮಿತ್ತ ಅಧಿಕಾರಿಗಳು ಮತ್ತು ಉಳಿದವರು ಪ್ರಭಾವಶಾಲಿಗಳಾದ ಸ್ಥಳೀಯ ಗಣ್ಯ ನಾಗರಿಕರಾಗಿದ್ದು, ಬೇರೆ ಬೇರೆ ಧಾರ್ಮಿಕ ಸಮುದಾಯಗಳನ್ನು ಪ್ರತಿನಿಧಿಸುತ್ತಿದ್ದರು. ೧೮೭೩ರಲ್ಲಿ ಕುಶಾಲನಗರ, ಸೋಮವಾರಪೇಟೆ ಮತ್ತು ಪೇಜರ್‌ಪೇಟೆಗಳಿಗೆ ಮುನಿಸಿಪಾಲ್ ಕಾಯ್ದೆಗಳನ್ನು ವಿಸ್ತರಿಸಿ ಸ್ಥಳೀಯ ಮುನಿಸಿಪಲ್ ಕಮಿಟಿಯನ್ನು ರಚಿಸಲಾಯಿತು. ೧೮೭೩-೭೪ರಲ್ಲಿ ಮಡಿಕೇರಿ(ಅಂದಿನ ಮಹದೇವಪೇಟೆ) ಪುರಸಭೆಯು ಹೊಂದಿದ್ದ ಆದಾಯ ಹಾಗೂ ವೆಚ್ಚಗಳು ಕ್ರಮವಾಗಿ ರೂ. ೪,೬೮೩ ಮತ್ತು ೩,೫೫೬ ಆಗಿದ್ದವು.[೬೩]

ಈ ಪುರಸಭೆಗಳು ಅಥವಾ ಸ್ವಯಂ ಆಡಳಿತ ಸಂಸ್ಥೆಗಳು ಪ್ರಧಾನವಾಗಿ ಕಲೆಕ್ಟರ್‌ನ ಅಧೀನಕ್ಕೆ ಒಳಪಟ್ಟಿರುತ್ತದೆ. ತಾಲೂಕು ಮುನಿಸಿಪಾಲಿಟಿಗಳ ಉಪಾಧ್ಯಕ್ಷರು ಅಸಿಸ್ಟೆಂಟ್ ಕಲೆಕ್ಟರ್ ಆಗಿರುತ್ತಾರೆ. ಇವರಲ್ಲದೆ ಮಾಮಲೇದಾರ್, ಇಂಜಿನಿಯರ್, ಡಾಕ್ಟರ್, ಡೆಪ್ಯೂಟಿ ಇನ್ಸ್‌ಪೆಕ್ಟರ್ ಮುಂತಾದ ಸರ್ಕಾರಿ

ಅಧಿಕಾರಿಗಳು ಇದ್ದರು. ಇದು ಸರ್ಕಾರೇತರ ಅಧಿಕಾರಿಗಳು ಮತ್ತು ಊರಿನ ಗಣ್ಯ ವ್ಯಕ್ತಿಗಳನ್ನು ಒಳಗೊಂಡಿರುತ್ತದೆ. ಈ ಸಂಸ್ಥೆಗಳಿಗೆ ಆದಾಯ ಮೂಲವಾಗಿ ಅಂದರೆ ಪುರಸಭೆಗಳಿಗೆ ಲೋಕಲ್‌ಫಂಡ್‌ಗಳಿಗೆ ಆದಾಯದ ಮೂಲವೆಂದರೆ ಮನೆ ತೆರಿಗೆ, ನೀರಿನ ಮೇಲಿನ ತೆರಿಗೆ, ವಸ್ತುಗಳ ಮಾರಾಟದ ಮೇಲಿನ ತೆರಿಗೆ, ಮಾರುಕಟ್ಟೆಗಳ ಮೇಲಿನ ತೆರಿಗೆ, ನಗರ ಪ್ರದೇಶಗಳಲ್ಲಿ ಯಾವುದೇ ಉದ್ಯೋಗದಲ್ಲಿರುವವರ ವೃತ್ತಿ ತೆರಿಗೆಯನ್ನು ನೀಡಬೇಕಾಗುತ್ತಿತ್ತು. ವೃತ್ತಿ ತೆರಿಗೆಯನ್ನು ಅವರವರ ಉದ್ಯೋಗ ಅಥವಾ ಸಂಬಳದ ಅಧಿಕಾರದ ಮೇಲೆ ವಿಧಿಸಲಾಗುತ್ತಿತ್ತು. ಶಾಲಾಶುಲ್ಕ, ಪಟ್ಟಣಗಳ ನೈರ್ಮಲ್ಯೀಕರಣ ಮತ್ತು ಸಾರಿಗೆ ನಿರ್ವಹಣೆಗಾಗಿ ವಿವಿಧ ಮೂಲಗಳಿಂದ ಸಂಗ್ರಹಿಸುವ ಹಣ ಮುಂತಾದವು ಆದಾಯದ ಮೂಲಗಳಾಗಿದ್ದವು.

ಪ್ರತಿಯೊಂದು ಜಿಲ್ಲೆಯು ಇಡೀ ಜಿಲ್ಲೆಗಾಗಿ ಒಂದು ಡಿಸ್ಟ್ರಿಕ್ಟ್ ಲೋಕಲ್‌ಫಂಡ್ ಕಮಿಟಿಯು ಆಯಾ ತಾಲೂಕಿನ ತಾಲೂಕು ಲೋಕಲ್‌ಫಂಡ್ ಕಮಿಟಿಗಳು ಇರುತ್ತವೆ. ಜಿಲ್ಲಾ ಲೋಕಲ್‌ಫಂಡ್‌ನ ಅಧ್ಯಕ್ಷನು ಕಲೆಕ್ಟರನೇ ಆಗಿರುತ್ತಾನೆ. ಇಲ್ಲಿನ ಸದಸ್ಯರನ್ನು ನೇಮಿಸುವ ಅಧಿಕಾರ ಕಲೆಕ್ಟರ್ ಹೊಂದಿರುತ್ತಾನೆ.[೬೪]

ಪುರಸಭೆಗಳಿಗೆ ಆದಾಯದ ಮೂಲದಂತೆ ಖರ್ಚಿನ ಮೂಲಗಳಿದ್ದವು. ಸಾರ್ವಜನಿಕ ಕೆಲಸಕಾರ್ಯಗಳಿಗೆ ಬಂಡವಾಳವನ್ನು ವಿನಿಯೋಗಿಸಬೇಕಾಗಿತ್ತು. ರಸ್ತೆಗಳ ನಿರ್ಮಾಣ, ನಿರ್ವಹಣೆ ಮತ್ತು ದುರಸ್ತಿ ಪ್ರಮುಖವಾದದ್ದು. ರಸ್ತೆಗಳನ್ನು ಉತ್ತಮ ಸ್ಥಿತಿಯಲ್ಲಿರುವಂತೆ ನೋಡಿಕೊಳ್ಳುವುದು ಪುರಸಭೆಗಳ ಕರ್ತವ್ಯವಾಗಿತ್ತು. ಅದೇ ರೀತಿ ಆಸ್ಪತ್ರೆಗಳು, ಮಾರುಕಟ್ಟೆಗಳು, ಶಾಲೆಗಳು ಮುಂತಾದವುಗಳ ನಿರ್ವಹಣೆ, ಚರಂಡಿಗಳ ನಿರ್ಮಾಣ ಮತ್ತು ನಿರ್ವಹಣೆ ನೀರಿನ ಪೂರೈಕೆ ಮಾಡುವುದು ಮುಂತಾದವುಗಳಿಗೆ ಪುರಸಭೆಯ ಹಣವನ್ನು ಉಪಯೋಗಿಸಲಾಗುತ್ತಿತ್ತು. ಈ ಉದ್ದೇಶಕ್ಕಾಗಿಯೇ ಸಾರ್ವಜನಿಕ ಕೆಲಸಕಾರ್ಯಗಳ ಇಲಾಖೆಗಳು ಆರಂಭಗೊಂಡವು. ಶಿಕ್ಷಣ ಸಂಸ್ಥೆಗಳ ನಿರ್ವಹಣೆ, ಉದ್ಯೋಗಿಗಳಿಗೆ ಸಂಬಳವನ್ನು ನೀಡುವುದು, ಸರ್ಕಾರಿ ಆಸ್ಪತ್ರೆಗಳ ನಿರ್ವಹಣೆ, ಔಷಧಿಗಳ ಪೂರೈಕೆ, ಆರೋಗ್ಯ ಇಲಾಖೆಯ ಸ್ಥಾಪನೆ, ಶುಚಿತ್ವವನ್ನು ಕಾಪಾಡುವುದು. ವಿದ್ಯುತ್‌ನ ಪೂರೈಕೆ ಮುಂತಾದವು ಪುರಸಭೆಯ ಬೊಕ್ಕಸವನ್ನು ಖಾಲಿ ಮಾಡುತ್ತಿದ್ದವು. ಈ ಕಾರಣಗಳಿಂದಾಗಿ ಸ್ಥಳೀಯ ಶ್ರೀಮಂತ ವರ್ತಕರು, ಭೂಮಾಲೀಕರು, ಲೇವಾದೇವಿದಾರರು ಮುಂತಾದವರನ್ನು ಪುರಸಭೆಯ ಆಡಳಿತದಲ್ಲಿ ಭಾಗಿಗಳಾಗುವಂತೆ ಮಾಡಿ ಲಾಭ-ನಷ್ಟದಲ್ಲಿ ಅವರನ್ನು ಪಾಲುದಾರರನ್ನಾಗಿ ಮಾಡಲಾಯಿತು ಎಂಬುದಾಗಿ ತಿಳಿದುಬರುತ್ತದೆ. ಪುರಸಭೆಗಳ ಕೆಲಸಕಾರ್ಯಗಳು ಕೆಲವೊಂದು ಸಂದರ್ಭದಲ್ಲಿ ಹಣಕಾಸಿನ ತೊಂದರೆಗಳಿಂದಾಗಿ ನಿಧಾನಗತಿಯಲ್ಲಿ ನಡೆಯುತ್ತಿದ್ದವು.[೬೫] ಇದೇ ರೀತಿ ಮೈಸೂರಿನ ಆದಾಯದ ಮೂಲವು ಅತಿ ಹೆಚ್ಚಿನ ಮೊತ್ತವನ್ನು ಒಳಗೊಂಡಿತ್ತು ಎಂಬುದಾಗಿ ತಿಳಿದುಬರುತ್ತದೆ.

ಹೀಗಾಗಿ ಆಡಳಿತದಲ್ಲಿ ಪ್ರಧಾನ ವ್ಯಕ್ತಿಯಾಗಿ, ಕಲೆಕ್ಟರನು ಗುರುತಿಸಿಕೊಂಡಿರುತ್ತಾನೆ. ಪ್ರತಿಯೊಂದು ವಿಭಾಗವೂ ಕಲೆಕ್ಟರನ ಅಧೀನದಲ್ಲಿರುತ್ತಿತ್ತು ಎಂಬುದಾಗಿ ತಿಳಿಯಬಹುದು. ಹಾಗಾಗಿ ಆಡಳಿತದ ಸುಗಮಕ್ಕಾಗಿ ಸಹಾಯಕ ಅಧಿಕಾರಿಗಳು ಸಹ ದಕ್ಷತೆಯಿಂದ ಕಾರ್ಯ ನಿರ್ವಹಿಸುತ್ತಿದ್ದರೆಂಬುದು ತಿಳಿದುಬರುತ್ತದೆ. ಇಲ್ಲಿ ಪ್ರಮುಖ ಹುದ್ದೆಗಳೆಲ್ಲವೂ ಆಂಗ್ಲ ಅಧಿಕಾರಿಗಳಾಗಿದ್ದರೆ, ಇತರೇ ಹುದ್ದೆಗಳು ಸ್ಥಳೀಯರಿಗೆ ಮೀಸಲಾಗಿದ್ದು, ಅವರ ಮೂಲಕ ದಕ್ಷ ಆಡಳಿತ ನಿರ್ವಹಿಸುತ್ತಾರೆಂಬುದಾಗಿ ಗುರುತಿಸಬಹುದು.

**ಭೂ ಪರಿಸರ**

ಕರ್ನಾಟಕವು ಭೌಗೋಳಿಕವಾಗಿ ಬೇರೆ ಬೇರೆ ಪರಿಸರವನ್ನು ಹೊಂದಿದೆ. ಭೂಮಿಯಲ್ಲಿ ಇರುವಂತಹ ನದಿಗಳು, ಬೆಟ್ಟಗುಡ್ಡಗಳು, ಖನಿಜ-ಸಂಪತ್ತು, ಅರಣ್ಯ, ಬೆಳೆಗಳು, ವಾತಾವರಣ ಇವುಗಳೆಲ್ಲವೂ ಸಹ ಪರಿಸರ ವ್ಯಾಪ್ತಿಗೆ ಬರುವಂತಹ ಅಂಶಗಳಾಗಿವೆ. ಗ್ಯಾಸೆಟಿಯರ್‌ಗಳ ರಚನೆಯ ಮೊದಲ ಅಧ್ಯಾಯದಲ್ಲಿ ಭೌಗೋಳಿಕತೆಯನ್ನೇ ವಿವರಿಸಿರುತ್ತಾರೆ. ಯಾವುದೇ ನೈಸರ್ಗಿಕ ಸಂಪತ್ತುಗಳಿಲ್ಲದೆ ಆ ದೇಶಕ್ಕೆ ಸ್ಥಾನಮಾನವು ಸಿಗುವುದಿಲ್ಲ. ಅಂದರೆ ಒಂದು ದೇಶದ ಆರ್ಥಿಕ ಸ್ಥಿತಿಗತಿ ಇತ್ಯಾದಿ ಬಗ್ಗೆ ತಿಳಿಯಬೇಕಾದರೆ ನೈಸರ್ಗಿಕ ಸಂಪನ್ಮೂಲಗಳು ಸಹ ಪರಿಗಣನೆಗೆ ಬರುತ್ತವೆ. ಇದೇ ಉದ್ದೇಶದಿಂದ ವಸಾಹತುಶಾಹಿಗಳು ಇಲ್ಲಿನ ಪ್ರಾಂತ್ಯಗಳ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು. ಇಲ್ಲಿನ ಸಂಪತ್ತನ್ನು ಕೊಳ್ಳೆ ಹೊಡೆಯುವುದೇ ಇಲ್ಲಿನ ಉದ್ದೇಶವಾಗಿತ್ತು ಎಂಬುದನ್ನು ಸಹ ಗ್ಯಾಸೆಟಿಯರ್ ಸೂಚಿಸುತ್ತದೆ. ಹೀಗಾಗಿ ವಸಾಹತುಕಾಲೀನ ಐದು ಪ್ರಾಂತ್ಯಗಳ ನೈಸರ್ಗಿಕ ಸಂಪತ್ತು ಯಾವ ರೀತಿ ಇತ್ತು, ಇವುಗಳಿಂದ ವಸಾಹತುಶಾಹಿಗಳಿಗೆ ಯಾವ ರೀತಿ ಪ್ರಯೋಜನ ಪಡೆದರೆಂಬುದು ತಿಳಿಯುವುದು ಮುಖ್ಯವಾಗಿರುತ್ತದೆ. ಮೈಸೂರು ಭೂ ಪರಿಸರಕ್ಕೆ ಬಂದಾಗ ಇಲ್ಲಿನ ನೈಸರ್ಗಿಕ ಸಂಪತ್ತು ಹೇರಳವಾಗಿತ್ತು ಎಂಬುದಾಗಿ ಗ್ಯಾಸೆಟಿಯರ್‌ಗಳಲ್ಲಿ ದಾಖಲಿಸುತ್ತಾರೆ. ಅಲ್ಲದೆ ನೈಸರ್ಗಿಕ ಖನಿಜಗಳು ಅಪಾರವಾಗಿತ್ತು. ಮೈಸೂರಿನ ಪ್ರಾಂತ್ಯದಲ್ಲಿ ನೈಸರ್ಗಿಕ ಸಂಪತ್ತು ಅಪಾರವಾಗಿತ್ತು ಎಂಬುದಾಗಿ ತಿಳಿದುಬರುತ್ತದೆ. ಪಾಶ್ಚಾತ್ಯರು ಮೈಸೂರಿನಲ್ಲಿ ಪ್ರಾಂತ್ಯವನ್ನು 'ಫಾರೆಸ್ಟ್ ಕಂಟ್ರಿ' ಅಥವಾ 'ಅರಣ್ಯದೇಶ'ವೆಂದು ಪರಿಗಣಿಸುತ್ತಿದ್ದರು. ಇದು ೨೯,೩೦೫ ಚ.ಮೈಲಿ ವಿಸ್ತೀರ್ಣದಲ್ಲಿ ೨,೯೨೫ರಷ್ಟು ಚದರ ಮೈಲಿ ಅರಣ್ಯದಿಂದ ಕೂಡಿತ್ತು. ಅಲ್ಲದೆ ಇಲ್ಲಿನ ಪ್ರಮುಖ ನದಿಗಳೆಂದರೆ ಕೃಷ್ಣ(೧೧,೦೩೧), ಕಾವೇರಿ(೯,೪೮೬), ನಾರ್ತ್‌ಪೆನ್ನೂರ್(೨,೨೪೦), ಸೌತ್ ಪೆನ್ನೂರ್(೧,೨೮೦), ಪಾಲರ್(೧,೫೪೧), ಶರದಾವತಿ(ಶರಾವತಿ) ೧,೦೩೬, ವೆಸ್ಟ್ ಕೆಲಿಸ್ಟ್‌ಲಿವರ್(೧,೮೮೧) ಚದರ್ ಮೈಲು ಹೊಂದಿದ್ದವು. ಜೊತೆಗೆ ತುಂಗಾಭದ್ರವು ಇಲ್ಲಿಯೇ ಹರಿಯುತ್ತಿತ್ತು. ೧೮೯೩ರಲ್ಲಿ ವಾತಾವರಣವನ್ನು ಅಳೆಯುವ ವಿಭಾಗವು ಮೈಸೂರಿನಲ್ಲಿ ಸ್ಥಾಪನೆಯಾಯಿತು. ಇಲ್ಲಿ ೧೫೧ ಚದರ ಮೈಲು ಮಳೆಯಾಗುತ್ತದೆ ಎಂದಿದ್ದಾರೆ. ಎಚ್.ಎಫ್. ಬ್ಲಾಂಡ್‌ಫೋರ್ಡ್ಸ್ ಇವರು ಮಳೆಗಾಲದ ಕುರಿತು ಹೆಚ್ಚಿನ ಮಾಹಿತಿ ನೀಡುತ್ತಾರೆ. ಅವರ ಪ್ರಕಾರ ಮೈಸೂರು, ಮದ್ರಾಸ್, ದಖ್ಖನ್ ಮತ್ತು ಹೈದರಾಬಾದ್‌ನಲ್ಲಿ ಮಳೆಯು ಹೆಚ್ಚಾಗಿ ಬೀಳುತ್ತದೆ ಎಂದು ಅಭಿಪ್ರಾಯಪಡುತ್ತಾರೆ. ಇವರ ಪ್ರಕಾರ ಮೈಸೂರು ಪ್ರಾಂತ್ಯದಲ್ಲಿ ೬೬, ಮಲಬಾರ್, ಕೊಡಗಿನಲ್ಲಿ ೭೯, ಕರ್ನಾಟಿಕ್ ೬೭ ಎಂದು ವಿವರಿಸುತ್ತಾರೆ. ಅಲ್ಲದೆ ೫೦ ವರ್ಷಗಳಿಂದ ಬೀಳುವ ಮಳೆಯ ಪ್ರಮಾಣ ವಿವರಿಸಿರುತ್ತಾರೆ.[೭೬] ಸಾಮಾನ್ಯವಾಗಿ ೨೫.೯ ಎಂದರೆ ಹೆಚ್ಚು-ಕಡಿಮೆ ೧೫.೩ರಲ್ಲಿ ಮಳೆ ಇತ್ತು. ೭೬ ಅರಣ್ಯಪ್ರದೇಶದಲ್ಲಿ ಗಂಧ, ಬೀಟೆ ಇನ್ನಿತರೆ ಮರಗಳು ಹೆಚ್ಚು ಇತ್ತು ಹಾಗೂ ಖನಿಜಸಂಪತ್ತು ಹೆಚ್ಚು ಇತ್ತು. ಕೋಲಾರದಲ್ಲಿನ ಚಿನ್ನವು ದೇಶದಲ್ಲಿಯೇ ಹೆಸರುವಾಸಿಯಾಗಿತ್ತು.[೭೭]

ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ಸಹ ಅರಣ್ಯ ಪ್ರದೇಶವು ಅಪಾರವಾಗಿತ್ತು. ಇದೊಂದು ಎರೆ ಭೂಮಿಯಾಗಿತ್ತು. ಮಳೆಯ ಪ್ರಮಾಣವು ೫ರಿಂದ ೪೩ ಇಂಚುವರೆಗೆ ಆಗುತ್ತದೆ. ಸರಾಸರಿ ೨೪

ಇಂಚು ಇತ್ತು. ಇಲ್ಲಿ ಕಬ್ಬಿಣವು ಹೆಚ್ಚು ದೊರೆಯುತ್ತದೆ. ವಾತಾವರಣ ಹಿತಕರವಾದದ್ದು ಎಂಬುದಾಗಿ ತಿಳಿಯುತ್ತದೆ.[೭೮] ಪ್ರಮುಖ ನದಿಗಳೆಂದರೆ ಕೃಷ್ಣ, ಮಲಪ್ರಭಾ, ಘಟಪ್ರಭಾಗಳಾಗಿದ್ದವು. ಮದ್ರಾಸ್ ಕರ್ನಾಟಕ ಬಳ್ಳಾರಿಯಲ್ಲಿ ವಾತಾವರಣವು ಒಣ ಹವೆಯಿಂದ ಕೂಡಿತ್ತು. ಪ್ರಮುಖ ನದಿ ತುಂಗಭದ್ರವಾಗಿತ್ತು. ಹಗ್ಗಲಿ, ಇಂದ್ರಿ, ಪೆನ್ನಾರ್ ಮತ್ತು ಚಿತ್ರವತಿ ಪ್ರಮುಖವಾಗಿತ್ತು. ಮಳೆಯು ಸಹ ಇಲ್ಲಿ ಅಸ್ತವ್ಯಸ್ತದಿಂದ ಕೂಡಿತ್ತು. ೧೮೫೪ರಿಂದ ೧೮೭೦ರವರೆಗಿನ ೧೬ ವರ್ಷಗಳ ಮಳೆಗಳ ವಿವರಣೆ ನೀಡಿರುತ್ತಾರೆ. ೧೩.೨ರಿಂದ ೨೧.೬ರ ವರೆಗೆ ಇಂಚು ಮಳೆಯ ಪ್ರಭಾವವಿರುತ್ತದೆ. ಮಣ್ಣು ಕಪ್ಪು-ಕೆಂಪು ಮಿಶ್ರಿತವಾದದ್ದು. ಕಬ್ಬಿಣ ಇಲ್ಲಿ ಪ್ರಧಾನವಾಗಿ ಸಿಗುತ್ತದೆ. ಅಲ್ಲದೆ ಒಳ್ಳೆಯ ಗುಣಮಟ್ಟದ್ದು, ಜೊತೆಗೆ ಸಾಮ್ರಾಜ್ಯದ ಪರ್ವತಗಳಿಂದ ಕೂಡಿದ ಕಲ್ಲುಗಳಿವೆ. ಉದಾಹರಣೆಗೆ ಮ್ಯಾಂಗನೀಸ್ ಇತ್ಯಾದಿ ಸ್ವಲ್ಪ ಪ್ರಮಾಣದಲ್ಲಿದೆ. ಪ್ರಾಣಿಸಂಪತ್ತನ್ನು ನೋಡಿದರೆ ಚಿರತೆ ಹೆಚ್ಚು ಇದೆ.[೭೯] ಹುಲಿ ಕಡಿಮೆ. ನರಿ-ತೋಳ ಮತ್ತು ಕರಡಿಗಳು ಹೆಚ್ಚು ಇವೆ. ದಕ್ಷಿಣ ಕನ್ನಡದಲ್ಲಿ ಅರಣ್ಯ ಸಂಪತ್ತು ಹೆಚ್ಚು. ಜೊತೆಗೆ ಇಲ್ಲಿನ ಮಳೆಯು ೧೮೭೦-೮೯ರ ಹತ್ತು ವರ್ಷದ ಪ್ರಮಾಣವು ೧೪೧.೮೭ರಂತೆ ಕಡಿಮೆ, ೯೮.೯೯ ಇಂಚು ಇರುತ್ತದೆ.[೮೦]

ಹೈದರಾಬಾದ್‌ನ ವಿಸ್ತೀರ್ಣ ೮೨.೬೯೮ ಚದರ ಮೈಲಿ ಇತ್ತು. ಇಲ್ಲಿನ ಪ್ರಮುಖ ನದಿಗಳೆಂದರೆ ವರದಾ ನದಿ ಹಾಗೂ ಗೋದಾವರಿ ನದಿಗಳು. ಕಪ್ಪು ಬಣ್ಣವನ್ನು ಹೊಂದಿರುವ ಭೂಮಿ ಖನಿಜ ಉತ್ಪನ್ನಗಳಿಂದ ಡೈಮಂಡ್ ಮತ್ತು ಚಿನ್ನವನ್ನೊಳಗೊಂಡಿತ್ತು. ಆದರೆ ಈಗ ಸಿಗುತ್ತಿಲ್ಲವೆಂದು ಕಬ್ಬಿಣ ಹೆಚ್ಚಾಗಿ ದೊರೆಯುತ್ತದೆ. ಅಲ್ಲದೆ ವಾತಾವರಣವು ಚೆನ್ನಾಗಿದೆ ಎಂದು ಇಂಪೀರಿಯಲ್ ಗ್ಯಾಸೆಟಿಯರ್‌ನಲ್ಲಿ ದಾಖಲಿಸಿರುತ್ತಾರೆ. ವಾರ್ಷಿಕ ಮಳೆಯ ಪ್ರಮಾಣ ೩೦ರಿಂದ ೩೨ ಇಂಚು ಬೀಳುತ್ತದೆ ಎಂದು ತಿಳಿದುಬರುತ್ತದೆ. ೧೯೦೧ರಲ್ಲಿ ೩೨ ಇಂಚು ಮಳೆ ಇತ್ತು, ಆದರೆ ೧೯೦೦ರಲ್ಲಿ ಕೇವಲ ೧೫ ಇಂಚು ಇದೆ ಎಂದು ತಿಳಿಸುತ್ತಾರೆ. ಹೀಗಾಗಿ ಇಲ್ಲಿ ಮಳೆ ಅನಿಶ್ಚಿತತೆಯಿಂದ ಕೂಡಿರುತ್ತದೆ.[೮೧]

ಕೊಡಗಿನಲ್ಲಿ ಅರಣ್ಯ ಸಂಪತ್ತು ಅಪಾರವಾಗಿತ್ತು, ರಿಕ್ಟರ್ ಗ್ಯಾಸೆಟಿಯರ್‌ನಲ್ಲಿ ಕೊಡಗು ಅರಣ್ಯ ದಿಂದಲೇ ಆವೃತವಾಗಿದೆ ಎಂದು ಅಭಿಪ್ರಾಯಪಡುತ್ತಾರೆ. ಇಲ್ಲಿನ ಪ್ರಮುಖ ನದಿಗಳೆಂದರೆ ಕಾವೇರಿ ಮತ್ತು ಹಾರಂಗಿಯಾಗಿತ್ತು. ಇಲ್ಲಿನ ಪ್ರದೇಶವು ೧,೫೮೦ ಚದರ ಮೈಲು ವಿಸ್ತೀರ್ಣ ಹೊಂದಿದೆ. ಇಡೀ ದೇಶವೇ ಗಿಡಸೀಮೆಯಾಗಿದೆ ಎಂದೇ ಇ ಮಾರ್‌ಡೆನ್ಸ್ ಸಹ ಇದೇ ಅಭಿಪ್ರಾಯಪಡುತ್ತಾರೆ.[೮೨] ೧೮೬೩ರಿಂದ ೧೮೭೫ರ ೧೩ ವರ್ಷಗಳಿಂದ ಇಲ್ಲಿನ ವಾರ್ಷಿಕ ಮಳೆಯು ೧೨೩.೨೧ ಇಂಚುಗಳು ಬೀಳುತ್ತದೆ. ವಾತಾವರಣ ತಂಪು ಹಾಗೂ ಎತ್ತರವಾದ ಪರ್ವತಗಳಿಂದ ಕೂಡಿತ್ತು ಎಂದಿದ್ದಾರೆ.[೮೩]

ಹೀಗಾಗಿ ವಸಾಹತುಶಾಹಿಗಳು ಒಂದಲ್ಲಾ ಒಂದು ನೈಸರ್ಗಿಕ ಸಂಪತ್ತು ಅಧಿಕವಿದ್ದ ಕಡೆ ಅವರ ಆಡಳಿತದ ನೇರ ಹಿಡಿತವಿದ್ದೂ, ಹೀಗಾಗಿ ಇವುಗಳು ಸಹ ಅವರ ನೇರ ಆಡಳಿತಕ್ಕೆ ಸಹ ಒಂದು ಕಾರಣವೆನ್ನಬಹುದು. ನೈಸರ್ಗಿಕ ಸಂಪತ್ತು ಮೈಸೂರು, ಕೊಡಗು, ದಕ್ಷಿಣ ಕನ್ನಡ, ಮುಂಬೈಯಲ್ಲಿತ್ತು. ಆದರೆ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಹೆಚ್ಚಿಲ್ಲ ಎಂಬುದು ಗಮನಿಸತಕ್ಕಂತಹ ಅಂಶ.

**ಆರ್ಥಿಕತೆ:** ಆರ್ಥಿಕತೆ ಕುರಿತು ಅಧ್ಯಯನ ಮಾಡುವಾಗ ಜನವರ್ಗ, ಆಡಳಿತಪ್ರವೃತ್ತಿ, ಅವುಗಳ ದುಡಿಮೆ, ಇನ್ನಿತರ ಪ್ರಮುಖ ವಿಚಾರಗಳು ಕಂಡುಬರುತ್ತದೆ. ಅರ್ಥವ್ಯವಸ್ಥೆ ರೂಪುಗೊಳ್ಳುವಿಕೆಯಲ್ಲಿ ಆಯಾ ಪ್ರದೇಶದ ನೈಸರ್ಗಿಕ ಸಂಪತ್ತು, ಮಾನವ ಸಂಪನ್ಮೂಲ, ವ್ಯಾಪಾರ ಚಟುವಟಿಕೆಗಳು, ಸಾರಿಗೆಸಂಪರ್ಕ, ಆಮದು-ರಫ್ತು, ತೆರಿಗೆಗಳು, ವರ್ತಕಸಂಘಗಳು ಹಾಗೂ ಇನ್ನಿತರ ಚಟುವಟಿಕೆಗಳು ನೇರವಾಗಿ ಭಾಗಿಯಾಗುತ್ತವೆ. ಅರ್ಥವ್ಯವಸ್ಥೆಯ ಚಟುವಟಿಕೆಯು ಕೃಷಿ ಆರ್ಥಿಕತೆಗೆ ಹಾಗೂ ಕೈಗಾರಿಕೆಗಳಿಗೆ ಪೂರಕವಾಗಿ ಕಾಣಿಸಿಕೊಂಡಿತ್ತು. ರಾಜ್ಯದ ಅರ್ಥವ್ಯವಸ್ಥೆಯಲ್ಲಿ ಜಿಲ್ಲಾಡಳಿತ ಭರಿಸದ ಅರ್ಥವ್ಯವಸ್ಥೆ ನಿರ್ಣಯ ಪಾತ್ರವನ್ನು ವಹಿಸುತ್ತದೆ.

ಆರ್ಥಿಕವ್ಯವಸ್ಥೆಯು ದಿಢೀರನೆ ಆದ ಪರಿವರ್ತನೆ ಅಲ್ಲ. ಏಕೆಂದರೆ ಪ್ರಾಚೀನ ಕಾಲದಿಂದಲೂ ಆರ್ಥಿಕಮಟ್ಟವು ಏರುಪೇರುಗಳಿಂದ ಕೂಡಿತ್ತು. ಆದರೆ ಆಧುನಿಕ ಕಾಲಘಟ್ಟದಲ್ಲಿ ಹೊಸ ಬದಲಾವಣೆಗಳು ಎಲ್ಲಾ ವರ್ಗಗಳಲ್ಲಿಯೂ ಕಾಣಿಸಿಕೊಂಡದ್ದು ಪ್ರಮುಖ ಸಂಗತಿಯಾಗಿ ಪರಿಗಣಿಸಬಹುದು. ಇದರಿಂದ ಹಲವು ಕ್ಷೇತ್ರಗಳು ಶೀಘ್ರಗತಿಯಲ್ಲಿ ಪರಿಣಾಮಕಾರಿ ಪರಿವರ್ತನೆ ಹೊಂದಿದವು. ಜೊತೆಗೆ ಬೃಹತ್‌ಗಾತ್ರದ ಕೈಗಾರಿಕೆಗಳು ಮತ್ತು ಆಡಳಿತವು ಕಾರಣವೆನ್ನಬಹುದು. ಹೀಗಾಗಿ ಆರ್ಥಿಕತೆಯ ಕ್ಷೇತ್ರವು ವಿಶಾಲವಾದದ್ದು. ಅವುಗಳನ್ನು ಮುಖ್ಯವಾಗಿ ಬೆಳವಣಿಗೆಯ ಮೂಲಕ, ವ್ಯಾಪಾರ-ವಾಣಿಜ್ಯ, ಸಾರಿಗೆಸಂಪರ್ಕ, ಕೈಗಾರಿಕೆಗಳ ಸ್ಥಾಪನೆಗಳೆಂದು ಕಂಡುಕೊಳ್ಳಬಹುದಾಗಿದೆ.

ಆಂಗ್ಲರ ಆಡಳಿತದಲ್ಲಿ ಅನೇಕ ಕಡೆಗಳಲ್ಲಿ ವ್ಯಾಪಾರ ಚಟುವಟಿಕೆಗಳು ಬಿರುಸಿನಿಂದ ನಡೆಯತೊಡಗಿದವು. ವ್ಯಾಪಾರ ಸಾಗಣಿಕೆಯ ದೃಷ್ಟಿಯಿಂದಲೂ ಸಾರಿಗೆ ರಸ್ತೆಗಳ ನಿರ್ಮಾಣ, ರೈಲು ಮಾರ್ಗಗಳ ನಿರ್ಮಾಣ, ನದಿ ಮತ್ತು ಸಮುದ್ರಗಳ ಬಳಕೆಯು ವ್ಯಾಪಕವಾಗಿ ನಡೆದವು.

ರೈತರ ಮತ್ತು ಮಧ್ಯವರ್ತಕರ ಮಧ್ಯೆ ಕೊಂಡಿಗಳಾಗಿ ವ್ಯವಹರಿಸುವ ಏಜೆಂಟರುಗಳು ಅಥವಾ ಲೇವಾದೇವಿಗಳ ವರ್ಗವೊಂದು ಹುಟ್ಟಿಕೊಂಡಿತು. ಜೊತೆಗೆ ಸರ್ಕಾರವು ನೇರವಾಗಿ ಇಲ್ಲಿನ ಜನರೊಂದಿಗೆ ಸಂಪರ್ಕ ಇಟ್ಟುಕೊಳ್ಳುವಂತೆ ತನ್ನ ಸರ್ಕಾರಿ ಅಧಿಕಾರಿಗಳನ್ನು ರೈತರಿಗೆ ಬೆಳೆ ಬೆಳೆಯಲು, ಸಾಲಸೌಲಭ್ಯ ಪ್ರೋತ್ಸಾಹ ನೀಡಲು, ಕೃಷಿ ಉಪಕರಣಗಳನ್ನು ಹಾಗೂ ಸಾಲಗಳನ್ನು ಕಂತುಗಳಾಗಿ ತೀರಿಸಲು ಸಹಾಯಕವಾಗುವಂತೆ ಆರ್ಥಿಕ ತೆರಿಗೆಗಳನ್ನು ಮನ್ನಾ ಮಾಡುವುದರ ಮೂಲಕ ಜಾರಿಗೆ ತಂದರು. ಬ್ರಿಟಿಷರು ಇಲ್ಲಿ ಹತ್ತಿ ಉದ್ಯಮಕ್ಕೆ ಪ್ರೋತ್ಸಾಹ ನೀಡುವುದರ ಮೂಲಕ ಅನೇಕ ಕಾರ್ಖಾನೆಗಳು ಹುಟ್ಟಿಕೊಂಡವು. ಜೊತೆಗೆ ಕಾಫಿ, ಏಲಕ್ಕಿ, ರಬ್ಬರ್ ಮುಂತಾದವುಗಳ ವ್ಯಾಪಾರವೂ ಚುರುಕಿನಿಂದ ಕೂಡಿತ್ತು. ಅನೇಕ ಗೃಹೋಪಯೋಗಿ ಇತರೆ ಕಾರ್ಖಾನೆಗಳನ್ನು ಎಲ್ಲಾ ಕಡೆ ಸ್ಥಾಪಿಸುವುದರ ಮೂಲಕ ಇನ್ನು ರೈಲ್ವೆ ರಸ್ತೆ ಮಾರ್ಗಗಳ ಮೇಲೂ ಪ್ರಭಾವ ಬೀರಿ ಇವುಗಳ ನಿರ್ಮಾಣಕ್ಕೆ ಬೇಕಾದ ರೈಲು ಇಂಜಿನ್‌ಗಳ ಯಂತ್ರೋಪಕರಣಗಳು, ಉಕ್ಕು ಮೊದಲಾದವುಗಳ ನಿರ್ಮಾಣಗಳ ಕಾರ್ಖಾನೆಗಳು ಸ್ಥಾಪಿಸಲ್ಪಟ್ಟವು. ಅನೇಕ ಕಡೆಗಳಲ್ಲಿ ಹೊಸ ರಸ್ತೆಗಳ ನಿರ್ಮಾಣ ಹಾಗೂ ಹಳೆಯ ರಸ್ತೆಗಳ ನಿರ್ಮಾಣಗಳು ಚುರುಕಿನಿಂದ ಕೂಡಿದ್ದವು. ಹೀಗಾಗಿ

ಬ್ರಿಟಿಷರ ಆರ್ಥಿಕ ನೀತಿಯು ಬಹಳ ಚುರುಕಿನಿಂದ ಕೂಡಿತ್ತು. ಇವು ಬಹುಬೇಗ ಆಧುನಿಕ ಪರಿವರ್ತನೆಗೆ ಕಾರಣಗಳಾದವು ಎಂಬುದನ್ನು ಅವರ, ರಫ್ತು ವ್ಯಾಪಾರದ ಮೂಲಕ ತಿಳಿದುಕೊಳ್ಳುವುದರಿಂದ ಗೊತ್ತಾಗುತ್ತದೆ.[೮೪]

**ಆಮದು ಮತ್ತು ರಫ್ತು ವ್ಯಾಪಾರ:** ವಸಾಹತುಕಾಲೀನ ಐದು ಪ್ರತ್ಯೇಕಗಳಲ್ಲಿಯೂ ವಿಶೇಷವಾಗಿ ವಿವಿಧ ಉತ್ಪನ್ನ ಬೆಳೆಗಳಿದ್ದವು. ಕೆಲವೊಂದು ಕಡೆ ವಾಣಿಜ್ಯ ಬೆಳೆಗಳೆಂದರೆ, ಕೆಲವೊಂದು ಕಡೆ ಕೃಷಿ ಬೆಳೆಗಳು. ಗೃಹೋಪಯೋಗಿ ವಸ್ತುಗಳ ನಿರ್ಮಾಣಗಳೆಲ್ಲವೂ ಇದ್ದುದರಿಂದಾಗಿ ಅವುಗಳನ್ನು ಅನೇಕ ಕಡೆಗಳಲ್ಲಿ ರಫ್ತು ಮಾಡಲಾಗುತ್ತಿತ್ತು. ತಮಗೆ ಅಗತ್ಯವಾಗಿ ಬೇಕಾದ ವಸ್ತುಗಳನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು.

ಮುಖ್ಯ ವಸ್ತುಗಳು ಗಂಧ, ಹತ್ತಿ, ಅಡಿಕೆ, ಕಾಫಿಗಳಾಗಿದ್ದವು. ೧೮೮೧ರಿಂದ ೧೮೯೧ರವರೆಗಿನ ವಿವರಣೆಯು ಈ ಹತ್ತು ವರ್ಷಗಳ ವಿವರಣೆ ಕುರಿತು ರೈಸ್‌ರ ಗ್ಯಾಸೆಟಿಯರ್‌ನ್ನು ವಿವರಿಸುತ್ತದೆ. ಮುಖ್ಯ ವಸ್ತುಗಳು ಅಡಿಕೆ, ತೆಂಗಿನಕಾಯಿ, ಜೋಳ, ಕಾಫಿ, ಬೆಲ್ಲ, ಕೊಬ್ಬರಿ ಎಣ್ಣೆ, ಮೆಣಸು, ರಾಗಿ, ಅಕ್ಕಿ, ಭತ್ತ, ರೇಷ್ಮೆ ಬಟ್ಟೆಗಳು, ಸಕ್ಕರೆ, ಅರಿಶಿನ, ತಂಬಾಕು, ತೊಗರಿಬೇಳೆ, ಗೋಧಿ ಇತ್ಯಾದಿ ವಸ್ತುಗಳ ಆಮದು ರಫ್ತುಗಳ ಪ್ರಮಾಣವನ್ನು ಇದು ಒಳಗೊಂಡಿರುತ್ತದೆ. ಇವು ಮದ್ರಾಸ್, ಮುಂಬಯಿಗಳ ಸಂಬಂಧ ಇಟ್ಟುಕೊಂಡಿದ್ದವು. ಸ್ಥಳೀಯವಾಗಿ ಎಲ್ಲಾ ಪ್ರದೇಶಗಳೊಂದಿಗೆ ಸಂಬಂಧ ಇಟ್ಟುಕೊಂಡಿದ್ದವು.[೮೫]

ಮುಂಬಯಿ ಕರ್ನಾಟಕದಲ್ಲಿ ಜೋಳ, ಸಜ್ಜೆ, ಗೋಧಿ, ಕಡಲೆ, ಅಗಸೆ, ಹತ್ತಿಯನ್ನು ಹೊರಗಡೆ ಕಳಿಸುತ್ತಾರೆ. ಜೊತೆಗೆ ವಸ್ತ್ರ, ಬೆಲ್ಲ, ತಂಬಾಕು, ಮೆಣಸಿನಕಾಯಿ ರಫ್ತು ಮಾಡಲಾಗುತ್ತದೆ. ತೇಗ, ಶ್ರೀಗಂಧ, ಯಾಲಕ್ಕಿ, ಮೆಣಸು, ಅಡಿಕೆ, ಗೋಧಿ, ಕಡಲೆ, ಹತ್ತಿ ಮುಂತಾದ ವಸ್ತುಗಳನ್ನು ರತ್ನಗಿರಿ, ಪುಣೆ, ಸೊಲ್ಲಾಪುರ, ಬಳ್ಳಾರಿ, ಮೈಸೂರಿಗೆ ರಫ್ತು ಮಾಡಲಾಗುತ್ತಿತ್ತು. ಬೆಳ್ಳಿ-ಬಂಗಾರಗಳು, ತಾಮ್ರ-ಹಿತ್ತಾಳೆ ಪಾತ್ರೆಗಳು, ಕಾಜಿನ ಬಳೆ, ಕಬ್ಬಿಣದ ಸಾಮಾನು ಮುಂತಾದವುಗಳನ್ನು ಮೈಸೂರು ಇತರ ಕಡೆಗಳಿಂದ ಆಮದು ಮಾಡಿಕೊಳ್ಳುತ್ತಿದ್ದರು ಎಂಬುದಾಗಿ ತಿಳಿದುಬರುತ್ತದೆ.[೮೬] ಅಲ್ಲದೆ ಆಂಗ್ಲರು ಹತ್ತಿಯ ರಫ್ತಿಗಾಗಿ ಕೆನರಾವನ್ನು ವಿಭಜನೆಗೊಳಿಸಿರುವುದು ಇದೇ ಕಾರಣಕ್ಕಾಗಿ ಎಂಬುದಾಗಿ ತಿಳಿಯಬಹುದು. ಮದ್ರಾಸ್ ಪ್ರಾಂತ್ಯದಲ್ಲಿ ಬಳ್ಳಾರಿಯಲ್ಲಿ ಪ್ರಮುಖವಾಗಿ ಜೋಳ, ರಾಗಿ, ಹತ್ತಿ ಪ್ರಧಾನವಾದ ಬೆಳೆಯಾಗಿತ್ತು. ಭತ್ತ, ಕಬ್ಬು, ತೆಂಗಿನಕಾಯಿ, ಎಲೆ, ಅಡಿಕೆ, ತಂಬಾಕು ಇತರ ಬೆಳೆಗಳು ಪ್ರಮುಖವಾಗಿದ್ದವು. ಒಟ್ಟಿನಲ್ಲಿ ೩,೯,೨೦,೦೦೦ ಎಕರೆ ಭೂಮಿಯಲ್ಲಿ ಬೆಳೆಗಳೆಂದರೆ: ಜೋಳ, ರಾಗಿ ೨೬,೮೭,೦೦೦, ಎಣ್ಣೆಬೀಜಗಳು ೧,೦೩,೦೦೦, ತೋಟಗಾರಿಕೆ ಬೆಳೆ ೩೬,೦೦೦, ಹತ್ತಿ, ಕಬ್ಬು, ನೀಲಿ, ೫,೩೭,೦೦೦, ಸಾಗುವಳಿ ಇಲ್ಲಿನ ಭೂಮಿ ೫,೪೧,೦೦೦ ಇತ್ತು ಹೀಗಾಗಿ ಪ್ರಮುಖ ಬೆಳೆ ಜೋಳವಾಗಿತ್ತು.[೮೭]

ದಕ್ಷಿಣ ಕನ್ನಡದಲ್ಲಿ ಪ್ರಮುಖ ಬೆಳೆ ಭತ್ತವಾಗಿತ್ತು. ೭,೪೩,೬೮೦ ವಿಸ್ತೀರ್ಣ ಹೊಂದಿತ್ತು. ತೆಂಗಿನಕಾಯಿ ೨೪,೮೯೪, ಅಡಿಕೆ ೯,೨೪೬ ಇತ್ತು. ತಂಬಾಕು ದಕ್ಷಿಣ ಕನ್ನಡ, ಕಾಸರಗೋಡಿನಲ್ಲಿ ಮಾತ್ರ ಬೆಳೆಯುತ್ತಿದ್ದರು.

ಪ್ರಾಚೀನ ಕಾಲದಿಂದಲೂ ಇಲ್ಲಿನ ವಸ್ತುಗಳು ಗ್ರೀಕ್-ರೋಮ್‌ಗೆ ರಫ್ತು ಆಗಿರುವ ದಾಖಲೆಗಳಿವೆ. ವಸಾಹತುಕಾಲದಲ್ಲೂ ಸಹ ಪ್ರಮುಖ ರಫ್ತು ವಸ್ತುಗಳೆಂದರೆ: ಕಾಫಿ, ಅಕ್ಕಿ, ಭತ್ತ, ಅಡಿಕೆ, ಇಟ್ಟಿಗೆ, ಗಂಧದ

ಕಟ್ಟಿಗೆ, ಎಣ್ಣೆಗಳು, ಉಪ್ಪುಮೀನು, ತಂಬಾಕು ಆಗಿತ್ತು. ಆಮದುಗಳೆಂದರೆ: ಹತ್ತಿತುಂಡುಗಳು, ಉಪ್ಪು, ತಾಮ್ರ, ಎಣ್ಣೆಗಳು, ಕೃಷಿಸಲಕರಣೆಗಳು, ಸಕ್ಕರೆ, ತಾಮ್ರ, ತಂಬಾಕು ಆಗಿತ್ತು. ಭತ್ತವನ್ನು ಮಂಗಳೂರು, ಮೈಸೂರು, ಕೊಡಗಿನಲ್ಲಿ ಹೆಚ್ಚು ಬೆಳೆಯುತ್ತಿದ್ದರು. ಅಕ್ಕಿಯನ್ನು ಸಹ ಇಲ್ಲಿನ ಪ್ರದೇಶಕ್ಕೆ ಸಾಕಾಗಿ ಉಳಿದಂತೆ ಮಲಬಾರ್ ೧/೩ನೇ ಭಾಗದಷ್ಟು ಗೋವಾ ಮತ್ತು ಸಣ್ಣ ಪ್ರಮಾಣದಲ್ಲಿ ವಿದೇಶ ರಾಷ್ಟ್ರಗಳಾದ ಸೌದಿಅರೇಬಿಯಾಕ್ಕೆ ರಫ್ತು ಮಾಡಲಾಗುತ್ತಿತ್ತು. ತೆಂಗಿನಕಾಯಿಯನ್ನು ಎಲ್ಲಾ ಕಡೆ ಬೆಳೆಯುತ್ತಿದ್ದವರು ಕಾಥೇವಾಡ್, ಕಛ್ ಮತ್ತು ಬಾಂಬೆಗಳಿಗೆ ಕಳುಹಿಸುತ್ತಿದ್ದರು. ಅವಲ್ಲದೆ ಹೆಂಚುಗಳನ್ನು ಕಳುಹಿಸುತ್ತಿದ್ದರು. ಶ್ರೀಗಂಧವು ದೊಡ್ಡಪ್ರಮಾಣದಲ್ಲಿ ಮೈಸೂರು, ಕೊಡಗು, ಮಂಗಳೂರು, ಉಡುಪಿಯಿಂದ ಬಾಂಬೆಗೆ ಹೋಗುತ್ತಿತ್ತು.[೮೮]

ವಿದೇಶಗಳಾದ ಯುನೈಟೆಡ್ ಕಿಂಗ್‌ಡಮ್, ಆಸ್ಟ್ರೇಲಿಯಾ, ಫ್ರಾನ್ಸ್, ಜರ್ಮನಿ, ಮಲಬಾರ್‌ಗಳಿಗೆ ಉಪ್ಪು, ಉಪ್ಪಿನ ಮೀನು ರಫ್ತಾಗುತ್ತಿತ್ತು. ಹುರುಳಿ, ತಾಮ್ರ, ಸೀಮೆಎಣ್ಣೆ, ಮುಖ್ಯವಸ್ತುಗಳನ್ನು ಮುಂಬಯಿ, ಗೋವಾದಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು.[೮೯] ಹೈದರಾಬಾದ್ ಭಾಗದ ಸಾಮಾನ್ಯ ಬೆಳೆಗಳೆಂದರೆ ಹತ್ತಿ, ಗೋಧಿ ಪ್ರಮುಖವಾಗಿತ್ತು. ಆದರೆ ಇಂಗ್ಲೆಂಡ್‌ಗೆ ಹತ್ತಿಯನ್ನು ರಫ್ತು ಮಾಡುತ್ತಿದ್ದರು.[೯೦]

ಕೊಡಗಿನಲ್ಲಿ ಪ್ರಮುಖವಾಗಿ ಭತ್ತ(ಅಕ್ಕಿ), ಯಾಲಕ್ಕಿ, ಕಾಫಿ, ಸಿಕೋನಾ ಪ್ರಮುಖ ಬೆಳೆಯಾಗುತ್ತಿತ್ತು. ಇದನ್ನು ಮಲಬಾರ್ ಪ್ರದೇಶಕ್ಕೆ ರಫ್ತು ಮಾಡಲಾಗುತ್ತಿತ್ತು. ದಕ್ಷಿಣ ಕೊಡಗಿನಲ್ಲಿ ಬೆಳೆದ ಭತ್ತವನ್ನು ವಿರಾಜಪೇಟೆ, ಕಿಗ್ಗಟ್ಟುನಾಡಿಗೆ ರಫ್ತು ಮಾಡಲಾಗುತ್ತಿತ್ತು. ಕಾಫಿಯನ್ನು ಕೊಡಗಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಜನರು ಬೆಳೆಯುತ್ತಿದ್ದರೆಂದು ಕೊಡಗಿನ ರಾಜರ ಕಾಲದಲ್ಲಿ ನಾಲ್ಕು ನಾಡಿನಲ್ಲಿ ಸ್ವಲ್ಪಮಟ್ಟಿಗೆ ಬೆಳೆಸುತ್ತಿದ್ದರು. ಆದರೆ ಬ್ರಿಟಿಷರ ಕಾಲದಲ್ಲಿ ಕಾಫಿ ಬೆಳೆಗೆ ಹೆಚ್ಚು ಪ್ರೋತ್ಸಾಹಿಸಿದ್ದರು. ಮೊದಲಿಗೆ ಕೊಡಗಿನಲ್ಲಿ ಬ್ರಿಟಿಷ್ ಕಮಿಷನರ್ ಕ್ಯಾಪ್ಟನ್ ಲಿಹಾರ್ಟ್ ಸಹೋದರರು ೧೮೫೪ನೇ ಇಸವಿಯಲ್ಲಿ ಮಡಿಕೇರಿಯ ಸಮೀಪದ ತೋಟವನ್ನು ಮೇ ಫೌಲರ್ ಎಂಬುವರು ಮೊದಲಿಗೆ ಕಾಫಿ ಬೆಳೆಗೆ ಪ್ರೋತ್ಸಾಹಿಸಿದರು. ಇವರು ಯುರೋಪಿಯನ್ ಆಗಿರುತ್ತಾರೆ. ಟೀ ಸಹ ಇಲ್ಲಿ ಉತ್ತಮವಾಗಿ ಬೆಳೆಯ ಬಹುದೆಂದು ರಾಬರ್ಟ್ ತಿಳಿಸುತ್ತಾರೆ. ಅಲ್ಲದೆ ಸರ್ಕಾರವನ್ನು ೧೮೭೦ರ ನಂತರ ೪ ವರ್ಷಗಳಿಂದ ಒಂದು ಎಕರೆ ಕಾಫಿ ತೋಟದ ಭೂಮಿಗೆ ಒಂದು ಪಾಲು ನಿಗದಿಪಡಿಸುತ್ತಾರೆ ಎಂದು ತಿಳಿದುಬರುವುದರಿಂದ ಸರ್ಕಾರಕ್ಕೆ ಇದರಿಂದ ಒಳ್ಳೆಯ ಆದಾಯ ಇತ್ತೆಂದು ತಿಳಿಯಬಹುದು.[೯೧]

ಈ ಆಮದು-ರಫ್ತುಗಳ ಮೂಲಕವಾಗಿ ಯಾವ, ಯಾವ ಸ್ಥಳದಲ್ಲಿ ಯಾವ, ಯಾವ ವಸ್ತುಗಳನ್ನು ಹೆಚ್ಚಾಗಿ ಬೆಳೆಯುತ್ತಿದ್ದರೆಂಬುದು ಮುಖ್ಯವಾಗಿ ಗುರುತಿಸಬಹುದಾಗಿದೆ. ಈ ಆಮದು ರಫ್ತು ಪ್ರೋತ್ಸಾಹಿಸಲು ವಾಣಿಜ್ಯಮಂಡಳಿಗಳು ಸಾಕಷ್ಟು ಕಂಡುಬಂದ ಬಗ್ಗೆ ಗ್ಯಾಸೆಟಿಯರ್ ವಿವರಿಸುತ್ತದೆ. ಮೈಸೂರಿನಲ್ಲಿ ೧೮೮೧ರಿಂದ ೧೮೯೧ರವರೆಗಿನ ಹತ್ತು ವರ್ಷಗಳ ಆಮದು-ರಫ್ತು ಮೌಲ್ಯಗಳ ಕುರಿತಂತೆ ಹಾಗೂ ಸಾಕಷ್ಟು ಸಂಖ್ಯೆಯಲ್ಲಿ ಬ್ಯಾಂಕಿಂಗ್ ಜಂಟಿ ಆಯೋಗ ಕಂಪನಿ ಇತ್ಯಾದಿಗಳೆಲ್ಲವೂ ಇದ್ದವು. ಮೈಸೂರಿನಲ್ಲಿ ಸುಮಾರು

೧೮೯೪-೯೫ರಲ್ಲಿ ಒಟ್ಟು ೬೨ ಕಂಪನಿಗಳಿದ್ದವು. ಮುಖ್ಯವಾಗಿ ಬ್ಯಾಂಕಿಂಗ್ ಆ್ಯಂಡ್ ಮೇನ್ ಬ್ಯಾಂಕಿಂಗ್ ಆ್ಯಂಡ್ ಇನ್ಶೂರೆನ್ಸ್ ಟ್ರೇಡಿಂಗ್ ಆ್ಯಂಡ್ ಮರ್ಚೆಂಟ್, ಪ್ಲಾಂಟೇಶನ್ ಇತ್ಯಾದಿಗಳಿದ್ದು ಇವೆಲ್ಲವೂ ಇಲ್ಲಿನ ಅಧೀನದಲ್ಲಿದ್ದವು ಎಂಬುದಾಗಿ ತಿಳಿದುಬರುತ್ತದೆ. ಮೈಸೂರಿನ ಎಲ್ಲಾ ಜಿಲ್ಲೆ ಹಾಗೂ ತಾಲೂಕುಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಇದು ಒಳಗೊಂಡಿರುತ್ತದೆ.[೬೨]

**ರಸ್ತೆಮಾರ್ಗಗಳು:** ವ್ಯಾಪಾರ-ವಾಣಿಜ್ಯದ ಅಭಿವೃದ್ಧಿಗೆ ರಸ್ತೆ, ರೈಲು ಮಾರ್ಗಗಳು, ಜಲಮಾರ್ಗಗಳು ಪ್ರಮುಖವಾಗಿ ಉತ್ತಮವಾಗಿರಬೇಕಾಗಿರುತ್ತದೆ. ಆದರೆ ವಸಾಹತುಶಾಹಿಗಳ ಕಾಲದಲ್ಲಿ ಯಾವುದೇ ಸರಿಯಾದ ಮಾರ್ಗಗಳು ಹಳ್ಳಿಗಳಿಗೆ, ಪಟ್ಟಣ ನಗರಗಳಿಗೆ ಇರಲಿಲ್ಲ. ಸಾಮಾನ್ಯವಾಗಿ ಸರಕುಗಳನ್ನು ಊರಿಂದೂರಿಗೆ ಕೊಂಡೊಯ್ಯುವ ಎತ್ತುಗಳು, ಕುದುರೆ ಮತ್ತು ಮನುಷ್ಯರು ತಮ್ಮ ಕಾಲ್ನಡಿಗೆಯಿಂದ ಹೋಗಬೇಕಾಗಿತ್ತು. ಅದು ಸರಿಯಾದ ರಸ್ತೆಗಳಿಲ್ಲದೆ ತಾವು ನಡೆದ ದಾರಿಯೇ ಅವರಿಗೆ ಮಾರ್ಗಗಳಾಗುತ್ತಿದ್ದವು. ಈ ಮಾರ್ಗಗಳು ತಗ್ಗುದಿನ್ನೆಯಾಗಿಯೂ ಹಿರಿದು-ಕಿರಿದಾಗಿಯೂ ಡೊಂಕಾಗಿಯೂ ಇರುತ್ತಿದ್ದವು. ಮಳೆಗಾಲದಲ್ಲಿ ಕೆಸರಾಯಿತೆಂದರೆ ಈ ಮಾರ್ಗಗಳು ಮನುಷ್ಯರಿಗೆ ನಡೆಯಲು ಅಸಾಧ್ಯವಾಗುತ್ತಿತ್ತು. ಈ ಮಾರ್ಗಗಳಲ್ಲಿ ಕಳ್ಳರ ಉಪದ್ರವಕ್ಕೂ ಕೊರತೆ ಇರಲಿಲ್ಲ. ದೂರದ ಪ್ರಯಾಣವೆಂದರೆ ದೂರದೇಶಕ್ಕೆ ಪ್ರವಾಸಕ್ಕೆ ಹೋದಂತೆ ಕಷ್ಟವಾಗುತ್ತಿತ್ತು. ಆದರೆ ಬ್ರಿಟಿಷರ ಆಳ್ವಿಕೆ ಬಂದಾಗ ೧೮೨೦ರ ನಂತರ ಅನೇಕ ರಸ್ತೆಗಳು ನಿರ್ಮಾಣಗೊಂಡವು ಎಂಬುದಾಗಿ ತಿಳಿದುಬರುತ್ತದೆ. ಒಂದು ಮಾರ್ಗವು ನಿಜಾಮನ ರಾಜ್ಯದಿಂದ ಸೊಲ್ಲಾಪುರ, ವಿಜಾಪುರ, ಬಾಗಲಕೋಟೆ, ಬೆಳಗಾವಿಗಳ ಮೂಲಕ ವೆಂಗುರ್ಲೆಗೆ ಪುಣೆಯಿಂದ ಸತಾರ ಕೊಲ್ಲಾಪುರ, ಚಿಕ್ಕೋಡಿ, ಬೆಳಗಾವಿ, ಧಾರವಾಡ, ಶಿರಸಿ, ಶಿಕಾರಿಪುರದ ಮೂಲಕ ಮೈಸೂರಿಗೆ ಪುಣೆಯಿಂದ ಕೋರೆಗಾವ, ತಾಸಗಾವ, ಕಾಗವಾಡಗಳ ಮೂಲಕ ಬೆಳಗಾವಿಗೆ, ಬೆಳಗಾವಿಯಿಂದ ಕಾಗವಾಡ, ಕಲಾದಗಿಗಳ ಮೂಲಕ ವಿಜಾಪುರಕ್ಕೆ ಪಂಡರಾಪುರದಿಂದ ಪುಣೆ, ಸೊಲ್ಲಾಪುರ, ಬಿಜಾಪುರ, ಬಳ್ಳಾರಿ ಮುಂತಾದ ಪಟ್ಟಣಗಳಿಗೆ ಈ ಎಲ್ಲಾ ಮಾರ್ಗಗಳು ತಗ್ಗುದಿನ್ನೆಯಿಂದ ಡೊಂಕಾಗಿ ಇದ್ದವು. ಸೈನಿಕರಿಗೆ ಈ ರಸ್ತೆಗಳು ಬಳಕೆಯಾಗುತ್ತಿದ್ದವು. ೧೮೨೬ರ ಬಳಿಕ ರಸ್ತೆಗಳು ಸ್ವಲ್ಪಮಟ್ಟಿನ ಸುಧಾರಣೆಯನ್ನು ಕಂಡವು. ೧೮೫೦ರಿಂದ ಚಕ್ಕಡಿಗಳ ಮೇಲೆ ಸರಕುಗಳನ್ನು ಸಾಗಿಸಲಾಗುತ್ತಿತ್ತು. ಪ್ರಾವಿನ್ಸಿಯಲ್ ಮಾರ್ಗಗಳು ಮತ್ತು ಲೋಕಲ್ ಫಂಡಿನ ಮಾರ್ಗಗಳೆಂಬ ಎರಡು ಪ್ರಕಾರದ ರಸ್ತೆಗಳಿದ್ದವು. ಪ್ರಾವಿನ್ಸಿಯಲ್ ರಸ್ತೆಗಳು ಹಲವು ಜಿಲ್ಲೆಗಳಲ್ಲಿ ಹಾದು ದೂರದ ಪ್ರದೇಶಗಳಿಗೆ ಹೋಗುತ್ತಿದ್ದವು. ಲೋಕಲ್ ಫಂಡಿನ ಮಾರ್ಗಗಳು ಪ್ರತಿಯೊಂದು ಜಿಲ್ಲೆಗಳಿಗೆ ಹೋಗುತ್ತಿದ್ದವು. ಲೋಕಲ್ ಫಂಡಿನ ಮಾರ್ಗಗಳು ಪ್ರತಿಯೊಂದು ಜಿಲ್ಲೆಯೊಳಗೆ ಇರುತ್ತಿದ್ದವು. ಅವು ಪಕ್ಕದ ಜಿಲ್ಲೆಯ ರಸ್ತೆಗಳೊಂದಿಗೆ ಕೂಡುತ್ತಿದ್ದವು.[೬೩]

ಮೈಸೂರಿನಲ್ಲಿ ರಸ್ತೆಗಳ ನಿರ್ಮಾಣಕ್ಕೆ ೧೮೩೧-೫೬ರ ಅವಧಿಯಲ್ಲಿ ಖರ್ಚು ಮಾಡಿದ ಹಣ ೨೮ $^{೩}/_{೪}$ ಲಕ್ಷ ರೂಪಾಯಿಗಳು. ಈ ಅವಧಿಯಲ್ಲಿ ನಿರ್ಮಾಣವಾದ ರಸ್ತೆಗಳು ಬೆಂಗಳೂರಿನಿಂದ ಎಲ್ಲಾ ಜಿಲ್ಲಾ ಕೇಂದ್ರಗಳಿಗೂ ಸಂಪರ್ಕವನ್ನು ಕಲ್ಪಿಸಲಾಯಿತು. ಒಟ್ಟು ರಸ್ತೆಗಳ ಉದ್ದ ೧೫೯೭ ಮೈಲುಗಳು. ಸೇತುವೆಗಳ

ಸಂಖ್ಯೆ ೩೦೯, ರಸ್ತೆ ಪಕ್ಕದ ನೀರು ಹೋಗಲು ಇರುವ ಚರಂಡಿಗಳ ಸಂಖ್ಯೆ ೧೯೯೮. ಇವೆಲ್ಲಾ ನಿರ್ಮಾಣವಾದುದು ಬ್ರಿಟಿಷರು ಆಡಳಿತವನ್ನು ವಹಿಸಿಕೊಂಡ ಮೇಲೆ ಮತ್ತು ಲೋಕೋಪಯೋಗಿ ಇಲಾಖೆ ಆರಂಭವಾಗುವುದಕ್ಕೂ ಮುಂಚೆ. ಅಂದರೆ ೧೮೫೬ರಲ್ಲಿ ಸಾರ್ವಜನಿಕ ಇಲಾಖೆ ಬಂದ ಮೇಲೆ ಹಲವು ಕಾರ್ಯಗಳು ನಿರ್ಮಾಣವಾದವು. ಅವುಗಳಲ್ಲಿ ಮೈಸೂರಿನ ಬೃಹತ್ ನಾಲ್ಕು ಸೇತುವೆಗಳಿಂದ ಹರಿಹರ, ಸಕಲೇಶಪುರ, ಶಿವಮೊಗ್ಗ, ಬೆಂಕಿಪುರ(ಭದ್ರಾವತಿ) ಪ್ರಮುಖವಾದವು.[೯೪] ಹೀಗಾಗಿ ರಸ್ತೆಗಳ ನಿರ್ಮಾಣದ ಖರ್ಚುವೆಚ್ಚ ಹಾಗೂ ನಿರ್ಮಾಣಗೊಂಡ ಬಗ್ಗೆ ತಿಳಿದುಬರುತ್ತದೆ.

ದಕ್ಷಿಣ ಕನ್ನಡದಲ್ಲಿ ೧೮೯೩ರಲ್ಲಿ ೧,೮೧೧ ಮೈಲು ರಸ್ತೆ ಇತ್ತು. ಇದು ನಾಲ್ಕು ಜಿಲ್ಲೆಗಳಿಗೆ ಸೇರಿದಂತೆ ಮುಖ್ಯ ರಸ್ತೆ ಕ್ಯಾಲಿಕಟ್‌ನಿಂದ ಪುಣೆ, ಮಂಗಳೂರಿಗೆ ೧೩೫ ಮೈಲು. ಕಾಸರಗೋಡು ತಾಲೂಕು ಹೊಸದುರ್ಗ, ಮಂಗಳೂರಿನಿಂದ ಮೈಸೂರು, ಅಲ್ಲಿಂದ ಸಂಪಾಜೆ, ಮಂಗಳೂರು, ಉಡುಪಿ, ಕೊಂಕಣಿಘಾಟ್ ರಸ್ತೆ, ಚಾರ್ಮಾಡಿ ಘಾಟ್‌ವರೆಗೆ ಇದು ನಿರ್ಮಾಣಗೊಂಡ ಕುರಿತು ವಿವರಿಸುತ್ತಾರೆ. ೧೮೮೮ರಿಂದ ೧೯೨೩ರವರೆಗೆ ಕೇವಲ ಮೂರು ರಸ್ತೆಗಳ ವಿವರಣೆ ಇದೆ. ೧೮೯೨-೯೩ರಲ್ಲಿ ೪೩೬ ಮೈಲು ರಸ್ತೆ ಇತ್ತು ಎಂಬುದಾಗಿ ತಿಳಿದು ಬರುತ್ತದೆ.[೯೫] ಕೊಡಗಿನಲ್ಲಿ ಹೊಸ ರಸ್ತೆ ನಿರ್ಮಾಣ ಹಾಗೂ ಹಳೆಯ ರಸ್ತೆಗಳ ದುರಸ್ತಿ ಕಾರ್ಯ ಆರಂಭಗೊಂಡಿದ್ದು ೧೮೩೫ರ ನಂತರ. ೧೮೩೫ರಲ್ಲಿ ಫ್ರೇಸರ್‌ಪೇಟೆ ಕುಶಾಲನಗರದಿಂದ ಮಡಿಕೇರಿಗೆ ೨೦ ಮೈಲಿನಷ್ಟು ಉದ್ದದ ರಸ್ತೆಯ ಕಾಮಗಾರಿ ಆರಂಭಗೊಂಡಿತ್ತು. ೧೮೩೬ರ ಸುಮಾರಿಗೆ ಈ ಕಾಮಗಾರಿ ಮುಕ್ತಾಯಗೊಂಡು ಸರಕುಸಾಗಣೆ ಆರಂಭಗೊಂಡಿತು. ಇದೇ ರಸ್ತೆ ಮೈಸೂರಿನಿಂದ ಮಡಿಕೇರಿಗೆ ಸಂಪರ್ಕ ಬೇಕಾದರೆ ಕಾವೇರಿ ನದಿಗೆ ಸೇತುವೆ ನಿರ್ಮಿಸುವುದು ಅವಶ್ಯವಾಗಿತ್ತು. ಈ ಕಾರಣದಿಂದಾಗಿ ೧೮೪೮ರಲ್ಲಿ ಕುಶಾಲನಗರದಲ್ಲಿ ಸೇತುವೆಯನ್ನು ನಿರ್ಮಿಸಲಾಯಿತು. ಕೊಡಗು ಪ್ರದೇಶದಲ್ಲಿ ನಿರ್ಮಾಣಗೊಂಡ ರಸ್ತೆಗಳಲ್ಲಿ ಅತ್ಯಂತ ಪ್ರಮುಖವಾದದ್ದು ಸಂಚಾರಘಟ್ಟ ರಸ್ತೆ. ಇದು ಮಡಿಕೇರಿ ಮತ್ತು ಮಂಗಳೂರಿನ ಮಧ್ಯೆ ಸಂಪರ್ಕ ಕಲ್ಪಿಸಿತು. ಇದನ್ನು ಫಾಸ್ಟನ ಘಟ್ಟ ರಸ್ತೆ ಎಂಬುದಾಗಿಯೂ ಕರೆಯಲಾಗಿದೆ. ಏಕೆಂದರೆ ಇಂಜಿನಿಯರ್ ಫಸ್ಟನ ನೇತೃತ್ವದಲ್ಲಿ ಈ ರಸ್ತೆಯನ್ನು ನಿರ್ಮಿಸಲಾಯಿತು.[೯೬]

ನಿಜಾಮರ ಆಳ್ವಿಕೆಯಲ್ಲಿದ್ದ ಹೈದರಾಬಾದ್ ಕರ್ನಾಟಕದ ಪ್ರದೇಶಗಳಾದ ಗುಲ್ಬರ್ಗಾ, ಬೀದರ್ ಮತ್ತು ರಾಯಚೂರುಗಳಲ್ಲಿ ಅಷ್ಟೇನು ಉತ್ತಮ ರಸ್ತೆಗಳಿರಲಿಲ್ಲ ಎನ್ನುವುದು ಬ್ರಿಟಿಷ್ ಆಡಳಿತಗಾರರ ಅಭಿಪ್ರಾಯ. ಆದರೆ ಹೈದರಾಬಾದ್ ಕರ್ನಾಟಕದ ಮೂಲಕ ಹಾದು ಹೋಗುತ್ತಿದ್ದ ಮುಂಬಯಿ ಕರ್ನಾಟಕದ ಮತ್ತು ಮೈಸೂರು ರಾಜ್ಯದ ರಸ್ತೆಗಳು ಈ ಭಾಗದ ಪ್ರದೇಶಗಳಿಗೆ ಬೇರೆ, ಬೇರೆ ಪ್ರದೇಶಗಳೊಂದಿಗೆ ಸಂಪರ್ಕ ಏರ್ಪಡಿಸಿದವು. ನಿಜಾಮರ ಆಳ್ವಿಕೆಯಲ್ಲಿ ಈ ಪ್ರದೇಶದಲ್ಲಿದ್ದ ಪ್ರಮುಖ ರಸ್ತೆಗಳೆಂದರೆ: ಗುಲ್ಬರ್ಗಾದಿಂದ ಕೊಟನೂರು, ನಂದಿಕೆರೆ, ಶಿರೂರು ಮತ್ತು ಪಾರ್ವತಾಬಾರ್ ಮೂಲಕ ಫಿರೋಜಾಬಾದ್‌ಗೆ, ಗುಲ್ಬರ್ಗಾದಿಂದ ಹುಮನಾಬಾದ್ ಹಾಗೂ ಗುಲ್ಬರ್ಗಾದಿಂದ ಔರಂಗಾಬಾದ್‌ಗೆ ಸಂಪರ್ಕ ಕಲ್ಪಿಸಿವೆ ಎಂದು ತಿಳಿದುಬರುತ್ತದೆ.

ಹೀಗಾಗಿ ಅಗತ್ಯವೆಂದು ಕಂಡುಬಂದ ಕಡೆಗಳಲ್ಲಿ ಅವರ ಅಭಿವೃದ್ಧಿಕಾರ್ಯಗಳು ನಿರ್ಮಾಣ ಗೊಳ್ಳುತ್ತಿದ್ದವೆಂದು ತಿಳಿದುಬರುತ್ತದೆ.[೯೬]

ರೈಲುಮಾರ್ಗವು ಸಹ ಆಂಗ್ಲರ ಕಾಲದ ಬಹುಮುಖ್ಯ ಸಂಪರ್ಕ ಸಾಧನವಾಯಿತು. ಸರಕುಗಳ ಸಾಗಾಣಿಕೆಗೂ, ಕೈಗಾರಿಕೆಗಳ ಅಭಿವೃದ್ಧಿಗೂ ಇದು ಉಪಯುಕ್ತವಾಯಿತು.

ಬ್ರಿಟಿಷ್ ಗವರ್ನರ್ ಜನರಲ್ ಲಾರ್ಡ್ ಡೌಲ್‌ಹೌಸಿಯ ಆಳ್ವಿಕೆಯ ಸಂದರ್ಭದಲ್ಲಿ ರೈಲುಮಾರ್ಗ ನಿರ್ಮಾಣದ ಕುರಿತು ಯೋಚಿಸಿ ನಿರ್ಧಾರಗಳನ್ನು ತೆಗೆದುಕೊಳ್ಳಲಾಯಿತು. ೧೮೫೩ರಲ್ಲಿ ಬಾಂಬೆ ವಿ.ಟಿ.ಯಿಂದ ಥಾಣಾದವರೆಗೆ ಒಟ್ಟು ೩೧ ಮೈಲುಗಳಷ್ಟು ಉದ್ದದ ರೈಲುಮಾರ್ಗವನ್ನು ನಿರ್ಮಿಸಲಾಯಿತು. ಇದು ಭಾರತದ ಪ್ರಥಮ ರೈಲುಮಾರ್ಗ. ವಸಾಹತು ಕರ್ನಾಟಕದಲ್ಲಿದ್ದ ಪ್ರಮುಖ ರೈಲ್ವೆ ಕಂಪನಿಗಳೆಂದರೆ ಮದರಾಸು ಮತ್ತು ಸದರ್ನ್ ಮರಾಠ ಕಂಪನಿ ಸೌತ್ ಇಂಡಿಯನ್ ರೈಲ್ವೆ, ಮೈಸೂರು ಸ್ಟೇಟ್ ರೈಲ್ವೆ, ನಿಜಾಮನ ಸ್ಟೇಟ್ ರೈಲ್ವೆ ಮತ್ತು ಗ್ರೇಟ್ ಇಂಡಿಯನ್ ಪೆನಿನ್‌ಸೂಲಾರ್ ರೈಲ್ವೆ.[೯೮] ಮೈಸೂರಿನಲ್ಲಿ ರೈಲ್ವೆ ಮಾರ್ಗ ೧೮೬೪ ಆಗಸ್ಟ್ ೧ ರಂದು ಆರಂಭವಾಯಿತು. ಜಾಲಾರಪೇಟೆವರೆಗೆ ವಿಸ್ತೀರ್ಣವಿತ್ತು. ಅನಂತರ ಇದರ ಸಂಪರ್ಕವನ್ನೇರ್ಪಡಿಸಿತು. ೧೮೭೦-೭೧ರಲ್ಲಿ ಬೆಂಗಳೂರು, ತುಮಕೂರು, ತಿಪಟೂರು, ಹಾಸನ, ಮೈಸೂರುಗಳವರೆಗೆ ಸಂಪರ್ಕ ಏರ್ಪಡಿಸಲಾಯಿತು. ಇದಕ್ಕೆ ತಗಲಿದ ಖರ್ಚು ೩೮.೮೨ ಲಕ್ಷವೆಂದು ದಾಖಲೆಗಳು ತಿಳಿಸುತ್ತವೆ.[೯೯]

ಮದರಾಸು ಪ್ರೆಸಿಡೆನ್ಸಿಗೆ ಸೇರಿದ್ದ ಬಳ್ಳಾರಿ ಜಿಲ್ಲೆಯಲ್ಲಿ ನಾಲ್ಕು ಮೀಟರ್ ಗೇಟ್ ಮಾರ್ಗಗಳಿದ್ದವು. ಅವುಗಳೆಂದರೆ: ಗುಂತಕಲ್‌ನಿಂದ ಬಳ್ಳಾರಿ ಮತ್ತು ಹೊಸಪೇಟೆ ಮೂಲಕ ಹುಬ್ಬಳ್ಳಿಗೆ, ಬಳ್ಳಾರಿಯಿಂದ ರಾಯದುರ್ಗಕ್ಕೆ, ಹೊಸಪೇಟೆಯಿಂದ ಕೊಟ್ಟೂರಿಗೆ ಹಾಗೂ ಸ್ವಾಮಿಹಳ್ಳಿಮಾರ್ಗ (ಗೂಂಡಾ ರೋಡ್ ಜಂಕ್ಷನ್) ಗುಂತಕಲ್‌ನಿಂದ ಬಳ್ಳಾರಿಗೆ ೧೮೭೧ರಲ್ಲಿ ಹಾಗೂ ಬಳ್ಳಾರಿಯಿಂದ ಹೊಸಪೇಟೆಗೆ ೧೮೮೪ರಲ್ಲಿ ರೈಲುಮಾರ್ಗ ನಿರ್ಮಾಣಗೊಂಡಿತು. ಈ ನಿರ್ಮಾಣಕಾರ್ಯವನ್ನು ಆರಂಭದಲ್ಲಿ ಮದ್ರಾಸ್ ರೈಲ್ವೆ ಕಂಪನಿ ವಹಿಸಿಕೊಂಡಿತ್ತು. ೧೯೦೫ರಲ್ಲಿ ಹೊಸಪೇಟೆಯಿಂದ ಕೊಟ್ಟೂರಿಗೆ ಮತ್ತು ಬಳ್ಳಾರಿಯಿಂದ ರಾಯದುರ್ಗಕ್ಕೆ ಮಾರ್ಗಗಳನ್ನು ನಿರ್ಮಿಸಲಾಯಿತು. ಹೊಸಪೇಟೆಯಿಂದ ಹರಪನಹಳ್ಳಿ ಮೂಲಕ ಹರಿಹರಕ್ಕೆ ರೈಲುಮಾರ್ಗವನ್ನು ನಿರ್ಮಿಸುವ ಕುರಿತು ಯೋಜನೆಯನ್ನು ಸಿದ್ಧಪಡಿಸಲಾಯಿತು.[೧೦೦]

ದಕ್ಷಿಣ ಕನ್ನಡದಲ್ಲಿ ವಸಾಹತುಕಾಲೀನ ವಿಲಿಯಮ್ ಫ್ರಾನ್ಸಿಸ್ ಗ್ಯಾಸೆಟಿಯರ್‌ನಲ್ಲಿ ರೈಲ್ವೆ ಯೋಜನೆ ಬಗ್ಗೆ ತಿಳಿದುಬರುತ್ತದೆ. ಸದರ ಸಮಯದ ಸೌತ್‌ಕೆನರಾದಲ್ಲಿ ರೈಲು ಇಲ್ಲಿ ಪ್ರಾಂತ್ಯಕ್ಕೆ ಸಂಬಂಧಿಸಿದಂತೆ ಇದೆ. ಈ ಮಾರ್ಗವು ಮಂಗಳೂರಿನಿಂದ ಕೇರಳದ ಕಲ್ಲಿಕೋಟೆ ಮತ್ತು ಮಾಹೆ ತೇಲಿಚೇರ್ರಿ ಮತ್ತೊಂದು ದಕ್ಷಿಣ ಮಹಾರಾಷ್ಟ್ರ ಪದ್ಧತಿಯಂತೆ ಇಲ್ಲಿಂದ ಮಂಗಳೂರು, ತಿಪಟೂರು ಅಥವಾ ಮಂಗಳೂರಿನಿಂದ ಮೈಸೂರಿಗೆ, ಅಲ್ಲಿಂದ ನಂಜನಗೂಡು ಈ ರೋಡ್ ಸೌತ್ ಮತ್ತು ಮದ್ರಾಸ್ ರೈಲ್ವೆಗೆ ಸಂಪರ್ಕಿಸುವಂತೆ ಯೋಜನೆ ಇದೆ ಎಂಬ ವಿವರಣೆ ಸಿಗುತ್ತದೆ.[೧೦೧]

ಹೈದರಾಬಾದ್ ಕರ್ನಾಟಕದಲ್ಲಿ ಗುಲ್ಬರ್ಗಾ ಪ್ರದೇಶದಲ್ಲಿ ಎರಡು ಪ್ರಮುಖ ಬ್ರಾಡ್‌ಗೇಜ್ ಮಾರ್ಗಗಳಿದ್ದವು. ಅವುಗಳೆಂದರೆ: ಮದರಾಸಿನಿಂದ ರಾಯಚೂರು, ವಾಡಿ ಮತ್ತು ಗುಲ್ಬರ್ಗಾ ಮೂಲಕ

ಮುಂಬಯಿಗೆ, ವಾಡಿಯಿಂದ ಚಿತ್ತಾಪುರ ಮತ್ತು ಸೇಡಂ ಮೂಲಕ ಸಿಕಂದರಾಬಾದ್‌ಗೆ. ೧೮೬೦-೭೦ರಲ್ಲಿ ರಾಯಚೂರು ಸೊಲ್ಲಾಪುರ ಮಾರ್ಗ ನಿರ್ಮಾಣಗೊಂಡಿತು. ಈ ಮಾರ್ಗವು ಮದರಾಸು ಮತ್ತು ಮುಂಬಯಿ ಪ್ರೆಸಿಡೆನ್ಸಿಗಳ ಮಧ್ಯೆ ನೇರ ಸಂಪರ್ಕ ಕಲ್ಪಿಸಿತು.

೧೮೭೪ರಲ್ಲಿ ವಾಡಿ-ಸಿಕಂದರಾಬಾದ್ ಮಾರ್ಗ ನಿರ್ಮಾಣಗೊಂಡಿತು. ಇದು ಹೈದರಾಬಾದ್‌ನ್ನು ಮದರಾಸು ಮತ್ತು ಮುಂಬಯಿಗಳೊಂದಿಗೆ ಜೋಡಿಸಿತು. ಈ ಮಾರ್ಗವನ್ನು ಗ್ರೇಟ್ ಇಂಡಿಯನ್ ಪೆನಿನ್‌ಸೂಲರ್ ರೈಲ್ವೆ ೧೮೭೪ರಿಂದ ನೋಡಿಕೊಳ್ಳುತ್ತಿತ್ತು. ನಂತರ ೧೮೮೫ರವರೆಗೆ ಸ್ಟೇಟ್ ರೈಲ್ವೆ ಏಜನ್ಸಿ ೧೯೨೯ರವರೆಗೆ ನಿಜಾಮನ ಗ್ಯಾರಂಟೀಡ್ ಸ್ಟೇಟ್ ರೈಲ್ವೆ ನೋಡಿಕೊಂಡಿತ್ತು. ೧೯೩೦ರಲ್ಲಿ ಈ ಮಾರ್ಗವನ್ನು ಹೈದರಾಬಾದ್‌ನ ನಿಜಾಮ ಖರೀದಿಸಿದ.[೧೦೨] ಕೊಡಗಿನಲ್ಲಿ ಗ್ಯಾಸೆಟಿಯರ್ ರಚನೆ ಸಂದರ್ಭದಲ್ಲಿ ರೈಲ್ವೆ ನಿರ್ಮಾಣ ಬಂದಿರಲಿಲ್ಲ. ಹೀಗಾಗಿ ಗ್ಯಾಸೆಟಿಯರ್ ರಚನೆಯ ಸಂದರ್ಭದಲ್ಲಿ ಅವರ ಯೋಜನೆಗಳು ಹಾಗೂ ಪೂರ್ತಿಗೊಂಡ ಸಾಧನೆಗಳ ನಿರ್ಮಾಣವನ್ನು ಇವು ಒಳಗೊಂಡಿರುತ್ತವೆ ಎನ್ನಬಹುದು.

ಜಲಮಾರ್ಗ: ಬ್ರಿಟಿಷರು ಸಮುದ್ರದ ಮೂಲಕವೇ ಭಾರತಕ್ಕೆ ಪ್ರವೇಶ ಪಡೆದದ್ದು. ಆದರೆ ಕರ್ನಾಟಕದಲ್ಲಿ ಬಂದರುಗಳ ಪ್ರಮಾಣ ಕಡಿಮೆ. ಹೀಗಾಗಿ ಪ್ರಮುಖ ಬಂದರುಗಳೆಂದರೆ ಮಂಗಳೂರು, ಕಾರವಾರ, ಬಿಳಿಕೆರಿ, ಕದ್ರಿ, ಕುಂದಾಪುರ, ಭಟ್ಕಳ, ಹೊನ್ನಾವರ, ಮಲ್ಪೆ, ಹಂಗಾರಕಟ್ಟೆ, ಅಂಕೋಲ ಮತ್ತು ಕುಮಟಾ ಈ ಎಲ್ಲಾ ಬಂದರುಗಳಲ್ಲಿ ಬ್ರಿಟಿಷ್ ಅವಧಿಯಲ್ಲಿ ಆಕರ್ಷಣೆಯ ಕೇಂದ್ರವಾಗಿತ್ತು.[೧೦೩] ಇದರ ಕುರಿತು ಹೆಚ್ಚಿನ ಮಾಹಿತಿ ಸಿಗುವುದಿಲ್ಲ. ಆದರೆ ಬ್ರಿಟಿಷರ ಕಾಲದಲ್ಲಿ ಸಮುದ್ರ ಮಾರ್ಗದಲ್ಲಿ ವಿಜಾಪುರಕ್ಕೆ ನಾವೆಗಳು, ಹರಿಗೋಲುಗಳು, ಸರ್ಕಾರದಿಂದ ಕಾದಿರಿಸಲಾಗಿತ್ತು ಎಂದು ತಿಳಿದುಬರುತ್ತದೆ.[೧೦೪] ಹೀಗಾಗಿ ಅನೇಕ ಅಭಿವೃದ್ಧಿಕಾರ್ಯಗಳು ಇವರಿಂದ ಆಯಿತು ಎಂದು ತಿಳಿಯಬಹುದು.

**ಕೈಗಾರಿಕೆಗಳು**

ಬ್ರಿಟಿಷರ ಕಾಲದಲ್ಲಿ ಕರ್ನಾಟಕದಲ್ಲಿ ಹಲವಾರು ಕೈಗಾರಿಕೆಗಳು ಸ್ಥಾಪನೆಗೊಂಡವು. ಐದು ಪ್ರಾಂತ್ಯಗಳಲ್ಲಿ ಮೈಸೂರು ಸಂಸ್ಥಾನದಲ್ಲಿ ಸ್ಥಾಪನೆಗೊಂಡ ಕೈಗಾರಿಕೆಗಳ ಸಂಖ್ಯೆ ಹೆಚ್ಚಿನದ್ದು. ಇವುಗಳಿಗೆ ಮೂಲ ಕಾರಣ ಇಲ್ಲಿನ ಸಂಪನ್ಮೂಲಗಳು, ರಾಜರು, ದಿವಾನರು, ಸಂಪನ್ಮೂಲದ ಕ್ರೋಢೀಕರಣ, ಯುರೋಪಿನ ಕೈಗಾರಿಕಾ ಕ್ರಾಂತಿಯ ಅರಿವು, ಶಿಕ್ಷಣ ಕ್ಷೇತ್ರದಲ್ಲಾದ ಬದಲಾವಣೆಗಳ ಮೂಲ ಕಾರಣ ಎನ್ನಬಹುದು. ಬಿ.ಎಲ್. ರೈಸ್ ಗ್ಯಾಸೆಟಿಯರ್‌ನಲ್ಲಿ ೧೮೮೧ರಿಂದ ೧೮೯೧ರವರೆಗಿನ ಹತ್ತು ವರ್ಷಗಳ ವಿವರಣೆಯನ್ನು ನೀಡಿದ್ದು ಈ ಸಂದರ್ಭದಲ್ಲಿ. ಗಂಧದ ಎಣ್ಣೆ ಕಾರ್ಖಾನೆ, ಬಟ್ಟೆ ಕಾರ್ಖಾನೆ, ಸೋಪು, ತೆಂಗಿನ ಎಣ್ಣೆ, ಮೇಣದಬತ್ತಿ ಕಾರ್ಖಾನೆ, ಗಾಜಿನ ಬಳೆ ಉತ್ಪಾದನೆ ಮತ್ತೊಂದು ಚನ್ನಪಟ್ಟಣದಲ್ಲಿ ಸಕ್ಕರೆ ಕಾರ್ಖಾನೆ, ಗೌರಿಬಿದನೂರಿನಲ್ಲಿ ಉಪ್ಪಿನ ಕಾರ್ಖಾನೆ, ಕಾಫಿ ಕೈಗಾರಿಕೆ, ಫೈಲ್ಸ್ ಪೇಪರ್ ಮಿಲ್ ಇತ್ಯಾದಿಗಳೆಲ್ಲವೂ ಸಹ ಯುರೋಪಿನ ಅಧಿಕಾರಿಗಳೊಂದಿಗೆ ಜಂಟಿಯಾಗಿ ಸ್ಥಾಪನೆಗೊಂಡಂತಹವುಗಳಾಗಿವೆ. ಅಲ್ಲದೆ ೧೮೯೪ರಲ್ಲಿ ಜಿಯೋಲಾಜಿಕಲ್ ವಿಭಾಗವನ್ನು ಪ್ರಾರಂಭಿಸಿ ಅದಕ್ಕೆ ಮಿ. ಬ್ರೂಸ್‌ಫುಟ್ ಅಧ್ಯಕ್ಷರಾದರು. ಆದರೆ ಮೈಸೂರಿನಲ್ಲಿ ಕೈಗಾರಿಕೆಗಳ

ಅಭಿವೃದ್ಧಿಗೆ ಆಗಿನ ಆಡಳಿತಗಾರರ ವಿಶೇಷವಾಗಿ ದಿವಾನರ ಕೊಡುಗೆ ಹೆಚ್ಚು. ೧೯೩೧ರ ನಂತರ ಕೈಗಾರಿಕೆಗಳ ಸ್ಥಾಪನೆಗೆ ಮತ್ತಷ್ಟು ಉತ್ತೇಜನ ಸಿಕ್ಕಿತು.[೧೦೫] ೧೯೦೮ರಲ್ಲಿ ಮೈಸೂರು ಕ್ರೇಂ ಟ್ಯಾನಿಂಗ್ ಕಂಪನಿ ಲಿಮಿಟೆಡ್ ಸಂಸ್ಥೆಯು ಸ್ಥಾಪನೆಗೊಂಡಿತು. ಚರ್ಮದ ವಸ್ತು ತಯಾರಿಸುವ ಸಂಸ್ಥೆ, ೧೯೧೫ರಲ್ಲಿ ಗಂಧದ ಕಾರ್ಖಾನೆ, ೧೯೪೪ ಶಿವಮೊಗ್ಗದಲ್ಲಿ ಗಂಧದ ಎಣ್ಣೆ, ೧೯೧೯ರಲ್ಲಿ ಬೆಂಗಳೂರಿನಲ್ಲಿ ಮಿನರ್ವಾ ಮಿಲ್ಸ್ ಅಸ್ತಿತ್ವಕ್ಕೆ ಬಂದಿತು. ೧೯೨೦ರಲ್ಲಿ ಭದ್ರಾವತಿ ಕಬ್ಬಿಣ-ಉಕ್ಕು ಕಾರ್ಖಾನೆ ಸ್ಥಾಪನೆಗೊಂಡಿತು. ಹೀಗಾಗಿ ಇಲ್ಲಿ ಹಲವಾರು ಕಾರ್ಖಾನೆಗಳು ಮೈಸೂರಿನ ದಿವಾನರ ಆಳ್ವಿಕೆಯಲ್ಲಿ ಸ್ಥಾಪಿಸಲ್ಪಟ್ಟಿವೆ.

ಗಂಧದ ಎಣ್ಣೆ ಕಾರ್ಖಾನೆ ಉಡುಪಿ ಜಿಲ್ಲೆಯಲ್ಲಿ ಸ್ಥಾಪನೆಯಾಯಿತು.[೧೦೬] ಮದ್ರಾಸ್ ಪ್ರಾಂತ್ಯದ ಬಳ್ಳಾರಿಯಲ್ಲಿ ಹತ್ತಿ ಉಗಿಯಂತ್ರ ನಾಲ್ಕು ಇದ್ದವು. ಒಂದು ಮುನಿಸಿಪಾಲಿಟಿಯ ಅಧೀನದಲ್ಲಿ ಇದಕ್ಕೆ ೨೧/೨ ಲಕ್ಷವನ್ನು ಸ್ಥಳೀಯ ಕಂಪನಿಗಳೊಂದಿಗೆ ಸರ್ಕಾರವು ಹಾಕಿತ್ತು. ಮುದ್ರಣ ಯಂತ್ರವು ಬಳ್ಳಾರಿ, ಆದೋನಿಯಲ್ಲಿ ನಾಲ್ಕು ಇದ್ದವು, ಇದಕ್ಕೆ ೨೭ ಲಕ್ಷ ಹಣವನ್ನು ವ್ಯಯಿಸಲಾಯಿತು. ಅನೇಕ ಕಂಪನಿಗಳೊಂದಿಗೆ ಇವು ಜಂಟಿಯಾಗಿ ನಿರ್ಮಾಣಗೊಂಡಿರುವಂತಹವು.[೧೦೭] ದಕ್ಷಿಣ ಕನ್ನಡದಲ್ಲಿ ಕಾಫಿ ಕ್ಯೂರಿಂಗ್ ಕಾರ್ಖಾನೆಗಳು ಇದ್ದವು. ಇದು ಅರ್ಬಾನೆಟ್ ಮತ್ತು ಕಂಪನಿ ಸಹಾಯದೊಂದಿಗೆ ಜಂಟಿಯಾಗಿ ಸ್ಥಾಪನೆಗೊಂಡಿದ್ದು ವರ್ಷದ ಐದು ತಿಂಗಳುಗಳಲ್ಲಿ ಕೆಲಸ ನಿರ್ವಹಿಸಲಾಗಿತ್ತು. ಇಲ್ಲಿನ ಹೆಂಚಿನ ಕಾರ್ಖಾನೆಯ ಉಪ್ಪಿನಂಗಡಿಯಲ್ಲಿ ಇದು ಅನೇಕ ಜನರಿಗೆ ಉದ್ಯೋಗ ನಿರ್ವಹಿಸಿದ ವಿವರಣೆ ಸಿಗುತ್ತದೆ.[೧೦೮] ಹೀಗಾಗಿ ಇವರ ಕಾಲದಲ್ಲಿ ಹಲವು ಕಡೆಗಳಲ್ಲಿ ಸ್ಥಾಪಿಸುವುದರ ಮೂಲಕ ಅಭಿವೃದ್ಧಿಗೆ ಉತ್ತೇಜನ ನೀಡಿದ್ದರು.

ಈ ಮೂಲಕವಾಗಿ ವಸಾಹತುಶಾಹಿಗಳು ನೇರವಾಗಿ ಆಳ್ವಿಕೆಯನ್ನು ವಶಪಡಿಸಿಕೊಳ್ಳುವುದರ ಮೂಲಕ ಎಲ್ಲಾ ಕ್ಷೇತ್ರಗಳ ಮೇಲೆ ತಮ್ಮ ನೇರ ಆಳ್ವಿಕೆಯನ್ನು ಕಂಡುಕೊಂಡರು ಎಂಬುದನ್ನು ಗ್ಯಾಸೆಟಿಯರ್‌ಗಳ ಮೂಲಕ ಕಂಡುಬರುತ್ತದೆ.

**ಟಿಪ್ಪಣಿಗಳು**

೧. ಪಾಟೀಲ ಎಂ.ಬಿ(ಪ್ರ.ಸಂ), ಕರ್ನಾಟಕ ಕೈಪಿಡಿ ಗ್ಯಾಸೆಟಿಯರ್, ೧೯೯೬, ಪು. ೧೭೯.

೨. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೧೦, ಪು. ೧೧೭.

೩. ವಿರೂಪಾಕ್ಷಿ ಪೂಜಾರಹಳ್ಳಿ, ಮೇಲಿನದೇ, ಪು. ೧೮.

೪. ಮಹದೇವ ಬಣಕಾರ, ಆಂಗ್ಲರ ಆಡಳಿತದಲ್ಲಿ ಕನ್ನಡ, ೧೯೮೬, ಪು. ೩೮೬.

೫. ಮಹದೇವ ಬಣಕಾರ, ಆಂಗ್ಲರ ಆಡಳಿತದಲ್ಲಿ ಕನ್ನಡ, ೧೯೮೬, ಪು. ೩೮೮.

೬. ಮೇಲಿನದೇ, ಪು. ೩೮೯-೩೯೨.

೭. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೧೧, ಪು. ೧೯.

೮. ವೆಂಕಟರಂಗೋಕಟ್ಟಿ, ಮುಂಬಯಿ ಇಲಾಖೆಗೆ ಸೇರಿದ ಕನ್ನಡ ಭಾಗದ್ದು, ಪು. ೩೭೫, ೩೭೬.

೯. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೧೦, ಪು. ೧೭.

೧೦. ರೈಸ್ ಬಿ.ಎಲ್, ಮೈಸೂರು ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮, ಪು. ೩೪೯.

೧೧. ಮೋಹನ್‌ಕೃಷ್ಣ ರೈ .ಕೆ, ವಸಾಹತುಶಾಹಿ ಮತ್ತು ನಾಗರಿಕರಣ, ೨೦೦೭, ಪು. ೧೨-೧೩.

೧೨. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ಪು. ೩೪೯.

೧೩. ವೆಂಕಟರಂಗೋಕಟ್ಟಿ, ಮುಂಬಯಿ ಇಲಾಖೆಗೆ ಸೇರಿದ ಕನ್ನಡ ಭಾಗದ್ದು, ೧೯೯೩, ಪು. ೩೭೫.

೧೪. ಚಿಕ್ಕಮಾದು ಎನ್.ಎನ್(ಲೇ), ಮೈಸೂರು ತಾಲೂಕು ಗ್ಯಾಸೆಟಿಯರ್, ೨೦೧೦, ಪು. ೧೩೬.

೧೫. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ. ೨, ಪು. ೪೧೫, ೪೧೬.

೧೬. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮.

೧೭. ವೆಂಕಟರಂಗೋಕಟ್ಟಿ, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ೧೯೯೩, ಪು. ೩೭೫.

೧೮. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೧೦, ಪು. ೬೦.

೧೯. ವೆಂಕಟರಂಗೋಕಟ್ಟಿ, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ೧೯೯೩, ಪು. ೩೬೬.

೨೦. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೧೦, ಪು. ೬೦.

೨೧. ವೆಂಕಟರಂಗೋಕಟ್ಟಿ, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ೧೯೯೩, ಪು.೩೬೭, ೩೭೧.

೨೨. ಮುನಿಸ್ವಾಮಿ ಆರ್(ಪ್ರ.ಸಂ), ಗುಲ್ಬರ್ಗಾ ಜಿಲ್ಲೆ ಗ್ಯಾಸೆಟಿಯರ್, ೧೯೯೯, ಪು. ೪೦೬, ೪೦೭.

೨೩. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೧೦, ಪು. ೬೦.

೨೪. ಚಿಕ್ಕಮಾದು ಎನ್.ಎನ್(ಲೇ), ಮೈಸೂರು ತಾಲೂಕು ಗ್ಯಾಸೆಟಿಯರ್, ೨೦೧೦, ಪು. ೧೩೬, ೧೩೭

೨೫. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂ. ೨, ೧೯೮೫, ಪು. ೪೨೮.

೨೬. ಮೇಲಿನದೇ

೨೭. ಜಾನ್‌ಕೆಲ್‌ಸಾಲ್, ಬಳ್ಳಾರಿ ಡಿಸ್ಟ್ರಿಕ್ಟ್ ಮ್ಯಾನ್ಯುಯಲ್ ಸಂ. ೧, ೧೮೭೨, ಪು. ೧೫೪.

೨೮. ಮ್ಯಾಕ್ಲೀನ್ ಸಿ.ಡಿ, ಮ್ಯಾನ್ಯುಯಲ್ ಆಫ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ ಸಂ. ೧, ೧೮೮೫, ಪು. ೧೪೦.

೨೯. ಹೆರಾಲ್ಡ್ ಎ ಸ್ಟೂವರ್ಟ್, ಸೌತ್‌ಕೆನರಾ ಡಿಸ್ಟ್ರಿಕ್ಟ್ ಮ್ಯಾನ್ಯುಯಲ್ ಸಂ.೧, ೧೮೯೪, ಪು. ೧೯೪.

೩೦. ಮುನಿಸ್ವಾಮಿ ಆರ್, ಗುಲ್ಬರ್ಗಾ ಜಿಲ್ಲಾ ಗ್ಯಾಸೆಟಿಯರ್, ೧೯೯೭, ಪು. ೪೦೭.

೩೧. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮.

೩೨. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ. ೨, ೧೯೮೫, ಪು. ೪೨೮, ೪೨೯.

೩೩. ಮೇಲಿನದೇ, ಪು. ೪೨೨.

೩೪. ವಿಜಯ್ ತಂಬಂಡ ಪೂಣಚ್ಚ(ಸಂ), ಆಧುನಿಕ ಕೊಡಗು, ೨೦೦೫, ಪು. ೮೯.

೩೫. ಚಿಕ್ಕಮಾದು ಎನ್.ಎನ್(ಸಂ), ಮೈಸೂರು ತಾಲೂಕು ಗ್ಯಾಸೆಟಿಯರ್, ೨೦೧೦, ಪು. ೧೪೩.

೩೬. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೧೦, ಪು. ೪೩.

೩೭. ಚಿಕ್ಕಮಾದು ಎನ್.ಎನ್(ಸಂ), ಮೈಸೂರು ತಾಲೂಕು ಗ್ಯಾಸೆಟಿಯರ್, ೨೦೧೦, ಪು. ೧೪೫, ೧೪೬.

೩೮. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ. ೨, ೧೯೮೫, ಪು. ೪೭೮.

೩೯. ಮೇಲಿನದೇ, ಪು. ೪೭೭.

೪೦. ಮೇಲಿನದೇ, ಪು. ೪೭೯.

೪೧. ವೆಂಕಟರಂಗೋಕಟ್ಟಿ, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ೧೮೯೩, ಪು.೩೭೭, ೩೭೮.

೪೨. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮, ಪು. ೭೨೦

೪೩. ಮೇಲಿನದೇ, ಪು. ೬೬೨.

೪೪. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್ ಸಂ. ೫, ೧೯೨೭-೩೦, ಪು. ೨೫೦.

೪೫. ವೆಂಕಟರಂಗೋಕಟ್ಟಿ, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ೧೮೯೩, ಪು.೩೮೨, ೩೮೭.

೪೬. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮, ಪು. ೭೧೮.

೪೭. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೧೦, ಪು. ೩೫.

೪೮. ಸೂರ್ಯನಾಥ ಕಾಮತ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ. ೨, ೧೯೮೫, ಪು. ೪೮೦.

೪೯. ಮೇಲಿನದೇ, ಪು. ೪೨೦.

೫೦. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೭೨೬.

೫೧. ಮೇಲಿನದೇ, ಪು. ೭೨೧, ೭೨೨

೫೨. ಚಿಕ್ಕಮಾದು ಎನ್.ಎನ್(ಸಂ), ಮೈಸೂರು ತಾಲೂಕು ಗ್ಯಾಸೆಟಿಯರ್, ೨೦೧೧, ಪು. ೧೪೭.

೫೩. ಹೆರಾಲ್ಡ್ ಎ ಸ್ಟೂವರ್ಟ್, ಸೌತ್‌ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್ ಸಂ. ೨, ೧೮೯೪, ಪು. ೨೦೨.

೫೪. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೧, ೧೮೯೭, ಪು.೭೨೯,೭೩೦.

೫೫. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಜಿಲ್ಲಾ ಗ್ಯಾಸೆಟಿಯರ್, ೧೮೮೩, ಪು. ೪೭೩.

೫೬. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೮೮೩, ಪು. ೬೦೫.

೫೭. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೨೦೨.

೫೮. ವಿಲಿಯಂ ಫ್ರಾನ್ಸಿಸ್, ಬಳ್ಳಾರಿ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್ ಸಂ. ೩, ೧೯೦೪, ಪು. ೧೯೦.

೫೯. ಮುನಿಸ್ವಾಮಿ ಆರ್, ಗುಲ್ಬರ್ಗಾ ಜಿಲ್ಲಾ ಗ್ಯಾಸೆಟಿಯರ್, ೧೯೯೭, ಪು. ೪೪೮.

೬೦. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೩, ೧೮೭೮, ಪು.

೬೧. ಮೇಲಿನದೇ, ಪು.

೬೨. ಪಾರ್ಥಸಾರಥಿ ಟಿ.ಎ, ಮಂಡ್ಯ ಜಿಲ್ಲಾ ಗ್ಯಾಸೆಟಿಯರ್, ೨೦೦೩, ಪು. ೫೬೦, ೫೬೧.

೬೩. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೭೩೧, ೭೩೩.

೬೪. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್ ಸಂ. ೫, ೧೯೨೭-೩೦, ಪು. ೨೫೯, ೨೬೪.

೬೫. ಜಾನ್‌ಕೆಲ್‌ಸಾಲ್, ಬಳ್ಳಾರಿ ಡಿಸ್ಟ್ರಿಕ್ಟ್ ಮ್ಯಾನ್ಯುಯಲ್ ಸಂ. ೧, ೧೮೭೨, ಪು. ೨೨೪.

೬೬. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೨೦೧.

೬೭. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್ ಸಂ. ೫, ೧೯೨೭-೩೦, ಪು. ೨೫೨.

೬೮. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೭೧೪, ೭೧೮.

೬೯. ಜಾನ್‌ಕೆಲ್‌ಸಾಲ್, ಬಳ್ಳಾರಿ ಡಿಸ್ಟ್ರಿಕ್ಟ್ ಮ್ಯಾನ್ಯುಯಲ್ ಸಂ. ೧, ೧೮೭೨, ಪು. ೮೪.

೭೦. ಹೆರಾಲ್ಡ್ ಎ ಸ್ಟೂವರ್ಟ್, ಸೌತ್‌ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್ ಸಂ.೨, ೧೮೯೪, ಪು.೨೧೬, ೨೧೭.

೭೧. ಮೋಹನ್‌ಕೃಷ್ಣ ರೈ .ಕೆ, ವಸಾಹತುಶಾಹಿ ಮತ್ತು ನಗರೀಕರಣ, ೨೦೦೭, ಪು. ೯೯.

೭೨. ಮೇಲಿನದೇ, ಪು. ೧೦೨.

೭೩. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮, ಪು. ೬೫

೭೪. ವೆಂಕಟರಂಗೋಕಟ್ಟಿ, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ೧೮೯೩, ಪು.೩೯೬, ೩೯೭.

೭೫. ಮೋಹನ್‌ಕೃಷ್ಣ ರೈ .ಕೆ, ವಸಾಹತುಶಾಹಿ ಮತ್ತು ನಗರೀಕರಣ, ೨೦೦೭, ಪು. ೧೦೪.

೭೬. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೬೬, ೬೮.

೭೭. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೩, ೧೮೯೭, ಪು. ೮೮.

೭೮. ವೆಂಕಟರಂಗೋಕಟ್ಟಿ, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ೧೮೯೩, ಪು.

೭೯. ಜಾನ್‌ಕೆಲ್‌ಸಾಲ್, ಬಳ್ಳಾರಿ ಡಿಸ್ಟ್ರಿಕ್ಟ್ ಮ್ಯಾನ್ಯುಯಲ್ ಸಂ. ೧, ಪು. ೭, ೧೯.

೮೦. ವಿಲಿಯಂ ಫ್ರಾನ್ಸಿಸ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೨, ೧೮, ಪು. ೫೮.

೮೧. ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ.೧೩, ೧೯೦೮, ಪು.೨೨೭,೨೨೮,೨೩೩,೨೩೪.

೮೨. ವಿಜಯ್ ತಂಬಂಡ ಪೂಣಚ್ಚ, ಕೊಡಗು ವಿವರಣೆ, ೨೦೦೫, ಪು. ೧.

೮೩. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ. ೩, ೧೮೭೮, ಪು. ೧೩.

೮೪. ಮೋಹನ್‌ಕೃಷ್ಣ ರೈ .ಕೆ, ವಸಾಹತುಶಾಹಿ ಮತ್ತು ನಗರೀಕರಣ, ೨೦೦೭, ಪು. ೨೬.

೮೫. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ಪು. ೫೫೫, ೫೫೬.

೮೬. ವೆಂಕಟರಂಗೋಕಟ್ಟಿ, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ೧೮೯೩, ಪು. ೩೦೦.

೮೭. ಜಾನ್‌ಕೆಲ್‌ಸಾಲ್, ಬಳ್ಳಾರಿ ಡಿಸ್ಟ್ರಿಕ್ಟ್ ಮ್ಯಾನ್ಯುಯಲ್ ಸಂ. ೧, ೧೮೭೨, ಪು. ೨೬೮.

೮೮. ಜಾನ್ ಸ್ಟರ್ರೋಕ್, ಸೌತ್‌ಕೆನರಾ ಗ್ಯಾಸೆಟಿಯರ್ ಸಂ. ೧, ಪು. ೨೨೦.

೮೯. ಹೆರಾಲ್ಡ್ ಎ ಸ್ಟೂವರ್ಟ್, ಸೌತ್‌ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್ ಸಂ.೨, ೧೮೯೪, ಪು. ೧೪೮.

೯೦. ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂ. ೧೩, ೧೯೦೮, ಪು. ೨೩೫, ೨೩೬.

೯೧. ರಿಕ್ಟರ್ ಜಿ, ಕೂರ್ಗ್ ಗ್ಯಾಸೆಟಿಯರ್, ೧೮೭೦, ಪು. ೮೬, ೯೮, ೧೦೧.

೯೨. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೫೬೦.

೯೩. ವೆಂಕಟರಂಗೋಕಟ್ಟಿ, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ಪು. ೨೯೪, ೨೯೫.

೯೪. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೭೧೫, ೭೧೬.

೯೫. ಮೋಹನ್‌ಕೃಷ್ಣ ರೈ .ಕೆ, ವಸಾಹತುಶಾಹಿ ಮತ್ತು ನಗರೀಕರಣ, ೨೦೦೭, ಪು. ೮೦.

೯೬. ರಿಕ್ಟರ್ ಜಿ, ಗ್ಯಾಸೆಟಿಯರ್ ಆಫ್ ಕೂರ್ಗ್, ೧೮೭೦, ಪು. ೪೨೬, ೪೨೭.

೯೭. ಮೋಹನ್‌ಕೃಷ್ಣ ರೈ .ಕೆ, ವಸಾಹತುಶಾಹಿ ಮತ್ತು ನಗರೀಕರಣ, ೨೦೦೭, ಪು. ೮೦, ೮೧.

೯೮. ಮೇಲಿನದೇ.

೯೯. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ೧೮೯೭, ಪು. ೭೪೪.

೧೦೦. ವಿಲಿಯಂ ಫ್ರಾನ್ಸಿಸ್, ಬಳ್ಳಾರಿ ಮ್ಯಾನ್ಯುಯಲ್ ಸಂ. ೨, ೧೯೦೪, ಪು. ೧೧೯, ೧೨೦.

೧೦೧. ಹೆರಾಲ್ಡ್ ಎ ಸ್ಟೂವರ್ಟ್, ಸೌತ್‌ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್ ಸಂ.೨, ೧೮೯೪, ಪು.೧೨೫, ೧೨೬.

೧೦೨. ಮೋಹನ್‌ಕೃಷ್ಣ ರೈ ಕೆ, ವಸಾಹತುಶಾಹಿ ಮತ್ತು ನಗರೀಕರಣ, ೨೦೦೭, ಪು. ೮೫.

೧೦೩. ಮೇಲಿನದೇ, ಪು. ೮೬.

೧೦೪. ವೆಂಕಟರಂಗೋಕಟ್ಟಿ, ಪು. ೨೯೬.

೧೦೫. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ. ೧, ಪು. ೫೩೫, ೫೪೩.

೧೦೬. ಮೋಹನ್‌ಕೃಷ್ಣ ರೈ .ಕೆ, ವಸಾಹತುಶಾಹಿ ಮತ್ತು ನಗರೀಕರಣ, ೨೦೦೭, ಪು. ೫೬.

೧೦೭. ಜಾನ್‌ಕೆಲ್‌ಸಾಲ್, ಬಳ್ಳಾರಿ ಡಿಸ್ಟ್ರಿಕ್ಟ್ ಮ್ಯಾನ್ಯುಯಲ್ ಸಂ. ೧, ಪು. ೧೧೦, ೨೨೦.

೧೦೮. ಜಾನ್ ಸ್ಟರ್ರೋಕ್, ಸೌತ್‌ಕೆನರಾ ಗ್ಯಾಸೆಟಿಯರ್ ಸಂ. ೧, ಪು. ೧೩೯, ೧೪೫.

# ಸಂಸ್ಕೃತಿ ಹಾಗೂ ಗ್ಯಾಸೆಟಿಯರ್‌ಗಳು

'ಸಂಸ್ಕೃತಿ' ಎಂಬ ಶಬ್ದವು ಅತ್ಯಂತ ವಿಸ್ತೃತ ಅರ್ಥವುಳ್ಳ ಪರಿಕಲ್ಪನೆಯಾಗಿದೆ. 'ಸಂಸ್ಕೃತಿ' ಪದಕ್ಕೆ ಬಹಳ ಕಿರಿದಾದ ವ್ಯಾಪ್ತಿಯಿಂದ ಹಿಡಿದು ಅತ್ಯಂತ ವಿಸ್ತೃತ ಅರ್ಥವುಳ್ಳ ವ್ಯಾಖ್ಯಾನಗಳನ್ನು ನೀಡಲಾಗಿದೆ. ಅವೆಲ್ಲವುಗಳನ್ನು ಇಲ್ಲಿ ಉಲ್ಲೇಖಿಸುವುದಾಗಲಿ, ಪಟ್ಟಿ ಮಾಡುವುದಾಗಲಿ ಸಾಧ್ಯವಾಗದ ಕೆಲಸ.

'ಸಂಸ್ಕೃತಿ' ಎಂದರೆ ನಡವಳಿಕೆ, ವರ್ತನೆ ಎಂದು ಅರ್ಥೈಸಲಾಗುತ್ತದೆ. ಅಂತರಂಗದ ಶುದ್ಧಿಯೇ ಸಂಸ್ಕೃತಿ ಎಂದಿರುವುದುಂಟು.[೧] ಅಲ್ಲದೆ ವ್ಯಕ್ತಿ, ಧರ್ಮ, ಭಾಷೆ, ದೇಶ, ಜನಾಂಗ, ಆಚರಣೆ ಇತ್ಯಾದಿಗಳೆಲ್ಲವುಗಳಲ್ಲಿ ಸಹ ಸಂಸ್ಕೃತಿ ಕುರಿತು ವಿವರಿಸುತ್ತವೆ.

ಸಂಸ್ಕೃತಿಯು ಮಾನವ ಸಮುದಾಯದ ವಿಶಿಷ್ಟ ಆಸ್ತಿಯಾಗಿದೆ. ಮಾನವನಿಗಿಂತಲೂ ಕೆಳಮಟ್ಟದ ಪ್ರಾಣಿ ವರ್ಗಗಳಲ್ಲಿ ಅದು ಕಾಣಿಸದು. ಉಳಿದ ಪ್ರಾಣಿಗಳು, ನೈಸರ್ಗಿಕ ಪರಿಸರದಲ್ಲಿ ಬದುಕಿ ಬಾಳುತ್ತವೆಯಾದರೂ ಮಾನವನು ಮಾತ್ರ ನೈಸರ್ಗಿಕ ಪರಿಸರದ ಜೊತೆಗೆ 'ಸಾಂಸ್ಕೃತಿಕ ಪರಿಸರ'ವೆಂಬ ಇನ್ನೊಂದು ಬಗೆಯ ಪರಿಸರದಲ್ಲಿ ಹುಟ್ಟಿ ಬೆಳೆದು, ತನ್ನ ಬಾಳು ನಡೆಸುತ್ತಾನೆ. ಪ್ರತಿಯೊಬ್ಬ ವ್ಯಕ್ತಿಯೂ ಸಮಾಜವೊಂದರಲ್ಲಿ ಹುಟ್ಟುತ್ತಾನೆ ಎಂಬ ಮಾತು ವಾಸ್ತವಿಕವಾಗಿ ಪ್ರತಿಯೋರ್ವನು ಸಾಂಸ್ಕೃತಿಕ ಪರಿಸರವೊಂದರಲ್ಲಿ ಹುಟ್ಟುತ್ತಾನೆ ಎಂಬರ್ಥವನ್ನು ಧ್ವನಿಸುವುದು. 'ಮಾನವನು ಸಮಾಜ ಜೀವಿಯಾಗಿದ್ದಾನೆ' ಎಂಬ ಮಾತು ಮಾನವನು ಸಾಂಸ್ಕೃತಿಕ ಜೀವಿಯಾಗಿದ್ದಾನೆ ಎಂಬುದಕ್ಕೆ ತತ್ಸಮಾನವಾದುದು ಎನ್ನಲಡ್ಡಿಯಿಲ್ಲ.[೨]

'ಸಂಸ್ಕೃತಿ' ಎಂಬ ಶಬ್ದವು 'ಸಂಸ್ಕೃತ', 'ಸಂಸ್ಕಾರ' ಮುಂತಾದ ಶಬ್ದಗಳು ಹುಟ್ಟಿದ ಮಾದರಿಯಲ್ಲೇ ಹುಟ್ಟಿದೆ. ಸಂಸ್ಕೃತಿ ಅಥವಾ ಸಂಸ್ಕಾರ ಎಂದರೆ ಸುಧಾರಿಸಿದ, ನಯಗೊಳಿಸಿದ, ಪವಿತ್ರಗೊಳಿಸಿದ, ಪರಿಶುದ್ಧಗೊಳಿಸಿದ, ಶ್ರೇಷ್ಠವಾದ ಮುಂತಾದ ಅರ್ಥಗಳಿವೆ. ಈ ಅರ್ಥಗಳ ಹಿನ್ನೆಲೆಯಲ್ಲಿ ಗಮನಿಸಿದರೆ ಇಲ್ಲಿ ಕಚ್ಚಾತನದಿಂದ ಬೇರ್ಪಡಿಸುವ, ಸುಧಾರಿಸುವ, ಶ್ರೇಣೀಕರಿಸುವ ಮತ್ತು ಪವಿತ್ರೀಕರಿಸುವ ಕ್ರಿಯೆಗಳು ಮುಖ್ಯವಾಗಿವೆ. 'ಸಂಸ್ಕೃತ' ಎಂಬ ಪದವೂ ಪ್ರಾಕೃತಕ್ಕೆ(ಪ್ರಕೃತಿಗೆ) ಭಿನ್ನವಾದುದು, ವ್ಯಾಕರಣ ಶುದ್ಧವಾದುದು ಎಂಬರ್ಥಗಳನ್ನು ಒಳಗೊಂಡಿರುವುದು ಗಮನಾರ್ಹ. ಆದರೆ ಧಾರ್ಮಿಕ ಪಂಥಗಳಿಗೆ ಬಳಕೆಯಾಗುವ 'ಕಲ್ಟ್'

ಎಂಬ ಶಬ್ದವು ಪೂಜೆಯಂತಹ ಆಚರಣೆ, ಕೃಷಿಗೂ ಪ್ರಾಚೀನ ಕಾಲದಲ್ಲಿದ್ದ ಸಂಬಂಧದ ಸಂಕೇತ. ಕೃಷಿ ಮಾಡುವಿಕೆಗೆ ಸಂಬಂಧಿಸಿದ ಈ ಶಬ್ದವನ್ನು ಬಳಸಿಕೊಂಡು ಸಾಗುವಳಿ, ವ್ಯವಸಾಯ(ಅಗ್ರಿಕಲ್ಚರ್), ಮೀನುಗಾರಿಕೆ, ರೇಷ್ಮೆ, ಜೇನು ಮುಂತಾದ ಹುಳು ಸಾಕಣೆ(ಸೆರಿಕಲ್ಚರ್) ಮಾಡುವ ಪದಗಳು ಹುಟ್ಟಿಕೊಂಡವು.

'ಸಂಸ್ಕೃತಿ' ಶಬ್ದಕ್ಕೆ 'ಮಾನಸಿಕ ಪಕ್ವತೆ'- ಒಂದು ದೇಶದ ಅಥವಾ ಜನಾಂಗದ ಮಾನಸಿಕ ಸಾಧನೆ ಎಂಬ ಅರ್ಥಗಳನ್ನು ನಿಘಂಟುಗಳು ಕೊಡುತ್ತವೆ. ಆದರೆ ಈ ಅರ್ಥಗಳೆಲ್ಲ ಈಚೆಗೆ ಸೇರಿದಂತಹವು. ಕಿಟೆಲ್ ತನ್ನ ನಿಘಂಟು ರಚಿಸಿದಾಗ(೧೮೯೪) 'ಸಂಸ್ಕೃತಿ' ಶಬ್ದಕ್ಕೆ ಈ ಯಾವ ಅರ್ಥಗಳು ಇರಲಿಲ್ಲ. ಅವನು 'ಸಂಸ್ಕಾರ' ಎಂದಷ್ಟೇ ದಾಖಲಿಸುತ್ತಾನೆ. 'ಸಂಸ್ಕಾರ'ಕ್ಕೆ ಶುದ್ಧೀಕರಿಸುವ, ಪವಿತ್ರೀಕರಿಸುವ ಅರ್ಥಗಳನ್ನು ಕೊಡುತ್ತಾನೆ. ಎಲ್ಲೂ ಕೂಡ ಸಂಸ್ಕೃತಿಗೆ ಒಂದು ಸಮುದಾಯದ ಜೀವನ ಕ್ರಮಗಳ ಮೊತ್ತ ಎಂದರ್ಥ ನೀಡುವುದಿಲ್ಲ. ಇದಕ್ಕೆ ಕಾರಣ ಸ್ಪಷ್ಟವಾಗಿದೆ. ಅವನ ಕಾಲಕ್ಕೆ ಕನ್ನಡದಲ್ಲಿ 'ಸಂಸ್ಕೃತಿ' ಶಬ್ದವು ಈಗಿನ ಅರ್ಥಗಳಲ್ಲಿ ಬಳಕೆಯಾಗುತ್ತಿರಲಿಲ್ಲ. 'ಸಂಸ್ಕೃತಿ'ಗೆ ಇಂಗ್ಲಿಷಿನ ಸಂವಾದಿ ಪದ ಕಲ್ಚರ್ 'ಕಲ್ಚರ್' ಎಂಬುದು ಲ್ಯಾಟಿನ್ ಭಾಷೆಯ 'ಕಲ್ಟ್' ಅಥವಾ 'ಕಲ್ಟಸ್' ಎಂಬ ಶಬ್ದದಿಂದ ಬಂದಿದೆ. ಈ ಶಬ್ದಗಳಿಗೆ ಮೂಲ ಭೂಮಿ ದೈವದ ಆರಾಧನೆ, ಪೈರು ಬೆಳೆಯುವುದು ಎಂಬ ಅರ್ಥಗಳಿವೆ.[೩]

'ಸಂಸ್ಕೃತಿ' ಹಾಗೂ 'ಕಲ್ಚರ್' ಎಂಬ ಶಬ್ದಗಳು ತಮ್ಮ ಭಾಷಿಕ ಮೂಲದಲ್ಲಿ ಬೇರೆಬೇರೆ ಅರ್ಥಗಳನ್ನು ಹೊಂದಿವೆ. ಒಂದೆಡೆ ಬೆಳೆಯುವುದು ಎಂದರ್ಥವಿದೆ. ಮತ್ತೊಂದೆಡೆ ಶುದ್ಧೀಕರಿಸುವುದು ಎಂಬರ್ಥವಿದೆ.

ಭಾರತೀಯ ಭಾಷಿಕ ವಲಯದಲ್ಲಿ 'ಸಂಸ್ಕೃತಿ' ಎಂಬ ಪದ ಬಂದದ್ದು 'ಸಂಸ್ಕಾರ'ದಿಂದ. ಆದರೆ ಸಂಸ್ಕೃತಿಯನ್ನು ಇಂಗ್ಲಿಷ್ ಪದವಾದ Cultureಗೆ ಸಂವಾದಿಯಾಗಿ ಬಳಸುತ್ತಾರೆ. ಇಂಗ್ಲಿಷ್ ಭಾಷೆಗೆ ಸಹ ಇದು ರೂಪಾಂತರ ಹೊಂದಿ ಬಂದುದಾಗಿದೆ. ಲ್ಯಾಟಿನ್ ಭಾಷೆಯಲ್ಲಿ Colere ಎಂಬ ಪದವನ್ನು ಬಳಸಲಾಗಿದ್ದು, ಈ ಪದಕ್ಕೆ ವಿಶಾಲವಾದ ಅರ್ಥವ್ಯಾಪ್ತಿ ಇದೆ. Inhabit cultivate protect honour with worship ಹೀಗೆ ಅರ್ಥೈಸಬಹುದು. ಬಹುಮುಖ್ಯವಾಗಿ 'Culture' ಎಂಬುದಕ್ಕೆ Cultivation or tending including ಎಂಬ ಅರ್ಥಗಳಿವೆ.[೪]

ಕಲ್ಚರ್ ಪದವನ್ನು ಮೊದಲು ಪ್ರಯೋಗಿಸಿದ್ದು ಕ್ರಿ.ಶ. ೧೫೧೦ರಲ್ಲಿ ಕಾಕ್ಸ್‌ಟನ್ ಎನ್ನುವ ಯುರೋಪಿಯನ್ ವಿದ್ವಾಂಸ. ವಿದೇಶಗಳಲ್ಲಿ ಕಲ್ಚರ್ ಪದಕ್ಕೆ ಸುಮಾರು ೫೦೦ ವರ್ಷಗಳ ಚರಿತ್ರೆಯಿದೆ.

ಮೊದಲಿಗೆ ನಾಮಪದವಾಗಿ(Culture as a noun) ನಂತರ ರೂಪಕವಾಗಿ (Metapher) ಪ್ರಯೋಗಿಸಲಾಗಿದೆ. ಕ್ರಿ.ಶ. ೧೬ರಿಂದ ೧೯ನೇ ಶತಮಾನಗಳವರೆಗೆ 'ಕಲ್ಚರ್' ಎಂಬುದಕ್ಕೆ (Human development) ಮಾನವನ ಅಭಿವೃದ್ಧಿ ಎನ್ನಲಾಗಿದೆ. ಉದಾಹರಣೆ Becon (1605) ಎಂಬುವನು The Culture and manulance of minds ಎಂದೂ, Obbesನು(1651) A Culture of their minds ಎಂದು. Jonson ಎಂಬುವನು She neglected the culture of her understanding ಎಂದಿದ್ದಾರೆ.

ಕ್ರಿ.ಶ. ೧೬೬೦ರಲ್ಲಿ ಮಿಲ್ಟನ್ ಸಂಸ್ಕೃತಿ ಕುರಿತು 'Government and Culture' ಎಂದು ನವೀನ ಅರ್ಥದಲ್ಲಿ ಬಳಸಿದ್ದಾನೆ. ಹೀಗೆ ಅನೇಕರು 'ಸಂಸ್ಕೃತಿ'ಯ ಬಗ್ಗೆ ತಿಳಿಸಿದ್ದಾರೆ.

ಜರ್ಮನಿ ಭಾಷೆಯು ಕಲ್ಚರ್ ಪದವನ್ನು ೧೯ನೇ ಶತಮಾನದಲ್ಲಿ ಫ್ರೆಂಚ್‌ನಿಂದ ಪಡೆದುಕೊಂಡಿತು. ಮೊದಲು ಕಲ್ಚರ್ ಪದದ ಉಚ್ಚಾರ Colere ಎಂದಿತ್ತು, ಜರ್ಮನ್‌ನಲ್ಲಿ Kulture ಎಂಬ ಪದದ ಅರ್ಥ ಮಾನವೀಯತೆಯ ಸ್ವಂತ ಬೆಳವಣಿಗೆಯನ್ನು ಸಂಕೇತಿಸುತ್ತದೆ. ೧೮೬೭ರ ಸುಮಾರಿಗೆ ಕಲ್ಚರ್ ಎಂದರೆ ಅಂತರಂಗದ ಸಂಸ್ಕಾರ, ಮಾನವನ ಬುದ್ಧಿಯ ವ್ಯವಸಾಯ ಎನ್ನಲಾಗುತ್ತಿತ್ತು.[೫] ೧೮೬೯ರಲ್ಲಿ ಮ್ಯಾಥ್ಯೂ ಅರ್ನಾಲ್ಡ್ ಸಂಸ್ಕೃತಿಯ ವಿವಿಧ ಲಕ್ಷಣಗಳನ್ನು ತಿಳಿಸಿರುವುದು ಗಮನಾರ್ಹ. ಅಂದರೆ ಇವರು ಸಂಸ್ಕೃತಿಯನ್ನು 'ಮಾಧುರ್ಯ ಮತ್ತು ಬೆಳಕು'(Sweet and Light) ಎಂದು ಕರೆಯುತ್ತಾನೆ. ಅಂದರೆ ಇದು ಅವನ ವೈಯಕ್ತಿಕ ಗ್ರಹಿಕೆಗೆ ಒಳಪಟ್ಟದ್ದು. ಸ್ಪೆನ್ಸರ್(Spencer)ನು ಸಂಸ್ಕೃತಿಯಲ್ಲಿ ಜೀವಂತಿಕೆಯ ಹಾಗೂ ನಾಗರಿಕತೆಯಲ್ಲಿ ಅವಸಾನದ(Culture is living one civilization is dying one) ಹಂತಗಳನ್ನು ಗುರುತಿಸುತ್ತಾನೆ. ಉದಾಹರಣೆಗೆ ಈಜಿಪ್ಟ್‌ನ ಸಂಸ್ಕೃತಿ, ಸಿಂಧು ಸಂಸ್ಕೃತಿ, ಮೆಸಡೇಮಿಯಸ್ ಸಂಸ್ಕೃತಿ ಇತ್ಯಾದಿ. ಹೀಗಾಗಿ ಸಂಸ್ಕೃತಿಗಳು ಪರ್ಯಾಯ ಪದಗಳಾಗಿಯೂ ಬಳಕೆಯಾಗಿರುವುದು ಉಂಟು. ಅಲ್ಲದೆ ನಗರಗಳಿಂದ ನಾಗರಿಕತೆ ಬಂದಿವೆ ಎಂಬುದನ್ನು ಸಹ ಗಮನದಲ್ಲಿ ಇಟ್ಟುಕೊಳ್ಳಬೇಕಿದೆ. ಅಂದರೆ ಸಂಸ್ಕೃತಿ ಎಂಬುದು ಮಾನವ ತನ್ನ ಆರಂಭಿಕ ಕಾಡು ಜೀವನದಿಂದ ಭಿನ್ನವಾದ ಸ್ಥಿತಿ.[೬]

ಎಡ್ವರ್ಡ್ ಬಿ ಟೈಲರ್ ಎಂಬ ಬ್ರಿಟಿಷ್ ಮಾನವಶಾಸ್ತ್ರಜ್ಞನು ನೀಡಿರುವ, ಸಂಸ್ಕೃತಿಯು ಜ್ಞಾನ, ನಂಬಿಕೆ, ಕಲೆ, ನೈತಿಕ ನಿಯಮ, ಕಾನೂನು, ರೂಢಿ ಮತ್ತು ಮಾನವನು ತನ್ನ ಸಮಾಜದ ಸದಸ್ಯನಾಗಿದ್ದುಕೊಂಡು ಸಾಧಿಸಿದ ಇನ್ನುಳಿದ ಸಾಮರ್ಥ್ಯಗಳನ್ನು ನೈಪುಣ್ಯಗಳನ್ನು ಒಳಗೊಂಡಿರುವ ಅಖಂಡವಾದ ಒಂದು ಸಂಕೀರ್ಣ ವ್ಯವಸ್ಥೆ.

ಮೌಲ್ಯನೌಸ್ಕಿ ಎಂಬ ಮಾನವಶಾಸ್ತ್ರಜ್ಞನ ಮಾನವ ತನ್ನ ಜೀವಿತದ ಗೊತ್ತುಗುರಿಯನ್ನು ರೂಪಿಸಿಕೊಳ್ಳಲು ನಿರ್ಮಿಸಿಕೊಂಡ ಸಾಧನವೇ ಸಂಸ್ಕೃತಿ ಎಂದಿದ್ದಾನೆ. ಸಿ.ಸಿ. ನಾರ್ತ್ ಮಾನವನು ತನ್ನ ಆಶೋತ್ತರಗಳನ್ನು ಪೂರೈಸಿಕೊಳ್ಳಲು ಸಹಕಾರಿಯಾಗುವಂತೆ ಸೃಷ್ಟಿಸಿಕೊಂಡಿರುವ ಸಾಧನಗಳನ್ನೊಳಗೊಂಡಿರುವುದೇ ಸಂಸ್ಕೃತಿ ಎಂದಿದ್ದಾನೆ.[೭] ೧೮ನೇ ಶತಮಾನದಲ್ಲಿ 'ಕಲ್ಚರ್' ಎಂಬುದನ್ನು ಸ್ವತಂತ್ರ ಮತ್ತು ಅಮೂರ್ತ ನಾಮಪದವಾಗಿ ಮಾನವನ ಬೌದ್ಧಿಕ, ಆಧ್ಯಾತ್ಮಿಕ ಮತ್ತು ಸೌಂದರ್ಯಾತ್ಮಕವಾಗಿ ಬಳಸಿದರು. ಇಂಗ್ಲೆಂಡಿನ ಕೈಗಾರೀಕರಣದ ತರುವಾಯ 'ಸಂಸ್ಕೃತಿ' ಪದದ ಹರವು ವಿಶಾಲಗೊಂಡಿತ್ತು.

೧೯೪೪ರಲ್ಲಿ ಸಂಯುಕ್ತ ರಾಷ್ಟ್ರಸಂಘ ಜನ್ಮ ತಾಳಿದಾಗ ಇದರ ಒಂದು ಅಂಗವಾಗಿ ೧೯೪೬ರಲ್ಲಿ ಸ್ಥಾಪಿತವಾದ ಯುನೆಸ್ಕೋ ಸಮಿತಿಯು ಮೊದಲಿಗೆ 'ಸಂಸ್ಕೃತಿ' ಪದವನ್ನು ಬಳಸಿತು. ಕರ್ನಾಟಕದಲ್ಲಿ ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿಯಾದಾಗ 'ಸಂಸ್ಕೃತಿ' ಇಲಾಖೆಯನ್ನು ಸ್ಥಾಪಿಸಿ ಕನ್ನಡ ಸಂಸ್ಕೃತಿಗೆ

ಭದ್ರ ಬುನಾದಿ ಹಾಕಿದರು. ಇಂದು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇಲಾಖೆಗಳಾಗಿ ಕೆಲಸ ನಿರ್ವಹಿಸುವುದು ಗಮನಾರ್ಹ. ಹೀಗೆ ಸರಳವಾಗಿ ಸಂಸ್ಕೃತಿ ಪದದ ಹುಟ್ಟುವಿಕೆಯನ್ನು ಅರಿಯಬಹುದು.

ಈ ಸಂಸ್ಕೃತಿ ಶಬ್ದ ಅಥವಾ ಪರಿಭಾಷೆ ಬಳಕೆಗೆ ಬಂದಿದ್ದು ೧೯ನೇ ಶತಮಾನದಲ್ಲಿ. ಈ ಬಳಕೆಗೆ ಹೆಚ್ಚೆಂದರೆ ಎರಡು ಶತಮಾನಗಳ ಇತಿಹಾಸವಿದೆ. ಕನ್ನಡದಲ್ಲಿ ಸುಮಾರು ೮೦ ವರ್ಷಗಳ ಇತಿಹಾಸವಿದೆ. ಅಂದರೆ ೨೦ನೇ ಶತಮಾನದ ಆರಂಭದಿಂದ ಇದರ ಬಳಕೆ ಬಹಳ ಹೆಚ್ಚಾಯಿತು. ಹೀಗಾಗಿ ಚರಿತ್ರೆ ದೃಷ್ಟಿಯಲ್ಲಿ ಸಂಸ್ಕೃತಿಯನ್ನು ವ್ಯಕ್ತಿನಿಷ್ಠ ಮತ್ತು ವಸ್ತುನಿಷ್ಠ ರೂಪಗಳಲ್ಲೂ ನೋಡಲಾಗುತ್ತದೆ.[೬]

ಯಾವುದೇ ಒಂದು ದೇಶದ ಜನರ ಸಂಸ್ಕೃತಿಯನ್ನು ನಿರ್ಧರಿಸಬೇಕಾದರೆ ಆಯಾ ಕಾಲಘಟ್ಟಗಳ ಸಂಸ್ಕೃತಿಯ ಅವಲೋಕನ ಅಗತ್ಯ. ಇಂಥ ಸಂಸ್ಕೃತಿಗಳ ಹುಟ್ಟುವಿಕೆ ವಿಕಾಸವಾಗುವ ತವಕಗಳು ಕಣ್ಮರೆಯಾಗುವ ಮುನ್ನ ದಾಖಲಿಸುವುದು ಅಥವಾ ಹಿಂದಿನ ದಾಖಲೆಗೊಂಡ ಸಂಸ್ಕೃತಿಯ ಅವಲೋಕನವು ಅಗತ್ಯವಾದದ್ದು.

ಆಂಗ್ಲರ ಆಗಮನವು ಭಾರತಕ್ಕೆ ರಾಜಕೀಯವಾಗಿ ಅನೇಕ ಹಾನಿಗಳನ್ನು ತಂದಿದ್ದರೂ ಅವರ ಸಂಪರ್ಕದಿಂದ ನಮಗೆ ಕೆಲವು ಪ್ರಯೋಜನಗಳು ಆಗಿವೆ ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಇವರು ತಮ್ಮ ಕಾರ್ಯಸಿದ್ಧಿಗಾಗಿ ಇಲ್ಲಿರುವ ಭಾಷೆ, ನೆಲ, ಜಲ, ಇತಿಹಾಸ, ಸಂಸ್ಕೃತಿಗಳನ್ನು ಪರಿಚಯ ಮಾಡಿಕೊಳ್ಳುವಲ್ಲಿ ಅಗತ್ಯಕ್ಕಿಂತ ಹೆಚ್ಚು ಅಧ್ಯಯನ ನಡೆಯಿಸಿದರು. ಭಾರತೀಯ ಸಂಸ್ಕೃತಿಗಳ ಸಾರವನ್ನು ಮೊಟ್ಟಮೊದಲು ಪ್ರಪಂಚದ ಇತರ ಭಾಗಗಳಿಗೆ ಪರಿಚಯ ಮಾಡಿಕೊಟ್ಟ ಕೀರ್ತಿ ಆಂಗ್ಲರಿಗೆ ಸಲ್ಲುತ್ತದೆ.[೭]

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಕಲೆ, ಧರ್ಮ, ಜನರ ರೂಢಿ, ನಂಬಿಕೆ, ಸಂಪ್ರದಾಯ ಮೊದಲಾದ ಸಂಗತಿಗಳು ಅಲ್ಲದೆ ಸಾಹಿತ್ಯ, ವ್ಯಾಕರಣ, ವಾಸ್ತುಶಿಲ್ಪ, ಶಿಲ್ಪ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ರಕ್ಷಿತ ಸ್ಮಾರಕಗಳು ಹಾಗೂ ಜನಪದ ಕಲಾ ಪ್ರಕಾರಗಳು ಇತ್ಯಾದಿಗಳೆಲ್ಲವೂ ನಮ್ಮ ದೇಶದ, ರಾಜ್ಯದ ಸಂಸ್ಕೃತಿಗಳ ವಿಷಯಕ್ಕೆ ಒಳಪಡುವಂತಹ ವಿಚಾರಗಳೆನ್ನಬಹುದು. ಇವುಗಳ ಕುರಿತು ಪಾಶ್ಚಾತ್ಯ ವಿದ್ವಾಂಸರು ಇವುಗಳ ಬಗ್ಗೆ ಆಳವಾದ ಅಧ್ಯಯನ ಕೈಗೊಂಡು ಆ ಸಂಬಂಧದ ಶಾಸ್ತ್ರೀಯ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ನಮ್ಮ ಸಂಸ್ಕೃತಿಯ ಬಗ್ಗೆ ಪಾಶ್ಚಾತ್ಯರ ವಿಶೇಷ ಮನ್ನಣೆ, ಪ್ರೋತ್ಸಾಹದಿಂದ ಹಾಗೂ ಸ್ವಯಂ ಪ್ರೇರಣೆಯಿಂದ ಕೈಗೊಂಡು ಕೊಟ್ಟಿರುವ ಕೊಡುಗೆಗಳು ಮುಂದಿನ ಪೀಳಿಗೆಗೆ ಅಮೂಲ್ಯವಾದುವು ಹಾಗೂ ಅದ್ಭುತವಾದುವು.

ಕ್ರಿ.ಶ. ೧೮ನೇ ಶತಮಾನದವರೆಗೂ ಈ ದೇಶದಲ್ಲಿ ಇಂದು ಇರುವ ನೂರಾರು ಮಾನವ ಜೀವನ ಸೌಕರ್ಯಗಳಾವುವು ಇರಲಿಲ್ಲ. ಇಂದು ಇರುವ ಮಾದರಿಯ ವಿಶ್ವವಿದ್ಯಾಲಯ ಪಾಠಶಾಲೆಗಳಿರಲಿಲ್ಲ. ಮೇಧಾವಿಗಳು ಕಲಿಸುತ್ತಿದ್ದ ಅಂದಿನ ವಿಶ್ವವಿದ್ಯಾಲಯಗಳು ಕೇವಲ ಬ್ರಾಹ್ಮಣರಿಗೆ ಮೀಸಲಾಗಿದ್ದವು. ಅವರು ಬರೆದುಕೊಂಡ ಶ್ರುತಿ-ಸ್ಮೃತಿಗಳೆಲ್ಲ ಜಾತಿಭೇದ ಸೃಷ್ಟಿಸುವ ಕತೆಗಳಾಗಿದ್ದವು. ಅವರು ನಿರ್ಮಿಸಿದ್ದ ಕಟ್ಟು ಕಟ್ಟಳೆಗಳು ಅಷ್ಟೇ ಅನಾಗರಿಕವೂ, ಕ್ರೂರವೂ ಆಗಿದ್ದವು. ನಮ್ಮ ಜನ ಏನೇನೋ ವೇಷತೊಟ್ಟು ವೇದಾಂತ ಹೇಳುತ್ತಿರುವಾಗಲೇ ನಮ್ಮ ದೇಶದ ದಾರಿದ್ರ್ಯವು ಅನಾಗರಿಕತೆಯೂ ಅದೇ ಪ್ರಮಾಣದಲ್ಲಿ ಉಕ್ಕೇರುತ್ತಿತ್ತು.

ಇಂತಹ ಸ್ಥಿತಿಯಲ್ಲಿ ನಮ್ಮ ದೇಶಕ್ಕೆ ಬಂದ ಪಾಶ್ಚಾತ್ಯರು ಈ ದೇಶದ ಆಧುನಿಕ ಜ್ಞಾನ ವಿಕಾಸಕ್ಕೆ ಕಾರಣರಾದರು. ಈ ದೇಶಕ್ಕೆ ಲೋಕವನ್ನು ಪರಿಚಯ ಮಾಡಿದರು. ಪ್ರಾಚೀನ ಕಾವ್ಯ, ಶಾಸನ ಬರೆದು ಪ್ರಕಟಿಸಿದರು. ಸೇವಾ ಪರಾಯಣರೂ ತಾತ್ವಿಕರೂ ಆದ ಬ್ರಿಟಿಷ್ ಅಧಿಕಾರಿಗಳು ಅಂಧಶ್ರದ್ಧೆಯಿಂದ ಸೊರಗುತ್ತಿದ್ದ ನಮ್ಮ ಜನಕ್ಕೆ ಜ್ಞಾನ ಚಕ್ಷುವನ್ನು ನೀಡಿದರು. ಜನತೆಯ ಜೀವನಕ್ರಮ, ನರಬಲಿ, ಶಿಶುಹತ್ಯೆ, ಸತಿಪದ್ಧತಿ, ಕೊಲೆ, ದರೋಡೆ ಇತ್ಯಾದಿ ಕ್ರೂರ ನೀತಿಗಳು ನಿಲ್ಲಿಸಲ್ಪಟ್ಟವು. ಒಟ್ಟಿನಲ್ಲಿ ಪಾಶ್ಚಾತ್ಯರು ನಮ್ಮ ದೇಶವನ್ನು ಮುನ್ನಡೆಸಲಿಕ್ಕೆ ನಾಗರಿಕವಾಗಿಸಲಿಕ್ಕೆ, ಸುಸಂಸ್ಕೃತವಾಗಿಸಲಿಕ್ಕೆ ಬಂದ ರಸಋಷಿಗಳೆಂದು ಹೇಳಿದರೆ ಅತಿಶಯೋಕ್ತಿಯಾಗದು.[೧೦]

ಈ ಸಂದರ್ಭದಲ್ಲಿ ಅನೇಕ ಪ್ರವಾಸಿಗರು, ಧರ್ಮಪ್ರಚಾರಕರು, ವಿದ್ವಾಂಸರೆಲ್ಲರೂ ತಮ್ಮ ಧರ್ಮ ಪ್ರಸಾರಕ್ಕಾಗಿ ಭಾರತಕ್ಕೆ ಬಂದಿದ್ದರು. ಕ್ರೈಸ್ತ ಮಿಶನರಿಗಳು ಆಗ ಬಂದ 'ಜೆಸುಯಿಟ್ ಸೊಸೈಟಿ', ಲಂಡನ್ ಮಿಶನ್, ವೆಸ್ಲಿಯನ್ ಮೆಥಾಡಿಸ್ಟ್ ಮಿಶನ್ ಹಾಗೂ ಜರ್ಮನ್ ಇವ್ಯಾಂಜೆಲಿಕಲ್(ಬಾಸೆಲ್) ಮಿಶನ್ ಇವುಗಳಲ್ಲೊಂದು ಸಂಸ್ಥೆಗೆ ಸೇರಿದವರಾಗಿದ್ದರು. ಮೊದಲನೆಯದು ರೋಮನ್ ಕ್ಯಾಥೋಲಿಕರಾಗಿದ್ದಾರೆ. ಉಳಿದವು ಪ್ರೊಟೆಸ್ಟಂಟ್ ಸಂಸ್ಥೆಗಳಾಗಿವೆ. ಭಾರತದ ಇತರ ಕಡೆಗಳಲ್ಲಿ ಕಂಡುಬರುವ ಡೇನಿಶ್ ಹಾಗೂ ಅಮೆರಿಕನ್ ಬ್ಯಾಪಿಸ್ಟ್ ಮೊದಲಾದ ಸಂಸ್ಥೆಯವರು ಕರ್ನಾಟಕಕ್ಕೆ ಬಂದಿರಲಿಲ್ಲ.

ನಮ್ಮ ನಾಡಿನಲ್ಲಿ ಮಿಶನರಿ ಚಟುವಟಿಕೆಯು ೧೭ನೆಯ ಶತಮಾನದಷ್ಟು ಹಿಂದಿನ ಕಾಲದ್ದು. ಅದನ್ನು ಆರಂಭಿಸಿದವರು ಜೆಸುಯಿಟ್ ಪಾದ್ರಿಯಾದ ಲಿಯೋನಾರೊ ಸಿನ್ನಾಮಿ(೧೬೦೯-೧೬೭೬). ಇವನು ಕಾಲವಾದ ಮೇಲೆ ಜೆಸುಯಿಟ್‌ರ ಮತಾಂತರ ಕಾರ್ಯವು ಮುಂದುವರಿದು ಮಂಗಳೂರು, ಬೆಂಗಳೂರು, ರೋಮನ್ ಕ್ಯಾಥೋಲಿಕ್ ವಸತಿಯ ಪ್ರಮುಖ ಕೇಂದ್ರಗಳಾದವು. ಕ್ರಿ.ಶ. ೧೮೫೦ರಲ್ಲಿ ಚಾರ್ಬೊನ್ ಎಂಬುವನು ಮೈಸೂರು ಸಂಸ್ಥಾನದ 'ವಿಕಾರ ಎಪೊಸ್ಟಿಲಿಕ್' ಆದಾಗಿನಿಂದ ಕ್ಯಾಥೋಲಿಕ್‌ರ ಕನ್ನಡ ಚಟುವಟಿಕೆಗಳು ಕಂಡುಬಂದವು.[೧೧] ಅನಂತರ ಭಾರತದ ವಿವಿಧ ಪ್ರದೇಶಗಳಲ್ಲಿ ಮಿಶನರಿಗಳು ಬಲವಾಗಿ ಬೇರೂರಿ ಅದ್ಭುತವಾದ ಪ್ರಗತಿಯನ್ನು ಸಾಧಿಸಿದ್ದವು. ಅಪಾರವಾದ ತಾಳ್ಮೆ, ಕಷ್ಟ ಸಹಿಷ್ಣುತೆ, ಮತಾಭಿಮಾನ, ಕಾರ್ಯ ಮಗ್ನತೆ, ದೃಢ ಮನಸ್ಸುಗಳು ಅವರುಗಳ ಮುಖ್ಯ ಗುರಿಗಳಾಗಿದ್ದವು.[೧೨]

ಆ ಮೂಲಕವಾಗಿ ಪಾಶ್ಚಾತ್ಯ ವಿದ್ವಾಂಸರು ಹಾಗೂ ಕ್ರೈಸ್ತ ಪಾದ್ರಿಗಳಿಂದಲೂ ಸಹ ಕನ್ನಡದ ಅನೇಕ ಗ್ರಂಥೋದ್ಯಮ, ಪತ್ರಿಕೋದ್ಯಮ, ಕನ್ನಡ, ಇಂಗ್ಲಿಷ್ ನಿಘಂಟು, ಇತರೆ ಕೃತಿಗಳ ಸಂಪಾದನೆಗೆ ಕಾರಣಕರ್ತರಾದರು.

ಪ್ರಮುಖವಾಗಿ ಕನ್ನಡ ಸಾಹಿತ್ಯದಲ್ಲಿ ಭಾಷೆ, ಕನ್ನಡ ಸಾಹಿತ್ಯ, ಉರ್ದು ಸಾಹಿತ್ಯ, ಇಂಗ್ಲಿಷ್ ಸಾಹಿತ್ಯ ಇತರೇ ಸಾಹಿತ್ಯ ವರ್ಗಗಳನ್ನು ಗುರುತಿಸುವುದಾಗಿದೆ. ಇವು ಭಾಷೆಯ ಬಗ್ಗೆ ಯುರೋಪಿಯನ್ ವಿದ್ವಾಂಸರ ಕೊಡುಗೆಗಳಾಗಿದ್ದವು ಎಂಬುದನ್ನು ನೋಡುವುದಾದರೆ, ಬ್ರಿಟಿಷರು ತಮ್ಮ ಆಳ್ವಿಕೆಯ ಕಾಲದಲ್ಲಿ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಜಾರಿಗೊಳಿಸಿದ್ದರೆಂಬುದು ತಿಳಿದಿಲ್ಲ. ಬ್ರಿಟಿಷರು ಆಡಳಿತದ ಸೌಕರ್ಯಕ್ಕಾಗಿ ಇಂಗ್ಲಿಷ್ ಭಾಷೆಯನ್ನು ಮಾಧ್ಯಮವನ್ನಾಗಿ ಮಾಡಿಕೊಂಡರು. ಪ್ರಾಂತೀಯ ಮಟ್ಟದಲ್ಲಿ ಪ್ರಾಂತೀಯ ಭಾಷೆಯು

ಇರಬೇಕೆಂಬ ನಿಯಮವನ್ನು ಜಾರಿಗೊಳಿಸಿದರು. ಸರ್ಕಾರ ಮತ್ತು ಪ್ರಜೆಗಳ ಮಧ್ಯೆ ಸರಿಯಾದ ತಿಳುವಳಿಕೆ ಬರಬೇಕಾದರೆ ಆಯಾ ಪ್ರಾಂತದ ಭಾಷೆಯು ಆಡಳಿತ ಭಾಷೆಯಾಗುವುದರಿಂದ ಮಾತ್ರ ಸಾಧ್ಯ ಎಂಬುದು ಅವರ ನಿಲುವಾಗಿತ್ತು.

ಬ್ರಿಟಿಷರು ಕರ್ನಾಟಕದಲ್ಲಿ ಕನ್ನಡವೇ ಆಡಳಿತ ಭಾಷೆಯಾಗಬೇಕೆಂದು ಹೊರಡಿಸಿರುವ ಆದೇಶಗಳು ಸರ್ಕಾರದ ವರದಿಗಳು ಜನಸಾಮಾನ್ಯರ ತಿಳುವಳಿಕೆಗೆ ಬೇಕಾದ ಕರಪತ್ರಗಳು ಕನ್ನಡದಲ್ಲಿಯೇ ಇವೆ. ಕ್ರಿ.ಶ. ೧೮೬೬ರಲ್ಲಿ ಮೈಸೂರು ರಾಜ್ಯದಲ್ಲಿ ಪ್ರಥಮ ಮೈಸೂರು ಗೆಜೆಟು ಅಚ್ಚಾಯಿತು. ಎಲ್. ರಿಕೆಟ್ಸ್ ಎಂಬ ಆಂಗ್ಲ ಅಧಿಕಾರಿಯು ಆ ಗೆಜೆಟ್ಟಿನ ಸಂಪಾದಕನಾಗಿದ್ದನು. ಅವನು ತನ್ನ ಸಂಪಾದಕೀಯದಲ್ಲಿ ಹೀಗೆ ಬರೆಯುತ್ತಾನೆ. ನಮ್ಮ ಭಾಷೆ ಇಂಗ್ಲಿಷ್. ಮೈಸೂರು ರಾಜ್ಯದ ಜನರಾಡುವ ಭಾಷೆ ಕನ್ನಡ. ಹೀಗಾಗಿ ಜನರ ಬೇಕು-ಬೇಡಿಕೆಗಳು ನನಗರ್ಥವಾಗುವುದಿಲ್ಲ. ನಮ್ಮ ಆಡಳಿತ ವೈಖರಿಯು ಜನರಿಗೆ ತಿಳಿಯುವುದಿಲ್ಲ. ಇಂಥ ಪರಿಸ್ಥಿತಿ ಇರುವುದರಿಂದ ಜನತೆ ಮತ್ತು ಸರ್ಕಾರದ ಮಧ್ಯೆ ಮಧುರ ಬಾಂಧವ್ಯ ಏರ್ಪಡದಾಗಿದೆ. ಜನರ ಬೇಕು-ಬೇಡಗಳು ಅರ್ಥವಾಗದ ಪ್ರಯುಕ್ತ ನಮ್ಮ ಆಡಳಿತ ಕುಸಿದು ಬಿದ್ದಿದೆ. ಆಡಳಿತವು ಸಮರ್ಥವಾಗಿ, ಸರ್ವ ಜನಾದರಣೀಯವಾಗಿ ಆಗಬೇಕಾದರೆ ಆಡುವ ಭಾಷೆಯೇ ಆಡಳಿತ ಭಾಷೆಯಾಗಬೇಕು. ಈ ದೃಷ್ಟಿಯಿಂದ ಮೈಸೂರು ರಾಜ್ಯದಲ್ಲಿ ಜನರಾಡುವ ಭಾಷೆಯಲ್ಲೇ ಆಡಳಿತ ಭಾಷೆಯನ್ನಾಗಿ ಮಾಡಿದ್ದೇವೆ. ಇನ್ನು ಮುಂದೆ ಸಾರ್ವಜನಿಕರು ಸರ್ಕಾರದೊಂದಿಗೆ ಕನ್ನಡದಲ್ಲಿಯೇ ವ್ಯವಹರಿಸಬೇಕು ಎಂಬ ವಿಷಯವನ್ನು ಸಂಪಾದಕೀಯ ದಲ್ಲಿ ಬರೆದನು. ನಂತರ ನಾಲ್ಕು ತಿಂಗಳು ಕಳೆದ ಮೇಲೆ ಪಿ.ಜಿ. ಕ್ಲಾರ್ಕ್ ಎಂಬುವರು ಈ ಗೆಜೆಟಿನ ಸಂಪಾದಕತ್ವವನ್ನು ವಹಿಸಿಕೊಂಡರು. ಅವರು ಈ ಕಚೇರಿಗೆ ಬಂದಾಗ ಹೆಚ್ಚಾಗಿ ಇಂಗ್ಲಿಷ್ ಬರಹಗಳನ್ನು ಕಂಡರು. ಕೂಡಲೇ ಅವರು ಇಸ್ತೀಹಾರ ನಾಮೆಯೊಂದನ್ನು ಪ್ರಕಟಿಸಿ ಕೆಳಗಿನಂತೆ ಸಾರ್ವಜನಿಕರಿಗೆ ತಿಳುವಳಿಕೆ ನೀಡಿದರು.

ಮೈಸೂರು ರಾಜ್ಯದ ಆಡಳಿತ ಭಾಷೆಯು ಜನರಾಡುವ ಭಾಷೆಯಾದ ಕನ್ನಡವೇ ಆಗಿ ನಾಲ್ಕು ತಿಂಗಳುಗಳು ಗತಿಸಿವೆ. ಹೀಗಿದ್ದೂ ಜನ ಇನ್ನೂ ಇಂಗ್ಲಿಷಿನಲ್ಲಿಯೇ ಪತ್ರ ವ್ಯವಹಾರ ಮಾಡುತ್ತಿದ್ದೀರಿ. ಇನ್ನು ಮುಂದೆ ಜನರು ಸರ್ಕಾರದೊಂದಿಗೆ ಕನ್ನಡೇತರ ಭಾಷೆಯಲ್ಲಿ ವ್ಯವಹರಿಸಿದರೆ ಇವುಗಳನ್ನು ಗಣನೆಗೆ ತೆಗೆದು ಕೊಳ್ಳುವುದಿಲ್ಲ. ಪ್ರಾದೇಶಿಕ ಭಾಷೆಗಳ ಉದ್ಧಾರದ ಬಗ್ಗೆ ಅತ್ಯಂತ ಆಸಕ್ತಿ ತೋರಿದ ಆಂಗ್ಲ ಅಧಿಕಾರಿ ಸರ್ ಥಾಮಸ್ ಮನ್ರೋ ಭಾಷೆ ಬಾರದ ಯುರೋಪಿಯನ್ ನ್ಯಾಯಾಧೀಶರಿಂದ ಮುಗ್ಧ ಕನ್ನಡಿಗರು ಘೋರ ಶಿಕ್ಷೆಯನ್ನು ಅನುಭವಿಸುತ್ತಿದ್ದಾರೆ ಅದನ್ನು ತಪ್ಪಿಸಲು ಸ್ಥಳೀಯರನ್ನು ನೇಮಿಸಬೇಕೆಂದು ಈತನ ಅಭಿಪ್ರಾಯ ವಾಗಿತ್ತು.[೨] ಈ ಮೂಲಕವಾಗಿ ಪಾಶ್ಚಾತ್ಯ ವಿದ್ವಾಂಸರಿಂದ ಅನೇಕ ಕನ್ನಡ ಕೆಲಸ ಕಾರ್ಯಗಳು ನಡೆದಿರುವುದು ಸ್ಪಷ್ಟವಾದದ್ದು.

ಆಂಗ್ಲರ ಆಡಳಿತದಲ್ಲಿ ಅನೇಕ ನಿಘಂಟುಗಳು, ಪದಕೋಶಗಳು ಪಾಶ್ಚಾತ್ಯರಿಂದ ರಚಿಸಲ್ಪಟ್ಟಿವೆ. ಕನ್ನಡದಲ್ಲಿ ನಿಘಂಟುಶಾಸ್ತ್ರವು ಒಂದು ಸಾವಿರ ವರ್ಷಗಳ ಪ್ರಾಚೀನತೆಯನ್ನು ಹೊಂದಿದೆ. ಈ ವಸಾಹತು

ಅವಧಿಯಲ್ಲಿ ಬೆಳೆದುಬಂದ ಕನ್ನಡ ನಿಘಂಟು ಶಾಸ್ತ್ರದಿಂದಾಗಿ ಗಣನೀಯ ಸಂಖ್ಯೆಯಲ್ಲಿ ನಿಘಂಟುಗಳು ರಚಿತವಾಗಿವೆ. ಪಾಶ್ಚಾತ್ಯರದ್ದು ಈ ದಿಶೆಯಲ್ಲಿ ಮೇಲುಗೈ. ಕನ್ನಡ ನಿಘಂಟುಗಳು ವೈವಿಧ್ಯಪೂರ್ಣವಾಗಿದ್ದು, ಏಕಾಕ್ಷರ ನಿಘಂಟು, ನಾನಾರ್ಥ ನಿಘಂಟು, ವೈದ್ಯ ನಿಘಂಟು ಇತ್ಯಾದಿ ಪ್ರಕಾರಗಳಿವೆ. ಕನ್ನಡ ಭಾಷಾ ಸಂಪತ್ತನ್ನು ಪ್ರತಿನಿಧಿಸುವ ಈ ನಿಘಂಟುಗಳು ಪದಸಂಪತ್ತಿಲ್ಲ ಎನ್ನುವವರಿಗೆ ಇಂದು ಸಮರ್ಪಕ ಉತ್ತರ ಕೊಡಬಲ್ಲವು. ಕನ್ನಡದಲ್ಲಿ ರಚಿತವಾದ ಪ್ರಾಚೀನ ನಿಘಂಟು ರನ್ನ ಕವಿಯ 'ರನ್ನ ಕಂದ'(ಕಂದ ಪದ್ಯದಲ್ಲಿದೆ) ಎಂಬುದು ಕ್ರಿ.ಶ. ೯೯೩ರಲ್ಲಿ ರಚಿತವಾಗಿದೆ.[೧೪]

ಆದರೆ ಆಂಗ್ಲರ ಆಡಳಿತದಲ್ಲಿ ಕನ್ನಡ ನಿಘಂಟನ್ನು ರಚಿಸಿರುವರಲ್ಲಿ ವಿಲಿಯಂ ರೀವ್‌ನದು ಪ್ರಥಮ ಹೆಸರು. ನಿಘಂಟು ಕಾರ್ಯ ಆಂಗ್ಲ ಆಡಳಿತಗಾರರಿಗೆ ಅಗತ್ಯವಾಗಿದ್ದು, ಅಂದಿನ ಮದ್ರಾಸು ಸರ್ಕಾರದ ಗವರ್ನರ್ ಆಗಿದ್ದ ಥಾಮಸ್ ಮನ್ರೋವಿನ ಸೂಚನೆಯ ಪ್ರಕಾರ ನಿಘಂಟು ತಯಾರಿಕೆ ಕಾರ್ಯವನ್ನು ೧೮೧೭ರಲ್ಲಿ ರೀವ್ ಆರಂಭಿಸುತ್ತಾನೆ. ಮೊದಲು ಈತನು ತಯಾರಿಸಿದ ಕೋಶದ ಕೆಲವು ಮಾದರಿಗಳನ್ನು ಪ್ರೊಟೆಸ್ಟೆಂಟ್ ಜಾರ್ಜ್ ಕಾಲೇಜ್‌ನ ಅಧಿಕಾರಿಗಳಿಗೆ ಸಾದರಪಡಿಸಲಾಯಿತು. ಅವರ ಒಪ್ಪಿಗೆ ದೊರೆತ ಮೇಲೆ ಕಂಪನಿ ಸರ್ಕಾರವೇ ಅದರ ಮುದ್ರಣ ಪ್ರಕಟಣೆಗಳನ್ನು ಹೊತ್ತು ೧೮೩೨ರಲ್ಲಿ ಪೂರೈಸಿತು. ಮನ್ರೋವಿನ ಸಹಾಯವನ್ನು ನೆನೆದು ರೀವ್ ತನ್ನ ಕೃತಿಯನ್ನು ಆತನಿಗೆ ಅರ್ಪಿಸಿದ್ದಾನೆ.[೧೫]

ಭಾಷೆಯನ್ನು ಕಲಿಯುವವರಿಗೆ ಕನ್ನಡ ಸಂಭಾಷಣೆಯ ಇಂಗ್ಲಿಷ್ ಅನುವಾದವಲ್ಲದೆ ದಿನನಿತ್ಯ ಬಳಕೆಯ ಅನೇಕ ಆಡುಭಾಷೆಯ ಪದಗಳ ಅನುವಾದವನ್ನು ಇದರಲ್ಲಿ ಕೊಟ್ಟಿದ್ದಾನೆ. ಮೂಲ ಪದಗಳು ಮತ್ತು ಅವುಗಳಿಂದ ನಿಷ್ಪನ್ನಗೊಂಡ ಇತರೇ ಕನ್ನಡ ಪದಗಳಿಗೆ ಇದರಲ್ಲಿ ಸಮಾನಾರ್ಥ ಪದಗಳನ್ನು ಕೊಡಲಾಗಿದೆ. ೧೮೫೮ರಲ್ಲಿ ವಿಲಿಯಂ ರೀವ್‌ನ ನಿಘಂಟನ್ನು ಆಧಾರವಾಗಿಟ್ಟುಕೊಂಡು ಅದನ್ನು ಸಂಪಾದಿಸಿ, ಪರಿಷ್ಕರಿಸಿ ರೆ.ಡಿ. ಸ್ಯಾಂಡರ್‌ಸನ್ ಎಂಬುವನು ಬೆಂಗಳೂರಿನಲ್ಲಿ ಅಚ್ಚು ಹಾಕಿಸುತ್ತಾನೆ. ಮುದ್ರಣದಲ್ಲಿ ಸುಧಾರಣೆ ಮತ್ತು ಸ್ವಲ್ಪಮಟ್ಟಿನ ಶಾಸ್ತ್ರೀಯತೆ ಈತನ 'ಎ ಡಿಕ್ಷನರಿ ಕ್ಯಾನರೀಸ್ ಆ್ಯಂಡ್ ಇಂಗ್ಲಿಷ್'ನಲ್ಲಿ ಕಾಣಬರುತ್ತದೆ. ಈ ನಿಘಂಟು ಪರಿಷ್ಕೃತ ಮುದ್ರಣವಾಗಿದ್ದರೂ ಹಲವೆಡೆ ತಿದ್ದಿದ್ದಾನೆ. ಕೆಲವು ಹೊಸ ಶಬ್ದಗಳನ್ನು ಸೇರಿಸಿದ್ದಾನೆ. ಶಾಲೆಗಳಲ್ಲಿ ಕೈಪಿಡಿಯಾಗಿ ಉಪಯೋಗಿಸಲು ಯೋಗ್ಯವಾದದ್ದೆಂದು ಈತನೇ ಹೇಳಿದ್ದಾನೆ. ಈಗಿನ ನಿಘಂಟು ಹಲವು ಭಾರಿ ಪುನರ್ ಮುದ್ರಣವಾಯಿತು. ಮೈಸೂರಿನ ಶಿಕ್ಷಣ ಇಲಾಖೆಯ ನಿರ್ದೇಶಕನಾಗಿದ್ದ ರೆ. ಗ್ಯಾರೆಟ್ ೧೮೭೧ರಲ್ಲಿ 'ಕ್ಯಾನರೀಸ್ ಅಂಡ್ ಇಂಗ್ಲಿಷ್ ಡಿಕ್ಷನರಿ' ರಚಿಸಿದ. ಈತನು ರಚಿಸಿದ ಶಾಲಾ ಪಠ್ಯಪುಸ್ತಕಗಳಂತೆ ನಿಘಂಟು ಸಹ ಹೆಚ್ಚು ಜನಪ್ರಿಯವಾಗಿದ್ದು, ಅಂದಿನ ಶಾಲೆಗಳಲ್ಲಿ ಹೆಚ್ಚಾಗಿ ಬಳಸಲಾಗುತ್ತಿತ್ತು. ಇವನ ಕನ್ನಡ ಇಂಗ್ಲಿಷ್ ನಿಘಂಟಿನಲ್ಲಿ ಸುಮಾರು ೧೮,೦೦೦ ಪದಗಳಿದ್ದು, ಇದು ೧೮೮೬ರ ಹೊತ್ತಿಗೆ ಬಾಸೆಲ್ ಮಿಷನ್‌ನಿಂದ ಪುನರ್ ಮುದ್ರಣಗೊಂಡು ಎ ಸ್ಕೂಲ್ ಡಿಕ್ಷನರಿ ಎಂಬ ಹೆಸರಿನಿಂದ ಜನಪ್ರಿಯತೆ ಪಡೆಯಿತು.

೧೮೮೯ರಲ್ಲಿ ರೆ. ಜೀಗ್ಲರನು 'ಎ ಸ್ಕೂಲ್ ಡಿಕ್ಷನರಿ' ಎಂಬ ಇಂಗ್ಲಿಷ್, ಕನ್ನಡ ನಿಘಂಟನ್ನು ರಚಿಸಿದನು. ಇದು ಉತ್ತರ ಕರ್ನಾಟಕದ ಅನೇಕ ಶಾಲೆಗಳಲ್ಲಿ ಜನಪ್ರಿಯವಾಗಿತ್ತು. ಇದು ೧೮೯೮ರ ಹೊತ್ತಿಗೆ ಒಂದೆರಡು ಬಾರಿ ಪುನರ್‌ಮುದ್ರಣವಾಯಿತು.

ಆಂಗ್ಲರ ಆಡಳಿತದಲ್ಲಿ ಹಲವು ನಿಘಂಟುಗಳು ಪಾಶ್ಚಾತ್ಯದಿಂದ ರಚಿತವಾದರೂ, ಪರಿಪೂರ್ಣ ನಿಘಂಟು ರಚನೆಯಾಗಿದ್ದು, ರೆ.ಎಫ್. ಕಿಟೆಲ್‌ನಿಂದಲೇ ಎನ್ನಬಹುದು. ಹದಿನೈದು ವರ್ಷಗಳ ಪರಿಶ್ರಮದ ಫಲವಾಗಿದ್ದ ವಿಲಿಯಂ ರೀವ್‌ನ ನಿಘಂಟು ಸಾಧನೆ ಮತ್ತು ಶ್ರದ್ಧೆಗಳ ಸಂಕೇತವಾದರೂ, ಶಾಸ್ತ್ರೀಯತೆ ಮತ್ತು ಸಂಪೂರ್ಣತೆ ದೃಷ್ಟಿಯಿಂದ ಅಲ್ಪಮಟ್ಟಿಗೆ ಸೊರಗಿತ್ತು. ಕನ್ನಡದಲ್ಲಿ ಶಾಸ್ತ್ರೀಯ ನಿಘಂಟಿನ ಕೊರತೆಯನ್ನು ಮನಗಂಡ ಕಿಟೆಲ್ ಅಂಥದೊಂದು ಕೋಶದ ನಿರ್ಮಾಣಕ್ಕೆ ಬಹುಜ್ಞಾತಿಶಬ್ದಗಳನ್ನು ಸಂಗ್ರಹಿಸಿ, ನಿಷ್ಪತ್ತಿಯನ್ನು ಸೂಚಿಸಿದ. ಗ್ರಂಥಸ್ಥ ಉದಾಹರಣೆಗಳನ್ನು ಕೊಡುವುದಲ್ಲದೆ ೭೦ ಸಾವಿರ ಶಬ್ದಗಳನ್ನೊಳಗೊಂಡ ಹಸ್ತಪ್ರತಿಯನ್ನು ಸಂಕಲಿಸಿದ ೧೮೮೭ರಲ್ಲಿ ಕಿಟೆಲ್ ಜರ್ಮನಿಗೆ ಹೋಗಿ ಟುಬಿಂಜನ್ ವಿಶ್ವವಿದ್ಯಾಲಯದ ಹತ್ತಿರ ತಮ್ಮ ಕುಟುಂಬದೊಂದಿಗೆ ವಾಸ ಮಾಡತೊಡಗಿದ. ಮಂಗಳೂರಿನಲ್ಲಿ ಪ್ರಕಟವಾಗುತ್ತಿದ್ದ ಕೋಶದ ಪರಿವೀಕ್ಷಣೆ ಕಾರ್ಯವನ್ನು ಟುಬಿಂಜನ್‌ನಿಂದಲೇ ನೋಡುತ್ತಿದ್ದು, ೧೮೯೩ರಲ್ಲಿ ಅದಕ್ಕೆ ಮೊದಲ ಮಾತುಗಳನ್ನು ಬರೆದ. ೧೮೯೪ರಲ್ಲಿ ಅವನ ಜೀವನದ ಪರಮೋಚ್ಚ ಕೃತಿ 'ಕನ್ನಡ-ಇಂಗ್ಲಿಷ್ ನಿಘಂಟು' ಪ್ರಕಟವಾಯಿತು.

೧೮೯೪ರಲ್ಲಿ ಪ್ರಕಟವಾದ ಈ ನಿಘಂಟು ಇಂದಿಗೂ ಕನ್ನಡ ಭಾಷೆಯ ನಿಷ್ಕೃಷ್ಟವಾದ ಮಹಾ ಶಬ್ದಕೋಶವಾಗಿದೆ. ಇಷ್ಟು ಖಚಿತವೂ, ಶಾಸ್ತ್ರೀಯವೂ, ನಿಯಮಬದ್ಧವೂ ಆದ ನಿಘಂಟು ಭರತಖಂಡದ ಯಾವ ದೇಶ ಭಾಷೆಗೂ ಇಲ್ಲವೆಂದು ಬಲ್ಲವರು ಹೇಳುತ್ತಾರೆ. ಜಾನ್‌ಬುಚರ್ ಎಂಬುವವನ 'ಕನ್ನಡ-ಇಂಗ್ಲಿಷ್ 'ಅರ್ಥಕೋಶ'ವು ೧೮೯೯ರಲ್ಲಿ ಪ್ರಕಟವಾಯಿತು. ರೆ. ಕಿಟೆಲ್ ಅವರ ಬೃಹತ್ ಕೋಶದ ಆಧಾರದ ಮೇಲೆ ರಚಿತವಾಗಿರುವ ಇವನ ಪುಟ್ಟ ನಿಘಂಟು ಹಲವು ಬಾರಿ ಪುನರ್‌ಮುದ್ರಣವನ್ನು ಕಂಡಿತು.

೧೮೫೭ರಲ್ಲಿ ದೇಶೀಯನಾದ ಶ್ರೀನಿವಾಸಯ್ಯ ಎಂಬುವನು ಆಂಗ್ಲ ಅಧಿಕಾರಿಗಳು ಕನ್ನಡವನ್ನು ಕಲಿಯಲು ಸುಲಭವಾಗುವಂತೆ 'ವಿಲೇಜ್ ಡೈಲಾಗ್ಸ್' ಎಂಬ ಪುಸ್ತಕವನ್ನು ಬರೆದನೆಂದು ತಿಳಿದುಬರುತ್ತದೆ. ಇದೇ ಉದ್ದೇಶದಿಂದ ಬರೆದ ಮತ್ತೊಂದು ಕೃತಿ ಎಸ್.ಬಿ. ಕೃಷ್ಣಸ್ವಾಮಿ ಅಯ್ಯಂಗಾರರ 'ಡೈಲಾಗ್ಸ್ ಆನ್ ರೆವಿನ್ಯೂ ಮ್ಯಾಟರ್ಸ್' ೧೮೬೦ರಲ್ಲಿ ಪ್ರಕಟವಾಯಿತು. ೧೮೫೮ರಲ್ಲಿ ಸ್ಯಾಂಡರಸನ್ 'ವಿಲೇಜ್ ಡೈಲಾಗ್ಸ್ ಇನ್ ಕೆನರೀಸ್' ಎಂಬ ಪುಸ್ತಕವನ್ನು ಬರೆದನು.

ಉಲ್ಲಾಳ ನರಸಿಂಹರಾಯ ಎಂಬುವರು ೧೮೯೧ರಲ್ಲಿ 'ಕಿ ಸಂವಾದ ಗ್ಲಾಸರಿ' ಎಂಬ ಪದಕೋಶವನ್ನು ರಚಿಸಿದರು. ಆಡಳಿತಗಾರರು ಮತ್ತು ಭಾಷಾಂತರಕಾರರಿಗೆ ಇಂಗ್ಲಿಷ್ ಶಬ್ದಗಳಿಗೆ ಪ್ರತಿಯಾಗಿ ಕನ್ನಡ ಶಬ್ದಗಳು ಬೇಗ ದೊರೆಯಬೇಕೆಂಬ ಉದ್ದೇಶದಿಂದ ಈ ಪದಕೋಶ ರಚನೆಯಾಗಿದೆ. ಇಲಾಖೆ ಮತ್ತು ಆಡಳಿತ ಸಂಬಂಧ ನಿತ್ಯ ಬಳಕೆಯ ಪದಗಳು, ವಾಸ್ತುಶಿಲ್ಪ, ತಾಂತ್ರಿಕ ಜ್ಞಾನ, ಮರಗೆಲಸ ಹೀಗೆ ವೃತ್ತಿ ಸಂಬಂಧ ಅನೇಕ ಪದಗಳನ್ನು ಇದರಲ್ಲಿ ಕೊಡಲಾಗಿದೆ. 'ದಿ ಕನ್ನಡ ಸೈಂಟಿಫಿಕ್ ಗ್ಲಾಸರಿ'(ಪಾರಿಭಾಷಿಕ ನಿಘಂಟು) ಎಂಬ ನಿಘಂಟನ್ನು ಕೆ.ಆರ್. ಚಕ್ರವರ್ತಿ ಎಂಬುವರು ೧೯೨೩ರಲ್ಲಿ ರಚಿಸಿದ್ದಾರೆ. ೧೯೩೩ರಲ್ಲಿ ಮದ್ರಾಸ್ ಸರ್ಕಾರದ ಅಚ್ಚುಕೂಟದಲ್ಲಿ 'ಲಿಸ್ಟ್ ಆಫ್ ಸೈಂಟಿಫಿಕ್ ಟರ್ಮ್ಸ್' ಎಂಬ ಪದಕೋಶ ರಚಿತವಾಗಿದೆ.[೨] ಇವುಗಳೆಲ್ಲವೂ ಸಹ ಆಂಗ್ಲ ಅಧಿಕಾರಿಗಳು ಮಿಶನರಿಗಳಿಂದ ರಚಿಸಲ್ಪಟ್ಟಂತಹ ಪದಕೋಶಗಳಾಗಿವೆ. ಇವು ಕನ್ನಡಿಗರಿಗೆ ಕೊಟ್ಟಿರುವ ಅಮೂಲ್ಯ ಕಾಣಿಕೆ ಎಂದರೆ ತಪ್ಪಾಗಲಾರದು.

**ಸಾಹಿತ್ಯ**

ಬ್ರಿಟಿಷರು ನಿಘಂಟುಗಳನ್ನಲ್ಲದೆ, ಅನೇಕ ಗ್ರಂಥಗಳ ಸಂಪಾದನೆ, ಅನುವಾದ ಇತ್ಯಾದಿ ರಚನೆಯಲ್ಲಿ ತೊಡಗಿರುವುದಾಗಿ ತಿಳಿದುಬರುತ್ತದೆ. ಭಾಷೆಗಷ್ಟೇ ಅಲ್ಲದೆ ಸಾಹಿತ್ಯದಲ್ಲೂ ಸಾಕಷ್ಟು ಸಂಖ್ಯೆಯಲ್ಲಿ ಗ್ರಂಥಗಳು ರಚನೆಗೊಂಡವು. ಇವರು ಆಡಳಿತ ನಿರ್ವಹಣೆಗೆ ಅಗತ್ಯವಿದ್ದ ಕನ್ನಡ ಭಾಷಾಭ್ಯಾಸವನ್ನು ಮಾಡಿ ತಮ್ಮ ಸಹಜ ಜ್ಞಾನತೃಷೆಯ ನಿವಾರಣೆಗಾಗಿ ಸಾಹಿತ್ಯಾಭ್ಯಾಸವನ್ನು ಕೈಗೊಂಡು ತಮಗೆ ವೇದ್ಯವಾದುದನ್ನು ತರ್ಕಬದ್ಧವಾಗಿ ಸಾಹಿತ್ಯಾಭ್ಯಾಸದ ಬರಹದಲ್ಲಿ ಮೂಡಿಸಿದರು. ಜಾನ್ ಮೆಕಾಕೆರಲ್ ಇವನು ೧೮೦೪ರಲ್ಲಿ ಮದ್ರಾಸಿಗೆ ಬಂದನು. ಆರಂಭದಲ್ಲಿ ತೆಲುಗನ್ನು ಕುರಿತು ೧೮೦೬-೧೮೧೧ರ ಈ ಅವಧಿಯಲ್ಲಿ ಕೆನರಾ ಜಿಲ್ಲೆಯಲ್ಲಿ ಇವನು ಭಾಷಾಂತರಕಾರನಾಗಿ ಕೆಲಸ ಮಾಡಿದನು. ಸಂಸ್ಕೃತ, ಪರ್ಶಿಯನ್, ತಮಿಳು ಹಾಗೂ ಕನ್ನಡ ಭಾಷೆ ಬಲ್ಲವನಾಗಿದ್ದನು. ಬ್ರಿಟಿಷ್ ಸರಕಾರದ ಅವಗಾಹನೆಗೆ ದೇಶೀಯ ಭಾಷೆಗಳಲ್ಲಿ ವ್ಯಾಕರಣ ಗ್ರಂಥಗಳು ಬರಬೇಕಾದ ಅಗತ್ಯವನ್ನು ಒಂದು ವರದಿ ರೂಪದಲ್ಲಿ ತಂದಿದ್ದನು. ೧೮೧೬ರಲ್ಲಿ ಇವನು ಇಂಗ್ಲಿಷ್ ವಿವರಣೆಯೊಂದಿಗೆ ಕನ್ನಡ ವ್ಯಾಕರಣವನ್ನು ಬರೆದನು. ೨೧೧ ಪುಟಗಳ ಈ ಕೃತಿ ಸುಂದರವಾಗಿ ೧೮೨೦ರಲ್ಲಿ ಮದರಾಸಿನ ಫ್ಲೇರ್ಸ್ಸೈಂಟ್ ಜಾರ್ಜ್ ಕಾಲೇಜ್ ಪ್ರೆಸ್‌ನಲ್ಲಿ ಮುದ್ರಣಗೊಂಡಿತು. ಇದು ನಾಗವರ್ಮನ ಶಬ್ದಾನು ಶಾಸನ ಮೊದಲಾದ ಪ್ರಾಚೀನ ವ್ಯಾಕರಣ ಗ್ರಂಥಗಳ ನೆರವಿನಿಂದ ಸಿದ್ಧವಾಗಿದೆ. ಕೇಶಿರಾಜನ 'ಶಬ್ದಮಣಿ ದರ್ಪಣ'ಕ್ಕೆ ತಾನು ವಿಶೇಷವಾಗಿ ಋಣಿಯಾಗಿರುವೆನೆಂಬುದನ್ನು ಮುನ್ನುಡಿಯಲ್ಲಿ ಅವನೇ ಹೇಳಿಕೊಂಡಿರುವನು. ಮುಂದಿನ ವ್ಯಾಕರಣ ರಚನೆಗೆ ಇವನ ಗ್ರಂಥವೇ ತಳಹದಿಯಾಯಿತು. ಆಧುನಿಕರಲ್ಲಿ ವಿಲಿಯಮ್ ಕೇರಿ ಮೊತ್ತಮೊದಲ ವ್ಯಾಕರಣಕಾರನಾಗಿದ್ದರೂ ಅವನ ಕೃತಿ ಅಜ್ಞಾತವಾಗಿ ಉಳಿದಿದ್ದರಿಂದ ಮೆಕಾಕೆರಲ್‌ನ ವ್ಯಾಕರಣ ಅಂದಿನ ದಿನಗಳಲ್ಲಿ ಏಕೈಕ ವ್ಯಾಕರಣ ಗ್ರಂಥವಾಗಿದ್ದಿತು.

ಕಾಲಿನ್ ಕ್ಯಾಂಬೆಲ್‌ನು ಕನ್ನಡ ಶಿಕ್ಷಣಸಾಹಿತ್ಯದಲ್ಲಿ ವಿಶೇಷ ಆಸ್ಥೆಯಿಂದ ದುಡಿದವನು. ಈತನು 'ಕನ್ನಡ ವ್ಯಾಕರಣ ಸಾರ' ಎಂಬ ಮಕ್ಕಳಿಗೆಂದು ಮೊಟ್ಟಮೊದಲಿನ ಪಠ್ಯಪುಸ್ತಕ ರಚಿಸಿದನು. ೧೮೪೪ರಲ್ಲಿ ಇದರ ೧೨ನೇ ಆವೃತ್ತಿಯನ್ನು ರಚಿಸಿದನು.[೭] ರೆ. ಸಾಮ್ಯುಯಲ್ ಹೆಲಿಕ್ ಬಾಸೆಲ್ ಮಿಶನ್ನಿನ ವತಿಯಿಂದ ಭಾರತಕ್ಕೆ ಬಂದವರಲ್ಲಿ ಮೊದಲಿಗರಾಗಿದ್ದಾರೆ. ಇವರು ಧಾರವಾಡದಲ್ಲಿ ವಾಸವಾಗಿದ್ದ ಮನೆಯನ್ನು 'ಹೆಬಿಕ್ ಹೌಸ್' ಎಂಬುದಾಗಿ ಈಗಲೂ ಸಹ ಕರೆಯುತ್ತಾರೆ. ಅಲ್ಲದೆ ಈ ಹೆಬಿಕ್ ಹೌಸ್‌ನಲ್ಲಿಯೇ ಶಾಲೆಯನ್ನು ಪ್ರಾರಂಭಿಸಲಾಯಿತು. ಜಿ.ಎಚ್. ವೈಗಲ್, ಬ್ಯಾಸೆಲ್ ಮಿಶನ್, ಜಿ.ಎಚ್. ವೈಗಲ್ ಮಿಶನ್ ಸಂಸ್ಥೆಗೆ ಸೇರಿದವರು. ಇವರ ಕನ್ನಡ ಭಾಷೆ ಮತ್ತು ಸಾಹಿತ್ಯಗಳನ್ನು ಕುರಿತು ವಿವರಪೂರ್ಣವಾದ ಲೇಖನಗಳನ್ನು ಬರೆದರು. ಇವರ ಪ್ರಮುಖ ಗ್ರಂಥಗಳೆಂದರೆ 'ಕ್ರೈಸ್ತ ಗೀತೆಗಳು' (ಎಚ್. ಮೋಗ್ಲಿಂಗ್ ಅವರು ಕೂಡ) ೧೮೪೭ರಲ್ಲಿ ರಚಿಸಿದರು.

ಯಾತ್ರಾಸ್ಥಾನ ಸಂಚಾರವು ಭಾಗ-೧ (ಪಿಲ್ಗ್ರಿಮ್ ಪ್ರೋಗ್ರೆಸ್‌ನ ಭಾಷಾಂತರ) ೧೮೪೭, ಇದರ ೨ನೇ ಭಾಗವನ್ನು ೧೮೪೯ರಲ್ಲಿ ಹೊರತರಲಾಯಿತು. ಮತ್ತೊಂದು ಪ್ರಾರ್ಥನೆಗಳು (೧೮೬೨ರಲ್ಲಿ ದೇವರ ವಾಕ್ಯದ

ಬೋಧನೆಯ ಪ್ರಶ್ನೋತ್ತರವನ್ನು ೧೮೬೩ರಲ್ಲಿ ಬಾಲ ಶಿಕ್ಷೆಯು ೧೮೬೮ರಲ್ಲಿ ಶಾಲಾಗೃಹ ಪಠಣೋದ್ದಿಗಳ ದೇವವಾಕ್ಯ ವ್ಯಾಖ್ಯಾನವು (ಎಚ್. ಮೋಗ್ಲಿಂಗ್ ಅವರು ಕೂಡಿಕೊಂಡು ರಚಿಸಿದರು) ೧೮೭೫ರಲ್ಲಿ ತಂದರು. ಇವರು ಶಿಕ್ಷಣಕ್ಕೆ ಹಾಗೂ ಧಾರ್ಮಿಕತೆಗೆ ಹೆಚ್ಚು ಒತ್ತು ಕೊಟ್ಟಿರುವುದಾಗಿದೆ.

ಹರ್ಮನ್ ಮೋಗ್ಲಿಂಗನು ಜರ್ಮನ್ ದೇಶದವನು. ಉತ್ತಮ ಭಾಷಾಂತರಕಾರನು. ಇವರ ಪ್ರಮುಖ ಕೃತಿಗಳೆಂದರೆ 'ಹೃದಯ ದರ್ಪಣ'(೧೮೪೨) ಇದನ್ನು ಇಂಗ್ಲಿಷ್ ಶಿರೋನಾಮೆ 'ಹಾರ್ಟ್ ಬುಕ್' ಎಂದು ರಚಿಸಿದರು. ಇವರು ೧೮೪೮ರಲ್ಲಿ ಮಿಶನ್ ವರದಿ ಸಿದ್ಧಪಡಿಸಿದಾಗ ಇದರಲ್ಲಿ ದಕ್ಷಿಣಮಹಾರಾಷ್ಟ್ರವೆನ್ನುವ ಪ್ರದೇಶವೆಲ್ಲ ಕನ್ನಡ ನಾಡೇ ಆಗಿದೆ ಎಂದು ಆ ಕಾಲಕ್ಕೆ ಸ್ಪಷ್ಟವಾಗಿ ಹೇಳಿದ್ದನ್ನು ಗಮನಿಸಬಹುದು. ಇವರು ಧರ್ಮದ ವಿಚಾರವಾಗಿ ಹಲವು ಗ್ರಂಥಗಳನ್ನು ರಚಿಸಿದರು. ೧೮೫೨ರಲ್ಲಿ ರಚಿಸಿದ 'ದೇವ ವಿಚಾರಣೆ' ೧೮೫೪ರಲ್ಲಿ ರಚಿಸಿದ 'ಜಾತಿ ವಿಚಾರಣೆ' ೧೮೬೪ರಲ್ಲಿ ರಚಿಸಿದ 'ಮತ ವಿಚಾರಣೆ' ಈ ಮೂಲಕ ಹಿಂದುಧರ್ಮದಲ್ಲಿಯ ಅನೇಕ ನ್ಯೂನತೆಗಳನ್ನು ಎತ್ತಿ ತೋರಿಸುವ ಕೃತಿಗಳನ್ನು ಬರೆದರು. ಅಲ್ಲದೆ 'ಏಸುಕ್ರಿಸ್ತನ ಶ್ರಮ ಚರಿತ', 'ವಿಗ್ರಹಾರಾಧನೆ' ಎಂದು ಮೊದಲಾದವುಗಳನ್ನು ಉಲ್ಲೇಖಿಸಬಹುದು. ಅಲ್ಲದೆ ಇವರು ೧೮೪೨ರಲ್ಲಿ 'ಈರೂರು ಪತ್ರಿಕೆ'ಯನ್ನು ಹೊರಡಿಸುತ್ತಿದ್ದರು.[೧೮] ಅಲ್ಲದೆ ಕನ್ನಡ ಪತ್ರಿಕೆ ಪ್ರಪಂಚಕ್ಕೂ ಇವರೇ ಮೊದಲಿಗರು. ೧೮೪೩-೪೪ರಲ್ಲಿ 'ಮಂಗಳೂರು ಸಮಾಚಾರ' ಬಳ್ಳಾರಿಯಿಂದ ಪ್ರಕಟಗೊಂಡ ಕನ್ನಡ ಸಮಾಚಾರಗಳ ಸಂಪಾದನೆ ಪ್ರಕಟಣೆ ಇವರದೇ ಆಗಿತ್ತು. ಕನ್ನಡದ ಮೂರನೇ ಪತ್ರಿಕೆ ಎನಿಸಿದ 'ಕನ್ನಡ ಸುವಾರ್ತಿಕ'ವನ್ನು ಅವರೇ ಸಂಪಾದಿಸಿದರು. ೧೮೪೭ರಲ್ಲಿ ಇದೇ ಕಾಲಕ್ಕೆ 'ರಾಜೇಂದ್ರನಾಮೆ'ಯ ಮುದ್ರಣ ಕಾರ್ಯ ನಡೆಯಿತು.

ಶುದ್ಧ ಸಾಹಿತ್ಯಕ ದೃಷ್ಟಿಯಿಂದ ಮೋಗ್ಲಿಂಗ್ ಸಲ್ಲಿಸಿದ ಸೇವೆಯಂತೂ ಅನುಪಮವಾಗಿದೆ. ಅದು ಆರಂಭವಾದುದು 'ಬಿಬ್ಲಿಯಾಟಿಕ್ ಕರ್ನಾಟಕ'ದ ಮೂಲಕ ಮೈಸೂರಿನಲ್ಲಿ ರೆಸಿಡೆಂಟ್ ಆಗಿದ್ದ ಕೆಸಮ್ಮೆಜರನ ಸೂಚನೆಯ ಮೇರೆಗೆ ಮೋಗ್ಲಿಂಗ್ ಇದರ ನಾಂದಿಯನ್ನು ಹಾಡಿದರು. ಈ ಮಾಲಿಕೆಯಲ್ಲಿ ಮೊದಲು ಪ್ರಕಟವಾದದ್ದು ಜೈಮಿನಿ ಭಾರತ(೧೮೪೮). ಆದರೆ ಇದರಲ್ಲಿ ಎಲ್ಲ ಸಂಧಿಗಳು ಅಡಕವಾಗಿರಲಿಲ್ಲ. ಮರುವರ್ಷ 'ತೊರವೇ ರಾಮಾಯಣ'ವನ್ನು ಎತ್ತಿಕೊಳ್ಳಲಾಯಿತು. ಆದರೆ ಮದ್ರಾಸ್ ಸರಕಾರದ ವಶದಲ್ಲಿದ್ದ ಹಸ್ತಪ್ರತಿಗಳ ಸಂಗ್ರಹವೊಂದು ಬರಲಿದ್ದು ಆ ಮೂಲಕ ಇದನ್ನು ಪರಿಷ್ಕರಿಸಲೆಂದಿಟ್ಟುಕೊಂಡಿದ್ದರಿಂದ ಇದರ ಮುದ್ರಣವು ಅಷ್ಟಕ್ಕೆ ನಿಂತಿತು. ಕ್ರಿ.ಶ. ೧೮೫೦ರಲ್ಲಿ 'ದಾಸರ ಪದಗಳು' ಎಂಬ ನೂರು ಹಾಡುಗಳ ಸಂಕಲನವು ಹೊರಬಂದಿತು. ಕನ್ನಡದಲ್ಲಿ ದಾಸರ ಹಾಡುಗಳ ಸಂಕಲನವು ಪ್ರಥಮತಃ ಅಚ್ಚಾದುದು ವಿದೇಶಿ ಮಿಶನರಿಗಳಿಂದ. ಜೊತೆಗೆ ಕನಕದಾಸರ ಹರಿಭಕ್ತಿಸಾರವನ್ನು ಈ ಮಾಲಿಕೆಯಲ್ಲೇ ಹೊರತರಲಾಯಿತು.

ಕೂರ್ಗ್‌ನ 'ರಾಜೇಂದ್ರನಾಮೆ' ಇತಿಹಾಸ, ಮುಂದಿನ ಸಂಗ್ರಹಗಳೆಂದರೆ ಉಲ್ಲೇಖಿಸಿದ ಗಾದೆಗಳ ಸಂಗ್ರಹ, ಕುಮಾರವ್ಯಾಸ ಭಾರತ, ಬಸವ ಪುರಾಣ ಮತ್ತು ಚೆನ್ನಬಸವ ಪುರಾಣ(೧೮೫೮) ಅನಂತರದ ಕೃತಿಗಳಾವುದಕ್ಕೂ ಶೀರ್ಷಿಕೆ ಇಲ್ಲ, ಅನಂತರ ಯುರೋಪಿಯನ್ ಮಹಾನ್ ವಿದ್ವಾಂಸರ ಮೈಸೂರಿನ ಕುರಿತು

ರಚಿಸಿದ ಗ್ರಂಥಗಳ ಬಗ್ಗೆ ವಿವರಿಸುತ್ತಾರೆ. ಮಾರ್ಕ್ಸ್‌ವಿಲ್ಕ್ಸ್ ಅವರು ರಚಿಸಿದ 'ಹಿಸ್ಟರಿ ಆಫ್ ಮೈಸೂರು' ಎಂಬ ಎರಡು ಸಂಪುಟಗಳ ರಚನೆ ಕುರಿತ, ಸಾರ್ 'ವಾಲ್ಟರ್ ಸ್ಕೂವ ಲೈಡ್ ಅವರು ರಚಿಸಿದ ಕಾದಂಬರಿ ಎಂದರೆ Surgeon's Daughter ಎಂಬ ಕಾದಂಬರಿ ರಚಿಸಿದ ಕುರಿತು ವಿವರಣೆ ಇದೆ. ಕರ್ನಲ್ ಮೇಡೋಸ್ ಟೇಲರ್ ಅವರ ಕಾದಂಬರಿಗಳಾದ 'ಟಿಪ್ಪುಸುಲ್ತಾನ'(೧೮೪೦) ಎಂಬ ಒಂದೇ ಕಾದಂಬರಿ ಕುರಿತು ಬಿ.ಎಲ್. ರೈಸ್ ಗ್ಯಾಸೆಟಿಯರ್‌ನಲ್ಲಿ ವಿವರಿಸಿದ್ದಾರೆ.[೧೯] ಆದರೆ ಅವರ ಇನ್ನುಳಿದ ಕೃತಿಗಳೆಂದರೆ 'ಕನ್ಫೇಶನ್ಸ್ ಆಫ್ ಎಥಗ್(೧೮೩೯) 'ತಾರಾ'(೧೮೬೩), ರಾಲ್ಫಡಾರ್ನೆಲ್(೧೮೬೩), ದಿ ಸ್ಟೂಡೆಂಟ್ಸ್ ಮ್ಯಾನ್ಯುಯಲ್ ಆಫ್ ಇಂಡಿಯನ್ ಹಿಸ್ಟರಿ(೧೮೭೦), ಸೀತಾ(೧೮೭೨), ದ ಸ್ಟೋರಿ ಆಫ್ ಮೈ ಲೈಫ್(೧೮೭೪) ಹಾಗೂ ಎ ನೋಬೆಲ್ ಕ್ವೀನ್(೧೮೭೬) ರಚಿಸಿದ್ದರು.[೨೦] ಆದರೆ ಇವುಗಳ ಕುರಿತ ಮಾಹಿತಿ ಇಲ್ಲ. ಇಲ್ಲಿ ಇವರಿಗೆ ಅಗತ್ಯಕ್ಕೆ ಬೇಕಾದಂತೆ ಅಂದರೆ, ಇಲ್ಲಿ ಇತಿಹಾಸಕ್ಕೆ ಮಹತ್ವ ಕೊಟ್ಟು ಟಿಪ್ಪುಸುಲ್ತಾನ ಕಾದಂಬರಿ ರಚಿಸಿರುವುದು ಮುಖ್ಯವಾಗುತ್ತದೆ. ಜೊತೆಗೆ ತಮಗೆ ಅಗತ್ಯವೆಂದು ಕಂಡುಬಂದಂತಹ ವಿಚಾರಗಳನ್ನು ಮಾತ್ರ ಇವರು ಸೇರ್ಪಡೆಗೊಳಿಸಿರುವುದು ಸ್ಪಷ್ಟವಾದುದಾಗಿದೆ.

ಎಲ್.ಬಿ. ಬೌರಿಂಗ್ ಸಹ ಕೃತಿ ರಚಿಸಿದರು. ಅದು 'ಹೈದರಾಲಿ ಆ್ಯಂಡ್ ಟಿಪ್ಪುಸುಲ್ತಾನ' ಕುರಿತು ವಿವರಿಸುತ್ತಾರೆ.[೨೧] ತಮಗೆ ಬೇಕಾದ ಅಗತ್ಯವಾದ ಕೃತಿಗಳನ್ನು ಮಾತ್ರ ದಾಖಲಿಸಿರುವುದು ಸ್ಪಷ್ಟ. ಕೊಡಗು ಪ್ರಾಂತ್ಯಕ್ಕೆ ಸಂಬಂಧಿಸಿದಂತೆ ಡಾ. ಕಾಲ್ಡ್‌ವೆಲ್ ಅವರು 'A Coorg Grammer' ರಚಿಸಿದರು. ಇದು ಮೊದಲು ೧೮೬೭ರಲ್ಲಿ ಮುದ್ರಣಗೊಂಡಿತು. ಮೇಜರ್ ಕೋಲ್ ಅವರು ಈ ಸಂದರ್ಭದಲ್ಲಿ ಕೂರ್ಗ್‌ನ ಸೂಪರಿಂಟೆಂಡೆಂಟ್ ಆಗಿದ್ದರು. Rev. A. Graeter ಅವರು ೧೮೭೦ರಲ್ಲಿ Coorg songs ರಚಿಸಿದರು. ಜೊತೆಗೆ 'An epitome of the grammer' ಅನ್ನು ಪ್ರಕಟಿಸಿದರು. ಕೊಡಗು ಭಾಷೆಯ ಕುರಿತು ಮಿ. ರಿಚ್ಟರ್ ಅವರು 'ಕೊಡಗು ಲ್ಯಾಂಗ್ವೇಜ್' ಎಂಬ ವ್ಯಾಕರಣ ಕೃತಿ ರಚಿಸಿದರು.[೨೨] ಕೊಡಗಿನ ಇತಿಹಾಸದ ಆರಂಭದಲ್ಲಿ ಕೊಡಗಿನ ದೊಡ್ಡ ವೀರರಾಜನು ಆಜ್ಞಾನುಸಾರವಾಗಿ ಎಬರ್‌ಕ್ರೋಂಬಿ ಎಂಬುವನು ಸನ್ ೧೮೦೭ರಲ್ಲಿ 'ರಾಜೇಂದ್ರ ನಾಮೆ'ಯನ್ನು ಇಂಗ್ಲಿಷಿಗೆ ಪರಿವರ್ತಿಸಿದರು.[೨೩]

ಕನ್ನಡದಲ್ಲಿ ಪಂಚಾಂಗವನ್ನು(೧೮೫೩) ರೆ.ಸಿ. ಗ್ರೇನಿಯಲ್ ಮತ್ತು ರೆ. ಬ್ರೂಹರ್ ಅವರು ಕೂಡಿ ಕೊಂಡು ಮೋಗ್ಲಿಂಗ್ ಅವರು 'ಮಂಗಲೋರ್ ಅಲ್‌ಮನಕ' ಅಥವಾ 'ಮಂಗಳೂರು ಪಂಚಾಂಗ' ಎಂಬುದಾಗಿ ಮುದ್ರಿಸಿದರು. ಅಲ್ಲದೆ ಮೋಗ್ಲಿಂಗರು ತುಳುನಾಡಿನಲ್ಲಿ ಸಂಚರಿಸುತ್ತಿದ್ದಾಗ ಅಲ್ಲಿಯ ಅನೇಕ ಪಾಡ್ದನಗಳನ್ನು ಸಂಗ್ರಹಿಸಿದರು. ಅದನ್ನು ಇಂಗ್ಲಿಷ್ ಮತ್ತು ಜರ್ಮನ್ ಭಾಷೆಗಳಿಗೂ ಪರಿವರ್ತಿಸಿದರು. ತುಳುಭಾಷೆಯ ಜನಪ್ರಿಯ ಹಾಡಾದ 'ಕೋಟಿ ಚೆನ್ನಯ' ಎಂಬುದನ್ನು ಸಂಗ್ರಹಿಸಿ ಕನ್ನಡದಲ್ಲಿ ಬರೆದು ಪ್ರಚಾರಪಡಿಸಿದವರಲ್ಲಿ ಇವರೇ ಮೊದಲಿಗರಾಗಿರುವರು. ರೆವರೆಂಡ್ ಫ್ರೆಡ್ರಿಕ್ ಝೀಗ್ಲರನು, ಜರ್ಮನಿಯವನು. ಧಾರವಾಡ-ಹುಬ್ಬಳ್ಳಿಗಳಲ್ಲಿ ಸುಮಾರು ೩೫ ವರುಷಗಳ ಕಾಲ ಇದ್ದುಕೊಂಡು ಅಲ್ಲಿಯ ಬಾಸೆಲ್ ಮಿಶನ್‌ದ ಚಟುವಟಿಕೆಗಳನ್ನು ಶಾಲೆಯ ಸ್ಥಾಪನೆಯ ಕೆಲಸವನ್ನು ಸಾಹಿತ್ಯದ ಸೇವೆಯನ್ನು ಮಾಡಿ ಅಲ್ಲಿಯ

ಸಾಮಾಜಿಕ ಜೀವನದಲ್ಲಿ ಹಾಸುಹೊಕ್ಕಾಗಿ, ಕೀರ್ತಿ ಪಡೆದವರೆಂದರೆ ಡಾ. ಫ್ರೆಡ್ರಿಕ್ ಝೀಗ್ಲರ್. ಅವರ 'A practical key to canarese grammer(೧೮೭೨) ಕನ್ನಡವನ್ನು ಕಲಿಯುವ ಅಭಿಲಾಷೆಯುಳ್ಳ ವಿದೇಶಿಯರಿಗಾಗಿ ಝೀಗ್ಲರ್ ಅವರು ಈ ಪಠ್ಯಪುಸ್ತಕವನ್ನು ಬರೆದರು. ಇದರ ಐದನೇ ಆವೃತ್ತಿಯು ೧೯೩೫ರಲ್ಲಿ ಪ್ರಕಟವಾಗಿದೆ. ಅವರ ಇನ್ನೆರಡು ಪುಸ್ತಕಗಳು 'ಕನ್ನಡ ವ್ಯಾಕರಣ ಬೋಧಿನಿ' ಮತ್ತು 'Kannada Grammatical Primer(೧೮೭೪)'.

Hymn Book in Kanarese(೧೮೭೫) ಇದು ಅನೇಕ ವರ್ಷಗಳವರೆಗೆ ಆಧಾರ ಗ್ರಂಥವಾಗಿದ್ದಿತು. ಇದರ ಎರಡನೇ ಮುದ್ರಣವು ೧೮೮೮ರಲ್ಲಿ ಆಗಿದೆ. 'ಕನ್ನಡ ಬಾಲ ವ್ಯಾಕರಣ'(೧೮೭೭)ವನ್ನು ಡಾ. ಝೀಗ್ಲರ್ ಮತ್ತು ರೆ.ಡಿ. ಕಾಸ್ಟ್ ಅವರು ಕೂಡಿ ೧೮೭೭ರಲ್ಲಿ ರಚಿಸಿದರು. ಇದು ಉತ್ತರ ಕರ್ನಾಟಕದ ಶಾಲೆಗಳಲ್ಲೆಲ್ಲಾ ಹಲವು ವರ್ಷಗಳವರೆಗೆ ಉಪಯೋಗಿಸಲ್ಪಡುತ್ತಿತ್ತು. ಬಿ. ಗ್ರೇಟರ್ ಮತ್ತು ಡಾ. ಝೀಗ್ಲರ್ ಅವರು ಕೂಡಿ ಬೈಬಲ್ ಹಾಡುಗಳನ್ನು ರಚಿಸಿ 'ಗೀತೆಗಳು' ಹೆಸರಿನಿಂದ ಪ್ರಕಟಿಸಿದರು. ಇದರಲ್ಲಿ ಬೈಬಲಿನ ಅಂಶಗಳನ್ನು ಹಾಡಿನ ರೂಪದಲ್ಲಿ ಹೇಳಲಾಗಿದೆ ಎನ್ನಬಹುದು. ಶಾಲೆಗಾಗಿ ಮತ್ತೊಂದು 'ಕನ್ನಡ ಶಾಲಾ ವ್ಯಾಕರಣ'(೧೮೮೦)ವನ್ನು ಝೀಗ್ಲರ್ ಮತ್ತು ರೈಸ್ ಕೂಡಿ ಬರೆದರು. ಸೇಂಟ್‌ಮಾರ್ಕ್ಸ್‌ನು ಬರೆದ ಸುವಾರ್ತೆ ಅಂದರೆ ಮುಕ್ತಿದಾಯಕನ ಚರಿತ್ರೆ(೧೮೯೬) ಈ ಚಿಕ್ಕ ಪುಸ್ತಕವನ್ನು ಝೀಗ್ಲರ್ ಮತ್ತು ರೆ. ಹೆನ್ರಿಹಾಗ್(Haugh) ಅವರು ಕೂಡಿ ೧೮೯೬ರಲ್ಲಿ ಬರೆದರು. Gospelst, luke(೧೯೦೦) ತುಂಬಾ ಪ್ರಚಾರವಾದ ಗ್ರಂಥವಾಯಿತು. ಝೀಗ್ಲರ್ ಮತ್ತು ಹಾಗ್ ಅವರು ಕೂಡಿ ೧೯೦೦ರಲ್ಲಿ ಪುನಃ ಪರಿಶೀಲಿಸಿ ಪ್ರಕಟಿಸಿದರು.[೨೪]

ಬಿ.ಎಚ್. ರೈಸ್(ಬೆಂಜಮಿನ್ ಹೋಲ್ಟ್ ರೈಸ್) ಇವರು ಬಿ.ಎಲ್. ರೈಸ್ ಅವರ ತಂದೆಯವರು. ಇವರಿಗೆ ಕವಿತ್ವ ರಚನೆ, ಸಂಗೀತಗಳಲ್ಲಿ ಅಪಾರ ಆಸಕ್ತಿ. ಹೀಗಾಗಿ ಇವರು ಅನೇಕ ಪ್ರಾರ್ಥನೆಯ ಹಾಡುಗಳನ್ನು ಇಂಗ್ಲಿಷ್ ಧಾಟಿಯಲ್ಲಿ ರಚಿಸಿದರು. 'ಕನ್ನಡ ಸಂಗೀತಗಳು' ಎಂಬ ಪ್ರಾರ್ಥನಾ ಪುಸ್ತಕದಲ್ಲಿ ರೈಸ್‌ರ ಸ್ವತಂತ್ರ ಹಾಗೂ ಅನುವಾದಿತ ಕೃತಿಗಳೇ ಹೆಚ್ಚಾಗಿ ಇವೆ. 'ಚಿಕ್ಕವರಿಗೆ ತಕ್ಕ ಪಾಠಗಳು' ಎಂಬುದು ಅವರು ಸಂಪಾದಿಸಿದ ಇನ್ನೊಂದು ವಾಚನಮಾಲೆಯಾಗಿದೆ. ಇವೆಲ್ಲಾ ಪಠ್ಯಗಳ ರಚನೆಯಲ್ಲಿ ಅವರು ತಮಿಳು ಭಾಷಾ ಪುಸ್ತಕಗಳ ನೆರವನ್ನು ಹೆಚ್ಚಾಗಿ ಪಡೆದಿದ್ದಾರೆ ಎಂದು ತಿಳಿದುಬರುತ್ತದೆ.

ಜಾನ್ ಗ್ಯಾರೆಟ್‌ನು ವೆಸ್ಲಿಯನ್‌ರಿಂದ ಸ್ಥಾಪಿತವಾದ ಇಂಗ್ಲಿಷ್ ಶಾಲೆಯ ಪುರೋಭಿವೃದ್ಧಿಗೆ ವಿಶೇಷ ವಾಗಿ ದುಡಿದನು. 'ಪಂಚತಂತ್ರ'ವನ್ನು ತಿಳಿಯಾದ ಗದ್ಯದಲ್ಲಿ(೧೮೬೫) ಹೊರತಂದನು. ಇವನು ಬಿ. ರಾಮರಾವ್ ಎಂಬುವರು ಬರೆದ ರೇಖಾಗಣಿತವನ್ನು ಸಂಪಾದಿಸಿ ವಿದ್ಯಾಖಾತೆಯ ವತಿಯಿಂದ ಪ್ರಕಟಿಸಿದನು. ೧೮೬೬ರಲ್ಲಿ 'ಶಬ್ದಮಣಿದರ್ಪಣ'ವನ್ನು ೧೮೬೮ರಲ್ಲಿ ಕನ್ನಡದಲ್ಲಿ ತಂದ. ಮತ್ತೊಂದು ಗ್ರಂಥ 'ಕ್ಲಾಸಿಕಲ್ ಡಿಕ್ಷನರಿ ಆಫ್ ಇಂಡಿಯಾ', 'ಹಿಂದೂ ನಾಮಕೋಶ.' ಇದರಲ್ಲಿ ಭಾರತೀಯ ಪುರಾಣಗಳು, ಧರ್ಮಗ್ರಂಥ ಗಳು, ಕಾವ್ಯಗಳು, ಕಲೆಗಳು, ಆಚಾರ-ವಿಚಾರಗಳು ಇವುಗಳಿಗೆ ಸಂಬಂಧಿಸಿದ ವಿಷಯಗಳನ್ನು ಅಕಾರಾದಿಯಾಗಿ ಹೊಂದಿಸಿ ಸಂಕ್ಷಿಪ್ತ ಪರಿಚಯ ಮಾಡಿಕೊಳ್ಳಲಾಗಿದೆ ಎನ್ನಬಹುದು.

ಡ್ಯಾನಿಯಲ್ ಸ್ಯಾಂಡರ್ಸನ್ ಕನ್ನಡ ಬೈಬಲಿನ ಅಧಿಕೃತ ಪರಿಷ್ಕರಣ ಸಮಿತಿಯಲ್ಲಿದ್ದ ಸ್ಯಾಂಡರ್ಸನ್ನನು ಸಿ.ಎನ್. ಹಾಲ್ ವಿರಚಿತ 'Come to Jesus' ಎಂಬ ಪುಸ್ತಕವನ್ನು ಕನ್ನಡಕ್ಕೆ ಅನುವಾದಿಸಿದರು. ಮತ್ತೊಂದು ಜನಪ್ರಿಯ ಕೃತಿ ಎಂದರೆ ಕನ್ನಡ 'ಕಥಾ ಸಂಗ್ರಹ'(೧೮೬೩) ಅಲ್ಲದೆ ಯುರೋಪಿನ ಜನರಿಗೆ ಕನ್ನಡ ಭಾಷೆಯ ಪರಿಚಯವನ್ನು ಹಂತ-ಹಂತವಾಗಿ ಮಾಡಿಕೊಡುವ ಉದ್ದೇಶದಿಂದ ಸ್ಯಾಂಡರ್ಸನ್ ಒಟ್ಟು ನಾಲ್ಕು ಕಥಾ ಸಂಗ್ರಹಗಳ ಹೊಳಹನ್ನು ಹಾಕಿಕೊಂಡಿದ್ದನು. ಅವುಗಳೆಂದರೆ:

೧. ಸುಲಭ ಗದ್ಯದ ಕಥೆಗಳು

೨. ಸುಲಭ ಪದ್ಯದ ಕಥೆಗಳು

೩. ಪ್ರೌಢ ಗದ್ಯ ಬರವಣಿಗೆಯ ಕಥಾಸಂಗ್ರಹ

೪. ಹಳಗನ್ನಡ ಶೈಲಿಯ ಪದ್ಯ ಕಥನಗಳು

ಅವನ ಪರಿಷ್ಕೃತ ಕನ್ನಡ-ಇಂಗ್ಲಿಷ್ ಕೋಶವು(ಮೂಲ ಗ್ಯಾರೆಟ್‌ನದು) ಈ ಕೃತಿಗೆ ಶಬ್ದಾರ್ಥ ವಿಚಾರದಲ್ಲಿ ಸ್ಯಾಂಡರ್ಸನ್ ಮಾಡಿದ ಸುಧಾರಣೆಗಳೆಂದರೆ ಸಾವಿರಕ್ಕೆ ಮಿಕ್ಕಿದ ಶಬ್ದಗಳನ್ನು ಸೇರಿಸಿದುದು. ಇಂಗ್ಲಿಷಿನಲ್ಲಿ ಶಬ್ದದ ಉಚ್ಚಾರವನ್ನು ಕೊಟ್ಟದ್ದು, ಶಬ್ದದ ವ್ಯುತ್ಪತ್ತಿಯನ್ನು ಹೇಳಿರುವುದು.[೨೯] ಜೆ. ಸ್ಟೀವೆನ್ನನು 'ಮುದ್ರಾಮಂಜೂಷ'ದ ಪರಿಷ್ಕೃತ ಆವೃತ್ತಿ(೧೮೭೩), ಹೆನ್ರಿಹೇಗ್ ವಿರಚಿತ 'ವೆಸ್ಲಿ ಸಭೆಯ ಸಂಸ್ಕಾರಗಳು', 'ವೆಸ್ಲಿ ಅಯ್ಯನವರ ಚರಿತ್ರೆ' ಇವು ಇವನ ವೆಸ್ಲಿಯನ್ ಮತಕ್ಕೆ ಸಂಬಂಧಿಸಿದ ಕೃತಿಗಳು. 'ಹೊಸ ಒಡಂಬಡಿಕೆ'ಯ ರೋಮ್ ಮತ್ತು 'ಯುಕೋಬನ ಪತ್ರಿಕೆ' ಎಂಬ ಕೃತಿಯನ್ನು ಕೊಟ್ಟಿರುವನು. ೧೮೮೦ರಲ್ಲಿ ರಚಿತವಾದ ಬೈಬಲ್ಲಿನ ದ್ವಿತೀಯ ಪರಿಷ್ಕರಣ ಸಮಿತಿಯ ವೆಸ್ಲಿಯನ್ ಪ್ರತಿನಿಧಿಯಾದ ಹೇಗ್ ಬಾಸೆಲ್ ಮಿಶನ್ನಿನ ತ್ರಿಸ್ಗ್ಲರನೊಡನೆ ಸೇರಿ ಹೊಸ ಒಡಂಬಡಿಕೆಯ ಲಾಕ್ ಮತ್ತು ಮಾರ್ಕ್ ಇವರ ಸುವಾರ್ತೆಯನ್ನು ಅನುವಾದಿಸಿದನು.[೩೦] ಪ್ರಮುಖವಾಗಿ 'Pice Papers on Indian Reforms' ಎಂಬ ಮಾಲಿಕೆಯಲ್ಲಿ ವಿವಿಧ ವಿಷಯಗಳ ಮೇಲೆ ಉಪಯುಕ್ತವಾದ ಚಿಕ್ಕ ಪುಸ್ತಿಕೆಗಳನ್ನು ಪ್ರಕಟಿಸಿರುವನು.[೩೧]

ಬಿ.ಎಲ್. ರೈಸ್ ಅವರು ಸಹ ಅನೇಕ ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿರುವರು. ರೈಸ್ ಅವರಿಗೆ ಕನ್ನಡ ಭಾಷೆ ಮತ್ತು ಸಾಹಿತ್ಯದ ಅರಿವಿತ್ತಾದ್ದರಿಂದ 'ಬಿಬ್ಲಿಯೊಥಿಕ್ ಕರ್ನಾಟಿಕ್' ಮಾಲೆಯಲ್ಲಿ 'ಕರ್ನಾಟಕ ಭಾಷಾಭೂಷಣ' (ನಾಗವರ್ಮ ಕವಿಯು ಸಂಸ್ಕೃತ ಭಾಷೆಯಲ್ಲಿ ಬರೆದಿರುವ ಕನ್ನಡ ವ್ಯಾಕರಣ) ವನ್ನು(೧೮೮೪) ಸಂಪಾದಿಸಿದರು. ಈ ಗ್ರಂಥವನ್ನು ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಯಲ್ಲಿ ಪ್ರಕಟಿಸಿದರು. ಪಂಪನು ಬರೆದ 'ಪಂಪಭಾರತ' ಅಥವಾ 'ವಿಕ್ರಮಾರ್ಜುನ ವಿಜಯ' ಎಂಬ ಕಾವ್ಯ ಕೃತಿಯನ್ನು ಮೊದಲು ಸಂಪಾದಿಸಿ ಪ್ರಕಟಿಸಿದ ಗೌರವ ರೈಸ್‌ರಿಗೆ ಸಲ್ಲುತ್ತದೆ. ಈ ಕೃತಿಯ ಆರಂಭದ ೧೩ ಪುಟಗಳಲ್ಲಿ ಹರಡಿರುವ ಇಂಗ್ಲಿಷ್ ಮುನ್ನುಡಿಯು ಈ ಕೃತಿಯ ಐತಿಹಾಸಿಕ ಮಹತ್ವವನ್ನು ಸೂಚಿಸುತ್ತದೆ. ರೈಸರು ೧೮೯೨ರಲ್ಲಿ ಪ್ರಥಮ ಬಾರಿಗೆ ನಾಗಚಂದ್ರನು(ಅಭಿನವ ಪಂಪ) ಬರೆದಿದ್ದ ಕಾವ್ಯ ಕೃತಿಯಾದ 'ಪಂಪ ರಾಮಾಯಣ'ವನ್ನು ವಿದ್ವತ್‌ಪೂರ್ಣ ಮುನ್ನುಡಿಯೊಂದಿಗೆ ಸಂಪಾದಿಸಿದರು. ಇದರಲ್ಲಿ ರೈಸ್‌ರು ಈ ಕೃತಿಯನ್ನು

ವಾಲ್ಮೀಕಿ ರಾಮಾಯಣದೊಂದಿಗೆ ತೌಲನಿಕವಾಗಿ ಚರ್ಚಿಸಿದ್ದಾರೆ. ನಾಗಚಂದ್ರನು ಈ ಕೃತಿಯ ಕಥೆಯನ್ನು ಬೌದ್ಧ ಜಾತಕ ಕಥೆಗಳನ್ನು ಆಧರಿಸಿ ರಚಿಸಿರಬಹುದೆಂದು ರೈಸ್‌ರು ಊಹಿಸಿದ್ದಾರೆ.

ಅಮೋಘವರ್ಷ ನೃಪತುಂಗನ ಆಸ್ಥಾನ ಕವಿಯಾದ ಶ್ರೀವಿಜಯನು ಕ್ರಿ.ಶ. ೯ನೇ ಶತಮಾನದ ಮಧ್ಯ ಭಾಗದಲ್ಲಿ ರಚಿಸಿದ ಕನ್ನಡದ ಮೊದಲ ಉಪಲಬ್ಧ ಕೃತಿಯಾದ 'ಕವಿರಾಜಮಾರ್ಗ' ಎನ್ನುವ ಅಲಂಕಾರ ಕೃತಿಯನ್ನು ಬಿ.ಎಲ್. ರೈಸ್ ಅವರು ಕೆ.ಬಿ. ಪಾಠಕ್ ಸಹಾಯದಿಂದ ೧೮೯೭ರಲ್ಲಿ ಸಂಪಾದಿಸಿ ಪ್ರಕಟಿಸಿದರು. ಈ ಕೃತಿಯು ಆಂಗ್ಲ ಹಾಗೂ ಕನ್ನಡ ಎರಡೂ ಭಾಷೆಗಳಲ್ಲಿ ಪ್ರಕಟಿಸಲ್ಪಟ್ಟಿದೆ.

ಹೀಗೆ ರೈಸ್‌ರು ನಮ್ಮ ಕನ್ನಡ ಸಾಹಿತ್ಯದ ಪುನರುಜ್ಜೀವನಕ್ಕೆ ತಳಹದಿಯನ್ನು ಒದಗಿಸಿದ್ದಾರೆ ಅವರು ಮೈಸೂರು ಸಂಸ್ಥಾನಕ್ಕೆ ಬಂದಂತಹ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಂಪರೆಯ ಮಹತ್ವದ ಅರಿವಿರಲಿಲ್ಲ. ಅವರ ಶಿಕ್ಷಣಾಧಿಕಾರಿಯಾಗಿ ವಿವಿಧ ಪ್ರದೇಶಗಳಲ್ಲಿ ಸಂಚರಿಸುತ್ತಿದ್ದಾಗ ಅವರಿಗೆ ಅನೇಕ ಪ್ರಾಚೀನ ಹಸ್ತಪ್ರತಿಗಳು ದೊರೆತವು. ಇಂತಹ ಹಸ್ತಪ್ರತಿಗಳನ್ನು ಮೌಲ್ಯಯುತ ಮುನ್ನುಡಿ ಪೀಠಿಕೆಯೊಂದಿಗೆ ಪರಿಷ್ಕರಿಸಿ, ಸಂಪಾದಿಸಿ ಪ್ರಕಟಿಸುವ ಕಾರ್ಯವನ್ನು ಮಾಡಿದರು. ರೈಸ್‌ರು ಸುಮಾರು ೩೦೦ಕ್ಕೂ ಅಧಿಕ ಜನ ಕವಿಗಳನ್ನು ನಮಗೆ ಪರಿಚಯಿಸಿಕೊಟ್ಟಿದ್ದಾರೆ. ಇದರಿಂದಾಗಿ ನಮಗೆ ಕನ್ನಡ ಸಾಹಿತ್ಯದ ವಿಸ್ತಾರ. ವೈವಿಧ್ಯ ಹಾಗೂ ಗುಣಮಟ್ಟ ಗಳು ತಿಳಿದುಬರುವುದು.[೨೮] ಇದೇ ಬಗೆಯ ಕೆಲಸವನ್ನು ಇವರ ಸಮಕಾಲೀನ ಎಫ್. ಕಿಟೆಲ್ ಅವರು ವೆಸ್ಲಿಯನ್ ಮಿಶನ್ ಕನ್ನಡಕ್ಕೆ ಹೊಸಹೊಸ ಚೈತನ್ಯವನ್ನು ಕೊಡುವಲ್ಲಿ ಮಿಶನರಿಗಳ ಪಾತ್ರ ಹಿರಿದಾಗಿದೆ. ಪ್ರಮುಖವಾಗಿ 'ಶಬ್ದಮಣಿ ದರ್ಪಣ'(೧೮೭೨), ಛಂದೋಂಬುಧಿ (೧೮೭೪), ವ್ಯಾಕರಣ (೧೮೭೨), ಕರ್ನಾಟಕ ಕಾವ್ಯಮಾಲೆ(೧೮೭೪) ಇವುಗಳಲ್ಲದೆ ಇಂಡಿಯನ್ ಎಂಟಿಕ್ವೆರಿಯಲ್ಲಿ ಬಂದ ಕಿಟೆಲ್‌ನ ಲೇಖನಗಳಲ್ಲಿ ಈ ಕೆಳಗಿನವುಗಳನ್ನು ಗಮನಿಸಬಹುದು.

a. Canarese country compared with the countries adjanest to it (January, 1873).
b. Notes concerning the numerals of the ancient dravidians (January, 1873).
c. Coorg superstions (February, 1873).
d. Note on dravidian numberals (April, 1873).
e. Coorg supestions demons and duties (January, 1873).
f. The coorg polyandry (January, 1873).
g. On the karnataka vaishnava dasas (November, 1873). ಇವುಗಳಲ್ಲದೆ,

೧. ಸಣ್ಣ ಕರ್ನಾಟಕ ಕಾವ್ಯಮಾಲೆ (೧೪೬೮) ಪರಮಾತ್ಮಜ್ಞಾನ ೧೮೭೩.
೨. ಇಂಗ್ಲೆಂಡ್ ದೇಶದ ಇತಿಹಾಸ ೧೮೬೪
೩. ಸಂಕ್ಷೇಪ ವ್ಯಾಕರಣ ೧೮೬೫
೪. ಯಜ್ಞತಂತ್ರ ಸುಧಾನಿಧಿ ೧೮೭೦
೫. ಹಿಂದೂ ಮತ್ತು ಕ್ರೈಸ್ತಮತಗಳ ತುಲನಾತ್ಮಕ ವಿಮೋಚನೆಯಿದೆ. ಸಹಸ್ರಾಗಥಾಮೃತ ಕಲಶ ೧೮೭೫ ಹೀಗೆ ಅನೇಕ ಕೃತಿಗಳನ್ನು ರಚಿಸಿದ್ದಾರೆ.

**ಜಾರ್ಜ್‌ವರ್ಥ್:** ಇವರು ಜರ್ಮನ್ ದೇಶದವರು. ದಕ್ಷಿಣ ಭಾಗದ ಎಜುಕೇಷನಲ್ ಇನ್‌ಸ್ಪೆಕ್ಟರ್ ಆಗಿದ್ದ ಮೆ. ರಸೆಲ್ ಅವರು ವರ್ಥ್ ಅವರ ಹೆಸರಿನಲ್ಲಿ ಒಂದು ಬಹುಮಾನವನ್ನು ಇರಿಸಿದರು. ೧೮೬೧ರಲ್ಲಿ ವರ್ಥ್ ಅವರು ರೇ. ಮೋಗ್ಲಿಂಗ್ ಮತ್ತು ಜಿ. ವೈಗಲ್ ಅವರನ್ನು ಕೂಡಿಕೊಂಡು ಶಾಲಾಗೃಹ ಪಠಣೋದ್ದಿಶ್ಯ ದೇವವಾಕ್ಯ ವ್ಯಾಖ್ಯಾನವು ಎಂದು ಹಳೆಯ ಮತ್ತು ಹೊಸ ಒಡಂಬಡಿಕೆಗಳ ಬಗೆಗೆ ವಿವರಣೆಯನ್ನು ಬರೆದರು. ಅಲ್ಲದೆ ಅವರು ಬರೆದ 'ಬೈಬಲ್ ಆ್ಯಂಡ್ ಹಿಂದೂಯಿಸಮ್' ಎಂಬ ಪುಸ್ತಕ ೧೮೬೦ರಲ್ಲಿ ಪ್ರಕಟವಾಗಿತ್ತು, ಅದೇ ವರ್ಷ ಅಂದರೆ ಕ್ರಿ.ಶ. ೧೮೬೦ರಲ್ಲಿ ವರ್ಥ್ ಅವರ 'ಈಸೋಪನ ಕಥೆಗಳು' ಎಂಬ ೨೨೦ ಪುಟಗಳ ಪುಸ್ತಕವೂ ಮೂರನೇ ಆವೃತ್ತಿಯಾಗಿ ಬಾಸೆಲ್ ಮಿಶನಿಂದ ಇದೇ ವರುಷ ಪ್ರಕಟವಾಯಿತು. 'ದೃಷ್ಟಾಂತಮಂಜರಿ' ಎಂಬುದು ಇವರ ಇನ್ನೊಂದು ಕೃತಿಯಾದಂತೆ ಕಂಡುಬರುತ್ತದೆ. ಶ್ರೀಯುತರು ದ್ವಿಮತ ಪರೀಕ್ಷೆ (ಹಿಂದೂಯಿಸಮ್ ಆ್ಯಂಡ್ ಕ್ರಿಶ್ಚಿಯಾನಿಟಿ ಕಾಂದ್ರಾ ಸ್ಟೆಡ್) ಎಂಬ ಪುಸ್ತಕವನ್ನು ಸನ್ ೧೮೬೬ರಲ್ಲಿ ಪರಿಷ್ಕರಿಸಿ ಪ್ರಕಟಿಸಿದರು. ಇದು ೧೩೫ ಪುಟಸಂಖ್ಯೆಯನ್ನು ಒಳಗೊಂಡಿತ್ತು. ಇದನ್ನು ಮೊದಲು ಬೆಂಗಳೂರಿನ ರೋಮನ್ ಕ್ಯಾಥೋಲಿಕ್ ಮಿಶನರಿಗಳು ಪ್ರಕಟಿಸಿದ್ದರು. ಅನಂತರ ಕರ್ನಾಟಕ ಪ್ರಾಕಾವ್ಯ ಮಾಲೆ(೧೮೬೮) ಪ್ರಕಟ ವಾಯಿತು. ಜೆ. ಮ್ಯಾಕ್ ಇವರು ಅನೇಕ ವರ್ಷಗಳ ಕಾಲ ಹುಬ್ಬಳ್ಳಿಯ ಬಾಸೆಲ್ ಮಿಶನ್ ಪ್ರೌಢಶಾಲೆಯ ಮುಖ್ಯೋಪಾಧ್ಯಾಯ ರಾಗಿದ್ದರು. ರೊದ್ದ ಶ್ರೀನಿವಾಸರಾಯರು ಇವರ ಕೈಯಲ್ಲಿಯೇ ಕೆಲಸವನ್ನು ಮಾಡಿದರು. ಇವರು 'ಕಾವ್ಯಪುಂಜ' ಎಂಬ ಕವನ ಸಂಕಲನವನ್ನು ಪ್ರಕಟಿಸಿದರು. ಬಾಲಕರಿಗಾಗಿ ಹೊಸ ಕವಿತೆಗಳನ್ನು ರಚಿಸಿದ್ದರು.

**ಹರ್ಮನ್ ರೀಷ್:** ಇವರು ಬಾಸೆಲ್ ದೇಶದವರು. ಕೆಲಕಾಲ ಧಾರವಾಡ ಜಿಲ್ಲೆಯ ಬೆಟಗೇರಿಯಲ್ಲಿದ್ದು, ಮಿಶನ್ ಕೆಲಸವನ್ನು ಮಾಡಿದರು. ಯೇಸುಕ್ರಿಸ್ತನ ಮೂಲಕ ಸ್ಥಾಪಿತವಾದ 'ಹೊಸ ಒಡಂಬಡಿಕೆ' ಎಂಬ ಗ್ರಂಥವನ್ನು ೧೯೦೬ರಲ್ಲಿ ಗ್ರೀಕ್ ಭಾಷೆಯಿಂದ ನೂತನವಾಗಿ ಭಾಷಾಂತರಿಸಿ ಪ್ರಕಟಿಸಿದರು. ಮತ್ತೊಬ್ಬರು ರೆವರೆಂಡ್‌ಕೀಜ್. ಅವರು ಪ್ರಮುಖ ಕೃತಿಗಳನ್ನು ರಚಿಸಿದರು. ಮುಖ್ಯವಾಗಿ ೧೮೫೮ರಲ್ಲಿ ಬೈಬಲ್ ವಿಷಯವಾಗಿ ಸಭೆ ಪ್ರಾರ್ಥನೆಗಳ ಬಗ್ಗೆ ಪುಸ್ತಕ ರಚಿಸಿದರು. ೧೮೬೫ರಲ್ಲಿ 'ದೇವವಾಕ್ಯದ ವಚನ ಮಂಜರಿ', ೧೮೬೫ರಲ್ಲಿ 'ಕೆರ್ಲ್ ಮೇರಿಕೆ ದೊರೆಗಳ ಸಮಾಧಿ ಮುಂದೆ', ೧೮೫೯ರಲ್ಲಿ 'ಶೋರ್ಟ್ಸ ಸ್ಟೋರಿಸ್ ಇನ್ ಕ್ಯಾನರೀಸ್', ೧೮೬೩ರಲ್ಲಿ 'ಭೂಗೋಳ ವಿದ್ಯಾಸಾರ', ೧೮೬೭ರಲ್ಲಿ 'ಭೂಗೋಳಶಾಸ್ತ್ರಸಾರ', ೧೮೬೦ರಲ್ಲಿ ಕನ್ನಡ ಬಾಲ ವ್ಯಾಕರಣ ಶಾಸ್ತ್ರವು ಶಾಲೆಗಳಲ್ಲಿಯ ಪಠ್ಯವಾಗಿದ್ದವು ಎಂಬುದಾಗಿ ತಿಳಿದುಬರುತ್ತದೆ. ಇವುಗಳೆಲ್ಲವೂ ಹೆಚ್ಚಾಗಿ ಕನ್ನಡ ಸಾಹಿತ್ಯಕ್ಕೆ ಹಾಗೂ ವ್ಯಾಕರಣ, ಧರ್ಮಗಳ ಬಗ್ಗೆ ಹೆಚ್ಚು ಬೆಳಕು ಚೆಲ್ಲುತ್ತವೆ. ಕ್ರಿ.ಶ. ೧೮೫೬ರಲ್ಲಿ ಪ್ರಕಟವಾದ ಡಾ. ರೆವರೆಂಡ್ ಆರ್ ಕಾಲ್ಡ್‌ವೆಲ್ ಅವರ 'A Comarative Grammer of The dravidian or south indian family of languages' ಎಂಬ ಇಂಗ್ಲಿಷ್ ಗ್ರಂಥವು ಕನ್ನಡದ ಜಾಗೃತಿಗೆ ಮತ್ತೊಂದು ಪ್ರಬಲವಾದ ಕಾರಣವಾಯಿತು.[೨೧] ಹೀಗೆ ಇನ್ನು ಹತ್ತು ಹಲವಾರು ಕೃತಿಗಳ ರಚನೆಯು ಈ ಸಂದರ್ಭದಲ್ಲಾದ ಪ್ರಮುಖ ವಿಚಾರವೆನ್ನಬಹುದು.

**ಶಾಸನ**

ಯಾವುದೇ ಪ್ರದೇಶದ ಭಾಷೆ, ಸಾಹಿತ್ಯ, ಸಂಸ್ಕೃತಿ, ಇತಿಹಾಸಗಳ ಅಧ್ಯಯನಕ್ಕೆ ಶಾಸನಗಳು ಅಮೂಲ್ಯ ಆಕರಗಳು. ಶಾಸನಗಳು ಒಂದು ಜನಾಂಗದ ಆಸ್ತಿ. ಸುದೈವದಿಂದ ನಮ್ಮ ನಾಡಿನಲ್ಲಿ ಶಾಸನ ಸಂಪತ್ತು ಹೇರಳವಾಗಿದೆ. ತಮಿಳನ್ನು ಬಿಟ್ಟರೆ ಕನ್ನಡದಲ್ಲಿಯೇ ಹೆಚ್ಚು ಸಂಖ್ಯೆಯ ಶಾಸನಗಳಿವೆ ಎಂದು ಅಂದಾಜು ಮಾಡಲಾಗಿದೆ. ಭಾರತದಲ್ಲಿ ಶಾಸನಗಳ ಚರಿತ್ರೆ ಆರಂಭವಾಗುವುದು ಅಶೋಕನ ಕಾಲದಿಂದ. ಆತನ ಶಾಸನಗಳ ಲಿಪಿ ಅತ್ಯಂತ ಪ್ರಾಚೀನವಾದ ಬ್ರಾಹ್ಮೀಲಿಪಿ. ಬಂಗಾಳದಲ್ಲಿ ಸ್ಥಾಪಿತವಾದ ಏಷಿಯಾಟಿಕ್ ಸಂಸ್ಥೆಯ ವಿದ್ವಾಂಸರ ಪರಿಶ್ರಮದಿಂದ ಬ್ರಾಹ್ಮಿಲಿಪಿಯನ್ನು ಓದುವುದು ಸಾಧ್ಯವಾಯಿತು. ಜೇಮ್ಸ್ ಪ್ರಿನ್ಸೆಪ್(James Princep) ಎಂಬುವವರು ಇವುಗಳನ್ನು ಓದುವ ಕ್ರಮವನ್ನು ಕಂಡುಕೊಂಡರು. ಆ ಶಾಸನಗಳನ್ನು ಓದುವುದರಲ್ಲಿ ಯಶಸ್ವಿಯಾದರು. ಶಾಸನಗಳ ಪರಿಶೋಧನೆಯ ರಂಗದಲ್ಲಿ ಅದೊಂದು ಪ್ರಮುಖವಾದ ಘಟ್ಟವೆನ್ನಬಹುದು. ಇದು ಶಾಸನಗಳ ಅಧ್ಯಯನಕ್ಕೆ ದಾರಿಯಾಯಿತು. ಕನ್ನಡ ನಾಡಿನಲ್ಲಿಯೂ ಈ ಕಾರ್ಯ ನಿಖರವಾಗಿ ಆರಂಭವಾಯಿತು. ಬಿ.ಎಲ್. ರೈಸ್, ಜೆ.ಎಫ್. ಫ್ಲೀಟ್, ಎಲ್.ಡಿ. ಬಾರ್ನೆಟ್, ಆರ್. ನರಸಿಂಹಾಚಾರ್ ಮೊದಲಾದವರಿಂದ. ತರುವಾಯ ಎಂ.ಎಚ್. ಕೃಷ್ಣ, ಆರ್.ಎಸ್. ಪಂಚಮುಖಿ ಮೊದಲಾದ ಅನೇಕ ವಿದ್ವಾಂಸರು ಅದಕ್ಕಾಗಿ ವಿಶೇಷವಾಗಿ ಶ್ರಮಿಸಿದರು. ಅವರೆಲ್ಲರ ಶ್ರಮದ ಫಲವಾಗಿ ಅಪಾರವಾದ ಶಾಸನ ಸಂಪತ್ತು ಇಂದು ಸಂಗ್ರಹವಾಗಿದೆ.

ಕನ್ನಡ ಶಾಸನಗಳ ವ್ಯವಸ್ಥಿತವಾದ ಅಧ್ಯಯನವು ಆರಂಭವಾದದ್ದು ವಾಲ್ಟರ್ ಎಲಿಯಟ್ ಎಂಬಾತನಿಂದ ಕ್ರಿ.ಶ. ೧೮೩೭ರಲ್ಲಿ ಪ್ರಕಟವಾದ ಈತನ 'ಹಿಂದೂ ಇನ್ಸ್‌ಕ್ರಿಪ್ಷನ್' ಎಂಬ ಲೇಖನದಿಂದ ಕರ್ನಾಟಕದ ಸಾಂಸ್ಕೃತಿಕ ಮತ್ತು ರಾಜಕೀಯ ಇತಿಹಾಸಗಳ ಅಧ್ಯಯನದಲ್ಲಿ ಒಂದು ಹೊಸ ಅಧ್ಯಾಯವೇ ಆರಂಭವಾಯಿತು. ಶಾಸನಗಳನ್ನು ಕುತೂಹಲದಿಂದ ನಿರೀಕ್ಷಿಸಿ ಅವುಗಳಿಗಿರುವ ಐತಿಹಾಸಿಕ ಮಹತ್ವವನ್ನು ಗುರುತಿಸಿದವರಲ್ಲಿ ಕರ್ನಲ್ ಮೆಕೆಂಜಿ ಮೊದಲಿಗನೆನ್ನಬಹುದು. ಈತ ಕ್ರಿ.ಶ. ೧೮೧೭ರಲ್ಲಿ ಸರ್ ಅಲೆಕ್ಸಾಂಡರ್ ಜಾನ್‌ಸನ್ ಅವರಿಗೆ ಬರೆದ ಪತ್ರದಲ್ಲಿ ದಕ್ಷಿಣ ಭಾರತದಲ್ಲಿ ತಾನು ನಡೆಸಿದ ಸಂಶೋಧನೆಗಳ ಸಂಕ್ಷಿಪ್ತ ವಿವರಗಳನ್ನು ಕೊಟ್ಟಿದ್ದಾನೆ. ಈತನು ಮೈಸೂರಿನ ಬ್ರಿಟಿಷ್ ಸೈನ್ಯದಲ್ಲಿ ಅಧಿಕಾರಿಯಾಗಿದ್ದರೂ ಈತನಿಗೆ ಸಂಶೋಧನೆ ಹಾಗೂ ಜ್ಞಾನತೃಷೆಗಳು ರಕ್ತಗತವಾಗಿದ್ದವು. ಈತನು ೧೭೯೯-೧೮೦೯ರಲ್ಲಿ ಮೈಸೂರು ದೇಶದ ಪರಿವೀಕ್ಷಣಾ ಕಾರ್ಯವನ್ನು ಇತರ ನಾಲ್ವರ ಸಹಾಯದಿಂದ ಕೈಗೊಂಡು ಮುಗಿಸಿದನು. ಈತನು ಮುಖ್ಯವಾಗಿ ಭೌಗೋಳಿಕ ಪರಿವೀಕ್ಷಣೆಗೆಂದು ಉನ್ನತಾಧಿಕಾರಿಗಳಿಂದ ನಿಯೋಜಿತನಾಗಿದ್ದರೂ, ಅದು ಸಾಂಸ್ಕೃತಿಕ ಪರಿವೀಕ್ಷಣೆ ಆಗಿ ಪರಿವರ್ತಿತವಾಯಿತು. ಈತ ಕೆಲವು ಶಾಸನಗಳ ನಕಲುಗಳನ್ನು(Estampages) ಮಾಡಿಕೊಂಡು ಓದುವ, ಅನುವಾದಿಸುವ ಪ್ರಯತ್ನ ಮಾಡಿದನು. ಅವನ ಈ ಸಂಗ್ರಹ ಕಾರ್ಯವನ್ನು ಬ್ರಿಟಿಷ್ ಸರ್ಕಾರವು ಬಹುವಾಗಿ ಮೆಚ್ಚಿಕೊಂಡಿತು.

ಕ್ರಿ.ಶ. ೧೮೬೭ರಲ್ಲಿ ಕನ್ನಡ ನಾಡಿನ ಶಾಸನಗಳ ಪ್ರಕಟಣೆ ಕಾರ್ಯ ಆರಂಭವಾಯಿತು. ಮೆಕೆಂಜಿ ತಾನು ಸಂಗ್ರಹಿಸಿದ ಅನೇಕ ತಾಮ್ರಪಟಗಳನ್ನು, ಶಾಸನಗಳನ್ನು ಏಷಿಯಾಟಿಕ್ ಸೊಸೈಟಿಗೆ ಕಳುಹಿಸಿಕೊಟ್ಟನು.

ನಂತರ ವಾಲ್ಟರ್ ಎಲಿಯಟ್‌ನು ಕರ್ನಾಟಕ ಪ್ರಾಚೀನ ಶಾಸನಗಳನ್ನು ಶ್ರಮವಹಿಸಿ ಓದುವ ಪ್ರಯತ್ನ ಮಾಡಿದನು. ಈತ ಲಭ್ಯ ಶಾಸನಗಳನ್ನು ಅಧ್ಯಯನ ಮಾಡಿ 'Hindu Inscriptions' ಎಂಬ ಲೇಖನವನ್ನು ಬರೆದನು. ಕ್ರಿ.ಶ. ೧೮೬೫ರಲ್ಲಿ ಮೈಸೂರು ಮತ್ತು ಉತ್ತರ ಕರ್ನಾಟಕ ಭಾಗಗಳಲ್ಲಿ ಶಾಸನಗಳ ಭಾವಚಿತ್ರಗಳನ್ನು ತೆಗೆದು ಸಂಗ್ರಹಿಸುವ ಪ್ರಯತ್ನವು ನಡೆಯಿತು. ಈ ನಿಟ್ಟಿನಲ್ಲಿ ಮೇಜರ್ ಡಿಕ್ಸನ್‌ನ ಕಾರ್ಯ ಸ್ತುತ್ಯರ್ಹವಾದದ್ದು.

೧೮೭೬ರಲ್ಲಿ ಡಾ. ಬರ್ಗೆಸ್ ಎಂಬ ವಿದ್ವಾಂಸ 'ಇಂಡಿಯನ್ ಆಂಟಿಕ್ವೆರಿ' ಎಂಬ ನಿಯತಕಾಲಿಕೆಯನ್ನು ಆರಂಭಿಸಿದುದು ಭಾರತೀಯ ವಿದ್ವತ್ತಿಗೆ ಅದರಲ್ಲೂ ಕರ್ನಾಟಕದ ಶಾಸನಗಳ ಅಧ್ಯಯನಕ್ಕೆ ಉತ್ತೇಜನವನ್ನು ನೀಡಿತು. ಪ್ರಾಚೀನ ವಸ್ತುಗಳ ಅಧ್ಯಯನದ ಮಹತ್ವದ ಕಡೆ ಸರಕಾರದ ಗಮನವನ್ನು ಹರಿಸಲು ಪತ್ರಿಕೆ ಬಹುಮಟ್ಟಿಗೆ ಕಾರಣವಾಯಿತು. ಈ ಪತ್ರಿಕೆಯ ಪ್ರಥಮ ಸಂಪುಟದಲ್ಲಿ ರೈಸ್ ಅವರು ಓದಿ ಅಚ್ಚು ಮಾಡಿದ ಮಡಿಕೇರಿ ತಾಮ್ರಪಟ ಶಾಸನ ಪ್ರಕಟವಾಗಿರುವುದೊಂದು ವಿಶೇಷವಾಗಿದೆ.[೩೦]

೧೮೮೪ರಲ್ಲಿ 'ಮೈಸೂರಿನ ಪುರಾತತ್ವ ಇಲಾಖೆ' ಸ್ಥಾಪನೆಯಾದಾಗ ಆದ ಒಪ್ಪೊತ್ತಿನ ನಿರ್ದೇಶಕರಾಗಿ ನೇಮಕಗೊಂಡ ಬಿ.ಎಲ್. ರೈಸ್ ಅವರು ೧೯೦೬ರ ವರೆಗಿನ ಮುಂದಿನ ಇಪ್ಪತ್ತೆರಡು ವರ್ಷಗಳ ಅವಧಿಯಲ್ಲಿ ಅಂದಿನ ಮೈಸೂರು ರಾಜ್ಯದ ಎಂಟು ಜಿಲ್ಲೆಗಳಲ್ಲಿ ಸಂಚರಿಸಿ ಶಾಸನಗಳನ್ನು ಸಂಗ್ರಹಿಸಿದ್ದಾರೆ.[೩೧]

ನಮ್ಮ ನಾಡಿನಲ್ಲಿ ಎಷ್ಟು ಶಾಸನಗಳಿವೆ ಎಂಬುದರ ಅಂದಾಜು ಕೂಡ ಸಿಕ್ಕಿಲ್ಲ. ಮೂವತ್ತು ಸಾವಿರ ಇದ್ದಿರಬಹುದು. ೯ ಸಾವಿರದಷ್ಟು ಬಿ.ಎಲ್. ರೈಸ್ ಅವರೊಬ್ಬರೇ ಕಂಡುಹಿಡಿದಿದ್ದಾರೆ. ಅವನ್ನು ಅವರು ಪ್ರಕಟಿಸಿ ಮುಗಿಸುವ ಕಾಲಕ್ಕಂತು ಆಗಿನ ಶಾಸನಸಂಖ್ಯೆ ಅತೀ ಹೆಚ್ಚೆಂದರೆ ೧೨ ಸಾವಿರ ಇದ್ದಿರಬೇಕು. ಅದಕ್ಕೇನೆ ಅವರನ್ನು 'ಶಾಸನ ಪಿತಾಮಹ'ರೆಂದು ಕರೆಯುವುದು ಅನ್ವರ್ಥವಾಗುತ್ತದೆ.[೩೨] ಅವರು ಕಂಡು ಹಿಡಿದ ಶಾಸನಗಳೆಲ್ಲವೂ 'ಎಫಿಗ್ರಾಫಿಯಾ ಕರ್ನಾಟಿಕ' ಎಂಬ ಹೆಸರಿನಲ್ಲಿ ೧೨ ಸಂಪುಟಗಳನ್ನು ಪ್ರಕಟಿಸಿದರು. ಹಳೇ ಮೈಸೂರಿನ ಎಂಟು ಜಿಲ್ಲೆಗಳು ಹಾಗೂ ಕೊಡಗು ಪ್ರಾಂತ್ಯ ಸೇರಿ ಒಟ್ಟು ೮೮೬೯ ಕನ್ನಡ ಶಾಸನಗಳನ್ನು ಸಂಗ್ರಹಿಸಿದರು. ಕನ್ನಡ ಭಾಷೆಯ ಇತಿಹಾಸಕ್ಕೆ ಸಂಬಂಧಿಸಿದ ನೂರಾರು ಲೇಖನಗಳನ್ನು ಬರೆದರು. ಸುಮಾರು ೪೬ ವರ್ಷ ಮೈಸೂರಿನಲ್ಲಿ ಕಳೆದು ಮೈಸೂರು ರಾಜ್ಯದ ಪ್ರಾಚೀನ ವಸ್ತು, ವಾಸ್ತುಶಿಲ್ಪ, ಲಿಪಿಗಳ ಅನ್ವೇಷಣಾಧಿಕಾರಿಗಳಾಗಿ ಕೆಲಸ ಮಾಡಿದ್ದಾರೆ.[೩೩]

ಈ ಕ್ಷೇತ್ರಕ್ಕೆ ಸೇವೆ ಸಲ್ಲಿಸಿದ ಮತ್ತೊಬ್ಬರೆಂದರೆ ಎಲಿಯಟ್. ಮುಂಬಯಿ ಕರ್ನಾಟಕದಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ಎಲಿಯಟ್ ಮಾಡಿದ ಮಹತ್ವದ ಕಾರ್ಯವೆಂದರೆ ಇಲ್ಲಿಯ ಶಾಸನಗಳನ್ನು ಕಲೆ ಹಾಕಿದುದು. ಈ ಭಾಗದಲ್ಲಿ ಸುಮಾರು ೧೩೦೦ ಶಿಲಾಶಾಸನಗಳ ಅಧ್ಯಯನ ನಡೆಸಿ ಅವುಗಳಲ್ಲಿ ದೊರೆಯುವ ಐತಿಹಾಸಿಕ ಸಂಗತಿಗಳ ಸತ್ಯಾಸತ್ಯತೆಯನ್ನು ವೈಜ್ಞಾನಿಕವಾಗಿ ಶೋಧಿಸಿದನು. ಅವನು ೧೮೩೬ರಲ್ಲಿ ರಾಯಲ್ ಏಶಿಯಾಟಿಕ್ ಸೊಸೈಟಿಗೆ ಕಳುಹಿಸಿದ 'Hindu Inscriptions ಎಂಬ ದೊಡ್ಡ ಪ್ರಬಂಧದಲ್ಲಿ ಶಕವರ್ಷ ೮೯೫ರಿಂದ ೧೨೩೪ರ

ವರೆಗಿನ ೫೯೪ ಶಾಸನಗಳ ಪರಿಪೀಕ್ಷಣೆಯಿದ್ದು ಚಾಲುಕ್ಯರು, ಕಲ್ಯಾಣದ ಕಳಚೂರಿಯರು, ಹೊಯ್ಸಳರು ಮತ್ತು ಯಾದವರು ಈ ನಾಲ್ಕು ರಾಜಮನೆತನಗಳ ವಂಶಾವಳಿಯನ್ನು ಎಲಿಯಟ್ ರೂಪಿಸಿದ್ದಾನೆ.[೨೯] ಮೆಕೆಂಜಿ ೧೨೦೦ ಶಿಲಾಲೇಖ ಮತ್ತು ತಾಮ್ರಶಾಸನಗಳನ್ನು ೬೦೦ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದನು. ಜಾನ್ ಎಫ್ ಫ್ಲೀಟ್ ಇವರು ಸಹ ಗುಪ್ತ ಶಾಸನಗಳನ್ನು ಕುರಿತು Corpus inscriptionum indicarum ಎಂಬ ಎಂಟನೆಯ ಸಂಪುಟದಲ್ಲಿ ಪ್ರಕಟವಾಯಿತು.[೩೦] ಸುಮಾರು ೧೮೬೯-೭೦ರ ಹೊತ್ತಿಗೆ ಶಾಸನ ಅಧ್ಯಯನವು ಒಂದು ನಿರ್ದಿಷ್ಟ ರೂಪವನ್ನು ಪಡೆಯಿತು. ಕರ್ನಾಟಕದ ದೇಶೀಯ ವಿದ್ವಾಂಸರ ಸಹಾಯ ಏನಿದ್ದರೂ ಭಾಷೆಯ ವಿಷಯದಲ್ಲಿ ಲಿಪಿಯನ್ನು ಓದುವುದರಲ್ಲಿ ಪಾಶ್ಚಾತ್ಯ ವಿದ್ವಾಂಸರ ಪ್ರಯತ್ನವೇ ಮುಖ್ಯವಾದುದು ಎಂಬುದರಲ್ಲಿ ಎರಡು ಮಾತಿಲ್ಲ.

**ಜಾನಪದ ಸಾಹಿತ್ಯ**

ಕನ್ನಡದಲ್ಲಿ ಜಾನಪದ ಕ್ಷೇತ್ರದಲ್ಲೂ ಸಾಕಷ್ಟು ಸಂಶೋಧನೆ ನಡೆದಿವೆ. ಜಾನಪದ ಸಾಹಿತ್ಯದ ಸಂಗ್ರಹ ಸಂಪಾದನೆ, ವಿಶ್ಲೇಷಣೆ ಗಮನಾರ್ಹವಾಗಿ ನಡೆದಿವೆ. ಲೆ. ಕರ್ನಲ್ ಮೆಕೆಂಜಿ ಸಂಗ್ರಹಿಸಿದ ಸುಮಾರು ೧೩೪ ಕೈಫಿಯತ್ತುಗಳಲ್ಲಿ ಕನ್ನಡದ ಮೊದಲ ಜಾನಪದ ಮಾಹಿತಿ ಸಂಗ್ರಹವಾಗಿದೆ. ೧೮೦೩ರಲ್ಲಿ ಜಾನ್ ಲೇಡನ್ನರು 'ಶ್ರೀರಂಗಪಟ್ಟಣದ ಕೆಡುಗಾಲ' ಎಂಬ ಹೆಸರಿನಲ್ಲಿ ಎರಡು ಲಾವಣಿಗಳನ್ನು ಸಂಗ್ರಹಿಸಿದರು. ೧೮೪೭ರಲ್ಲಿ ಮಂಗಳೂರಿನ ಬಾಸೆಲ್‌ಮಿಶನ್ ಸಂಸ್ಥೆಯವರ ಕನ್ನಡ ಗಾದೆಗಳು ಎಂಬ ಕೃತಿ ಹೊರಬಂತು. ೧೮೭೧ರಲ್ಲಿ ಚಾರ್ಲ್ಸ್ ಇ. ಗ್ರೋವರ ಅವರ 'Folk songs of southern india' ಎಂಬ ಮಹತ್ವದ ಕೃತಿ ಪ್ರಕಟವಾಯಿತು.[೩೧]

ಹಲವು ಭಾಷೆಗಳನ್ನು ಬಲ್ಲವನಾಗಿದ್ದ ಫ್ಲೀಟ್ ಭಾರತೀಯ ಭಾಷೆಗಳ ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿದವನಾಗಿದ್ದನು. ಜನಪದ ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಮೂಲ್ಯವಾದದ್ದು, ಫ್ಲೀಟ್ ಸಂಗ್ರಹಿಸಿದ ಲಾವಣಿಗಳನ್ನು 'Indian antiquary' ಪತ್ರಿಕೆಯಿಂದ ಸಂಗ್ರಹಿಸಿರುವ ಸಂಪಾದಕರು, ಫ್ಲೀಟ್‌ರ ಬಗ್ಗೆ ಹೀಗೆ ಹೇಳಿದ್ದಾರೆ. ಕಳೆದ ಶತಮಾನದಲ್ಲಿ ವಿದೇಶಗಳಲ್ಲಿ ಜಾನಪದ ಮನ್ನಣೆ ಪಡೆಯುತ್ತಿದ್ದಾಗ ನಮ್ಮಲ್ಲಿ ಇನ್ನೂ ಅಜ್ಞಾತವಾಗಿಯೇ ಇತ್ತು. ಇಂಥದೊಂದು ಅಪಾರ ಸಂಪತ್ತು ನಮ್ಮಲ್ಲಿದೆ ಎಂದು ಪಾಶ್ಚಾತ್ಯವೇ ತೋರಿಸ ಬೇಕಾಯಿತು. ಅಂಥವರಲ್ಲಿ ಬಹುಮುಖ್ಯರಾದವರೆ ಇವರೇ ಜಾನ್ ಫೇಯ್ತ್ ಫುಲ್ ಫ್ಲೀಟ್. ಈ ಹೇಳಿಕೆಯಲ್ಲಿ ಫ್ಲೀಟರ ಲಾವಣಿಗಳ ಸಂಗ್ರಹ ಮತ್ತು ಭಾಷಾಂತರವನ್ನು ಹಾಡಿ ಹೊಗಳಲಾಗಿದೆ. ನಮಗೆ ನಮ್ಮನ್ನು ಸರಿಯಾಗಿ ನೋಡಿಕೊಳ್ಳಲು ತಿಳಿ ಹೇಳಿದ ಮಹಾಶಯರನ್ನಾಗಿ ನೋಡಲಾಗಿದೆ.

ಫ್ಲೀಟರು ತಮ್ಮ ಸಂಗ್ರಹ ಮತ್ತು ಭಾಷಾಂತರ ಬಗ್ಗೆ ಏನು ಹೇಳಿದ್ದಾರೆಂದು ಪರಿಶೀಲಿಸೋಣ: Indian Antiquary ಸಂಪುಟ-೧೪ರಲ್ಲಿ 'ಸಂಗೊಳ್ಳಿರಾಯಣ್ಣ'ನನ್ನು ಕುರಿತ ಲಾವಣಿ. ಸಂಪುಟ-೧೫ರಲ್ಲಿ 'Income Tax' ಕುರಿತ ಲಾವಣಿ. ಸಂಪುಟ-೧೬ರಲ್ಲಿ ಹಲಗಲಿ ಬೇಡರನ್ನು ಕುರಿತ ಲಾವಣಿ. ಸಂಪುಟ-೧೮ರಲ್ಲಿ The Crime and death of sangya'ನ ಲಾವಣಿ, ಸಂಪುಟ-೧೯ರಲ್ಲಿ 'The Daughter in-law of Channavva of Kittur' ಲಾವಣಿಗಳನ್ನು ಸಂಗ್ರಹಿಸಿ ವಿವರಿಸಿ ಭಾಷಾಂತರಿಸಿದ್ದಾರೆ.[೩೨]

ಜರ್ಮನ್ ಮಿಷನರಿಯಾದ ಜೆ.ಎಫ್. ವೈಲ್ ಎಂಬುವನು ೧೮೮೬ರಲ್ಲಿ ಕೊಡವ ಗಾದೆಗಳ ಸಂಗ್ರಹವನ್ನು ಪ್ರಕಟಿಸುವುದರೊಡನೆ ಇತರರ ಗಮನವನ್ನು ಕೊಡವ ಭಾಷೆಯೆಡೆಗೆ ಸೆಳೆದರು. ಆ ಕೃತಿ ಎಂದರೆ 'ಎ ಸೆಲೆಕ್ಷನ್ ಆಫ್ ಕೂರ್ಗ್ ಪ್ರೋವರ್ಬ್ಸ್' ಎಂಬ ಹೆಸರಿನಲ್ಲಿ ಸಂಗ್ರಹಿಸಿದನು. ೧೮೮೬ರ ಮಂಗಳೂರಿನಲ್ಲಿ ಪ್ರಕಟಿಸಿದರು. ಇದು ಕೊಡಗು ಜಾನಪದ ಕುರಿತ ಮೊದಲ ಪ್ರಕಟಿತ ಕೃತಿಯೆನಿಸಿದೆ ಎಂಬುದಾಗಿ ತಿಳಿದುಬರುತ್ತದೆ. ಮದರಾಸು ಪ್ರಾಂತಾಧಿಕಾರಿಯಾಗಿದ್ದ ಚಾರ್ಲ್ಸ್‌ಗ್ರೋವರ್ ಎಂಬುವನು ೧೮೭೨ರಲ್ಲಿ ದ್ರಾವಿಡ ಭಾಷೆಗಳಲ್ಲಿರುವ ಜನಪದ ಗೀತೆಗಳನ್ನು ಇಂಗ್ಲಿಷ್‌ನಲ್ಲಿ ಸಂಕಲಿಸಿ ಹೊರತಂದ 'ದಿ ಫೋಕ್ ಸಾಂಗ್ಸ್ ಆಫ್ ಸದರ್ನ್ ಇಂಡಿಯಾ' ಗ್ರಂಥದಲ್ಲಿ ಕೊಡಗು ಜಿಲ್ಲೆಯ ಜನಪದ ಹಾಡುಗಳನ್ನು ಸೇರಿಸಿದರು. ೧೮೭೩ರಲ್ಲಿ ಕೊಡಗು ಬೈಬಲನ್ನು ಪ್ರಕಟಿಸಿದ ಕಿಟೆಲ್‌ನು ಲಾವಣಿ ರೂಪದಲ್ಲಿರುವ ಕೊಡಗಿನ ಹಾಡುಗಳ ಪ್ರತಿ ಚರಣವು ಏಳು ಅಕ್ಷರಗಳಿಂದ ಕೂಡಿ ರಗಳೆಯಂತೆ ಮುಂದುವರೆಯುವ ಮತ್ತು ಪ್ರತಿಹಾಡಿನಲ್ಲಿಯೂ ನೂರಾರು ಸಾಲುಗಳು ಕಂಡುಬರುವ ವೈಶಿಷ್ಟ್ಯವನ್ನು ಕುರಿತು ಪ್ರಸ್ತಾಪಿಸಿದ್ದಾರೆ.

೧೯೨೪ರಲ್ಲಿ ನಡಿಕೇರಿಯಂಡ ಚಿಣ್ಣಪ್ಪ ಅವರಿಂದ ಕೊಡವರ 'ಪಟ್ಟೋಲೆ ಪಳಮೆ' ಇದು ಕೊಡವರ ಲಾವಣಿಗಳು, ಜಾನಪದ ಕಥೆಗಳು, ಗಾದೆಗಳು, ಒಗಟುಗಳು, ಇತಿಹಾಸ ಪರಂಪರೆ ಇತ್ಯಾದಿ ವಿವಿಧ ವಿಷಯಗಳನ್ನು ಕುರಿತ ವ್ಯಾಪಕ ಮತ್ತು ಅಧಿಕೃತ ಗ್ರಂಥವೆಂದು ಗುರುತಿಸಬಹುದಾಗಿದೆ.[೩೮] ಇವುಗಳಲ್ಲದೆ ಮದುವೆ ಹಾಡು, ಸತ್ತಾಗ ಹಾಡುವ ಹಾಡು, ಹುತ್ತರಿ ಹಾಡು, ರಾಣಿಯ ಹಾಡುಗಳನ್ನು ಸಹ ಬ್ರಿಟಿಷರು ದಾಖಲಿಸಿದ್ದಾರೆ. ಮುಖ್ಯವಾಗಿ ಮಿ. A. Graeterಅವರ ಸಂಗ್ರಹವನ್ನು ಜಿ. ರಿಕ್ಟರ್ ಅವರ ಕೂರ್ಗ್ ಆಫ್ ಗ್ಯಾಸೆಟಿಯರ್‌ನಲ್ಲಿ ನೋಡಬಹುದು.[೩೯] ಇವರಲ್ಲದೆ ಸ್ಥಳೀಯರು ಸಂಗ್ರಹಿಸಿದ ಬಗ್ಗೆ ಗಮನಿಸುವುದಾದರೆ ಶ್ರೀ ಶಾಂಭವಾನಂದ ಸ್ವಾಮಿಯವರು ಕೊಡಗಿನಲ್ಲಿ ಹರಡಿದ ಮಲೇರಿಯಾ ಜ್ವರ, ಅದರ ಕಾರಣ ತಡೆ ಮತ್ತು ನಿವಾರಣೆಗೆ ಸಂಬಂಧಿಸಿದಂತೆ 'ಸೊಳ್ಳೇಪಾಟ್' ಲಾವಣಿಯನ್ನು ಕೊಡವ ಭಾಷೆಯಲ್ಲಿ ರಚಿಸಿ ೧೯೩೩ರಲ್ಲಿ ಪ್ರಕಟಿಸಿದರು.[೪೦]

ಹೀಗೆ ಇವುಗಳ ಸಹಕಾರವು ಪಾಶ್ಚಾತ್ಯರಿಂದ ಪ್ರಾರಂಭವಾದದ್ದು ಗೌರವದ ಮನ್ನಣೆಗೆ ಪಾತ್ರವಾದದ್ದಾಗಿದೆ. ಧಾರವಾಡದಲ್ಲಿಯೂ ಸಹ ೧೯೩೧ರಲ್ಲಿ ಗೆಳೆಯರ ಗುಂಪಿನವರಲ್ಲಿ ಒಬ್ಬರಾದ ಚೆನ್ನಮಲ್ಲಪ್ಪ ಹಲಸಂಗಿ (ಮಧುರಚನ್ನ) ಉಳಿದವರೊಂದಿಗೆ ಸೇರಿ ಪ್ರಕಟಿಸಿದ ಗರತಿಯ ಹಾಡು ಈ ಬಗ್ಗೆ ಮೊದಲ ಪ್ರಯತ್ನವಾಗಿದ್ದು ಇದರಲ್ಲಿ ಈ ಜಿಲ್ಲೆಯ ಜನಪದ ಗೀತೆಗಳು ಸೇರಿವೆ. ೧೯೨೭ರಲ್ಲಿ ಗದಗಿನ ಹಳ್ಳಿಗುಡಿಯಿಂದ ಸಾವಿರ ಮಾತಿನ ಸರದಾರ ಎಂಬ ಜನಪದ ಗೀತೆಗಳ ಸಂಗ್ರಹ ಹೊರಬಂದಿತ್ತು.[೪೧]

ಪಾಶ್ಚಾತ್ಯ ವಿದ್ವಾಂಸರೊಡನೆ ಕೆಲಸ ಮಾಡಲು ಆರಂಭಿಸಿದ ದೇಶಿ ವಿದ್ವಾಂಸರು ಜಾನಪದ ಸಂಗ್ರಹ ಸಂಪಾದನೆ ಪ್ರಕಟಣೆಗಳಲ್ಲಿ ತೊಡಗಿದರು. ೧೮೭೦ರಲ್ಲಿ ಯು.ಎನ್. ನರಸಿಂಹಯ್ಯರಾವ್ ಅವರು 'The bhutess of nagaramda had folklore of south india' ಎಂಬ ಪರಿಚಯಾತ್ಮಕ ಲೇಖನ ರಚಿಸಿದರು. ೧೮೯೬ರಲ್ಲಿ ಸುಬ್ಬಾಶಾಸ್ತ್ರಿ ಎಂಬುವರು ಜಾನಪದ ಕತೆಗಳನ್ನು ಸಂಪಾದಿಸಿದರು. ಮುಂದೆ ಅತ್ಯಂತ ಮಹತ್ವದ

ಸಂಕಲನಗಳಾದ 'ಪಟ್ಪೋಲೆ ಪಳಮೆ'(೧೯೨೪), ತುಳುವಾಲ ಬಲಿಯೇಂದ್ರ(೧೯೨೯), ಗರತಿ ಹಾಡು(೧೯೩೧), ಹಳ್ಳಿಯ ಹಾಡು(೧೯೩೩), ಮಲ್ಲಿಗೆದಂಡೆ(೧೯೩೫), ಗೋರೂರು ಅವರ ಹಳ್ಳಿಯ ಹಾಡುಗಳು(೧೯೩೮), ಮತಿಘಟ್ಟ ಕೃಷ್ಣಮೂರ್ತಿ ಅವರ ಹಳ್ಳಿಯ ಹಾಡುಗಳು(೧೯೩೯), ಅನಂತ ರಂಗಾಚಾರ್ ಅವರ ಮಾನೌಮಿ ಚಾಪದ(೧೯೪೦), ಅಚ್ಚಪ್ಪನವರ ಕನ್ನಡ ಗಾದೆಗಳು(೧೯೪೪) ಮುಂತಾದ ಅನೇಕ ಕೃತಿಗಳು ಹೊರಬಂದವು.[೪೨]

**ರಂಗಭೂಮಿ(ನಾಟಕಗಳು)**

ಕನ್ನಡದಲ್ಲಿ ದೊರೆತ ಮೊದಲ ನಾಟಕ 'ಮಿತ್ರವಿಂದಾ ಗೋವಿಂದ'. ಮೈಸೂರು ಮಹಾರಾಜ ಚಿಕ್ಕದೇವರಾಜರ ಆಸ್ಥಾನದಲ್ಲಿ ಪಂಡಿತರಾಗಿದ್ದ ಸಿಂಗರಾರ್ಯ ಎಂಬುವರು ೧೭ನೇ ಶತಮಾನದ ಕೊನೆಯ ಕಾಲುಭಾಗದಲ್ಲಿ ಈ ನಾಟಕವನ್ನು ಬರೆದರು. ನಿಜವಾಗಿ ನೋಡಿದರೆ ಶ್ರೀಹರ್ಷ ವಿರಚಿತ 'ರತ್ನಾವಳಿ' ಎಂಬ ಸಂಸ್ಕೃತ ನಾಟಕದ ಕನ್ನಡದ ರೂಪಾಂತರವೇ ಈ ನಾಟಕ. ಆದರೆ ಇದಕ್ಕಿಂತ ಮೊದಲಿನದೆನ್ನುವ ಒಂದೇ ಒಂದು ನಾಟಕವಾದರೂ ಕನ್ನಡದಲ್ಲಿ ಈಗ ಉಪಲಬ್ಧವಿಲ್ಲ. ಆದರೆ ಕನ್ನಡ ನಾಡಿನಲ್ಲಿ ೧೭ನೇ ಶತಮಾನದ ಹಿಂದೆ ಅದರದೇ ಆದ ನಾಟಕವೇ ಇರಲಿಲ್ಲವೆಂಬ ಕಲ್ಪನೆ ತಪ್ಪಾಗುತ್ತದೆ. ಏಕೆಂದರೆ ಕ್ರಿ.ಶ. ೧೦ನೇ ಶತಮಾನಕ್ಕಿಂತಲೇ ರಂಗ-ಮನೋರಂಜನೆಯ ಪರಂಪರೆ ಇತ್ತು ಎಂಬುದಾಗಿ ಕನ್ನಡ ಸಾಹಿತ್ಯ ಶಾಸನಗಳಿಂದ ಇದು ದೃಢಪಟ್ಟಿದೆ. 'ನಾಟಕ ಶಾಲೆ' ಎಂಬ ಶಬ್ದವು ಕ್ರಿ.ಶ. ೧೦೪೫ನೇ ಇಸವಿಗೆ ಸೇರಿದ ಶಿಲಾಶಾಸನದಿಂದ ತಿಳಿದುಬರುತ್ತದೆ.[೪೩]

ಅನಂತರದಲ್ಲಿ ರಂಗಭೂಮಿ ಪ್ರಗತಿಗೆ ಬ್ರಿಟಿಷ್ ವಸಾಹತುಗಾರರ ಕೊಡುಗೆಯೂ ಅಪಾರವೆನ್ನಬಹುದು, ಅವರು ತಮ್ಮೊಂದಿಗೆ ನಾಟಕ ತಂಡಗಳನ್ನು ತಂದರು. ಈ ತಂಡಗಳು ಷೇಕ್ಸ್‌ಪಿಯರ್ ಹಾಗೂ ಇತರ ಇಂಗ್ಲಿಷ್ ಜನಪ್ರಿಯ ನಾಟಕಗಳನ್ನು ಅಭಿನಯಿಸುತ್ತಿದ್ದರು. ಇದರ ಪ್ರಭಾವದಿಂದಾಗಿ ಈ ನಾಟಕಗಳ ಅನುವಾದಗಳು ಬರಲಾರಂಭಿಸಿದವು[೪೪] ಹಾಗೂ ಅವುಗಳನ್ನು ಯಶಸ್ವಿಯಾಗಿ ಅಭಿನಯಿಸಲಾಗುತ್ತಿತ್ತು. ಬರಬರುತ್ತಾ ಜನರ ಅಭಿರುಚಿಗನುಗುಣವಾಗಿ ಯಥೇಚ್ಛ ನೃತ್ಯ ಮತ್ತು ಸಂಗೀತಗಳಿಂದ ಕೂಡಿದ ನಾಟಕಗಳು ಬರಲಾರಂಭಿಸಿದವು. ಕನ್ನಡದಲ್ಲಿ ನಿಯಮಿತ ನಾಟಕ ರಚನೆಯು ೧೮೬೯ರಿಂದ ಕಂಡುಬರುತ್ತದೆ. ಅದು ಚುರುಮುರಿಯವರ 'ಅಭಿಜ್ಞಾನ ಶಾಕುಂತಲ'ದ ಅನುವಾದದಿಂದ ಪ್ರಾರಂಭವಾಯಿತು.[೪೫]

ಇಂಗ್ಲಿಷ್ ನಾಟಕಗಳ ಅನುವಾದವು ನಾಡಿನ ಉತ್ತರ, ದಕ್ಷಿಣಗಳಲ್ಲಿ ಏಕಕಾಲಕ್ಕೆ ಆರಂಭವಾಯಿತು. ಕಾಲೇಜುಮಟ್ಟದಲ್ಲಿ ಇಂಗ್ಲಿಷ್ ಕಾವ್ಯ, ನಾಟಕಗಳ ಅಭ್ಯಾಸಕ್ಕೆ ವಿಶೇಷ ಅವಕಾಶವಿದ್ದುದು ಈ ನಾಟಕನುವಾದದ ಹಿನ್ನೆಲೆಯಾಗಿದೆ. ಕನ್ನಡದಲ್ಲಿ ಕಾಣಿಸಿಕೊಂಡ ಇಂಗ್ಲಿಷ್ ನಾಟಕಕಾರರಲ್ಲಿ ಷೇಕ್ಸ್‌ಪಿಯರನೇ ಮೊದಲಿಗನು,[೪೬] ಅನಂತರ ೧೮೮೯ರಲ್ಲಿ ಎ. ಆನಂದರಾಯರು 'Romeo and juliet'ಅನ್ನು 'ರಾಮವರ್ಮ ಲೀಲಾವತಿ' ಎಂದು ಅನುವಾದಿಸಿದ್ದೇ ಷೇಕ್ಸ್‌ಪಿಯರ್ ಕನ್ನಡದಲ್ಲಿ ಪ್ರಥಮವಾಗಿ ನಾಟಕವಾಗಿ ಕಾಣಿಸಿಕೊಂಡದ್ದು ಎನ್ನಿಸುತ್ತದೆ. ಈ ಅನುವಾದವನ್ನು ಮೈಸೂರಿನ ಸರ್ಕಾರಿ ಮುದ್ರಣಾಲಯದವರು ಮುದ್ರಿಸಿದ್ದಾರೆ.[೪೭]

೧೮೯೦ರಲ್ಲಿ ಆನಂದರಾಯರು 'ಮರ್ಚೆಂಟ್ ಆಫ್ ವೆನಿಸ್' ಹಾಗೂ 'ಹ್ಯಾಮ್ಲೆಟ್' ನಾಟಕವನ್ನು ಕನ್ನಡಕ್ಕೆ ತಂದರು. ಇಂಗ್ಲಿಷ್ ತಿಳಿಯದ ಬಸವಪ್ಪಶಾಸ್ತ್ರಿಗಳು ಷೇಕ್ಸ್‌ಪಿಯರ್‌ನ ಒಥೆಲೋ(Othelo) ನಾಟಕವನ್ನು 'ಶೂರಸೇನಾ ಚರಿತ್ರೆ' ಎಂಬುದಾಗಿ ೧೮೯೫ರಲ್ಲಿ ಸಿ. ಸುಬ್ಬರಾವ್ ಜೊತೆಗೂಡಿ ಅನುವಾದಿಸಿದ್ದಾರೆ. 'ಒಥೆಲೋ' ನಾಟಕವನ್ನು ಗುಂಡೇಕೃಷ್ಣ ಚುರುಮುರಿಯವರು ಬೇರೆ ಬೇರೆಯಾದ ರೀತಿಯಲ್ಲಿ ಅನುವಾದಿಸಿದ್ದಾರೆ.[೪೮] ಇವುಗಳಲ್ಲದೆ ಈ ಸಂದರ್ಭದಲ್ಲಿ ಕನ್ನಡದ ನಾಟಕಗಳು ಬರಲಾರಂಭಿಸಿದವು. ಕೊಡಗಿನ 'ನಾಟಕ ಪಿತಾಮಹಾ'ರೆಂಬ ಹೆಗ್ಗಳಿಕೆಗೆ ಪಾತ್ರರಾದ ಮಡಿಕೇರಿಯ ವಿದ್ವಾಂಸ ಕೆ. ಶಾಮರಾವ್(ವೆಂಕಟಾದ್ರಿ ಶಾಮರಾವ್) ಇವರು ಸಾಹಿತಿಯು, ಸಂಗೀತಜ್ಞರು ಆಗಿದ್ದರಲ್ಲದೆ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಅಗಾಧ ಪಾಂಡಿತ್ಯ ಹೊಂದಿದ್ದರು. ೧೮೬೭ರಲ್ಲಿ 'ಕೃಷ್ಣಾರ್ಜುನರ ಕಾಳಗ' ಕೃಷ್ಣಸ್ವಾಮಿಯನ್ನು ದಾನ ಕೊಟ್ಟದ್ದು ಮುಂತಾದ ಆರು ಕೃತಿಗಳನ್ನು ರಚಿಸಿದರು. ೧೮೬೮ರಲ್ಲಿ ಐರಾಮರ್ ಪ್ರಸಂಗವನ್ನು ೧೮೮೦ರಲ್ಲಿ 'ತಾಮ್ರಧ್ವಜ ಕಾಳಗ', 'ಭೃಗು ರಾಮನ ಗರ್ವಭಂಗ' ಮುಂತಾದ ಐದು ಕೃತಿಗಳನ್ನು ಸಂಗ್ರಹಿಸಿ ಇವುಗಳಲ್ಲಿಯ ಸಾಹಿತ್ಯ, ರಾಗ, ತಾಳ, ಮುಟ್ಟಗಳನ್ನು ಪರಿಶೋಧಿಸಿ ಇವರು ಬರೆದಿದ್ದರು. ರಾವಣೋದ್ಭವ ಎಂಬ ಯಕ್ಷಗಾನವು ಇವರ ಸ್ವಂತ ರಚನೆಯಾಗಿತ್ತು. ಷೇಕ್ಸ್‌ಪಿಯರ್‌ನ 'ಆ್ಯಸ್ ಯು ಲೈಕ್ ಇಟ್' ಆಂಗ್ಲ ನಾಟಕವನ್ನು ಇವರು 'ಕಮಲಾವತಿ ಪರಿಣಯ'ವೆಂಬ ಹೆಸರಿನಲ್ಲಿ ಕನ್ನಡಕ್ಕೆ ಪರಿವರ್ತಿಸಿರುವರು. ಅಪ್ಪಚ್ಚ ಕವಿ ೧೯೦೪ರಿಂದ ೧೯೦೬ರವರೆಗೆ 'ಯಯಾತಿ', 'ರಾಜಂಡ ನಾಟಕ', 'ಸುಬ್ರಮಣ್ಯ ನಾಟಕ' ಮತ್ತು 'ಸಾವಿತ್ರಿ ನಾಟಕ'ಗಳು ೧೯೧೭ರ ವೇಳೆಗೆ ಕಾವೇರಿ ಮಹಾತ್ಮೆ ನಾಟಕವೂ ಇವರಿಂದ ರಚಿಸಲ್ಪಟ್ಟವು. ಈ ಕವಿಯು ೧೯೦೯ರಲ್ಲಿ ರಚಿಸಿದ ಕನ್ನಡ ನಾಟಕ 'ಸುಕನ್ಯಾ ಪರಿಚಯ' ಪ್ರಮುಖವಾದದ್ದು.[೪೯]

## ಪತ್ರಿಕೋದ್ಯಮ

ಕನ್ನಡ ವೃತ್ತ ಪತ್ರಿಕೆಗಳಿಗೆ ೧೭೦ ವರ್ಷಗಳ ಇತಿಹಾಸವಿದೆ. ಪ್ರಥಮ ಕನ್ನಡ ವೃತ್ತ ಪತ್ರಿಕೆ ಕರಾವಳಿಯ ಪಟ್ಟಣವಾದ ಮಂಗಳೂರಿನಲ್ಲಿ ಕ್ರಿ.ಶ. ೧೮೪೩ರ ಜುಲೈಯಲ್ಲಿ ಪ್ರಾರಂಭವಾದಂತಹ 'ಮಂಗಳೂರು ಸಮಾಚಾರ' ಎಂಬ ಪತ್ರಿಕೆಯಾಗಿದೆ. ಇವು ಪಕ್ಷ ಪತ್ರಿಕೆಗಳಾಗಿದ್ದು, ನಾಲ್ವರು ಪೋಲಿಯೋಗಳಿಂದ ಕೂಡಿದ್ದವು. ಇವುಗಳಲ್ಲಿ ಹೆಚ್ಚಾಗಿ ಕ್ರೈಸ್ತಮತ ವಿಷಯವಾಗಿಯೇ ಲೇಖನಗಳು ಬರುತ್ತಿದ್ದವು. ರೆ. ಇದರಲ್ಲಿ ರ್ ಬೂಹ್ರ(Buhrer) ಅವರಿದ್ದರು. ಮೈಸೂರಿನಿಂದ ಪ್ರಕಟವಾಗುತ್ತಿದ್ದ 'ಕರ್ನಾಟಕ ವಾಗ್ದಾಯಿನಿ' ಪತ್ರಿಕೆಯನ್ನು ಸ್ಥಾಪಿಸುವುದರಲ್ಲಿಯೂ ಮೋಗ್ಲಿಂಗರು ಒಬ್ಬ ಪ್ರಮುಖ ವ್ಯಕ್ತಿಗಳಾಗಿದ್ದರು. ಇದರಂತೆಯೇ ಸನ್ ೧೮೬೮ರಲ್ಲಿ ಉಡುಪಿಯಿಂದ ಪ್ರಾರಂಭವಾದ 'ಸಭಾ ಪತ್ರ' ಪತ್ರಿಕೆಗೂ ರೆ. ಜೇಕಬ್ ಬ್ರಿಗೆಲ್ ಅವರು ಕೂಡ ಇವರಲ್ಲಿ ಕಾರಣರಾಗಿದ್ದರು. ಈ ಪತ್ರಿಕೆಗಳನ್ನು ಪ್ರಾರಂಭಿಸುವಲ್ಲಿಯ ಉದ್ದೇಶ ಪ್ರಮುಖವಾಗಿ ಕ್ರೈಸ್ತಮತ ಪ್ರಚಾರವಾಗಿದ್ದರೂ ಅವುಗಳಲ್ಲಿ ಲೋಕ ಬೋಧೆಯನ್ನುಂಟು ಮಾಡುವ ಅನೇಕ ಅಂಶಗಳು ಇರುತ್ತಿದ್ದವು.[೫೦]

ಹೆನ್ರಿ ಹೇಗ್ ಅವರು 'ವೃತ್ತಾಂತ ಪತ್ರಿಕೆ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು.[೫೧] ಧಾರವಾಡ ನಗರದಲ್ಲಿ ಬ್ರಿಟಿಷರ ಆಳ್ವಿಕೆಯ ಪ್ರಾರಂಭದಲ್ಲಿ ಮೂರು ಸ್ಥಳೀಯ ಪತ್ರಿಕೆಗಳಿದ್ದವು ಅವುಗಳೆಂದರೆ: 'ಧಾರವಾಡ ವೃತ್ತ',

ಮರಾಠಿ ಭಾಷೆಯಲ್ಲಿತ್ತು. ಇದನ್ನು ಗುರುವಾರ ಹೊರಡಿಸುತ್ತಿದ್ದರು. 'ಚಂದ್ರೋದಯ' ಕನ್ನಡ ಪತ್ರಿಕೆಯಾಗಿತ್ತು. ಇದು ಶನಿವಾರದದ್ದು. 'Chhava or elephant calf' ಎಂಬ ಪತ್ರಿಕೆಯನ್ನು ಭಾನುವಾರ ಹೊರಡಿಸುತ್ತಿದ್ದ ಬಗ್ಗೆ ತಿಳಿದುಬರುತ್ತದೆ ಹೊರತು ಯಾರು, ಯಾವಾಗ ಹೊರಡಿಸಿದರು ಎಂಬ ಅಂಶದ ವಿವರಣೆ ಕ್ಯಾಂಬೆಲ್ ಅವರು ಗ್ಯಾಸೆಟಿಯರ್‌ನಲ್ಲಿ ನೀಡಿರುವುದಿಲ್ಲ.[೨೬]

೧೮೬೨ರಲ್ಲಿ 'ಅರುಣೋದಯ' ಎಂಬ ಕನ್ನಡ, ಇಂಗ್ಲಿಷ್ ಪತ್ರಿಕೆಯನ್ನು ಜಿ.ಎಲ್. ರೈಸ್ ಸಂಪಾದಕತ್ವದಲ್ಲಿ ಪ್ರಾರಂಭಿಸಲಾಯಿತು. ೧೮೬೩ರಲ್ಲಿ ಬೆಂಗಳೂರಿನಿಂದ 'ಕಾಸಿಮ್ ಅಲ್ ಅಕ್ಬರ್' ಎಂಬ ಒಂದು ಹಿಂದೂಸ್ತಾನಿ ಪತ್ರಿಕೆ ಪ್ರಕಟವಾಗುತ್ತಿತ್ತು, ಇದರ ಸಂಪಾದಕ ಕವಿ ಪಂಡಿತ ಜನಾಬ್ ಮಹಮ್ಮದ್ ಖಾಸೀಂ ಖೀಂ ಕೈಯಲ್ಲಿ ಬರೆದು ಕೈಯಿಂದಲೇ ತಿರುಗಿಸುತ್ತಿದ್ದ ಚಿಕ್ಕ ಲಿತೋ ಮುದ್ರಣಾಲಯದಿಂದ ಹೊರಡಿಸುತ್ತಿದ್ದ ಸಣ್ಣ ಪತ್ರಿಕೆಯಾಗಿತ್ತು.

೧೮೬೫ರಲ್ಲಿ ಕನ್ನಡದ ಮೊದಲ ವಾರ ಪತ್ರಿಕೆ 'ಕರ್ನಾಟಕ ಪ್ರಕಾಶಿಕೆ' ಪ್ರಕಟವಾಯಿತು. ೧೮೭೪ರಲ್ಲಿ ಅದನ್ನು ಪ್ರಸಿದ್ಧ ಸಂಸ್ಕೃತ ವಿದ್ವಾಂಸರಾದ ಟಿ.ಜಿ. ಶ್ರೀನಿವಾಸಾಚಾರ್ಯರು ಕನ್ನಡ, ಇಂಗ್ಲಿಷ್ ವಾರ ಪತ್ರಿಕೆಗಾಗಿ ಪುನರುಜ್ಜೀವನ ಮಾಡಿದರು. ಈ ಪತ್ರಿಕೆಗೆ ಇನ್ನೊಬ್ಬ ಪ್ರಸಿದ್ಧ ಸಂಸ್ಕೃತ ಪಂಡಿತರು ಭಾಷಾಂ ತಿರುಮಲಾಚಾರ್ಯರು ಅದಕ್ಕೆ ಸಂಪಾದಕರಾಗಿದ್ದರು.

ಹೈದರಾಬಾದ್ ಕರ್ನಾಟಕದಲ್ಲಿ ಎರಡು ಕನ್ನಡ ಪತ್ರಿಕೆಗಳಿದ್ದವು. ಹೈದರಾಬಾದ್ ಸಮಾಚಾರ್ ಸರ್ಕಾರದ ಪತ್ರಿಕೆಯಾಗಿತ್ತು. ಮತ್ತೊಂದು ಜಿ.ಕೆ. ಪ್ರಾಣೇಶಾಚಾರ್ಯರು 'ಸಾಧನ' ಎಂಬ ಪತ್ರಿಕೆಯನ್ನು ಹೈದರಾಬಾದ್‌ನಿಂದ ಹೊರಡಿಸುತ್ತಿದ್ದರು.[೨೭]

ಕಲಬುರ್ಗಿ ಅಥವಾ ಗುಲಬರ್ಗಾದಿಂದ ೧೮೯೧ರಲ್ಲಿ 'ಗುಲಬರ್ಗಾ ಸಮಾಚಾರ್' ಹಾಗೂ ೧೯೦೧ರಲ್ಲಿ 'ಮೈರಾ ಖಾಹ ದಾಖಿನ್' ಎಂಬೆರಡು ಮರಾಠಿ ಪತ್ರಿಕೆಗಳು ಈ ಜಿಲ್ಲೆಯಲ್ಲಿ ಪತ್ರಿಕೆಯನ್ನು ಹೊರಡಿಸುತ್ತಿದ್ದವು. ೧೯೪೭ರಲ್ಲಿ ಮರಾಠಿ ಸಾಹಿತ್ಯ ಮಂಡಳಿ ಸ್ಥಾಪನೆಗೊಂಡು 'ಅನುಬಂಧ' ಎಂಬ ತ್ರೈಮಾಸಿಕ ಪತ್ರಿಕೆಯು ಸುಮಾರು ೧೫ ವರ್ಷಗಳವರೆಗೆ ನಡೆಯಿತು. ಇದಕ್ಕೆ ಸಿ.ಎಸ್. ಕಪಾಳೆ ಸಂಪಾದಕರಾಗಿದ್ದರು. ೧೯೪೮ರ ಏಪ್ರಿಲ್ ೧೬ರಂದು ಗುಲಬರ್ಗಾ ಜೈಲಿನಿಂದ 'ದಿ ಡೆಮಾಕ್ರೆಟ್' ಎಂಬ ಇಂಗ್ಲಿಷ್ ಪತ್ರಿಕೆ ಹೊರಬಂದಿತು. ಬಂದಿಗಳಿಂದ ಬಂದಿಗಳಿಗಾಗಿ ಜೈಲಿನಲ್ಲಿ ಪ್ರಕಟವಾಗುತ್ತಿದ್ದ ಕೈಬರಹದ ೧೨ ಪುಟದ ಈ ಪತ್ರಿಕೆಯನ್ನು ವಿ.ಎಚ್. ದೇಸಾಯಿಯವರು ಚಂಚಲಗುಡಾ ಕಾರಾಗೃಹದಿಂದ ಪ್ರಕಟಿಸುತ್ತಿದ್ದರು. ೧೯೩೫ರಿಂದ ೧೯೪೦ರ ವರೆಗೆ ೧೫ ವರ್ಷ ಕಾಲ ನಡೆಯಿತು.

ಬೆಳಗಾಂನಿಂದ ಮೂರು ಸ್ಥಳೀಯ ಪತ್ರಿಕೆಗಳಿದ್ದವು. 'ಬೆಳಗಾಮ್ ಸಮಾಚಾರ್' ಪತ್ರಿಕೆ ಸೋಮವಾರ ಬಿಡುಗಡೆಯಾಗುತ್ತಿತ್ತು. ಮತ್ತೊಂದು 'ಕರ್ನಾಟಕ ಮಿತ್ರ,' ಈ ಪತ್ರಿಕೆಯು ಸಹ ಸೋಮವಾರ ಬಿಡುಗಡೆಯಾಗುತ್ತಿತ್ತು. 'Jnyan bodhak' ಇದು ಭಾನುವಾರ ಪ್ರಕಟವಾಗುತ್ತಿತ್ತು. ಇವೆಲ್ಲವೂ ಸಹ ಮದ್ರಾಸ್

ಮಂಗಳೂರಿನಿಂದ ಹಾಸ್ಯಪತ್ರಿಕೆ 'ಕೊರವಂಜಿ'ಯು ಪ್ರಕಟವಾಗುತ್ತಿತ್ತು. ಆಲೂರ ವೆಂಕಟರಾಯರು 'ಜಯ ಕರ್ನಾಟಕ'(೧೯೨೨) ಪತ್ರಿಕೆಯನ್ನು ಧಾರವಾಡದಿಂದ ಪ್ರಾರಂಭಿಸಿದರು.[೫೭] ಗಳಗನಾಥರು 'ಸುದ್ಬೋಧ ಚಂದ್ರಿಕೆ' (೧೯೦೭) ಪ್ರಾರಂಭಿಸಿದರು. ಕೊಡಗು ಸಂಸ್ಥಾನದಿಂದ ೧೯೫೯ರಲ್ಲಿ 'ಕೊಡಗು ಮತ್ತು ಕೊಡಗು ವೃತ್ತಾಂತ' ಎಂಬ ವೃತ್ತಪತ್ರಿಕೆಗಳನ್ನು ಸ್ಥಳೀಯರಾದ ಬಿ.ಎ. ಬೆಳ್ಳಪ್ಪ ಮತ್ತು ಸಿ.ಎಂ. ಪೂಣಚ್ಚ ಅವರು ಪ್ರಾರಂಭಿಸಿದರು.[೫೮]

ಹೀಗೆ ವಸಾಹತುಶಾಹಿಗಳ ಆಳ್ವಿಕೆಯಿಂದಲೂ ಸಾಕಷ್ಟು ಪ್ರಗತಿಯನ್ನು ಪತ್ರಿಕೋದ್ಯಮವು ಸಾಧಿಸಿತು. ೧೯೩೩ರ ವೇಳೆಗೆ ಮೈಸೂರು ಸಂಸ್ಥಾನದಲ್ಲಿಯೇ ಪ್ರಮುಖವಾಗಿ ೨೬ ಇಂಗ್ಲಿಷ್ ಪತ್ರಿಕೆಗಳು, ೬೨ ಕನ್ನಡ ಪತ್ರಿಕೆಗಳು ಹಾಗೂ ಇತರೇ ಭಾಷೆಯ ಪತ್ರಿಕೆಗಳು ಇದ್ದವು. ಇವುಗಳೆಲ್ಲವು ಹೆಚ್ಚಾಗಿ ಕಾರ್ಮಿಕ, ಜರ್ನಲ್‌ಗಳು, ಮೂರು ವೈಜ್ಞಾನಿಕ ವಿಷಯಗಳ ಬಗ್ಗೆ, ೨೦ ಸಾಹಿತ್ಯ ವಿಷಯದ ಬಗ್ಗೆ, ೧೦ ಧರ್ಮದ ಬಗ್ಗೆ ಮೂರು ತತ್ವಶಾಸ್ತ್ರದ ಬಗ್ಗೆ ಒಂದು ಸರ್ಕಾರದ ಆದೇಶಗಳ ವರದಿಗಳನ್ನು ಬರೆಯುತ್ತಿದ್ದಂತಹ ಮಾಹಿತಿಯು ಸಿಗುತ್ತದೆ. ಮೈಸೂರು ಪ್ರಾಂತ್ಯದ ಸರ್ಕಾರವು ಪತ್ರಿಕೆಗಳಿಗೆ ಸಂಬಂಧಿಸಿದಂತೆ ಪತ್ರಿಕೋದ್ಯಮವನ್ನು ೧೮೬೭ನೇ ಸೆಪ್ಟಂಬರ್ ೧೩ನೇ ತಾರೀಖು ನೋಂದಣಿ ಸಂಖ್ಯೆ ೧೭೬ರ ಕಾಯ್ದೆ ಸಂಖ್ಯೆ XXರಂತೆ ಹೊರಡಿಸಲಾಯಿತು. ಈ ಕಾಯ್ದೆಯ ಪ್ರಕಾರ ಪುಸ್ತಕಗಳ ಮುದ್ರಣ ಪತ್ರಿಕೆ ಇತ್ಯಾದಿಯನ್ನು ಮೈಸೂರು ಪ್ರಾಂತ್ಯದಲ್ಲಿ ಪ್ರಾರಂಭಿಸಲು ಪುಸ್ತಕ ಕಾಯ್ದೆ ಆ್ಯಕ್ಟ್ ನಂ. XX ರಂತೆ ೧೮೯೭ರಲ್ಲಿ ಪಾಸ್ ಮಾಡಲಾಯಿತು.[೫೯] ಇದು ೧೮೯೪ರಲ್ಲಿ ನೋಂದಣಿ ಕಾಯ್ದೆ ನಂ. ೧ರಂತೆ ೧೯೦೪ರಲ್ಲಿ ವೃತ್ತಪತ್ರಿಕೆಗಳ ಕಾಯ್ದೆ ಜಾರಿಗೆ ಬಂದಿತ್ತು. ಈ ಪ್ರಕಾರ ಪತ್ರಿಕೆಗಳಲ್ಲಿ ಹಿಂಸೆಗೆ ಪ್ರಚೋದಿಸುವ ಅಂಶಗಳಿದ್ದರೆ ನ್ಯಾಯಾಧೀಶರು ಮುಟ್ಟುಗೋಲು ಹಾಕಬಹುದಾಗಿತ್ತು. ವೃತ್ತಪತ್ರಿಕೆಗಳ ಕಾಯ್ದೆ ಸಂಖ್ಯೆ VIIರಂತೆ ೧೯೧೪ರಲ್ಲಿ ಪಾಸ್ ಮಾಡಲಾಯಿತು. ಹೀಗೆ ಪತ್ರಿಕಾರಂಗಕ್ಕೆ ಪಾಶ್ಚಾತ್ಯ ವಿದ್ವಾಂಸರ ಸೇವೆ ಬಹುಮುಖ್ಯವಾದದ್ದು. ಈ ಮೂಲಕವಾಗಿ ಕೆಲವೊಂದು ಪತ್ರಿಕೆಗಳು ಸರ್ಕಾರಕ್ಕೆ ವಿರೋಧವಾಗಿ ಬರೆದರೆ ಕೆಲವೊಂದು ಪರವಾಗಿ ಹೀಗೆ ಅನೇಕ ಜನರಿಗೆ ಪತ್ರಿಕೆಗಳ ಉಪಯೋಗವನ್ನು ಪಡೆದುಕೊಳ್ಳಲು ಇವರ ಮುದ್ರಣಾ ಯಂತ್ರದ ಸಹಾಯದಿಂದಲೂ ಆಗಿರುವುದು ಸ್ಪಷ್ಟ. ಹೀಗೆ ಭಾರತೀಯರಿಗೆ ಬಹುಮುಖ್ಯ ಪಾತ್ರವು ಇಂದು ಪತ್ರಿಕೆಗಳು ವಹಿಸುತ್ತಿರುವುದು ಸ್ಪಷ್ಟ.

**ಚಿತ್ರಕಲೆ**

ಕರ್ನಾಟವು ಅತ್ಯಂತ ಹಿಂದಿನ ವರ್ಣಚಿತ್ರಗಳಿಗೆ ಹೆಸರುವಾಸಿಯಾಗಿದೆ. ಸುಮಾರು ಕ್ರಿ.ಪೂ. ೩೦೦೦-೧೦೦೦ರ ಇತಿಹಾಸ ಪೂರ್ವ ಕಾಲದಿಂದಲೂ ಗುರುತಿಸಲಾಗುತ್ತದೆ. ಆದರೆ ಪಾಶ್ಚಾತ್ಯ ವಿದ್ವಾಂಸರ ಆಗಮನದಿಂದ ಎಲ್ಲಾ ಕ್ಷೇತ್ರಗಳಲ್ಲಿ ತಮ್ಮ ಆಧುನಿಕ ವಿನ್ಯಾಸದಲ್ಲಿ ಪ್ರಭಾವ ಬೀರಿರುವುದುಂಟು. ಹಾಗೆಯೇ ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಲ್ಲಿ ಮೈಸೂರಿನ ಶ್ರೀ ಚಾಮರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್‌ನ ವ್ಯಾಸಂಗದ ಕ್ರಮದ ಒಂದು ಭಾಗವಾಗಿ ಐರೋಪ್ಯ ವರ್ಣಚಿತ್ರ ಶೈಲಿಯನ್ನು ಅಭ್ಯಸಿಸಿದ ಕಾರಣದಿಂದ ಹಳೆಯ ಪಾರಂಪರಿಕ ವರ್ಣಚಿತ್ರ ಶೈಲಿ ಕಣ್ಮರೆಯಾಗಿ ಪಾಶ್ಚಾತ್ಯ ಪದ್ಧತಿ ಹಾಗೂ ವರ್ಣಚಿತ್ರ ಶೈಲಿಗಳಲ್ಲಿ ತರಬೇತಿ ಪಡೆದ ಚಿತ್ರಕಾರರ ಹೊಸ ತಲೆಮಾರಿನ ಸೃಷ್ಟಿಯಾಯಿತು ಎನ್ನಬಹುದು.[೬೦] ಐರೋಪ್ಯ

ಪ್ರವಾಸಿಗರು ಭೇಟಿ ನೀಡಿದ ಸಂದರ್ಭದಲ್ಲಿ ತಮ್ಮ ಪ್ರವಾಸ ಕಥನಗಳಲ್ಲಿ ತಾವು ಕಂಡ ಕೆಲವು ಚಿತ್ರಗಳನ್ನು ನೀಡಿದ್ದಾರೆ. ಇದರಲ್ಲಿ ಪ್ರಮುಖವಾಗಿ ಗುರುತಿಸಲ್ಪಡುವವರು ಜೇಮ್ಸ್‌ಹಂಟರ್, ರಾಬರ್ಟ್‌ಹೋಮ್, ಕೊಲ್‌ಬ್ರೂಕ್, ಡ್ಯಾನಿಯಲ್ ಸಹೋದರರು ಮತ್ತಿತರ ಐರೋಪ್ಯ ಕಲಾವಿದರು. ಇವರು ಬೆಂಗಳೂರಿಗೆ ೧೭೯೧ರಲ್ಲಿ ಭೇಟಿ ನೀಡಿದ ಸಂದರ್ಭದಲ್ಲಿ ತಮ್ಮ ಕಲಾಕುಂಚಗಳಿಂದ ಸೆರೆಹಿಡಿದಿದ್ದಾರೆ. ಆ ಕಾಲದ ಅಪರೂಪದ ದೃಶ್ಯ ಹಾಗೂ ಉದ್ಯಾನಗಳ, ನಗರಗಳ ಇತರೇ ಚಿತ್ರಗಳೆಲ್ಲವೂ ಐತಿಹಾಸಿಕ ದಾಖಲೆಗಳಾಗಿ ಬಳಸಿಕೊಳ್ಳಲಾಗುತ್ತದೆ. ವಸಾಹತು ಸಂದರ್ಭದ ಬೆಂಗಳೂರಿನಲ್ಲಿ ಚಹಾ ಕಾರ್ಖಾನೆ ನಡೆಸುತ್ತಿದ್ದ ದಾಖಲೆ ಸಿಗುವುದು ಚಿತ್ರಗಳ ಮೂಲಕವೇ. ಅದರಂತೆ ೧೮೦೪ರ ಹಳೆಯ ಕಾಲದ ಕಂಟೋನ್ಮೆಂಟ್ ಪ್ರದೇಶಕ್ಕೆ ಹೊಂದಿಕೊಂಡಂತೆ ಇರುವ ಹುಣಸೂರು ಕೆರೆ ಹಾಗೂ ದಂಡು ಪ್ರದೇಶದ ಹಳೆಯ ಚಿತ್ರ ದೊರಕುವುದು. ಬೆಂಗಳೂರಿನಲ್ಲಿ ಕ್ಷಾಮ ತಲೆದೋರಿದಾಗ ಗಂಜಿ ಕೇಂದ್ರದ ಬಳಿ ಚಿತ್ರಿಸಿದ ಚಿತ್ರಗಳೆಲ್ಲವೂ ಪ್ರಮುಖ ದಾಖಲೆಗಳಾಗಿವೆ.

೧೮೦೪ರಲ್ಲಿ ಜೇಮ್ಸ್‌ಹಂಟರ್ ರಚಿಸಿದ ಬೆಂಗಳೂರಿನ ಮುಖ್ಯ ಬೀದಿ(ಅವಿನ್ಯೂರಸ್ತೆ)ಯ ವರ್ಣಚಿತ್ರ, ೧೮೦೨ರಲ್ಲಿ ಸಿ. ಮಾರ್ಟಿನ್ ರಚಿಸಿದ ಲಾಲ್‌ಬಾಗ್ ಹಾಗೂ ಬೆಂಗಳೂರು ಕೋಟೆಯ ಚಿತ್ರ. ೧೮೦೨ರಲ್ಲಿ ರಾಬರ್ಟ್ ಹೋಮ್ ಎಂಬ ಕಲಾವಿದ ರಚಿಸಿದ ಬ್ರಿಟಿಷ್ ಸೈನಿಕರ ಸಮಾಧಿಗಳ ಚಿತ್ರ ಹಡ್ಸನ್ ವೃತ್ತದ ಬಳಿಯಲ್ಲಿದ್ದವು. ನಂತರ ತೆಗೆದುಹಾಕಿ ಸೆನಟೋವ ನಿರ್ಮಿಸಲಾಗಿತ್ತು ಎನ್ನಬಹುದು.[೬೧]

೧೭೯೪ರಲ್ಲಿ ಲಾರ್ಡ್ ಕಾರ್ನ್‌ವಾಲೀಸರು ಚಿತ್ರಸಂಗ್ರಹವನ್ನು 'ಸೆಲೆಕ್ಟ್ ಮಾ ಆಫ್ ಮೈಸೂರು' ಎಂಬಲ್ಲಿ ದಾಖಲಿಸಿರುತ್ತಾರೆ. ಲೆಫ್ಟಿನೆಂಟ್ ಆರ್.ಎಚ್. ಕೋಲ್‌ಬ್ರೂಕ್, ೧೭೭೩ರಲ್ಲಿ 'ಮೈಸೂರು ರಾಜರ ಅರಮನೆಯ ಹನ್ನೆರಡು ದೃಶ್ಯಗಳು' ಎಂಬ ಚಿತ್ರ ಸಂಪುಟದಲ್ಲಿ, ಕ್ಯಾಪ್ಟನ್ ಎ. ಆಲನ್ ಅವರು ೧೭೯೪ರಲ್ಲಿ 'ಮೈಸೂರು ಸೀಮೆಯ ದೃಶ್ಯಗಳು', ಲೆಫ್ಟಿನೆಂಟ್ ಜೇಮ್ಸ್‌ಹಂಟರ ೧೮೦೪ರಲ್ಲಿ 'ಮೈಸೂರು ಸೀಮೆಯ ದೃಶ್ಯಗಳು' ಹಾಗೂ 'ಮೈಸೂರು ದೇಶದ ಪ್ರಕೃತಿ ದೃಶ್ಯಗಳು' ಎಂಬ ಚಿತ್ರ ಸಂಪುಟಗಳಲ್ಲಿ ಪ್ರಕಟಿಸಿದರು.[೬೨] ಫ್ರಾನ್ಸಿಸ್ ಬುಕಾನ್‌ನು ಸಹ ತನ್ನ 'ಎ ಜರ್ನಿ ಪ್ರಮ್ ಮದ್ರಾಸ್ ಥ್ರೋದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಆ್ಯಂಡ್ ಮಲಬಾರ್' ಎಂಬ ಮೂರು ಸಂಪುಟಗಳಲ್ಲಿಯೂ ಸಹ ಕೆಲವೊಂದು ರೇಖಾಚಿತ್ರಗಳನ್ನು ನೋಡಬಹುದು. ಮುಖ್ಯವಾಗಿ ಕೃಷಿ ಸಲಕರಣೆಗಳು, ಗೃಹೋಪಯೋಗಿ ವಸ್ತು, ಪ್ರಾಣಿ, ಶಿಲ್ಪಗಳು ಇನ್ನಿತರೇ ವಸ್ತುಗಳಲ್ಲದೆ ಟಿಪ್ಪುಸುಲ್ತಾನ್ ಅವನ ಮಕ್ಕಳ ಚಿತ್ರಗಳ ರೇಖಾಚಿತ್ರಗಳನ್ನು ಈ ಸಂಪುಟ ಒಳಗೊಂಡಿದೆ.[೬೩]

ಮುಮ್ಮಡಿ ಕೃಷ್ಣರಾಜ ಒಡೆಯರು ಮಗುವಾಗಿದ್ದಾಗ ಅಧಿಕಾರ ಸ್ವೀಕರಿಸುವಾಗಿನ ಚಿತ್ರವನ್ನು ಪಿಕಾರ್ಟ್ ರಚಿಸಿದ್ದು, ಇದು ಅರಮನೆಯಲ್ಲಿದೆ. ಹಾಗೆಯೇ ದರಿಯಾ ದೌಲತ್ ಅರಮನೆಯಲ್ಲಿ ಕರ್ನಲ್ ಕ್ಲೋಸ್ ಆಜ್ಞೆಯಂತೆ ದುರಸ್ತಿ ಮಾಡುತ್ತಿದ್ದಾಗ ಮುಖ್ಯ ಕೆಲಸಗಾರನು ಭಿತ್ತಿ ಚಿತ್ರಗಳಲ್ಲಿ ಚಿನ್ನದ ಲೇಪನವನ್ನು ಮಾಡಿರುವ ಬಗೆಯನ್ನು ಕುರಿತು(ಪಾಸ್ ಗಿಲ್ಡಿಂಗ್) ಬುಕಾನನ್‌ಗೆ ಹೇಳಿದ್ದು, ಚಿನ್ನದ ಲೇಪನವನ್ನು ಮಾಡಿರುವ ಬಗೆಯನ್ನು ವಿವರವಾಗಿ ವರದಿ ಮಾಡಿದ್ದಾನೆ. ಕರ್ನಲ್ ವೆಲ್ಲೆಸ್ಲಿ ೩೦.೧೨.೧೮೦೦ರಂದು ಕರ್ನಲ್ ಕ್ಲೋಸ್‌ಗೆ

ಬರೆದ ಕಾಗದದಲ್ಲಿ ಲಾರ್ಡ್ ವೆಲ್ಲೆಸ್ಲಿ ಮೈಸೂರು ಸೀಮೆಯಲ್ಲಿ ಸಂಚರಿಸಲಿದ್ದಾನೆಂದು ಆಗ ಶ್ರೀರಂಗಪಟ್ಟಣದ ದರಿಯಾ ದೌಲತ್ ಅರಮನೆಯಲ್ಲಿ ತಂಗಲಿದ್ದಾನೆಂದು ಆ ಕಾರಣ ಆಗಾಗ್ಗೆ ಅಲ್ಲಿ ಹೋಗಿ ನೋಡಿ ಬರುವುದಲ್ಲದೆ ಚಿತ್ರಗಳ ಬಗ್ಗೆಯೂ ಗಮನ ಹರಿಸಬೇಕೆಂದು ತಿಳಿಸುತ್ತಾನೆ.

ಕರ್ನಲ್ ವೆಲ್ಲೆಸ್ಲಿ ಯುದ್ಧಾ ನಂತರ ದರಿಯಾ ದೌಲತ್ ಅರಮನೆಯನ್ನು ಕೆಲಕಾಲ ತನ್ನ ವಾಸದ ಮನೆಯನ್ನಾಗಿ ಮಾಡಿಕೊಂಡಿದ್ದ. ಇದೇ ವೇಳೆಯಲ್ಲಿ ಭಾರತದಲ್ಲಿ ಪ್ರವಾಸ ಮಾಡಿ೧೮೦೪ರಲ್ಲಿ ಪುಸ್ತಕ ರಚಿಸಿದ. ಲಾರ್ಡ್ ವ್ಯಾಲೆಂಡಿಯಾ ಇಲ್ಲಿಯ ಚಿತ್ರಗಳ ಬಗ್ಗೆ ಹೇಳುತ್ತಾ ಟಿಪ್ಪುವಿನಿಂದ ದ್ವೇಷಿಸಲ್ಪಟ್ಟ ಬ್ರಿಟಿಷ್ ಸೈನ್ಯಾಧಿಕಾರಿಯೊಬ್ಬ ನೃತ್ಯಗಾರ್ತಿಯೊಂದಿಗೆ ಕುಣಿಯುತ್ತಾ ಮಹಿಳೆಯೊಬ್ಬಳಿಗೆ ಕತ್ತಿಯಿಂದ ತಿವಿಯುತ್ತಿರುವಂತಹ ಚಿತ್ರವೊಂದನ್ನು ಇಲ್ಲಿ ನೋಡಿರುವುದಾಗಿ ತಿಳಿಸುತ್ತಾನೆ. ಕರ್ನಲ್ ವಿಲ್ಕ್ಸ್ ೧೮೧೦ರಲ್ಲಿ ರಚಿಸಿದ ತಮ್ಮ ಮೈಸೂರಿನ ಇತಿಹಾಸ ಗ್ರಂಥದಲ್ಲಿ ಪೊಲ್ಲೈಯೂರಿನ ಯುದ್ಧ ವಿವರಣೆಯ ಸಂದರ್ಭದಲ್ಲಿ ದರಿಯಾ ದೌಲತ್‌ನ ಚಿತ್ರಗಳ ಬಗ್ಗೆ ಹೇಳುತ್ತಾ ಮದ್ದಿನ ಗಾಡಿಗೆ ಬೆಂಕಿ ಬಿದ್ದು ಉರಿಯುತ್ತಿರುವ ದೃಶ್ಯವನ್ನು ಕರ್ನಲ್ ಬೇರಿ ಆಶ್ಚರ್ಯಚಕಿತನಾಗಿ ನೋಡುತ್ತಿರುವಂತೆ ಇರುವ ಭಿತ್ತಿಚಿತ್ರದ ಬಗ್ಗೆಯೂ ಗಮನ ಸೆಳೆಯುತ್ತಾನೆ.[೬೪] ಕೊಡಗಿನಲ್ಲಿ ದೊಡ್ಡ ವೀರರಾಜೇಂದ್ರನ ಆಡಳಿತಾವಧಿಯಲ್ಲಿ ಅಂದರೆ ೧೮೦೯ರ ಮಧ್ಯೆ ರಾಜನ ಮತ್ತು ಆತನ ಕುಟುಂಬದವರ ಚಿತ್ರಗಳನ್ನು ಬಿಡಿಸಲು ಮುಂಬಯಿಯಿಂದ 'ನೆಸ್' ಎಂಬಾತನು ಬಂದಿದ್ದನು. ಗಂಗೋಜಿ ಎಂಬುವನು ಆಸ್ಥಾನ ಚಿತ್ರಕಾರನಾಗಿದ್ದು, ಅವರ ಮಗ ಪಿರೋಜಿಯ ಚಿತ್ರಗಳನ್ನು ಬಣ್ಣದಲ್ಲಿ ಬರೆಯುವ ಕಲಾವಿದನಾಗಿದ್ದನು. ಚಿಕ್ಕವೀರರಾಜೇಂದ್ರನು ಸ್ವಲ್ಪ ಕಾಲ ಕಾಶಿಯಲ್ಲಿ ನೆಲೆಸಿದ್ದಾಗ ಪಿರೋಜಿಯು ಕಾಶಿಗೆ ಹೋಗಿ ಈ ಅರಸನ ಆಶ್ರಯದಲ್ಲಿ ಚಿತ್ರಗಳನ್ನು ಬರೆದನು. ಎಡನಾಲ್ಕುನಾಡು, ಮಡಿಕೇರಿ ಅರಮನೆಗಳ ಭಿತ್ತಿ ಚಿತ್ರಗಳಲ್ಲಿ ಐರೋಪ್ಯರ ಪ್ರಭಾವ ಕಂಡುಬರುತ್ತದೆ.[೬೫]

ಗ್ಯಾಸೆಟಿಯರ್‌ಗಳಲ್ಲಿಯೂ ಚಿತ್ರಗಳು ಇರುವುದನ್ನು ಗಮನಿಸಬಹುದು. ಮೈಸೂರು ಪ್ರಾಂತ್ಯದ ಶ್ರವಣ ಬೆಳಗೊಳ ಜಿಲ್ಲೆಯಲ್ಲಿರುವ ಹೊಯ್ಸಳರ ಕಾಲದ ದೇವಾಲಯವಾದ ಕೇದಾರೇಶ್ವರ ದೇವಸ್ಥಾನವು ಹಳೆಬೀಡಿನಲ್ಲಿರುವ ಸೋಮನಾಥ ದೇವಸ್ಥಾನದಲ್ಲಿ ಸ್ವಚ್ಛತಾಕಾರ್ಯ ಕೈಗೊಂಡ ಪೂರ್ವ ಹಾಗೂ ಅನಂತರದಲ್ಲಿ ಕಂಡುಬಂದ ಚಿತ್ರಗಳನ್ನು ಕಣ್ಣಿಗೆ ಕಟ್ಟುವಂತೆ ೧೮೭೬ರಲ್ಲಿ ವುಡನ್ ಬ್ಲಾಕ್ಸ್ ಎಂಬ ಚಿತ್ರಕಾರನು ಚಿತ್ರಿಸಿದ್ದಾನೆ. ಅಲ್ಲದೆ ಶ್ರವಣಬೆಳಗೊಳದಲ್ಲಿರುವ ಜೈನ ಬಸದಿಯ ಚಿತ್ರವನ್ನು ೧೮೭೬ರಲ್ಲಿ ವುಡನ್ ಬ್ಲಾಕ್ಸ್ ರಚಿಸಿರುವುದನ್ನು ಕಾಣಬಹುದು.

೧೮೯೯ರಲ್ಲಿ ಯುರೋಪಿನಿಂದ ಮಂಗಳೂರಿಗೆ ಬಂದ ಪೂಜ್ಯ ಸಹೋದರ ಆ್ಯಂಟೋನಿ ಮೋಶ್ಚಿನಿ (Antony moscheni) ಎಂಬಾತ ರಚಿಸಿದ ನೂರಾರು ಚಿತ್ರಗಳನ್ನು ಮಂಗಳೂರಿನ ಸೆಂಟ್ ಎಲೋಷಿಯಸ್ ಚರ್ಚ್‌ನಲ್ಲಿ ನಿರ್ಮಿಸಲಾಗಿತ್ತು ಎಂಬುದಾಗಿ ತಿಳಿದುಬರುತ್ತದೆ.[೬೬] ಹೀಗೆ ಅನೇಕ ತೈಲವರ್ಣ ಚಿತ್ರಗಳು ಹತ್ತೊಂಬತ್ತನೆಯ ಶತಮಾನದ ಅಂತ್ಯದ ವೇಳೆಗೆ ಕರ್ನಾಟಕದ ಎಲ್ಲಾ ಕಡೆಯೂ ಪ್ರಭಾವ ಬೀರಲಾರಂಭಿಸಿತು. ಇವುಗಳಿಂದಾಗಿ ಅಂದಿನ ಕಾಲದ ಆರ್ಥಿಕ, ಸಾಮಾಜಿಕ, ಪ್ರಾಕೃತಿಕ ಇತರೆ ಸ್ಥಿತಿಗತಿಯನ್ನು ತಿಳಿಯಲು ಸಹಾಯಕವಾಗುತ್ತವೆ.

## ಛಾಯಾಚಿತ್ರ

ಛಾಯಾಚಿತ್ರ ಅಥವಾ ಫೋಟೋಗ್ರಫಿಯು ಸಹ ಯುರೋಪಿಯನ್ನರ ಕೊಡುಗೆ. ೧೯ನೆಯ ಶತಮಾನದ ಮಧ್ಯದಲ್ಲಿಯೇ ಛಾಯಾಚಿತ್ರ ಮೈಸೂರಿಗೆ ಬಂದಿತು. ೧೮೬೦ರ ದಶಕದಲ್ಲಿಯೇ ಬೆಂಗಳೂರಿಗೆ ಛಾಯಾಚಿತ್ರ ತಂತ್ರಜ್ಞಾನ ಪರಿಚಯವಾಯಿತು.[೭೭] ಅನೇಕ ಹಳೆಯ ಛಾಯಾಚಿತ್ರಗಳು ನಿಜವಾಗಿಯೂ ಇಂದಿಗೂ ಉತ್ತಮ ಆಕರಗಳಾಗಿವೆ. ಆಂಗ್ಲರು ತಮ್ಮ ಗ್ಯಾಸೆಟಿಯರ್‌ಗಳಲ್ಲಿ ಹಲವಾರು ಛಾಯಾಚಿತ್ರಗಳನ್ನು ಸೆರೆಹಿಡಿದು ದಾಖಲಿಸಿರುವುದು ಇಂದಿಗೂ ಸಹ ಜೀವಂತ ಸಾಕ್ಷಿಗಳಾಗಿ ಪರಿಗಣನಾರ್ಹವಾದುದಾಗಿದೆ. ಇವರು ಮುಖ್ಯವಾಗಿ ದಾಖಲಿಸಲ್ಪಟ್ಟಿರುವ ಛಾಯಾಚಿತ್ರಗಳೆಂದರೆ ಮೈಸೂರು ಜಿಲ್ಲೆಯ ಶ್ರವಣಬೆಳಗೊಳದ ಹಳೇಬೀಡಿನ ಕೇದಾರೇಶ್ವರ ದೇವಾಲಯದ ೧೮೬೬ರ ಮುಂಚೆ ಇದ್ದಂತಹ ಚಿತ್ರ ಹಾಗೂ ೧೮೮೬ರಲ್ಲಿ ಸ್ವಚ್ಛತಾಕಾರ್ಯ ಕೈಗೊಂಡು ತೆಗೆದಿರುವ ಚಿತ್ರ ಸಿಗುತ್ತದೆ. ಶ್ರವಣಬೆಳಗೊಳದ ಗೊಮ್ಮಟೇಶ್ವರ ಮೂರ್ತಿಯು ೧೮೮೯ರ ಮುಂಚೆ ನಂತರದ ಅಂದರೆ ೨೦ನೇ ಶತಮಾನದಲ್ಲಿರುವ ಕಾಲವನ್ನು ತಿಳಿಸುತ್ತದೆ. ಶಿವಮೊಗ್ಗ ಜಿಲ್ಲೆಯ ತಿರುಪತಿ ನಾರಾಯಣ ದೇವಾಲಯದ ಛಾಯಾಚಿತ್ರ, ಸೋಮನಾಥ ದೇವಾಲಯದ ಛಾಯಾಚಿತ್ರ, ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣದಲ್ಲಿರುವ ಜುಮ್ಮಾ ಮಸೀದಿಯ ಚಿತ್ರ, ಬೆಂಗಳೂರಿನ ೨೦ನೇ ಶತಮಾನದ ಸೇಂಟ್ ಮೇರಿ ಬ್ಯಾಸಿಲಿಕ್ ಚರ್ಚ್‌ನ ಛಾಯಾಚಿತ್ರದ ಮೂಲಕ ಅಂದಿನ ವಾಸ್ತುಶಿಲ್ಪದ ಬಗ್ಗೆ ಬೆಳಕು ಚೆಲ್ಲುತ್ತದೆ.

ಮದ್ರಾಸ್ ಪ್ರಾಂತ್ಯದ ಬಳ್ಳಾರಿಯಲ್ಲಿ ೧೮೫೬ರಲ್ಲಿ ಹಂಪಿಯ ಪ್ರಮುಖ ಸ್ಥಳಗಳಾದ ಹಂಪಿ ವಿರೂಪಾಕ್ಷ ದೇವಾಲಯದ ಛಾಯಾಚಿತ್ರ, ವಿಜಯವಿಠ್ಠಲ ದೇವಾಲಯದ ಕಲ್ಲಿನ ರಥ, ರಾಣಿಯರ ಕಮಲಮಹಲ್, ಮುಖ್ಯದ್ವಾರದ್ದು ಅಂದರೆ ತುಲಾಭಾರ ನಡೆಸುವ ಸ್ಥಳದ ಪ್ರಾಚೀನ ೧೮೫೬ರ ಸುಮಾರಿನ ಛಾಯಾಚಿತ್ರವನ್ನು ಬಳ್ಳಾರಿ ಗ್ಯಾಸೆಟಿಯರ್‌ಗಳು ಒಳಗೊಂಡಿದ್ದು ಇದನ್ನು ಅಲೆಗ್ಸಾಂಡರ್ ಜೆ. ಗ್ರೀನ್‌ಲಾ ಅವರು ಸೆರೆಹಿಡಿದ ಅಂಶದ ಕುರಿತ ಬೆಳಕು ಚೆಲ್ಲುತ್ತದೆ. ಅಲ್ಲದೆ ಇವುಗಳಲ್ಲಿ ಅಂದಿನ ಕಾಲದ ಹಲವು ದೇವಾಲಯಗಳು ವಿನಾಶದ ಅಂಚಿನಲ್ಲಿರುವುದನ್ನು ನಂತರ ಅವುಗಳ ಉಳಿಸುವಿಕೆಯ ಪರಂಪರೆಯನ್ನು ಆಂಗ್ಲರು ಕೈಗೊಂಡ ಕ್ರಮಗಳ ಬಗ್ಗೆ ತಿಳಿಯಬಹುದಾಗಿದೆ. ಜಿ. ರಿಚ್ಟರ್ ಸಹ ತಮ್ಮ ಕೂರ್ಗ್ ಗ್ಯಾಸೆಟಿಯರ್‌ನಲ್ಲಿ ಪ್ರಾಕೃತಿಕ ಛಾಯಾಚಿತ್ರವನ್ನು, ಕೊಡಗು ಪ್ರದೇಶವನ್ನು ಸೆರೆಹಿಡಿದಿದ್ದಾರೆ.

ಹೀಗೆ ಬಿ.ಎಲ್. ರೈಸ್‌ರ ಮೈಸೂರು ಗ್ಯಾಸೆಟಿಯರ್‌ನಲ್ಲಿ ಹಾಗೂ ಜಾನ್‌ಕೆಲ್‌ಸಾಲ್ ಅವರ ಬಳ್ಳಾರಿ ಮ್ಯಾನ್ಯುವಲ್‌ನಲ್ಲಿ ಹಾಗೂ ಜಿ. ರಿಕ್ಟರ್ ಅವರ ಕೂರ್ಗ್ ಗ್ಯಾಸೆಟಿಯರ್‌ನಲ್ಲಿ(ಒಂದು ಚಿತ್ರ) ಅಂದಿನ ಆಂಗ್ಲರ ಛಾಯಾಚಿತ್ರ ಸೆರೆಹಿಡಿದಿದ್ದಾರೆಯೇ ಹೊರೆತು, ಬೇರೆ ಗ್ಯಾಸೆಟಿಯರ್‌ಗಳಲ್ಲಿ ಇವುಗಳ ಮಾಹಿತಿ ಸಿಗುವುದಿಲ್ಲ. ಇಂದಿನ ಗ್ಯಾಸೆಟಿಯರ್ ರಚನೆಯಲ್ಲಿ ಹಲವಾರು ವರ್ಣರಂಜಿತ ಛಾಯಾಚಿತ್ರ ಕಾಣಬಹುದು. ಹೀಗಾಗಿ ಗ್ಯಾಸೆಟಿಯರ್‌ನಲ್ಲಿರುವ ಛಾಯಾಚಿತ್ರವು ಅಪರೂಪದ ದಾಖಲೆಗಳಾಗಿವೆ ಎಂದರೆ ತಪ್ಪಾಗಲಾರದು.

ಅದರ ಆಚೀಚಿನ ಬಾಹುಗಳು ಕಂಡುಬರುತ್ತವೆ. ಇವುಗಳಲ್ಲಿ ಮಧ್ಯಾಂಕಣದ ಹಿಂಬದಿಗೆ 'ಚಾನ್ಸೆಲ್' ಎಂಬ ಪೂರ್ವಭಾಗವು ಅದರ ಹಿಂಬದಿಗೆ 'ಆ್ಯಪ್ಸ್' ಎಂಬ ಗಜ ಪೃಷ್ಠಾಕಾರ ಭಾಗವು ಇರುತ್ತದೆ. ಇವನ್ನೆಲ್ಲಾ ಒಳಗೊಂಡ ಚರ್ಚಿನ ತಳವಿನ್ಯಾಸ ಕ್ರೈಸ್ತ ಶಿಲುಬೆಯಾಕಾರದಲ್ಲಿರುತ್ತದೆ. ಇದಕ್ಕೆ ಕ್ರೈಸ್ತ ಧರ್ಮದಲ್ಲಿ ಸಾಂಕೇತಿಕ ಮಹತ್ವವಿದೆ, ಅಲ್ಲದೆ ವಾಸ್ತುತಂತ್ರದ ದೃಷ್ಟಿಯಿಂದಲೂ ಇದು ಮೌಲಿಕವಾಗಿದೆ.

ಪೋರ್ಚ್‌ಗೀಸ್ ಶೈಲಿಯ ಕೆಲವು ಚರ್ಚ್‌ಗಳಲ್ಲಿ ಒಳವೇದಿಕೆ ಅಲಂಕೃತವಾಗಿರುತ್ತದೆ. ಅನೇಕ ಚರ್ಚ್‌ಗಳು ಹೊರನೋಟಕ್ಕೆ ಸರಳವಾಗಿದ್ದರೂ ಒಳ ಅಲಂಕರಣೆಗಳು ದಂಗುಬಡಿಸುವಂತಿವೆ. ಉದಾಹರಣೆ ಶಿಲ್ಪಚಿತ್ರ ಮುಂತಾದವು ಅಮೋಘವಾಗಿರುತ್ತವೆ. ಮಂಗಳೂರಿನ ಸೈಂಟ್ ಅಲೋಶಿಯಸ್ ಕಾಲೇಜಿನ 'ಚ್ಯಾಪಲ್' ಇದಕ್ಕೊಂದು ಉತ್ತಮ ಉದಾಹರಣೆ.

ಐರೋಪ್ಯ ಶೈಲಿಯ ಚರ್ಚು ಹೊರನೋಟಕ್ಕೆ ಎತ್ತರ ನಿಲುವಿನ ಸುಂದರ ಕಟ್ಟಡ. ಪ್ರವೇಶದ್ವಾರದ ಮೇಲುಗಡೆ ಆಚೀಚೆ ಎತ್ತರವಾದ ಗಾಥಿಕ್ ಶೈಲಿಯ ಮೊನಚು ಶಿಖರಗಳಿರುತ್ತವೆ. ಮೈಸೂರಿನ ಸೆಂಟ್ ಜೋಸೆಫ್ ಕೆತೆಡ್ರಲ್ ಇದಕ್ಕೊಂದು ಸ್ವಾರಸ್ಯಕರವಾದ ಉದಾಹರಣೆ. ಶಿಖರಗಳಿಗೆ ಸೇರಿದಂತೆ ಎಲೆ ಮೊನಚು ಕಮಾನುಗಳನ್ನೇ ದುಂಡು ಕಮಾನುಗಳನ್ನೋ ಸ್ವಾರಸ್ಯವಾಗಿ ಹೊಂದಿಸಿರುವುದುಂಟು. ಇದರಿಂದ ಕಟ್ಟಡಕ್ಕೆ ವಿಶೇಷ ಉಪಯುಕ್ತತೆ, ದಾರ್ಢ್ಯ ಹಾಗೂ ಲಲಿತಕಲೆ ಎದ್ದು ಕಾಣುತ್ತವೆ. ಒಳಾಂಗಣದಲ್ಲಿ ಸಾಕಷ್ಟು ಗಾಳಿ, ಬೆಳಕು ಇರುವಂತೆ ಯೋಜಿಸಲಾಗಿರುತ್ತದೆ.

೧೫೬೮ರಲ್ಲಿ ಬೋಳರಾದ ರೋಸರಿ ಚರ್ಚು ನಿರ್ಮಾಣವಾಯಿತು. ೧೫೭೦ರಲ್ಲಿ ಜೆಸುಯಿಟ್ ರೋಸರಿ ಚರ್ಚ್ ನಿರ್ಮಿಸಿದರು. ೧೬೦೬ರಲ್ಲಿ ಬೆಳಗಾವಿ ಬಳಿ ಖಾನಾಪುರದಲ್ಲಿ, ೧೭೦೯ರಲ್ಲಿ ಕಾರವಾರದ ಬಳಿ ಸಂಕೇರಿಯಲ್ಲಿ ಕ್ರೈಸ್ತಧರ್ಮ ಪ್ರಚಾರಕ ಸಂಸ್ಥೆಗಳು ತಲೆ ಎತ್ತಿದ್ದವು. ೧೭೮೫ರ ಹೊತ್ತಿಗೆ ಉತ್ತರ ಕನ್ನಡ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಿಗೆ ಸುಮಾರು ೨೭ ಕ್ರೈಸ್ತ ದೇಗುಲಗಳಿದ್ದವೆಂದು ಹೇಳಲಾಗುತ್ತದೆ. ಬಳ್ಳಾರಿಯ ಕೆಳಕೋಟೆ ಪ್ರದೇಶಗಳಲ್ಲಿ ೧೮೧೧ರಲ್ಲಿ ಟ್ರಿನಿಟಿ ನಿರ್ಮಾಣವಾಯಿತು. ಪೋರ್ಚ್‌ಗೀಸ್ ಪಾರ್ದಿಟರ್ನರ್, ೧೮೫೦ರಲ್ಲಿ ಬೆಂಗಳೂರು ಕೋಟೆಯಲ್ಲಿ ಸೈಂಟ್ ಫ್ರಾನ್ಸಿಸ್ ಜೇವಿಯರ್ ಕೆಥೆಡ್ರಲ್ ಕಟ್ಟಿಸಿದನೆಂದು ಹೇಳಲಾಗಿದೆ.

ತರಗುಪೇಟೆಯ ಸೈಂಟ್ ಜೋಸೆಫ್ ಚರ್ಚು ವಿಶಾಲವಾಗಿದೆ. ಇದರ ಶಿಲುಬೆಯಾಕಾರದ ತಳವಿನ್ಯಾಸ ಗಾಥಿಕ್ ಶೈಲಿಯ ಶಿಖರ ಮನೋಹರವಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಬಲ್ಮಠದಲ್ಲಿ ೧೮೬೨ರಲ್ಲಿ ಚರ್ಚನ್ನು ಕಟ್ಟಲಾಗಿದ್ದು, ಇದು ಸ್ವಿಡ್ಜರ್‌ಲ್ಯಾಂಡ್ ಬಾಸೆಲ್ ಹೌಸಿನ ಮಾದರಿಯಲ್ಲಿದೆ. ಇದಕ್ಕೆ ೭ ವರ್ಷ ಹಿಂದೆ ೧೮೫೫ರಲ್ಲಿ ಕೆ. ಜೋಸೆಫ್ ವಿಲ್ ಕಟ್ಟಿದನೆಂದು ಹೇಳಲಾದ ಮಂಗಳೂರಿನ ಆಲೋಶಿಯಸ್ ಚ್ಯಾಪಲ್ ಅಮೋಘವಾಗಿದೆ. ಇದು ರೋಮಿನ ಸೈಂಟ್ ಫೀಲಿಸ್‌ನೇರಿ ಚರ್ಚ್‌ನ ಮಾದರಿಯಲ್ಲಿದೆ. ಇದರ ಒಳಗಡೆ ವರ್ಣಚಿತ್ರಗಳಿವೆ.[೬೦]

ಕರ್ನಾಟಕದ ಹಲವಾರು ಕಡೆಗಳಲ್ಲಿ ಚರ್ಚ್‌ಗಳ ನಿರ್ಮಾಣವನ್ನು ಕಾಣಬಹುದು. ಆದರೆ ಇದರ ಬಗ್ಗೆ ಗ್ಯಾಸೆಟಿಯರ್‌ನಲ್ಲಿ ಹೆಚ್ಚಿನ ಮಾಹಿತಿ ಲಭ್ಯವಿಲ್ಲ. ಮುಖ್ಯವಾಗಿ ಮೈಸೂರಿನಲ್ಲಿರುವ ಸೇಂಟ್‌ಮೇರಿ ಚರ್ಚನ್ನು 'Christ church' ಎಂದೇ ಕರೆಯುತ್ತಾರೆ. ಇದನ್ನು ೧೮೫೩ರಲ್ಲಿ ನಿರ್ಮಿಸಲಾಯಿತು.[೭೧] ಅಲ್ಲದೆ, ಬೆಳಗಾಮ್‌ನ ಕಂಟೋನ್ಮೆಂಟ್‌ನಲ್ಲಿ ಸೇಂಟ್ ಮೇರಿ ಚರ್ಚ್ ನಿರ್ಮಿಸಲಾಗಿತ್ತು. ಇದು ಸುಂದರವಾದದ್ದು ಹಾಗೂ ಇದು ಲೋರ್ಬರ್ಡ್ ಗಾಥಿಕ್ ಶೈಲಿಯಲ್ಲಿದೆ. ಅಲ್ಲದೆ ಇಲ್ಲಿಯೇ ಸೇಂಟ್‌ಮೇರಿ ಚಾಪೆಲ್ಲನ್ನು ೧೮೭೩ರಲ್ಲಿ ಸ್ಥಾಪಿಸಲಾಯಿತು.[೭೨] ದಕ್ಷಿಣ ಕನ್ನಡದಲ್ಲಿ ಹಲವಾರು ಚರ್ಚುಗಳು ಸ್ಥಾಪನೆಗಳಾಗಿವೆ.[೭೩] ಕರ್ನಾಟಕದ ಗ್ರಾಮಾಂತರ ಪ್ರದೇಶಗಳಲ್ಲಿಯೂ ಕ್ರೈಸ್ತ ಚರ್ಚುಗಳು ನಿರ್ಮಿಸಲ್ಪಟ್ಟವು. ಇವುಗಳಲ್ಲಿ ಶುದ್ಧ ರೂಪವಾಗಲಿ, ವೈಭವವಾಗಲಿ ಕಂಡುಬರುವುದಿಲ್ಲ. ಅವು ಸರಳವಾದ ಪ್ರಾದೇಶಿಕ ಶೈಲಿಯ ಕಟ್ಟಡಗಳಾಗಿವೆ.[೭೪] ಆಂಗ್ಲರು ಬಳಕೆಗೆ ತಂದ ವಾಸ್ತುಶೈಲಿಯ ಕಟ್ಟಡಗಳನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ಸೈನಿಕರ ಕಟ್ಟಡಗಳು, ಆಡಳಿತ ಕಟ್ಟಡಗಳು, ಛತ್ರಗಳು ಹಾಗೂ ಪ್ರವಾಸಿ ಬಂಗಲೆಗಳು.

**ಸೈನಿಕ ಕಟ್ಟಡಗಳು**

ಬ್ರಿಟಿಷ್ ಕಾಲದ ಕರ್ನಾಟಕದ ಐರೋಪ್ಯ ಶೈಲಿಯ ಕೋಟೆಕೊತ್ತಲುಗಳು ಹಾಗೂ ಅರಮನೆಗಳು ಹೇಳಿಕೊಳ್ಳುವಷ್ಟಿಲ್ಲ. ಆದರೆ ಕಲೆಕ್ಟರ್ ಕಾಲದಲ್ಲಿ ನಿರ್ಮಿಸಿದ ಸೈನಿಕ ಗೃಹಗಳು ಅಪಾರ ಮೆಚ್ಚುಗೆ ಪಡೆದಿವೆ. ಇವರು ಅರಮನೆ ಕಟ್ಟಿಸದಿದ್ದರೂ ಅದಕ್ಕೆ ಸಮನಾದ ತಮ್ಮ ಶೈಲಿಯ ಕಟ್ಟಡಗಳನ್ನು ನಿರ್ಮಿಸಿರುವುದುಂಟು. ಇವು ಇಂದು ಸುಸ್ಥಿತಿಯಲ್ಲಿದ್ದು ಆಡಳಿತ, ಶಿಕ್ಷಣ ಇತರ ಸಾರ್ವಜನಿಕ ಕೆಲಸಗಳಿಗೆ ಬಳಕೆಯಾಗುತ್ತಿವೆ.

ಈ ಕಟ್ಟಡಗಳಿಗೆ ಉತ್ತಮ ಉದಾಹರಣೆ ಬೆಂಗಳೂರು ರೈಲ್ವೆ ನಿಲ್ದಾಣದ ಬಳಿಯಿರುವ ಐರೋಪ್ಯ ಶೈಲಿಯ ಅರಮನೆ. ಹಾಗೂ ಬಳ್ಳಾರಿಯಲ್ಲಿ ಸೈನಿಕ ನೆಲೆಬೀಡಿನ ಐರೋಪ್ಯಶೈಲಿಯ ವಾಸ್ತುಶಿಲ್ಪ ಕಲೆ, ಸೈನಿಕ ಬ್ಯಾರಕ್ಸ್, ಕ್ಲಬ್, ಪೆವಿಲಿಯನ್ಸ್ ಸೈನಿಕರ ವಸತಿ ಗೃಹಗಳು ಕಂಡುಬಂದಿವೆ. ದಂಡು ಪ್ರದೇಶಗಳಲ್ಲಿ ಸಾಮಾನ್ಯವಾಗಿ ಅದರಲ್ಲಿ ಅಲ್ಲೀಪುರ ಜೈಲು(ಈಗಿನ ವಿಮ್ಸ್ ವೈದ್ಯಕೀಯ ಕಾಲೇಜು) ಸೈನಿಕರ ವಸತಿ ಗೃಹಗಳು ಎಲ್ಲಾ ಸೌಕರ್ಯಗಳನ್ನು ಪಡೆದುಕೊಂಡಿದ್ದವು. ಅಲ್ಲಿ ಫಿರಂಗಿಗಳು, ಬಂದೂಕು, ಶಿರಸ್ತ್ರಾಣಗಳು, ಕ್ಷಾತ್ರಾವಾಸ್ತು ಶೈಲಿಯ ವಿಶಿಷ್ಟತೆ ಕಂಡುಬರುತ್ತವೆ.[೭೫]

ಮೈಸೂರು ಅರಮನೆಯ ಬಳಿಯಿರುವ 'ಗನ್‌ಹೌಸ್' ಐರೋಪ್ಯ ಶೈಲಿಯ ಸುಂದರವಾದ ಇನ್ನೊಂದು ಸೈನಿಕರ ಕಟ್ಟಡ. ಅರಮನೆಯ ಸುತ್ತಲಿರುವ ಕಣಶಿಲೆಯ ಕೋಟೆ ಮತ್ತು ಅದರ ತುದಿಭಾಗದ ವಿನ್ಯಾಸ ವಿದೇಶಿ ಶೈಲಿಯಲ್ಲಿವೆ. ಬ್ರಿಟಿಷ್ ಸೈನಿಕರ ನೆಲೆಬೀಡುಗಳಲ್ಲಿ ಐರೋಪ್ಯಶೈಲಿಯ ವಾಸ್ತುಶಿಲ್ಪ, ಕಲೆ, ಸೈನಿಕರ ಬ್ಯಾರಕ್ಸ್, ಕ್ಲಬ್, ಪೆವಿಲಿಯನ್, ಸೈನಿಕರ ವಸತಿ ಗೃಹಗಳಲ್ಲಿ ಪಡಿಮೂಡಿದೆ.

ಬೆಂಗಳೂರು, ಬಳ್ಳಾರಿ, ಬೆಳಗಾಂ ಎಂಬ ಕಂಟೋನ್ಮೆಂಟ್‌ಗಳು ದಂಡು ಪ್ರದೇಶಗಳಾಗಿದ್ದವು. ದಂಡು ಪ್ರದೇಶವೆಂದರೆ ನಗರದಿಂದ ದೂರವಿರುವ ಬ್ರಿಟಿಷ್ ಪ್ರದೇಶ. ಇವು ವಿಶಾಲವಾಗಿದ್ದವು. ಬೆಳಗಾಂ ದಂಡು

ಪ್ರದೇಶ ೬೦೦ ವಿಸ್ತೀರ್ಣ ಹೊಂದಿತ್ತು. ಇದರಲ್ಲೇ ಆಟದ ಮೈದಾನ, ರಸ್ತೆ, ಅಂಗಡಿಗಳು, ಕ್ಲಬ್, ಕ್ಯಾಂಟೀನ್, ಲೈಬ್ರರಿ, ಕಾಫಿಶಾಪ್. ೬೨ ಅಧಿಕಾರಿಗಳ ಮನೆಗಳು, ೪೦ ಪರ್ಶಿಯನ್ ಬಂಗಲೆಗಳಿದ್ದರೆ ಸ್ಥಳೀಯ ಮನೆಗಳು ೧೦೩೨ ಇದ್ದವು. ಇಲ್ಲಿ ಬಜಾರ್ ಇತ್ತು. ಸೈನಿಕರ ಮನೆಗಳು, ಸೈನಿಕರ ಉದ್ಯಾನವನ ಇತ್ಯಾದಿಗಳೆಲ್ಲವನ್ನು ಒಳಗೊಂಡಿರುತ್ತಿದ್ದವು.[೭೬] ಹೀಗೆ ಸಕಲ ಸೌಕರ್ಯವನ್ನು ನಿರ್ಮಿಸಿಕೊಂಡಿದ್ದರು. ಶ್ರೀರಂಗಪಟ್ಟಣದ ದರಿಯಾ ದೌಲತ್ ಭಿತ್ತಿಚಿತ್ರಗಳಲ್ಲಿ ಐರೋಪ್ಯಶೈಲಿಯ ಕ್ಷೇತ್ರವಾಸ್ತುಶಿಲ್ಪ ಹಾಗೂ ಸೈನಿಕ ಜೀವನ ಸ್ವಾರಸ್ಯವಾಗಿ ಚಿತ್ರಿತವಾಗಿವೆ. ಅವರ ಕಾಲದ ಫಿರಂಗಿಗಳು ಬಂದೂಕು, ಶಿರಸ್ತ್ರಾಣಗಳು, ಕ್ಷಾತ್ರಾವಾಸ್ತು ಶೈಲಿಯ ಹಿನ್ನೆಲೆಯಲ್ಲಿ ವೈಶಿಷ್ಟ್ಯಪೂರ್ಣವಾಗಿ ಕಾಣುತ್ತದೆ.[೭೭]

## ಛತ್ರಗಳು ಅಥವಾ ಪ್ರವಾಸಿ ಮಂದಿರಗಳು

ಬ್ರಿಟಿಷರು ತಮ್ಮ ಆಳ್ವಿಕೆಯಲ್ಲಿ ರಾಜ್ಯದಾದ್ಯಂತ ತಮಗೆ ಮತ್ತು ತಮ್ಮ ದೇಶದ ಪ್ರವಾಸಿಗರಿಗೆ ಸರ್ಕಾರಿ ಬಂಗಲೆಗಳನ್ನು ಶೀಘ್ರವಾಗಿ ನಿರ್ಮಿಸಿಕೊಂಡರು. ಯುರೋಪಿನ ಮಾದರಿಗಳನ್ನು ಅನುಸರಿಸಿ ಸ್ಥಳೀಯ ಕಚ್ಚಾ ವಸ್ತುಗಳನ್ನು ಬಳಸಿ, ಆಧುನಿಕ ಶೈಲಿಗೆ ತಕ್ಕಂತೆ ಕಟ್ಟಡಗಳನ್ನು ಕಟ್ಟಿಸಿದ್ದರು. ಇವುಗಳನ್ನು ರಾಜ್ಯದಾದ್ಯಂತ ವ್ಯಾಪಕವಾಗಿ ನಿರ್ಮಿಸಿದ್ದು ಕಂಡುಬರುತ್ತದೆ. ಇವು ಕೆಲವೊಮ್ಮೆ ಖಾಸಗಿ ವ್ಯಕ್ತಿಗಳಿಂದ ಹಾಗೂ ಬ್ರಿಟಿಷ್ ಅಧಿಕಾರಿಗಳಿಂದ ನಿರ್ಮಾಣಗೊಂಡಿರುವುದು ಹೆಚ್ಚು. ಇವು ಅವರ ವೈಭವದ ಮತ್ತು ದರ್ಪಿಷ್ಟತೆಗೆ ಪ್ರತೀಕವೆನ್ನಬಹುದು.[೭೮]

ವಸಾಹತು ಕಾಲದಲ್ಲಿ ಕೆನರಾದಲ್ಲಿಯೇ ೪೮ ಗೆಸ್ಟ್‌ಹೌಸ್ ಅಥವಾ ಧರ್ಮಶಾಲೆಗಳು, ೨೪ ಪ್ರವಾಸಿಗರ ಬಂಗಲೆಗಳಿದ್ದವು. ಮುಖ್ಯವಾಗಿ ಕಾರವಾರದಲ್ಲಿ ಆರು, ಅಂಕೋಲದಲ್ಲಿ ಆರು, ಕುಮುಟಾದಲ್ಲಿ ಆರು, ಹೊನ್ನಾವರದಲ್ಲಿ ಆರು, ಸುಪಾದಲ್ಲಿ ಒಂಬತ್ತು, ಯಲ್ಲಾಪುರದಲ್ಲಿ ನಾಲ್ಕು, ಶಿರಸಿಯಲ್ಲಿ ಏಳು, ಸಿದ್ದಾಪುರದಲ್ಲಿ ನಾಲ್ಕು ಇದ್ದವು. ಇವುಗಳನ್ನು ಇಟ್ಟಿಗೆಯಿಂದ ಕಟ್ಟಿದ್ದಾರೆ. ಮಧ್ಯಭಾಗದಲ್ಲಿ ತೆರೆದ ಅಂಗಳವಿದೆ. ಇವುಗಳಲ್ಲಿ ಸಾಮಾನ್ಯವಾಗಿ ೬ರಿಂದ ೧೦ ಕೊಠಡಿಗಳಿವೆ. ಸಾಮಾನ್ಯವಾಗಿ ಈ ಕಟ್ಟಡಗಳು ಸಾಮಾನ್ಯವಾಗಿ ಎತ್ತರದ ಗೋಡೆಗಳನ್ನು ಹೊಂದಿರುತ್ತವೆ. ಹುಲ್ಲಿನ ಅಥವಾ ಹೆಂಚಿನ ಮೇಲ್ಛಾವಣಿ ಹೊಂದಿರುತ್ತವೆ. ಇದನ್ನು ಸ್ಥಳೀಯ ಮುನಿಸಿಪಾಲಿಟಿ ಅಥವಾ ವಸಾಹತು ಹಣದಿಂದ ನಿರ್ಮಿಸಿರುತ್ತಾರೆ. ಸಾಮಾನ್ಯವಾಗಿ ಇವುಗಳ ಖರ್ಚು ೧೦೦೦ ಆಗಿರುತ್ತದೆ. ಉತ್ತಮ ದರ್ಜೆಯ ಬಂಗಲೆಗೆ ಪ್ರತಿದಿನದ ಬಾಡಿಗೆ ೨ ರೂಪಾಯಿ ಆಗುತ್ತಿತ್ತು. ಇವು ಟೇಬಲ್, ಚೇರ್, ಮಂಚ ಇತರೇ ಎಲ್ಲಾ ಸೌಲಭ್ಯಗಳನ್ನು ಒಳಗೊಂಡಿರುತ್ತಿದ್ದವು. ಕಾರವಾರದಲ್ಲಿರುವ ಧಾರವಾಡ ರಸ್ತೆಯಲ್ಲಿರುವ ಇಂಥ ಬಂಗಲೆಯನ್ನು ೧೮೬೮ರಲ್ಲಿ ನಿರ್ಮಿಸಲಾಯಿತೆಂದು ತಿಳಿದುಬರುತ್ತದೆ.[೭೯] ಧಾರವಾಡದಲ್ಲಿಯೂ ಸಹ ಒಂದು ಪ್ರವಾಸಿಗರ ಬಂಗಲೆ ಇತ್ತು. ನಾಲ್ಕು ಗೆಸ್ಟ್‌ಹೌಸ್ ಇದ್ದವು. ಇದರಲ್ಲಿ ಒಂದು ಮುನಿಸಿಪಾಲಿಟಿ ಆಡಳಿತಕ್ಕೆ ಒಳಪಟ್ಟಿತ್ತು. ಉಳಿದ ಮೂರು ಖಾಸಗಿ ವ್ಯಕ್ತಿಯಿಂದ ಸ್ಥಾಪನೆಗೊಂಡಿತ್ತು. ಅದು ರಾವ್‌ಬಹದ್ದೂರ್ ತಿರುಮಲರಾವ್ ವೆಂಕಟೇಶ ಎಂಬುವರ ತಂದೆಯು ಇದಕ್ಕೆ ೫೦೦೦ ಹಣ ಸಹಾಯ ನೀಡಿದ್ದರು.[೮೦] ಬಳ್ಳಾರಿ ಜಿಲ್ಲೆಯಲ್ಲಿಯೂ ಅನೇಕ ಪ್ರವಾಸಿಗರ ಕಟ್ಟಡಗಳಿದ್ದವು.[೮೧]

### ಸಾರ್ವಜನಿಕ ಕಛೇರಿ ಕಟ್ಟಡಗಳು

ಐರೋಪ್ಯ ವಾಸ್ತುಶೈಲಿಯ ಸ್ವಾರಸ್ಯವನ್ನು ತಿಳಿಯುವಲ್ಲಿ ಆ ಕಾಲದ ಸಾರ್ವಜನಿಕ ಕಛೇರಿ ಕಟ್ಟಡಗಳತ್ತ ನಮ್ಮ ಕಣ್ಣು ಹಾಯಿಸಬೇಕು. ೧೯ನೆಯ ಶತಮಾನದಲ್ಲಿ ಮರಾಮತ್ ಇಲಾಖೆಯನ್ನು ಆರಂಭಿಸಿದ ಮೇಲೆ ನಾಡಿನ ಹಲವೆಡೆ ಅದರಲ್ಲೂ ಮುಖ್ಯವಾಗಿ ಹಳೆಯ ಮೈಸೂರು ಸಂಸ್ಥಾನದಲ್ಲಿ ಐರೋಪ್ಯಶೈಲಿ ಜನಪ್ರಿಯವಾಯಿತು. ಇದರಿಂದ ನಾಡಿನ ವಾಸ್ತುಶಿಲ್ಪಕ್ಕೆ ಹೊಸ ಆಯಾಮ ಸೇರಿಕೊಂಡಿತೆಂದರೂ ತಪ್ಪಿಲ್ಲ. ಐರೋಪ್ಯ ಇಂಜಿನಿಯರುಗಳು ತಮಗೆ ಪರಿಚಿತವಾದ ಅಯೋನಿಕ್, ಡೋರಿಕ್, ಕೊಲೀತಿಯನ್, ಗಾಥಿಕ್, ರಿನೇಸಾನ್ಸ್, ಅಮೆರಿಕನ್ ಮುಂತಾದ ವಿವಿಧ ವಿದೇಶಿ ಶೈಲಿಗಳನ್ನು ಈ ನಾಡಿಗೆ ಎರವಲು ತಂದರು. ಐರೋಪ್ಯ ವಾಸ್ತುಶೈಲಿಯಲ್ಲೇ 'ಗಂಡುಶೈಲಿ' ಎಂದು ಹೆಸರಾದ(ಡೋರಿಕ್) ಮಾದರಿಯ ಕಂಬ ಸಾಲುಗಳನ್ನು ಸೊಗಸಾಗಿ ಅಳವಡಿಸಲಾಯಿತು. ಇದರಲ್ಲಿ ವಾಸ್ತವವಾಗಿ ಅಲಂಕರಣ ಪ್ರಮಾಣ ಕಡಿಮೆಯಾದರೂ ನೋಡಲು ಸೊಗಸಾಗಿರುತ್ತವೆ. ಒಂದೇ ಕಲ್ಲಿನಲ್ಲಿ ಕೆತ್ತಿದಂತೆ ಕಾಣುವ ಇಟ್ಟಿಗೆ ಗಾರೆಕಂಬಗಳು ಬುಡದಲ್ಲಿ ದಪ್ಪವಾಗಿದ್ದು, ಮೇಲೆ ಹೋದಂತೆ ತೆಳುವಾಗಿರುತ್ತದೆ. ದೂರದ ನೋಟಕ್ಕೆ ಈ ಸ್ತಂಭ ಮಾದರಿ ಅದ್ಭುತವಾಗಿರುತ್ತದೆ.[೮೨]

ನಮ್ಮ ನಾಡಿನ ಐರೋಪ್ಯ ಶೈಲಿಯ ಕಟ್ಟಡಗಳಲ್ಲಿ ರೋಮನ್ ಕಮಾನುಗಳು, ಕಮಾನು ಸರಣಿಗಳು ಗುಮ್ಮಟ ಮಾದರಿಗಳು ಪದೇ ಪದೇ ಕಂಡುಬರುತ್ತವೆ. ಇವುಗಳಲ್ಲಿ ಇಟ್ಟಿಗೆ, ಜಲ್ಲಿಕಲ್ಲಿನ ಗಾರೆ ಇವುಗಳ ಬಳಕೆ ಗಣನೀಯ. ಕಾಲಕ್ರಮದಲ್ಲಿ ಸಿಮೆಂಟ್, ಕಾಂಕ್ರೀಟು, ಕಬ್ಬಿಣ ಸರಳುಗಳನ್ನು ಬಳಸಿದ್ದು ಕಂಡುಬರುತ್ತದೆ. ಕಟ್ಟಡಗಳ ಹೊರಮೈ ನಾಜೂಕಾಗತೊಡಗಿದೆ. ಕಟ್ಟಡದ ಮುಂಭಾಗಗಳಲ್ಲಿ ಎಲೆ ಮೊನಚಿನಾಕಾರದ ಮತ್ತು ದುಂಡನೆಯ ಕಮಾನುಗಳನ್ನು ಧಾರಾಳವಾಗಿ ಬಳಸಿದ್ದಾರೆ.[೮೩]

ಸಾರ್ವಜನಿಕ ಕಟ್ಟಡಗಳಲ್ಲಿ ಕಂಬಗಳ ಮೇಲೆ ಕಿಟಕಿ, ಬಾಗಿಲು ಮಾವಾಗಳ ಮೇಲೆ ದಾರಾ ದುಂಡು, ಕಮಾನುಗಳಿಂದ ಕೂಡಿದ ರೋಮನಸ್ಕ ಶೈಲಿ ಸಾಮಾನ್ಯವಾಗಿ ತಿಳಿದುಬಂದಿವೆ. ಆಂಗ್ಲಶೈಲಿಯಲ್ಲಿಯೇ ಪ್ರಮುಖವಾದ ಗಾಥಿಕ್ ಶೈಲಿಯ ಅನುಕರಣೆ ಈ ಜಿಲ್ಲೆಯ ಕೋರ್ಟು, ಕಚೇರಿಗಳಿಂದ ಸಾರ್ವಜನಿಕ ಕಟ್ಟಡಗಳಲ್ಲಿ ಕಾಣಬಹುದು. ಇದೇ ಶೈಲಿಯಲ್ಲಿ ಎತ್ತರವಾಗಿ ಬೆಳೆದು ನಿಂತ ಉಪ್ಪರಿಗೆ ಕಟ್ಟಡಗಳನ್ನು ದೊಡ್ಡ ದೊಡ್ಡ ಮಹಲುಗಳನ್ನು ಈಗಿನ ಸರ್ಕಾರಿ ಕಚೇರಿಗಳು, ಗ್ರಂಥಾಲಯ, ಬೆಂಗಳೂರಿನ ಹಳೇ ಸೆಂಟ್ರಲ್ ಕಾಲೇಜುಗಳನ್ನು ಉದಾಹರಿಸಬಹುದು.

ಪುನರುಜ್ಜೀವನ ಶೈಲಿ ಕಟ್ಟಡಗಳ ಮುಖಭಾಗ, ಒಳಾಂಗಣದಲ್ಲಿ ಹೆಚ್ಚಿನ ಪ್ರಭಾವವಿದ್ದು, ಕುಸುರಿ ಕೆಲಸವಿರುತ್ತದೆ. ಅತಿ ಅಲಂಕಾರ ಬಾರೋಕ್ ಹಾಗೂ ನವಿರುಶೈಲಿಯ 'ರೊಕೊಕೊ' ಪ್ರಧಾನ ಪಾತ್ರ ವಹಿಸಿದೆ. ಇಲ್ಲಿ ಕಟ್ಟಡಗಳ ಹೊರಗಿನ ಅಲಂಕಾರ ಕಿಟಕಿ, ಬಾಗಿಲುಗಳು, ಗ್ರೀಕ್, ರೋಮನ್ ಶೈಲಿಯಲ್ಲುಂಟು. ಈ ಕಟ್ಟಡಗಳು ಕಲೆಕ್ಟರ್ ಬಂಗಲೆ, ನ್ಯಾಯಾಧೀಶರ ಬಂಗಲೆಗಳೇ ಹೆಚ್ಚಾಗಿದ್ದು, ಬಹುಮಹಡಿ ಕಟ್ಟಡಗಳನ್ನು, ಉದ್ಯಾನವನ, ಮೈದಾನ ಹೊಂದಿದೆ. ಸಮತಲ, ಲಂಬ, ವಕ್ರ, ರೇಖೆಗಳ ಬಗೆಗಿನ ಲಯ, ರೇಖಾಲಾಲಿತ್ಯ, ಸ್ತಂಭ, ಭಿತ್ತಿಗಳ ಅಲಂಕರಣೆ ಕಿಟಕಿ, ಬಾಗಿಲು ಸ್ತಂಭಗಳ ನಡುವಿನ ಹಿತಮಿತವಾದ ಕೌಶಲ್ಯ ಕಂಡುಬಂದಿದೆ.

ಆಂಗ್ಲರ ಆಡಳಿತದಲ್ಲಿ ಕರ್ನಾಟಕದ ಕಡೆಗಳಲ್ಲಿ ಕಟ್ಟಿದಂತಹ ಆಂಗ್ಲರ ಕಟ್ಟಡಗಳು, ಆಡಳಿತ ಕಟ್ಟಡಗಳು, ನ್ಯಾಯಾಲಯ, ವಾಚನಾಲಯ, ಶಾಲಾ-ಕಾಲೇಜು, ಪ್ರವಾಸಿ ಮಂದಿರಗಳು, ಹೆದ್ದಾರಿ ಬಂಗಲೆಗಳು, ಆಂಗ್ಲಶೈಲಿಯನ್ನು ಅನುಸರಿಸಿವೆ. ರಿಚರ್ಡ್ ಕರ್ನಲ್, ಸಾಂಕಿಯಪ್, ಐರೋಪ್ಯ ಇಂಜಿನಿಯರುಗಳು ತಮ್ಮ ಕಛೇರಿಗಳಲ್ಲಿ ಕುಳಿತು ಆಂಗ್ಲಶೈಲಿಯ ವಿನ್ಯಾಸಗಳನ್ನು ಸ್ಥಪತಿಗಳಿಗೆ(ಸ್ಥಳೀಯ) ತೋರಿಸಿಕೊಟ್ಟರು. ಈ ಶೈಲಿ ಈ ಭಾಗದ ನೆಲಗುಣ, ಹವಾಗುಣ ಪರಿಸರಕ್ಕೆ ಸರಿಯಾಗಿ ಹೊಂದಿಕೊಂಡಿತ್ತು. ಆಂಗ್ಲ ವಾಸ್ತುಕಲೆಯಲ್ಲಿ, ಶಿಲ್ಪಕಲೆ ಅಷ್ಟೊಂದು ಕಂಡುಬಂದಿಲ್ಲ.[೮೪]

ಇಡೀ ಕರ್ನಾಟಕದಲ್ಲಿ ಆಂಗ್ಲರು ನಿರ್ಮಿಸಿದ ಅನೇಕ ಕಟ್ಟಡಗಳನ್ನು ನೋಡುವುದಾದರೆ ಧಾರವಾಡ ಜಿಲ್ಲೆಯಲ್ಲಿಯೇ ಮೂರು ಲೈಬ್ರರಿಗಳಿದ್ದವು. ಮುಖ್ಯವಾಗಿ ಧಾರವಾಡ, ಹುಬ್ಬಳ್ಳಿ, ರಾಣೆಬೆನ್ನೂರಿನಲ್ಲಿದ್ದವು. ಧಾರವಾಡ ಲೈಬ್ರರಿ ೧೮೫೪ರಲ್ಲಿ ಸ್ಥಾಪನೆಯಾಗಿರುತ್ತದೆ. ಇದೊಂದು ದೊಡ್ಡದಾದ ಹಾಗೂ ಹಳೆಯದಾದ ಲೈಬ್ರರಿ. ಹುಬ್ಬಳ್ಳಿಯಲ್ಲಿ ೧೮೬೫ರಲ್ಲಿ ಸ್ಥಾಪನೆಯಾದರೆ, ರಾಣೆಬೆನ್ನೂರಿನಲ್ಲಿ ೧೮೭೩ರಲ್ಲಿ ಸ್ಥಾಪನೆಯಾಗಿರುತ್ತದೆ. ಅಲ್ಲದೆ ರೀಡಿಂಗ್ ರೂಮ್‌ಗಳು ಸಹ ಸ್ಥಾಪನೆಗೊಂಡಿರುತ್ತವೆ. ಮುಖ್ಯವಾಗಿ ಗದಗ್‌ನಲ್ಲಿ ೧೮೭೬ರಲ್ಲಿ, ಹಾವೇರಿ ೧೮೮೦ರಲ್ಲಿ, ನರಗುಂದ ೧೮೭೩ರಲ್ಲಿ, ನವಲಗುಂದ ೧೮೮೦ರಲ್ಲಿ ಸ್ಥಾಪಿಸಲ್ಪಟ್ಟಿತು.[೮೫]

ಕೆನರಾ ಜಿಲ್ಲೆಯಲ್ಲಿಯೇ ನಾಲ್ಕು ಲೈಬ್ರರಿಗಳಿದ್ದವು. ಮುಖ್ಯವಾಗಿ ಕಾರವಾರದಲ್ಲಿಯೇ ಲೈಬ್ರರಿ ಹಾಗೂ ಮ್ಯೂಜಿಯಮ್ಮನ್ನು ೧೮೬೪ರಲ್ಲಿ ಸ್ಥಾಪಿಸಿದರೆ, ಶಿರಸಿಯಲ್ಲಿ ೧೮೭೦ರಲ್ಲಿ, ಕುಮುಟಾದಲ್ಲಿ ೧೮೭೫ರಲ್ಲಿ, ಹಳಿಯಾಳದಲ್ಲಿ ೧೮೭೬ರಲ್ಲಿ ಸ್ಥಾಪಿಸಲ್ಪಟ್ಟಿತು.[೮೬]

ಕೆನರಾದಲ್ಲಿ ಮೂರು 'ಲೈಟ್‌ಹೌಸ್' ಇದ್ದವು. ಎರಡು ಕಾರವಾರದಲ್ಲಿ, ಒಂದು ಕುಮುಟಾದಲ್ಲಿ ಇದ್ದಿತು. ೧೮೬೪ರಲ್ಲಿ ಕಾರವಾರದಲ್ಲಿ ಲೈಟ್‌ಹೌಸ್‌ಗಳನ್ನು ಸ್ಥಾಪಿಸಲಾಯಿತು. ಇದು ೨೧೦ ಅಡಿ ಎತ್ತರದಲ್ಲಿದೆ. ಇದೇ ಅತಿ ಎತ್ತರವಾದದ್ದು. ಉಳಿದವು ೭೨ ಅಡಿ ಇತ್ತು.[೮೭] ಸಮುದ್ರ ವ್ಯಾಪಾರಕ್ಕೆ ಇದೊಂದು ದಿಕ್ಸೂಚಿಯಾಗಿತ್ತು.

ಅನೇಕ ಕಡೆಗಳಲ್ಲಿ ಇವರ ಕೋರ್ಟು, ಕಚೇರಿ ಇತರೇ ಕಟ್ಟಡಗಳು ತಲೆ ಎತ್ತಿವೆ. ಅವುಗಳಲ್ಲಿ ಮುಖ್ಯವಾಗಿ ದಕ್ಷಿಣ ಕನ್ನಡದಲ್ಲಿಯೇ ಸಿವಿಲ್ ಕೋರ್ಟು, ಜಿಲ್ಲಾ ಕೋರ್ಟು, ಜಡ್ಜ್ ಕೋರ್ಟು ಮಂಗಳೂರಿನಲ್ಲಿದ್ದವು. ಇಡೀ ಜಿಲ್ಲೆಯಲ್ಲಿ ಮುನಿಫ್ ಕೋರ್ಟುಗಳು ಆರು ಇದ್ದವು. ಸಬ್‌ಜಡ್ಜ್ ಕೋರ್ಟು ೪೫ ಇದ್ದವು. ರೆವಿನ್ಯೂ ಕೋರ್ಟು ೨೬ ಇದ್ದವು. ವಿಲೇಜ್ ಕೋರ್ಟು ೭೪೨ ಇದ್ದವು. ಇವು ೧೮೮೮ರಿಂದ ೧೮೯೨ರ ವರೆಗಿನ ರಚನೆಗೊಂಡಿದ್ದವು. ಈ ಒಂದು ಜಿಲ್ಲೆಯಲ್ಲಿ ೮ ಜೈಲುಗಳಿದ್ದವು. ಮಂಗಳೂರಿನಲ್ಲಿ ಯುರೋಪಿಯನ್ ಕ್ವಾಟ್ರಸ್‌ಗಳಿದ್ದವು. ಪುತ್ತೂರು ಉಪ್ಪಿನಂಗಡಿ, ಕಡಬ ಸುಬ್ರಹ್ಮಣ್ಯ ಅಥವಾ ಪುಷ್ಪಗಿರಿ, ಧರ್ಮಸ್ಥಳಗಳಲ್ಲಿ ಪೊಲೀಸ್ ಠಾಣೆಗಳಿದ್ದವು. ಅಲ್ಲದೆ ಪೋಸ್ಟ್ ಆಫೀಸ್ ಇದ್ದವು. ಬಂಗಾಡಿಯಲ್ಲಿ ಸ್ಥಳೀಯ ಆಡಳಿತ ಸಂಸ್ಥೆ ಒಂದು ಇತ್ತು. ಕುದುರೆಮುಖದಲ್ಲಿ ಎರಡು ಬಂಗಲೆಗಳಿದ್ದವು.[೮೮]

ಧಾರವಾಡದಲ್ಲಿಯೇ ಕಲೆಕ್ಟರ್ ಆಫೀಸ್, ಪೊಲೀಸ್ ಸ್ಟೇಷನ್, ಕಲೆಕ್ಟರ್ ರೆಸಿಡೆನ್ಸಿ, ಕಲೆಕ್ಟರ್ ಗಾರ್ಡನ್, ರೆವಿನ್ಯೂ ಸರ್ವೇ ಆಫೀಸ್, ರೆಸಿಡೆನ್ಸಿ, ಜಡ್ಜ್ ರೆಸಿಡೆನ್ಸಿ, ಜಿಲ್ಲಾ ಕೋರ್ಟು, ಪೋಸ್ಟ್ ಆಪೀಸ್, ಸಿವಿಲ್ ಸ್ಟೇಷನ್, ಮೂರು ಯುರೋಪಿಯನ್ ಬಂಗಲೆಗಳಿದ್ದವು.[೯] ಕೂರ್ಗ್ ಪ್ರಾಂತ್ಯದಲ್ಲಿ ೧೮೬೫ರ ಜುಲೈಯಲ್ಲಿ ರಿಜಿಸ್ಟ್ರೇಷನ್ ಆಫೀಸ್ ಸ್ಥಾಪಿಸಲಾಯಿತು. ಮದ್ರಾಸ್ ಸರ್ಕಾರದ ಆಡಳಿತದಂತೆ ಮಿಲಿಟರಿ ಕಟ್ಟಡಗಳು ಮಡಿಕೇರಿಯಲ್ಲಿ ೧೮೭೧ರಿಂದ ಪ್ರಾರಂಭವಾಯಿತು. ಮಡಿಕೇರಿ ಅರಮನೆಯನ್ನು(ಕೋಟೆಯನ್ನು) ಆಫೀಸ್ ಆಗಿ ಪರಿವರ್ತಿಸಲಾಯಿತು. ಜೈಲನ್ನು ಮಡಿಕೇರಿಯಲ್ಲಿ ೧೮೭೦ರಲ್ಲಿ ಪ್ರಾರಂಭಿಸಲಾಯಿತು.[೧೦]

ಕೆನರಾದಲ್ಲಿಯೇ ಅನೇಕ ಅಂಚೆ ಕಛೇರಿಗಳಿದ್ದವು. ಮುಖ್ಯವಾಗಿ ಕಾರವಾರದಲ್ಲಿಯೇ ೧೭ ಅಂಚೆ ಕಛೇರಿಗಳಿದ್ದವು. ೧೧ ಸ್ಥಳೀಯ ಪೋಸ್ಟ್ ಆಫೀಸ್ ಇದ್ದವು. ಅಂಕೋಲಾ, ಬೆಳಗುಲ್ಲಿ, ಮಂಕಿಕೊಲಾ, ಬನವಾಸಿ, ಭಟ್ಕಳ, ಗೋಕರ್ಣ, ಹಳಿಯಾಳ, ಹೊನ್ನಾವರ, ಕುಮುಟ ಮತ್ತು ಯಲ್ಲಾಪುರಗಳಲ್ಲಿ ಮುಖ್ಯ ಅಂಚೆ ಕಛೇರಿಗಳಿದ್ದವು. ಟೆಲಿಗ್ರಾಫ್ ಆಫೀಸ್ ಕೆನರಾದಲ್ಲಿಯೇ ಎರಡು ಇದ್ದವು. ಅವು ಕಾರವಾರ ಮತ್ತು ಕುಮುಟಾದಲ್ಲಿದ್ದವು. ಇವು ಬೆಳಿಗ್ಗೆ ೧೦ರಿಂದ ಸಂಜೆ ೮ರ ವರೆಗೆ ಕೆಲಸ ನಿರ್ವಹಿಸಬೇಕಿತ್ತು. ವಾರದ ಎಲ್ಲಾ ದಿನಗಳಲ್ಲಿಯೂ ಕೆಲಸ ನಿರ್ವಹಿಸುತ್ತಿದ್ದವು. ಅಲ್ಲದೆ ಕೆನರಾದಲ್ಲಿಯೇ ಮೂರು ಪ್ರಮುಖ ಬಂಗಲೆಗಳಿದ್ದವು.[೧೧]

ಬಳ್ಳಾರಿ ಜಿಲ್ಲೆಯಲ್ಲಿ ಮಿಲಿಟರಿ ಕಟ್ಟಡಗಳು, ಸಿವಿಲ್ ಬಿಲ್ಡಿಂಗ್, ಕೋರ್ಟು ೧೮೭೦ರ ಸುಮಾರಿಗೆ ೩೯೩ ಜೈಲುಗಳಿದ್ದವು. ಅಲ್ಲದೆ ತಾಲೂಕು ಕಛೇರಿಗಳು, ಸಬ್‌ಕಲೆಕ್ಟರ್ ಕಛೇರಿ, ೧೯ ಸಾರ್ವಜನಿಕ ಬಂಗ್ಲೆಗಳು, ಕಲೆಕ್ಟರ್-ಬಂಗಲೆ, ಪ್ರವಾಸಿಗರ ಕಟ್ಟಡಗಳು, ಸಣ್ಣ ಮನೆಗಳು ಇವುಗಳು ಬಳ್ಳಾರಿಯ ಹೊಸಪೇಟೆ, ಹಡಗಲಿ, ಅನಂತಪುರ, ಹರಪನಹಳ್ಳಿ, ಆದೋನಿಯಲ್ಲಿದ್ದವು.[೧೨]

ಮೈಸೂರು ಜಿಲ್ಲೆಯ ಬೆಂಗಳೂರಿನಲ್ಲಿ ಬಹಳ ಸುಂದರವಾದ ಕಟ್ಟಡಗಳು ತಲೆ ಎತ್ತಿದ್ದವು. ಮುಖ್ಯವಾಗಿ ಮಹಾರಾಜರ ಅರಮನೆ, ಕಂಟೋನ್ಮೆಂಟ್, ರೈಲ್ವೆ ಸ್ಟೇಷನ್, ಸಾರ್ವಜನಿಕ ಕಛೇರಿ, ಕಬ್ಬನ್ ಪಾರ್ಕ್, ಮ್ಯೂಜಿಯಂ, ಸಾರ್ವಜನಿಕ ಕಛೇರಿಗಳು, ಯಲಹಂಕ ಗೇಟ್, ಸರ್ಕಾರಿ ಪ್ರೆಸ್, ಸೆಂಟ್ರಲ್ ಕಾಲೇಜು, ಸೆಂಟ್ರಲ್ ಜೈಲ್, ಮನೆಗಳು ಹೆಚ್ಚಾಗಿ ಯುರೋಪಿಯನ್ ಮಾದರಿಯಲ್ಲಿದ್ದವು. ದರ್ಬಾರ್ ಆಫೀಸ್, ಕಾಟನ್‌ಮಿಲ್, ಮರಾಠ ರೈಲ್ವೆ ಸ್ಟೇಷನ್, ಸುಂದರ ಕಟ್ಟಡಗಳು, ಲಾಲ್‌ಬಾಗ್, ಗಾರ್ಡನ್ ಕೋರ್ಟು, ಪೇರೆಡ್‌ಗ್ರೌಂಡ್, ಬೌರಿಂಗ್ ಇನ್‌ಸ್ಟಿಟ್ಯೂಟ್, ಯುನೈಟೆಡ್ ಸರ್ವೀಸ್, ಲೈಬ್ರರಿ, ಮಾಯೋಹಾಲ್, ರಿಚ್‌ಮಂಡ್‌ಟೌನ್ ಗೋಪುರಗಳು, ಪೋಸ್ಟ್ ಆಫೀಸ್, ಟೆಲಿಗ್ರಾಫ್, ಜಿಲ್ಲಾ ಕೋರ್ಟು ಹೀಗೆ ಅನೇಕ ಕಟ್ಟಡಗಳು ನಿರ್ಮಿಸಲ್ಪಟ್ಟವು.[೧೩]

ಆಸ್ಪತ್ರೆ ಕಟ್ಟಡಗಳನ್ನು ಅದ್ಭುತವಾಗಿ ನಿರ್ಮಿಸಿದ್ದರು. ಅವುಗಳು ಮುಖ್ಯವಾಗಿ ಮಡಿಕೇರಿಯಲ್ಲಿ ಮಿಲಿಟರಿ ಜನರಲ್ ಆಸ್ಪತ್ರೆಯನ್ನು ೧೮೭೦ರಲ್ಲಿ ಪ್ರಾರಂಭಿಸಲಾಯಿತು.[೧೪] ಧಾರವಾಡದಲ್ಲಿ ೧೮೮೨ರ ಜೂನ್ ೧ರಂದು ಹೊಸ ಸಿವಿಲ್ ಆಸ್ಪತ್ರೆಯನ್ನು ಸ್ಥಾಪಿಸಲಾಯಿತು. ಅಲ್ಲದೆ ಹುಬ್ಬಳ್ಳಿಯಲ್ಲಿ ೧೮೫೯ರಲ್ಲಿ,

ಗದಗ್‌ನಲ್ಲಿ ೧೮೬೪ರಲ್ಲಿ, ಹಾವೇರಿಯಲ್ಲಿ ೧೮೭೮ರಲ್ಲಿ ಪ್ರಾರಂಭಿಸಲಾಯಿತು.[೯೫] ಅಲ್ಲದೆ ಬೆಳಗಾಂನಲ್ಲಿಯೂ ಸಹ ಸ್ಪೇಷನ್ ಆಸ್ಪತ್ರೆಯನ್ನು ಫಸ್ಟ್‌ಕ್ಲಾಸ್ ಆಸ್ಪತ್ರೆಯನ್ನು ಸರ್ಕಾರವು ೪೮೫೦ ರೂಪಾಯಿ ಖರ್ಚು ಮಾಡಿ ನಿರ್ಮಿಸಿತು.[೯೬] ಬೆಂಗಳೂರಿನಲ್ಲಿ ಅನೇಕ ಸಾರ್ವಜನಿಕ ಆಸ್ಪತ್ರೆಯನ್ನು, ಮೈಸೂರಿನಲ್ಲಿ ಸ್ಥಾಪಿಸಲ್ಪಟ್ಟಿತು. ಸಾರ್ವಜನಿಕ ಆಸ್ಪತ್ರೆಯನ್ನು ಹಾಸನದಲ್ಲಿ ೧೮೫೬ರಲ್ಲಿ ನಿರ್ಮಿಸಲಾಯಿತು. ಶಿವಮೊಗ್ಗದಲ್ಲಿ ೧೮೫೦ರಲ್ಲಿ ಆಸ್ಪತ್ರೆಯನ್ನು ಪ್ರಾರಂಭಿಸಲಾಯಿತು.[೯೭] ಅಲ್ಲದೆ ಬೆಂಗಳೂರಿನಲ್ಲಿ ಮೆಟರ್ನಿಟಿ ಆಸ್ಪತ್ರೆಯನ್ನು, Leper ಆಸ್ಪತ್ರೆಯನ್ನು,[೯೮] ವಿಕ್ಟೋರಿಯಾ ಆಸ್ಪತ್ರೆಯನ್ನು ೧೮೯೬ರಲ್ಲಿ ಸ್ಥಾಪಿಸಲಾಯಿತು. ಹೀಗೆ ಅನೇಕ ಕಟ್ಟಡಗಳು ನಿರ್ಮಿಸಲ್ಪಟ್ಟವು.[೯೯]

ಈ ಮೇಲಿನ ಕಟ್ಟಡಗಳಲ್ಲಿ ಕೆಲವನ್ನು ಉದಾಹರಿಸಬಹುದಾದರೆ ಫ್ರಾನ್ಸ್ ಮತ್ತು ಗ್ರೀಸ್ ಕಾಲದ ಪ್ರಾಚೀನ ಶೈಲಿಗೆ ಉದಾಹರಣೆಗಳೆಂದರೆ ಬೆಂಗಳೂರಿನ ಡಿಸ್ಟ್ರಿಕ್ಟ್ ಕಚೇರಿ(೧೮೫೬), ಅಠಾರ ಕಚೇರಿ(೧೮೬೮), ಮ್ಯೂಜಿಯಂ(೧೮೭೭), ಡೇಲಿ ಸ್ಮಾರಕ ಭವನ, ಮೈಸೂರಿನಲ್ಲಿ ಮಹಾರಾಜರವರ ಕಾಲೇಜು(೧೮೯೪), ಜ್ಯೂಬಿಲಿ ಸಂಸ್ಥೆ(೧೮೯೮), ಸಾರ್ವಜನಿಕ ಕಚೇರಿ(೧೮೯೫), ಶಾಲೆಯ ಕಟ್ಟಡ(೧೮೯೯), ಅಲ್ಲದೆ ಸಾರ್ವಜನಿಕ ಕಟ್ಟಡಗಳು ಒಂದೇ ವಾಸ್ತುಶೈಲಿಯಲ್ಲಿರಲಿಲ್ಲ. ಉದಾಹರಣೆಗೆ ಬೆಂಗಳೂರಿನ ಸೆಂಟ್ರಲ್ ಕಾಲೇಜು(೧೯೦೧), ಗಾಥಿಕ್ ಶೈಲಿಯಲ್ಲಿರುವ ಲಕ್ಷಣವಾದ ಕಟ್ಟಡ. ಆದರೆ ಬೆಂಗಳೂರಿನ ಅರಮನೆಯು (೧೮೮೭), ಇಂಗ್ಲೆಂಡ್ ಮತ್ತು ನಾರ್ಮಂಡಿಯ ಮಧ್ಯಮ ಯುಗದ ಕೋಟೆಗಳ ಶೈಲಿಗಳಲ್ಲಿದೆ. ವಿಕ್ಟೋರಿಯಾ ಆಸ್ಪತ್ರೆ(೧೮೯೬) ಶೈಲಿಯೇ ಬೇರೆ. ೨೦ನೆಯ ಶತಮಾನದ ಆರಂಭದಲ್ಲಿ ಕಟ್ಟಿದ ಭಾರತೀಯ ವಿಜ್ಞಾನ ಸಂಸ್ಥೆಯ(Indian institute of science) ಕಟ್ಟಡದ ಮೇಲೆ ಗಂಟೆಯ ಆಕಾರದ ಒಂದು ಗೋಪುರವಿದೆ. ಈ ಕಟ್ಟಡವು ಹೊರಗೆ ನೋಡಲು ಅಂದವಾಗಿದೆ. ಒಳಗಡೆ ಕೊಠಡಿಗಳ ಜೋಡಣೆಯ ಕೆಲಸ ಮಾಡುವವರ ಅನುಕೂಲಕ್ಕೆ ತಕ್ಕ ಹಾಗಿದೆ.

ಬೆಂಗಳೂರಿನ ಸಾರ್ವಜನಿಕ ಪುಸ್ತಕ ಭಂಡಾರವಿರುವ ಸರ್ ಕೆ. ಶೇಷಾದ್ರಿ ಅಯ್ಯರ್ ಸ್ಮಾರಕಭವನ ಕೋಟೆಯಲ್ಲಿರುವ ಸರ್ಕಾರದ ಹೈಸ್ಕೂಲ್, ಮಿಂಟೋ ಕಣ್ಣಾಸ್ಪತ್ರೆ, ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ ಇವು ಮಿಶ್ರಶೈಲಿಯ ಲಕ್ಷಣವಾದ ಕಟ್ಟಡಗಳು. ಮೈಸೂರಿನ ಶ್ರೀಕೃಷ್ಣರಾಜೇಂದ್ರ ಆಸ್ಪತ್ರೆಯ ಅಮೆರಿಕದ ಪುನರುತ್ಥಾನದ(Renaissance) ಶೈಲಿಯಲ್ಲಿರುತ್ತದೆ. ಬೆಂಗಳೂರಿನ 'ವಾಣಿ ವಿಲಾಸ' ಹೆರಿಗೆ ಆಸ್ಪತ್ರೆಯು ಆಧುನಿಕ ಶೈಲಿಯಲ್ಲಿದೆ.[೧೦೦] ಹೀಗೆ ಅನೇಕ ವಾಸ್ತುಶೈಲಿ ಕಟ್ಟಡಗಳನ್ನು ನಿರ್ಮಿಸಿರುವುದು ಅದರಲ್ಲಿಯೇ ನೂತನ ಶೈಲಿ ಅಳವಡಿಸಿಕೊಂಡು ಮುಂದುವರಿಸಿಕೊಂಡು ಹೋಗುತ್ತಿರುವುದು ಸ್ಪಷ್ಟ.

**ಮೂರ್ತಿಶಿಲ್ಪ**

ಬ್ರಿಟಿಷ್ ಕಾಲದ ವಾಸ್ತುಕಲೆಯಲ್ಲಿ ನೋಡುವಂಥ ಅನುಕರಣ ಶೀಲತೆಯನ್ನು ಶಿಲ್ಪಕಲೆಯಲ್ಲಿ ಕನ್ನಡ ನಾಡು ಕಂಡಿಲ್ಲವೆನ್ನಬಹುದು. ಹೀಗಾಗಿ ಐರೋಪ್ಯ ಶೈಲಿಯ ಶಿಲ್ಪಗಳು ಈ ನಾಡಿನಲ್ಲಿ ಹೇಳಿಕೊಳ್ಳುವಷ್ಟಿಲ್ಲ. ಕ್ರೈಸ್ತ ಚರ್ಚುಗಳಲ್ಲಿ ಪಾದ್ರಿಗಳ ವಸತಿ ಗೃಹಗಳ ಪ್ರತಿಷ್ಠಿತ ಕ್ರಿಶ್ಚಿಯನ್ನರ ಮನೆಗಳಲ್ಲಿ ಕಾಣುವ ಧಾರ್ಮಿಕ

ಮೂರ್ತಿಶಿಲ್ಪ ಕೃತಿಗಳನ್ನು ಮೊದಲು ಹೆಸರಿಸಬಹುದಾದರೂ ಈ ಶೈಲಿಯ ಶಿಲ್ಪಗಳು ನಾಡನ್ನು ಪ್ರವೇಶಿಸುವುದಕ್ಕಿಂತ ಬಹಳ ಹಿಂದೆಯೇ, ಅಂದರೆ ಕ್ರೈಸ್ತ ಶಕಾರಂಭದಲ್ಲಿ ಕೆಲವೆಡೆ ಸಿಕ್ಕ ರೋಮನ್ ನಾಣ್ಯ ಪದಕಗಳ ಮೇಲೆ ಕಂಡುಬರುವ ಪುಟಾಣಿ ಚಿತ್ರ ಶಿಲ್ಪಗಳನ್ನು ಮರೆಯುವಂತಿಲ್ಲ.

ಈ ಶಿಲ್ಪಾನುಕ್ರಮಣಿಗಳನ್ನು ನಮ್ಮ ಸ್ಥಳೀಯ ಶಿಲ್ಪಿಗಳೂ, ಗಾರೆ ಕೆಲಸದವರೂ ಅನುಕರಿಸದಿದ್ದರೆ ಮೈಸೂರಿನ ಕೃಷ್ಣರಾಜೇಂದ್ರ ಆಸ್ಪತ್ರೆ ಕಟ್ಟಡದಲ್ಲಿ ಶಿಲ್ಪಿಸಿರುವ ರೆಕ್ಕೆಗಳಿರುವ ಸ್ತ್ರೀ ವಿಗ್ರಹಗಳನ್ನಿಲ್ಲಿ ಉದಾಹರಿಸಬಹುದು. ಅವುಗಳಲ್ಲಿ ದೇಶಿ ಶೈಲಿಯಲ್ಲಿ ದೇಶೀಯ ಸೊಗಸು ಕಾಣದಿರದು. ಈ ಶಿಲ್ಪಗಳು ಮುಖ್ಯವಾಗಿ ಬ್ರಿಟಿಷ್ ಕಮಿಷನ್ ಆಗಿದ್ದ ಮಾರ್ಕ್ ಕಬ್ಬನ್‌ನ ಅಶ್ವಾರೋಹಿ ಕಂಚಿನ ಪ್ರತಿಮೆ(ಬೆಂಗಳೂರು) ಮೈಸೂರಿನಲ್ಲಿ ರೆಸಿಡೆಂಟ್ ಆಗಿದ್ದ ಜೇಮ್ಸ್ ಡೇವಿಡ್ಸನ್ ಗೋಡನ್ನನ ಪ್ರತಿಮೆ(ಅಠಾರ ಕಛೇರಿಯ ಮುಂದೆ ಇದೆ) ಉಲ್ಲೇಖನೀಯ. ಮೈಸೂರಿನ ಚೌಕದ ಚಾಮರಾಜ ಒಡೆಯರ ಪ್ರತಿಮೆಯನ್ನು ಖ್ಯಾತ ಇಂಗ್ಲಿಷ್ ಶಿಲ್ಪಿ ಅನ್‌ಸ್ಲೋಫೋರ್ಡ್ ಶಿಲ್ಪಿಸಿದ್ದು ಐರೋಪ್ಯ ಶೈಲಿಯ ಶಿಲ್ಪಕಲೆಗೆ ಒಳ್ಳೆಯ ಉದಾಹರಣೆಯಾಗಿದೆ. ಮೈಸೂರಿನ ಅರಮನೆ, ಜಗನ್ಮೋಹನ ಚಿತ್ರಶಾಲೆ, ಬೆಂಗಳೂರು ವಸ್ತು ಸಂಗ್ರಹಾಲಯ ಮುಂತಾದೆಡೆಗಳಲ್ಲಿರುವ ಕೆಲವು ಐರೋಪ್ಯ ಶೈಲಿಯ ಶಿಲ್ಪ ಕಲಾಕೃತಿಗಳನ್ನು ನೋಡಬಹುದು.[೧೧] ಹೀಗಾಗಿ ಇದೊಂದು ಐರೋಪ್ಯ ಶಿಲ್ಪ ಶೈಲಿಯ ಸಂಸ್ಕೃತಿಯನ್ನು ನಾವು ಅಳವಡಿಸಿಕೊಂಡಿರುವುದು ಸ್ಪಷ್ಟ. ಈ ಶಿಲ್ಪ ಕೃತಿಯನ್ನು ಅನೇಕ ಗಣ್ಯರ ಶ್ರದ್ಧಾಂಜಲಿ ರೂಪದಲ್ಲಿ ನೆನಪಿನ ರೂಪದಲ್ಲಿ ಸ್ಮರಿಸುತ್ತಿರುವುದು ಸ್ಪಷ್ಟವಾದುದಾಗಿದೆ. ಈ ಮೇಲಿನ ಅಂಶಗಳಲ್ಲದೆ ಸಾಮಾಜಿಕವಾಗಿಯೂ ಸಹ ಅನೇಕ ರೀತಿಯ ಬದಲಾವಣೆಗಳು ಕಂಡುಬಂದವು. ಇದರಿಂದಾಗಿ ನವೀನ ಸಂಸ್ಕೃತಿಯೊಂದು ಬೆಳೆದುಬಂದಿತ್ತು ಎಂದರೆ ತಪ್ಪಾಗಲಾರದು. ಏಕೆಂದರೆ ನಮ್ಮಲ್ಲಿ ಪ್ರಾಚೀನ ಕಾಲದಿಂದಲೂ ಮೂಢನಂಬಿಕೆಗಳು ಹೆಚ್ಚು. ದೇವರ ಹೆಸರಿನಲ್ಲಿ ನಡೆಯುವ ದೇವದಾಸಿ ಪದ್ಧತಿ, ಬಾಲ್ಯವಿವಾಹ, ಸತಿಸಹಗಮನ ಪದ್ಧತಿ, ಜಾತಿ ಪದ್ಧತಿ ಇತರೇ ಅನಿಷ್ಟ ಪದ್ಧತಿಗಳಿದ್ದವು. ಇವುಗಳನ್ನು ಬ್ರಿಟಿಷರು ತಮ್ಮದೇ ಆದ ಆಡಳಿತ ಕ್ರಮಗಳ ಮೂಲಕ ತೊಡೆದುಹಾಕಿದರೂ ಕೆಲವೊಂದು ವಿಚಾರಕ್ಕೂ ಅವರು ತಮ್ಮದೇ ಆದ ಕಾಯ್ದೆಕಾನೂನನ್ನು ಜಾರಿಗೆ ತಂದರು ಹಾಗೂ ಅವುಗಳನ್ನು ಅನುಕರಿಸುವಂತೆ ಕ್ರಮಗಳನ್ನು ಕೈಗೊಂಡರು.

ಶಿಕ್ಷಣವು ಪ್ರಾರಂಭದಿಂದಲೂ ಮೇಲ್ವರ್ಗದವರ ಸ್ವತ್ತಾಗಿತ್ತು. ಅದನ್ನು ಸಾರ್ವಜನಿಕರಿಗೆ ಸಿಗುವಂತೆ ಮಾಡಿದವರು ಬ್ರಿಟಿಷರು. ಇದಕ್ಕಾಗಿ ಎಲ್ಲಾ ಕಡೆಯೂ ಶಾಲೆಕಾಲೇಜುಗಳನ್ನು ಸ್ಥಾಪಿಸಿರುವುದೇ ಸಾಕ್ಷಿಯಾಗಿದೆ. ಈ ಶಿಕ್ಷಣದ ಮೂಲಕ ಮೂಢನಂಬಿಕೆಯನ್ನು ತೊಡೆದುಹಾಕಲು ಸಹಾಯಕವಾಯಿತು ಅಂದರೆ ತಪ್ಪಾಗಲಾರದು. ಆಡಳಿತ ಕ್ರಮದಲ್ಲೂ ಶಿಸ್ತನ್ನು ಮೂಡಿಸಿದರು. ಇವರು ವಿವಿಧ ಇಲಾಖೆಗಳಾಗಿ ವಿಭಜಿಸಿ ಆ ಮೂಲಕ ವಿವಿಧ ಹುದ್ದೆಗಳನ್ನು ಸೃಷ್ಟಿಸಿದರು. ಹೀಗಾಗಿ ಆಡಳಿತದಲ್ಲಿ ಶಿಸ್ತು ಮೂಡಿಸಲು ಸಾಧ್ಯವಾಯಿತು. ಉಡುಪುಗಳಲ್ಲಿಯೂ ಅಷ್ಟೇ, ಮೊದಲು ಇಲ್ಲಿನ ಚಿಕ್ಕಮಕ್ಕಳಿಂದ ಹಿಡಿದು ವಯಸ್ಕರವರೆಗೂ ಪುರುಷರು ಧೋತ್ರ, ನಿಲುವಂಗಿ ಹಾಗೂ ಪೇಟ ಧರಿಸುತ್ತಿದ್ದರು. ಆದರೆ ಇವರ ಪ್ರಭಾವದಿಂದ ಉದ್ದವಾದ ಜುಟ್ಟನ್ನು

ಪುರುಷರು ಕತ್ತರಿಸಿದರು. ಧೋತ್ರದ ಬದಲು ಪ್ಯಾಂಟು ಬಂದಿತ್ತು. ಪೇಟವು ಕ್ರಮೇಣ ಮಾಯವಾಯಿತು. ಇದು ಸಹ ಬ್ರಿಟಿಷರ ಪ್ರಭಾವ ಎನ್ನಬಹುದು. ಊಟ, ಉಪಚಾರಗಳಲ್ಲಿ ಇಲ್ಲಿನ ಹಿಂದೂ ಪದ್ಧತಿ ಎಂದರೆ ಮೊದಲು ಪುರುಷರು ಊಟ ಮಾಡಬೇಕಾಗುತ್ತಿತ್ತು. ಆದರೆ ಇಂತಹ ಪದ್ಧತಿಯನ್ನು ಬ್ರಿಟಿಷರು ಆಕ್ಷೇಪಿಸುತ್ತಿದ್ದರು. ಅಲ್ಲದೆ ಛತ್ರಗಳು, ವಿಶ್ರಾಂತಿಧಾಮಗಳನ್ನು ಪ್ರವಾಸಿಗರಿಗಾಗಿ ಅನೇಕ ಕಡೆಗಳಲ್ಲಿ ಕಲ್ಪಿಸಿಕೊಟ್ಟರು. ಈ ಕಾಲದಲ್ಲಿ ಮಹಿಳೆಯರಿಗೆ ಹೆಚ್ಚಿನ ಸ್ವಾತಂತ್ರ್ಯವಿರಲಿಲ್ಲ. ಆದರೆ ಇವರ ಸಾರ್ವತ್ರಿಕ ಶಿಕ್ಷಣದಿಂದ ಹೆಣ್ಣುಮಕ್ಕಳು ಸಹ ಮನೆಯಿಂದ ಹೊರಗೆ ಬಂದು ಶಿಕ್ಷಣ ಪಡೆಯುವಂತಾದರು. ಟೀ, ಕಾಫಿಯನ್ನು ಕುಡಿಯುವ ಪದ್ಧತಿಯು ಇವರಿಂದ ಬಂದಿತೆಂದರೆ ತಪ್ಪಾಗಲಾರದು. ಮನೆಗಳ ಮಾದರಿಯೂ ಸಹ ಇವರ ಆಧುನಿಕತೆಗೆ ಒಳಗಾಯಿತು. ಏಕೆಂದರೆ ಸರಳವಾಗಿ ಕಟ್ಟುವ ಕಲ್ಪನೆ ಇವರಿಂದ ಬಂದಿತೆಂದರೆ ತಪ್ಪಾಗಲಾರದು.

ಹೀಗಾಗಿ ವಸಾಹತು ಸಂದರ್ಭದಲ್ಲಿನ ಸಂಸ್ಕೃತಿಯನ್ನು ಅಳವಡಿಸಿಕೊಂಡ ಅನೇಕ ಪರಿಕರಗಳಾದ ಟೆಲಿಫೋನ್, ಅಂಚೆ ಕಚೇರಿ, ಪೊಲೀಸ್ ಸ್ಟೇಷನ್, ಕಾಯ್ದೆ ಕಾನೂನು, ರೈಲ್ವೆ, ಸಾರಿಗೆ ಸಂಪರ್ಕ, ಸೇತುವೆಗಳು ಇತ್ಯಾದಿಗಳಲ್ಲಿ ವಿದೇಶಿ ಸಂಸ್ಕೃತಿಯನ್ನು ಒಳಪಡಿಸಿಕೊಂಡಿರುವುದು ಸ್ಪಷ್ಟ. ಹಿಂದಿನ ಗ್ಯಾಸೆಟಿಯರ್‌ಗಳಲ್ಲಿ ಈ ರೀತಿಯ 'ಸಂಸ್ಕೃತಿ' ಎನ್ನುವ ಅಧ್ಯಾಯಗಳು ಇರಲಿಲ್ಲ. ಆದರೆ ಇಂದಿನ ಸ್ವರೂಪದಲ್ಲಿ 'ಸಂಸ್ಕೃತಿ' ಎನ್ನುವ ಒಂದು ಅಧ್ಯಾಯವನ್ನು ಪ್ರತ್ಯೇಕವಾಗಿ ಒಳಗೊಂಡಿರುವುದು ಸ್ಪಷ್ಟ. ಹೀಗಾಗಿ ವಸಾಹತುಶಾಹಿಗಳ ಸಂಸ್ಕೃತಿಯ ಪ್ರಭಾವವು ಎಲ್ಲಾ ಕಡೆ ಹರಡಿರುವುದು ಸ್ಪಷ್ಟ.

**ಟಿಪ್ಪಣಿಗಳು**

೧. ಲಕ್ಷ್ಮಣ್ ತೆಲಗಾವಿ ಪಿ, 'ಕರ್ನಾಟಕ ಸಂಸ್ಕೃತಿ: ಸ್ಥೂಲನೋಟ', **ಕರ್ನಾಟಕ ಸಂಸ್ಕೃತಿ,** ರಂಗೋಪಂತ ನಾಗರಾಜರಾಯರು(ಸಂ), ೧೯೯೭, ಪು. ೧.

೨. ಶಂಕರರಾವ್ ಚ.ನ, ಸಮಾಜಶಾಸ್ತ್ರದ ಮೂಲತತ್ವಗಳು(ಪ್ರಥಮ ಪಿಯುಸಿ), ೨೦೦೭, ಪು. ೧೭

೩. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ೨೦೦೪, ಪು. ೪, ೫.

೪. ರೇಣುಕಾಪ್ರಸಾದ್ ಪಿ.ಆರ್(ಸಂ), ಓ.ಎಲ್. ನಾಗಭೂಷಣಸ್ವಾಮಿ(ಮಾರ್ಗ), ಕನ್ನಡ ಚಿಂತನೆಯಲ್ಲಿ ಸಂಸ್ಕೃತಿಯ ವ್ಯಾಖ್ಯಾನಗಳು(ಅಪ್ರಕಟಿತ ಎಂ.ಫಿಲ್ ನಿಬಂಧ), ೧೯೯೪, ಪು. ೫.

೫. ವಿರೂಪಾಕ್ಷಿ ಪೂಜಾರಹಳ್ಳಿ, ವಿಜಯನಗರ ಕಾಲದ ಸಂಸ್ಕೃತಿ, ೨೦೦೮, ಪು. ೩೦, ೩೧

೬. ಗೋವಿಂದರಾಜು ಸಿ.ಆರ್, ಕರ್ನಾಟಕ ಸಂಸ್ಕೃತಿ ಕಲ್ಪನೆ, (ರಂಗೋಪಂತ ನಾಗರಾಜರಾಯರು(ಸಂ), ಕರ್ನಾಟಕ ಸಂಸ್ಕೃತಿ), ೧೯೯೭, ಪು. ೧೨.

೭. ಶಂಕರರಾವ್ ಚ.ನ, ಸಮಾಜಶಾಸ್ತ್ರದ ಮೂಲತತ್ವಗಳು(ಪ್ರಥಮ ಪಿಯುಸಿ), ೨೦೦೭, ಪು. ೧೭.

೮. ವಿರೂಪಾಕ್ಷಿ ಪೂಜಾರಹಳ್ಳಿ, ವಿಜಯನಗರ ಕಾಲದ ಸಂಸ್ಕೃತಿ, ೨೦೦೮, ಪು. ೩೦, ೩೧.

೯. ನೀಲಮ್ಮ ಕತ್ನಳ್ಳಿ, ಮಹದೇವ ಬಣಕಾರರ ಕೃತಿಗಳು, ೧೯೯೯, ಪು. ೨೮೮, ೨೯೦.

೧೦. ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ೨೦೦೦, ಪು. ೧೫.

೧೧. ನೀಲಮ್ಮ ಕತ್ನಳ್ಳಿ, ಮಹದೇವ ಬಣಕಾರರ ಕೃತಿಗಳು, ೧೯೯೯, ಪು. ೨೯೦.

೧೨. ನೀಲಮ್ಮ ಕತ್ನಳ್ಳಿ, ಮಹದೇವ ಬಣಕಾರರ ಕೃತಿಗಳು, ೧೯೯೯, ಪು. ೨೯೨, ೨೯೩.

೧೩. ಮಹದೇವ ಬಣಕಾರರು, ಆಂಗ್ಲರ ಆಡಳಿತದಲ್ಲಿ ಕನ್ನಡ, ೧೯೮೬, ಪು. ೬೨೫.

೧೪. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ.II, ೧೮೭೬, ಪು. ೫೦೪.

೧೫. ಮಹದೇವ ಬಣಕಾರರು, ಆಂಗ್ಲರ ಆಡಳಿತದಲ್ಲಿ ಕನ್ನಡ, ೧೯೮೬, ಪು. ೬೨೪, ೬೨೯.

೧೬. ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ೨೦೦೦, ಪು. ೯೮, ೧೦೨.

೧೭. ಧಾರವಾಡಕರ್ ರಾ.ಯ, ಹೊಸಗನ್ನಡದ ಸಾಹಿತ್ಯದ ಉದಯಕಾಲ, ೧೯೭೫, ಪು. ೫೮೯.

೧೮. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ.I, ೧೮೭೬, ಪು. ೫೦೪, ೫೦೫.

೧೯. ಚುಳಕಿ ಆರ್.ಎಸ್, ಮೆಡೋಸ ಟೇಲರನು ಚಿತ್ರಿಸಿದ ಭಾರತ, ೨೦೦೮, ಪು. ೨೩.

೨೦. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ.I, ೧೮೭೬, ಪು. ೫೦೫.

೨೧. ರೈಸ್ ಬಿ.ಎಲ್, ಮೈಸೂರು ಅಂಡ್ ಕೂರ್ಗ್ ಗ್ಯಾಸೆಟಿಯರ್ ಸಂ.III, ೧೮೭೮, ಪು. ೫೦೫.

೨೨. ಧಾರವಾಡಕರ್ ರಾ.ಯ, ಹೊಸಗನ್ನಡದ ಸಾಹಿತ್ಯದ ಉದಯಕಾಲ, ೧೯೭೫, ಪು. ೫೯೩.

೨೩. ಧಾರವಾಡಕರ್ ರಾ.ಯ, ಹೊಸಗನ್ನಡದ ಸಾಹಿತ್ಯದ ಉದಯಕಾಲ, ೧೯೭೫, ಪು. ೫೯೪, ೫೯೮, ೫೯೯.

೨೪. ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ೨೦೦೦, ಪು. ೧೦೯, ೧೧೦.

೨೫. ವಿದ್ಯಾಶಂಕರ ಎಸ್, ಸಮಾಹಿತ, ೨೦೦೪, ಪು. ೩೨೮.

೨೬. ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ೨೦೦೦, ಪು. ೧೧೨.

೨೭. ಧಾರವಾಡಕರ್ ರಾ.ಯ, ಹೊಸಗನ್ನಡದ ಸಾಹಿತ್ಯದ ಉದಯಕಾಲ, ೧೯೭೫, ಪು. ೬೨೦, ೬೨೪, ೬೨೫, ೬೨೭.

೨೮. ಸೋಮಶೇಖರ ಜಿ.ಟಿ(ಸಂ), ಡಾ. ಮಾದೇಗೌಡ(ಮಾರ್ಗ), ಬಿ.ಎಲ್. ರೈಸ್: ಒಂದು ಅಧ್ಯಯನ, ೨೦೦೯, ಪು. ೫೪, ೫೭.

೨೯. ಕುವೆಂಪು(ಸಂ), 'ಸವಿನೆನಪು', (ವರದರಾಜರಾವ್ ಜಿ, ಕನ್ನಡದಲ್ಲಿ ಸಂಶೋಧನೆ), ೧೯೭೦, ಪು. ೮೧೨.

೩೦. ಸೋಮಶೇಖರ್.ಜಿ.ಟಿ(ಸಂ), ಡಾ. ಮಾದೇಗೌಡ(ಮಾರ್ಗ), ಬಿ.ಎಲ್. ರೈಸ್ ಒಂದು ಅಧ್ಯಯನ, ೨೦೦೯, ಪು. ೬೩, ೬೬.

೩೧. ನಾಯಕ ಹಾ.ಮಾ, ಎಫಿಗ್ರಾಫಿಯ ಕರ್ನಾಟಿಕ ಕೊಡಗು ಜಿಲ್ಲೆ, ೧೯೭೨, ಪು. ೯.

೩೨. ಶ್ರೀನಿವಾಸ ಹಾವನೂರು, ಶಾಸನಗಳ ಪಿತಾಮಹ, ಬಿ.ಎಲ್. ರೈಸ್, ೧೯೮೩, ಪು. ೩೯

೩೩. ವಿದ್ಯಾಶಂಕರ್ ಎಸ್, ಸಮಾಹಿತ, ೨೦೦೪, ಪು. ೩೪೩.

೩೪. ಅದೇ, ಪು. ೩೪೨.

೩೫. ತಾರಾನಾಥ ಎನ್.ಎಸ್, ಆರ್ಶ್ವೀಯಸ್ ಸುಂದರಂ(ಸಂ), ಸಂಶೋಧನಾ ಪಥ, ೨೦೦೬, ಪು. ೧೪೫

೩೬. ಅದೇ, ಪು. ೧೪೫.

೩೭. ತಾರಕೇಶ್ವರ ವಿ.ಬಿ, ವಸಾಹತುಶಾಹಿ ಮತ್ತು ಭಾಷಾಂತರ, ೨೦೦೬, ಪು. ೬೩, ೬೪.

೩೮. ಸೂರ್ಯನಾಥ ಯು ಕಾಮತ್, ಕೊಡಗು ಗ್ಯಾಸೆಟಿಯರ್, ೧೯೯೨, ಪು. ೭೧೬, ೭೧೭.

೩೯. ರೈಸ್ ಬಿ.ಎಲ್, ಮೈಸೂರು ಅಂಡ್ ಕೂರ್ಗ್ ಗ್ಯಾಸೆಟಿಯರ್ ಸಂ.III, ೧೮೭೮, ಪು. ೨೩೪.

೪೦. ಸೂರ್ಯನಾಥ ಯು ಕಾಮತ್, ಕೊಡಗು ಗ್ಯಾಸೆಟಿಯರ್, ೧೯೯೨, ಪು. ೭೦೮.

೪೧. ಅದೇ, ಪು. ೭೪೩

೪೨. ತಾರಾನಾಥ ಎನ್.ಎಸ್, ಆರ್ವೀಯಸ್ ಸುಂದರಂ(ಸಂ), ಸಂಶೋಧನಾ ಪಥ, ೨೦೦೬, ಪು. ೧೪೫.

೪೩. ದಿವಾಕರ್ ಆರ್.ಆರ್, ಕರ್ನಾಟಕ ಪರಂಪರೆ ಸಂ.II, ೨೦೦೬, ಪು. ೪೫೮.

೪೪. ಪಾಟೀಲ ಎಂ.ಬಿ, ಕರ್ನಾಟಕ ಕೈಪಿಡಿ, ೧೯೯೬, ಪು. ೨೫೮, ೨೫೯.

೪೫. ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ೨೦೦೦, ಪು. ೩೯೯.

೪೬. ಅದೇ, ಪು. ೪೧೮.

೪೭. ಸೂರ್ಯನಾಥ ಯು ಕಾಮತ್, ಕೊಡಗು ಜಿಲ್ಲಾ ಗ್ಯಾಸೆಟಿಯರ್, ೧೯೯೫, ಪು. ೭೨೨.

೪೮. ಧಾರವಾಡಕರ್ ರಾ.ಯ, ಹೊಸಗನ್ನಡದ ಸಾಹಿತ್ಯದ ಉದಯಕಾಲ, ೧೯೭೫, ಪು. ೫೯೧.

೪೯. ಅದೇ, ಪು. ೬೨೪.

೫೦. ಶ್ರೀನಿವಾಸ ಹಾವನೂರು, ಹೊಸಗನ್ನಡದ ಅರುಣೋದಯ, ೨೦೦೦, ಪು. ೧೧೦.

೫೧. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ೧೮೮೪, ಪು. ೬೨೦.

೫೨. ದಿವಾಕರ್ ಆರ್.ಆರ್, ಕರ್ನಾಟಕ ಪರಂಪರೆ ಸಂ.II, ೨೦೦೬, ಪು. ೪೨೨.

೫೩. ಭಾಸ್ಕರ್ ಟಿ.ಎಂ, ಶ್ರೀ ರಾಜಶೇಖರ್ ಹತಗುಂದಿ, ಕಲಬುರ್ಗಿ ಜಿಲ್ಲಾ ದರ್ಶನ, ೨೦೦೫, ಪು. ೩೩.

೫೪. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಮ್ ಗ್ಯಾಸೆಟಿಯರ್, ೧೮೬೪, ಪು. ೪೮೮.

೫೫. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್ ಸಂ.IV, ೧೯೨೭, ೧೯೩೦, ಪು. ೬೪೬.

೫೬. ದಿವಾಕರ್ ಆರ್.ಆರ್, ಕರ್ನಾಟಕ ಪರಂಪರೆ ಸಂ.II, ೨೦೦೬, ಪು. ೪೨೨.

೫೭. ಪಾಟೀಲ್ ಎಂ.ಬಿ, ಕರ್ನಾಟಕ ಗ್ಯಾಸೆಟಿಯರ್ ಕೈಪಿಡಿ, ೧೯೯೬, ಪು. ೨೫೫, ೨೫೮.

೫೮. ದಿವಾಕರ ಆರ್.ಆರ್, ಕರ್ನಾಟಕ ಪರಂಪರೆ ಸಂ.II, ೨೦೦೬, ಪು. ೪೨೩.

೫೯. ಹಯವದನರಾವ್ ಸಿ, ಮೈಸೂರು ಗ್ಯಾಸೆಟಿಯರ್ ಸಂ.IV, ೧೯೩೦, ಪು. ೬೪೬, ೬೪೭.

೬೦. ಪಾಟೀಲ್ ಎಂ.ಬಿ, ಕರ್ನಾಟಕ ಗ್ಯಾಸೆಟಿಯರ್ ಕೈಪಿಡಿ, ೧೯೯೬, ಪು. ೨೬೬.

೬೧. ಅರುಣಿ ಎಸ್.ಕೆ, 'ಬೆಂಗಳೂರಿನ ಐತಿಹಾಸಿಕ ಚಿತ್ರ ಸಂಗ್ರಹ', ಇತಿಹಾಸ ದರ್ಪಣ(ತ್ರೈಮಾಸಿಕ), ಗೋವರ್ಧನ್(ಸಂ), ೨೦೧೧, ಪು. ೧೦೫.

೬೨. ಪಾರ್ಥಸಾರಥಿ ಟಿ.ಎ(ಸಂ), ಮಂಡ್ಯ ಜಿಲ್ಲಾ ಗ್ಯಾಸೆಟಿಯರ್, ೨೦೦೩, ಪು. ೭೭೧.

೬೩. ಫ್ರಾನ್ಸಿಸ್ ಬುಕಾನನ್, ಎ ಜರ್ನಿ ಥ್ರೋ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಆ್ಯಂಡ್ ಮಲಬಾರ್, ೧೮೦೭, ಪು. ೪೬೫.

೬೪. ಪಾರ್ಥಸಾರಥಿ ಟಿ.ಎ, ಮಂಡ್ಯ ಜಿಲ್ಲಾ ಗ್ಯಾಸೆಟಿಯರ್, ೨೦೦೩, ಪು. ೭೭೧.

೬೫. ಸೂರ್ಯನಾಥ ಯು ಕಾಮತ್, ಕೊಡಗು ಜಿಲ್ಲಾ ಗ್ಯಾಸೆಟಿಯರ್, ೧೯೯೨, ಪು. ೭೨೯.

೬೬. ಜಿಲಾನಿ ಎಸ್.ಎ(ಸಂ), ದಕ್ಷಿಣ ಕನ್ನಡ ಗ್ಯಾಸೆಟಿಯರ್, ೨೦೦೭, ಪು. ೬೮೬.

೬೭. ನರಸಿಂಹನ್ ಆ.ಲ, ಸಮಕಾಲೀನತೆಗೆ ತೆರೆದುಕೊಂಡ ಬೆಂಗಳೂರಿನ ಕಲಾಶಾಲೆಗಳು, (ಇತಿಹಾಸ ದರ್ಪಣ, ಗೋವರ್ಧನ(ಸಂ), ೨೦೧೧, ಪು. ೭೫.

೬೮. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೦೯, ಪು. ೧೭೬, ೧೭೭.

೬೯. ರಘುನಾಥಭಟ್ ಎಚ್.ಆರ್, 'ಐರೋಪ್ಯ ವಾಸ್ತುಶಿಲ್ಪ', ಅವಲೋಕನ, ಎಚ್ಚೆಸ್ಕೆ(ಸಂ), ೧೯೮೫, ಪು. ೧೨೪.

೭೦. ರಘುನಾಥಭಟ್ ಎಚ್.ಆರ್, 'ಐರೋಪ್ಯ ವಾಸ್ತುಶಿಲ್ಪ', ಅವಲೋಕನ, ಎಚ್ಚೆಸ್ಕೆ(ಸಂ), ೧೯೮೫, ಪು. ೧೨೪, ೧೨೫.

೭೧. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ.II, ೧೮೯೭, ಪು. ೫೧.

೭೨. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಗ್ಯಾಸೆಟಿಯರ್, ೧೮೬೪, ಪು. ೫೩೭, ೫೩೦, ೫೩೧.

೭೩. ಹೆರಾಲ್ಡ್ ಸ್ಟೂವರ್ಟ್, ಸೌತ್ ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್ ಸಂ.II, ೧೮೯೪, ಪು. ೨೫೧.

೭೪. ರಘುನಾಥಭಟ್ ಎಚ್.ಆರ್, 'ಐರೋಪ್ಯ ವಾಸ್ತುಶಿಲ್ಪ', ಅವಲೋಕನ, ಎಚ್ಚೆಸ್ಕೆ(ಸಂ), ೧೯೮೫, ಪು. ೧೨೫.

೭೫. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೦೯, ಪು. ೭೮, ೭೯.

೭೬. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಮ್ ಗ್ಯಾಸೆಟಿಯರ್, ೧೮೬೪, ಪು. ೫೨೮, ೫೩೬.

೭೭. ರಘುನಾಥಭಟ್ ಎಚ್.ಆರ್, ಐರೋಪ್ಯ ವಾಸ್ತುಶಿಲ್ಪ, (ಅವಲೋಕನ, ಎಚ್ಚೆಸ್ಕೆ(ಸಂ), ೧೯೮೫, ಪು. ೧೨೪

೭೮. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೦೯, ಪು. ೯೧, ೯೨

೭೯. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೪೩, ೪೫.

೮೦. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೭೦೪

೮೧. ಜಾನ್‌ಕೆಲ್‌ಸಾಲ್, ಬಳ್ಳಾರಿ ಮ್ಯಾನ್ಯುಯಲ್ ಸಂ.೧, ೧೮೭೨, ಪು. ೨೦೯.

೮೨. ರಘುನಾಥಭಟ್ ಎಚ್.ಆರ್, 'ಐರೋಪ್ಯ ವಾಸ್ತುಶಿಲ್ಪ', ಅವಲೋಕನ, ಎಚ್ಚೆಸ್ಕೆ(ಸಂ), ೧೯೮೫, ಪು. ೧೨೫.

೮೩. ವಿರೂಪಾಕ್ಷಿ ಪೂಜಾರಹಳ್ಳಿ, ವಸಾಹತುಕಾಲೀನ ಬಳ್ಳಾರಿ ಜಿಲ್ಲೆ, ೨೦೦೯, ಪು. ೭೦.

೮೪. ಅದೇ, ಪು. ೭೯, ೮೦.

೮೫. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಗ್ಯಾಸೆಟಿಯರ್, ೧೮೮೪, ಪು. ೬೨೦, ೬೨೧.

೮೬. ಅದೇ, ಪು. ೨೧೬.

೮೭. ಅದೇ, ಪು. ೨೧೬.

೮೮. ಹೆರಾಲ್ಡ್ ಎ ಸ್ಟೂವರ್ಟ್, ಸೌತ್ ಕೆನರಾ ಗ್ಯಾಸೆಟಿಯರ್ ಸಂ.II, ೧೮೯೪, ಪು. ೨೦೧, ೨೭೦.

೮೯. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೪, ಪು. ೭೦೪.

೯೦. ರೈಸ್.ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ.III, ಪು. ೩೯೪, ೪೦೮.

೯೧. ಜೇಮ್ಸ್ ಎಂ. ಕ್ಯಾಂಬೆಲ್, ಕೆನರಾ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ೧೮೮೩, ಪು. ೪೬, ೪೭.

೯೨. ಜಾನ್‌ಕೆಲ್‌ಸಾಲ್, ಬಳ್ಳಾರಿ ಮ್ಯಾನ್ಯುವಲ್ ಸಂ.೧, ೧೮೭೨, ಪು. ೨೦೯.

೯೩. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ.II, ೧೮೯೭, ಪು. ೪೮, ೫೧, ೫೪.

೯೪. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂ.III, ೧೮೭೮, ಪು. ೪೦೮.

೯೫. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಗ್ಯಾಸೆಟಿಯರ್, ೧೮೮೪, ಪು. ೭೦೪.

೯೬. ಜೇಮ್ಸ್ ಎಂ. ಕ್ಯಾಂಬೆಲ್, ಬೆಳಗಾಂ ಗ್ಯಾಸೆಟಿಯರ್, ೧೮೬೪, ಪು. ೫೩೨, ೫೩೩.

೯೭. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ.I, ೧೮೯೭, ಪು. ೭೫೩, ೭೫೪.

೯೮. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ.II, ೧೮೯೭, ಪು. ೪೮.

೯೯. ರೈಸ್ ಬಿ.ಎಲ್, ಮೈಸೂರು ಗ್ಯಾಸೆಟಿಯರ್ ಸಂ.I, ೧೮೯೭, ಪು. ೭೫೩, ೭೫೬

೧೦೦. ದಿವಾಕರ್ ಆರ್.ಆರ್, ಕರ್ನಾಟಕದ ಪರಂಪರೆ ಸಂ.II, ೨೦೦೬, ಪು. ೪೭೮, ೪೭೯

೧೦೧. ರಘುನಾಥಭಟ್ ಎಚ್.ಆರ್, 'ಐರೋಪ್ಯ ವಾಸ್ತುಶಿಲ್ಪ', **ಅವಲೋಕನ**, ಎಚ್ಚೆಸ್ಕೆ(ಸಂ), ೧೯೮೫, ಪು. ೧೨೭, ೧೨೮.

# ಇಂದಿನ ಸ್ವರೂಪದ ಗ್ಯಾಸೆಟಿಯರ್‌ಗಳು

## ಹಿನ್ನೆಲೆ

ಇಂದು ನಾವು ಕಾಣುತ್ತಿರುವ ಕರ್ನಾಟಕ ರಾಜ್ಯವು ಒಂದು ರಾಜಕೀಯ ಆಡಳಿತ ಘಟಕವಾಗಿ ಅಸ್ತಿತ್ವಕ್ಕೆ ಬಂದುದು ೧೯೫೬ರಲ್ಲಿ. ಆಗ ಅದು 'ಮೈಸೂರು' ಎಂಬ ಹೆಸರಿನಲ್ಲಿ ರೂಪು ತಳೆದು ೧೯೭೩ರಲ್ಲಿ 'ಕರ್ನಾಟಕ' ಎಂಬ ಈಗಿನ ಹೆಸರನ್ನು ಪಡೆಯಿತು.[೧]

ಏಕೀಕರಣ ಎಂಬ ಪದಕ್ಕೆ ನಿಘಂಟು 'ಒಂದುಗೂಡಿಸುವುದು' ಎಂಬ ಅರ್ಥವನ್ನು ಕೊಡುತ್ತದೆ. ದೇಶದ ಕೆಲವು ಭಾಗಗಳನ್ನು ಆಡಳಿತ ಮತ್ತು ರಾಜಕೀಯ ಉದ್ದೇಶಗಳಿಗಾಗಿ ಒತ್ತಟ್ಟಿಗೆ ತರುವುದನ್ನು ಇಲ್ಲಿ ಅದು ಸೂಚಿಸುತ್ತದೆ. ದೇಶದ ಇತರ ರಾಜ್ಯಗಳಂತಲ್ಲದೆ ಭಾಷೆಯ ಆಧಾರದ ಮೇಲೆ ೧೯೫೬ರಲ್ಲಿ ಕರ್ನಾಟಕದ ಏಕೀಕರಣವಾಯಿತು. ಭಾರತದ ರಾಜ್ಯಗಳು ಎರಡು ಹಂತಗಳಲ್ಲಿ ರೂಪುಗೊಂಡವು. ಒಂದನೇ ಹಂತ ೧೯೪೮ರಲ್ಲಿ ರಾಜ್ಯಗಳು ಸಂಯೋಜನೆಗೊಂಡ ಸಂದರ್ಭ. ಎರಡನೆಯದು, ಮೇಲೆ ಹೇಳಿದಂತೆ ೧೯೫೬ರಲ್ಲಿ ಭಾಷೆಯ ಆಧಾರದ ಮೇಲೆ ಪುನಾರಚನೆಗೊಂಡ ಸಂದರ್ಭ.

ವಸಾಹತುಶಾಹಿ ಭಾರತದ ಭೂಪ್ರದೇಶದ ಮೂರನೆಯ ಒಂದು ಭಾಗದಷ್ಟು ನೆಲವು ಬ್ರಿಟಿಷರ ನೇರ ಆಡಳಿತ, ಹತೋಟಿಗೆ ಹೊರತಾಗಿ ದೇಶೀಯ ರಾಜ ಮಹಾರಾಜರ ಕೈಗಳಲ್ಲಿದ್ದಿತು ಎಂಬುದು ವ್ಯಕ್ತವಾಗುತ್ತದೆ. ಈ ಸಂಸ್ಥಾನಗಳಲ್ಲಿ ಬ್ರಿಟಿಷರ ಪರೋಕ್ಷ ಅಧಿಕಾರವಿದ್ದರೂ, ರಾಜ್ಯಗಳು (ಸುಮಾರು ೬೦೦ರಷ್ಟು) ಅನೇಕ ವಿಧಗಳಲ್ಲಿ ವ್ಯಾಪಕ ವ್ಯತ್ಯಾಸಗಳನ್ನು ಹೊಂದಿದ್ದವು. ಈ ರಾಜ್ಯಗಳ ಆಡಳಿತ ರಚನೆಯೂ ಬೇರೆ ಬೇರೆಯಾಗಿತ್ತು. ೬೦ ರಾಜ್ಯಗಳಲ್ಲಿ ಮಾತ್ರ ಒಂದು ಬಗೆಯ ಶಾಸಕಾಂಗ ಎನಿಸಿಕೊಳ್ಳುವುದು ಇದ್ದಿತು. ಮಿಕ್ಕಂತೆ ಅವೆಲ್ಲ ಏಕ ವ್ಯಕ್ತಿಯ ಆಳ್ವಿಕೆಗೆ ಒಳಪಟ್ಟಿದ್ದವು. ಹಿಂದಿನ ಮೈಸೂರು ಸಂಸ್ಥಾನವು ಅಂಥದ್ದೊಂದು ಭಾರತದ ರಾಜ್ಯವಾಗಿದ್ದು ಬಹುತೇಕ ಆಡಳಿತಾತ್ಮಕ ಪರಿಗಣನೆಗಳ ಮೇಲೆ ವ್ಯವಸ್ಥೆಗೊಂಡಿದ್ದವು. ೧೯೪೭ಕ್ಕೆ ಮುಂಚೆ ಅವು ಹೊಂದಿದ್ದ ಸ್ಥಾನಮಾನವು ಅದಕ್ಕೆ ಆಧಾರವಾಗಿದ್ದಿತು.[೨] ಇದರಿಂದಾಗಿ ಭಾಷಾವಾರು ಪ್ರಾಂತಗಳ

ಬೇಡಿಕೆಯ ಆರಂಭಿಕ ಚಳುವಳಿ ಹೂಡಿದವರು ೧೮೯೬ರಲ್ಲಿ ಬಿಹಾರಿಗಳು. ನಂತರ ೧೯೦೩ರಲ್ಲಿ ಒರಿಸ್ಸಾದವರು ಅದನ್ನು ಮುಂದುವರಿಸಿದರು. ೧೯೦೮ರಲ್ಲಿ ಲಾರ್ಡ್ ಕರ್ಜನ್‌ನ ಪ್ರಭಾವ ಭಾರತದಾದ್ಯಂತ ಹರಡಿತು. ಹೀಗಾಗಿ ೧೯೧೩ರಲ್ಲಿ ಆಂಧ್ರರು. ೧೯೧೫ರಲ್ಲಿ ಕರ್ನಾಟಕ, ಮಹಾರಾಷ್ಟ್ರಗಳು ತಮ್ಮ ತಮ್ಮ ಪ್ರಾಂತ್ಯಗಳಿಗಾಗಿ ಚಳುವಳಿ ಪ್ರಾರಂಭಿಸಿದರು.[೩] ಕರ್ನಾಟಕದಲ್ಲಿ ೧೯ನೇ ಶತಮಾನದ ಕೊನೆಯ ದಶಕಗಳಲ್ಲಿ ಏಕೀಕರಣದ ಆಸ್ತಿಭಾರ ಹಾಕಿದ್ದರೂ ಅದು ತೀವ್ರಗೊಂಡದ್ದು ೧೯೪೭ರ ತರುವಾಯ.[೪] ಕರ್ನಾಟಕವು ಬಹು ಪ್ರಾಚೀನತೆಯುಳ್ಳ ಪ್ರದೇಶವೆಂದು ೨೦೦೦ ವರ್ಷಗಳ ಹಿಂದೆಯೇ ಸಂಬೋಧಿತವಾಗಿತ್ತು. ಮೊದಲ ಬಾರಿಗೆ ಬಾದಾಮಿ ಚಾಲುಕ್ಯ ಅರಸ ಎರಡನೆಯ ಪುಲಕೇಶಿಯ (೬೧೦-೬೪೨) ಕಾಲದಲ್ಲಿ ಏಕೀಕೃತವಾಯಿತು. ಎರಡನೆಯ ಪುಲಿಕೇಶಿಯು ಸ್ಥಾಪಿಸಿದ ಸಾಮ್ರಾಜ್ಯವು ಕಾವೇರಿಯಿಂದ ನರ್ಮದೆಯವರೆಗೆ ವ್ಯಾಪಿಸಿತ್ತು. ರಾಜವಂಶಗಳು ಬದಲಾದವು(ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರು). ಸಾಮ್ರಾಜ್ಯವು ಮಾತ್ರ ಸುಮಾರು ಐದು ಶತಮಾನಗಳ ಕಾಲ ಸುಭದ್ರವಾಗಿ ಉಳಿಯಿತು. ಭಾರತ ಉಪಖಂಡದ ಕೇಂದ್ರಭಾಗದಲ್ಲಿದ್ದು ಕರ್ನಾಟಕದ ಆಧಾರಿತ ಸಾಮ್ರಾಜ್ಯವು ಒಂದಕ್ಕಿಂತ ಹೆಚ್ಚು ರೀತಿಗಳಲ್ಲಿ ಭಾರತೀಯ ಇತಿಹಾಸ ಮತ್ತು ಸಂಸ್ಕೃತಿಗಳ ಮೇಲೆ ಪ್ರಭಾವ ಬೀರಿತು. ಪುಲಿಕೇಶಿಯ ವಂಶದ ಸೈನ್ಯವನ್ನು 'ಕರ್ನಾಟಕ ಬಲ' ಎಂದು ಕರೆದು 'ಅಜೇಯವಾದದ್ದು' ಎಂದು ವರ್ಣಿಸಲಾಯಿತು. ಅರಬ್ ಸಂದರ್ಶಕ ಸುಲೇಮಾನ್(ಕ್ರಿ.ಶ. ೮೫೧) ಈ ಸಾಮ್ರಾಜ್ಯವನ್ನು ಜಗತ್ತಿನ ನಾಲ್ಕು ಬೃಹತ್ ಸಾಮ್ರಾಜ್ಯಗಳಲ್ಲಿ ಒಂದು ಎಂದು ಹೇಳುತ್ತಾನೆ. ತಾನು 'ಕರ್ಣಾಟ' ಎಂದು ಹೇಳಿಕೊಳ್ಳಲು ವ್ಯಕ್ತಿಯು ಹೆಮ್ಮೆಪಡಬೇಕಾದ ಕಾಲ ಅದಾಗಿತ್ತು. ಬಂಗಾಳದ ಸೇನರು ತಮ್ಮನ್ನು 'ಕರ್ನಾಟಕ ಕ್ಷತ್ರಿಯ'ರೆಂದು ಹೇಳಿಕೊಂಡರು. ಬಿಹಾರದ ಮಿಥಿಲೆಯಲ್ಲಿ ಸ್ಥಾಪಿತವಾದ ಒಂದು ರಾಜವಂಶವು ತಮ್ಮನ್ನು 'ಕರ್ಣಾಟ ವಂಶ'ವೆಂದು ಕರೆದುಕೊಂಡಿತು. ದೂರದ ಕಾಶ್ಮೀರದ ಕವಿ ಬಿಲ್ಹಣನು ಸೂಕ್ತ ಪೋಷಕನನ್ನು ಹುಡುಕಿಕೊಂಡು ಕರ್ನಾಟಕದ ರಾಜಧಾನಿ ಕಲ್ಯಾಣಕ್ಕೆ ಬಂದನು. ಕರ್ನಾಟಕವು ಹಿಂದೂ ದೇವತೆಗಳಿಗೆ ಬೌದ್ಧ ಮತ್ತು ಜೈನರನ್ನು ಅನುಸರಿಸಿದ ಕಲ್ಲಿನಲ್ಲಿ ಕೊರೆದ ಗುಹಾಂತರ ದೇವಾಲಯಗಳನ್ನು ನಿರ್ಮಿಸಿತು. ಈ ಪ್ರಯತ್ನವು ಶಿಖರವನ್ನು ಮುಟ್ಟುವುದು, ಕರ್ನಾಟಕ ಸಂಗೀತದಲ್ಲಿ ಪರ್ಶಿಯನ್ ಪಲುಕುಗಳು ಕಸಿಗೊಂಡು ದರ್ಬಾರ, ಕಲ್ಯಾಣ ಮೊದಲಾದ ಹೊಸರಾಗಗಳನ್ನು ಪುರಂದರ ಮೊದಲಾದ ಸಂತರು ವಿಕಾಸಗೊಳಿಸಿದರು. ಬಿಜಾಪುರದ ಅರಸ ಎರಡನೆಯ ಇಬ್ರಾಹಿಂ ಹಿಂದೂ ಸಂಗೀತವನ್ನೂ ಮುಸ್ಲಿಮರಿಗೆ ಪರಿಚಯ ಮಾಡುವ ಸಲುವಾಗಿ(ಕಿತಾಬ್ ಎ ನವರಸ್) ಎಂಬ ಕೃತಿಯನ್ನು ರಚಿಸಿದನು. ಈ ಪುಸ್ತಕದ ಪ್ರಾರಂಭದಲ್ಲಿ ಗಣಪತಿ ಮತ್ತು ಸರಸ್ವತಿಯವರ ಪ್ರಾರ್ಥನೆಗಳಿವೆ. ಖ್ವಾಜಾ ಬಂದೇ ನವಾಜ್ ಮತ್ತು ಬಾಬಾಬುಡನ್ ತಮ್ಮ ಕಾಲದಲ್ಲಿ ಅಪಾರ ಜನಪ್ರಿಯನಾಗಿದ್ದುದಲ್ಲದೆ, ಈಗಲೂ ಜನರು ಅವರನ್ನು ಭಕ್ತಿಯಿಂದ ಗೌರವಿಸುತ್ತಾರೆ.[೫]

ಈ ರೀತಿ ಐತಿಹಾಸಿಕ ಮಹತ್ವವುಳ್ಳ ಪ್ರದೇಶವನ್ನು ವಸಾಹತುಶಾಹಿಗಳು ತಮ್ಮ ಆಡಳಿತ ಹಿಡಿತದಿಂದಾಗಿ ಕನ್ನಡ ಮಾತನಾಡುವ ಪ್ರದೇಶವನ್ನು ೨೨ ಆಡಳಿತೀಯ ಘಟಕಗಳಾಗಿ ಮಾರ್ಪಡಿಸಿದ್ದರು. ಇವು ಮುಖ್ಯವಾಗಿ ಮುಂಬಯಿ, ಮದರಾಸು, ಕೊಡಗು, ಹೈದರಾಬಾದ್, ಮೊದಲಾದ ರಾಜ್ಯಗಳಲ್ಲಿ ಕನ್ನಡ ಮಾತನಾಡುವ

ಜನರು ಅಲ್ಪಸಂಖ್ಯಾತರಾಗಿದ್ದರು. ಅವರಿರುವ ಪ್ರದೇಶವನ್ನು ಅಲಕ್ಷಿಸಲಾಗಿತ್ತು. ಅವು ಹಿಂದುಳಿದಿದ್ದವು. ಎಲ್ಲ ಕನ್ನಡಿಗರನ್ನು ಭಾಷೆಯ ಆಧಾರದ ಮೇಲೆ ಒಂದು ಘಟಕವಾಗಿ ಕೂಡಿಸಲು ಮಾಡಿದ ಪ್ರಯತ್ನಕ್ಕೆ ೧೯೫೬ರ ಪ್ರಾಂತ ಪುನರ್ವಿಂಗಡಣಾ ತತ್ವ ಇದೇ ಆಗಿತ್ತು.[೬] ಕನ್ನಡ ಮಾತನಾಡುವವರ ಜನರ ಪರಿಸ್ಥಿತಿ ಶೋಚನೀಯವಾಗಿತ್ತು. ಮುಂಬಯಿ ಪ್ರೆಸಿಡೆನ್ಸಿಯಲ್ಲಿ ಶಾಲೆಯ ಶಿಕ್ಷಣವು ಸ್ಥಳೀಯ ಆಡಳಿತ ಭಾಷೆಯು ಕೇವಲ ಮರಾಠಿ ಆಗಿತ್ತು. ಡೆಪ್ಯೂಟಿ ಚನ್ನಬಸಪ್ಪ ಮೊದಲಾದ ಶಿಕ್ಷಣತಜ್ಞರು ಆ ಪ್ರದೇಶದ ಶಾಲೆಗಳಲ್ಲಿ ಕನ್ನಡ ಮಾಧ್ಯಮವನ್ನು ಪ್ರಾರಂಭಿಸಲು ಚಳುವಳಿ ನಡೆಸಬೇಕಾಯಿತು. ವರ್ತಕರು ಲೆಕ್ಕಗಳನ್ನು ಆ ಪ್ರದೇಶಗಳಲ್ಲಿ ಮರಾಠಿ ಬದಲು ಕನ್ನಡದಲ್ಲಿ ಬರೆಯಬೇಕೆಂದು ಅವರು ಒತ್ತಾಯಪಡಿಸಿದರು. ಜತ್ತ, ಅಕ್ಕಲಕೋಟೆ, ಸಾಂಗ್ಲಿ ಮೊದಲಾದ ಪ್ರದೇಶಗಳಲ್ಲಿ ಮರಾಠಿ ರಾಜರ ಆಳ್ವಿಕೆಯ ಫಲವಾಗಿ ೧೯೪೦ರ ವೇಳೆಗೆ ಕನ್ನಡವು ಹೆಚ್ಚು ಕಡಿಮೆ ಮಾಯವೇ ಆಗಿಬಿಟ್ಟಿತು. ಪ್ರಾದೇಶಿಕ ಭಾಷೆಯಾದ ಕನ್ನಡವು ಭಾರಿ ಅಪಾಯವನ್ನು ಎದುರಿಸುತ್ತಿತ್ತು. ಇದನ್ನು ದೃಷ್ಟಿಯಲ್ಲಿಟ್ಟುಕೊಂಡು ಏಕೀಕೃತ ಕರ್ನಾಟಕ ರಾಜ್ಯಕ್ಕಾಗಿ ಬೇಡಿಕೆ(೧೯೫೪)ಯು ಹೀಗೆ ಹೇಳಿತು- "ಕನ್ನಡವು ಮುಂಬಯಿ, ಮದರಾಸು, ಹೈದರಾಬಾದ್ ಮತ್ತು ಆಂಧ್ರರಾಜ್ಯಗಳಲ್ಲಿ ಒಂದು ಅಲ್ಪಸಂಖ್ಯಾತ ಭಾಷೆಯಾಗಿದೆ. ಇದರ ಪರಿಣಾಮವಾಗಿ ಉನ್ನತಾಧಿಕಾರಿಗಳಲ್ಲಿ ಹೆಚ್ಚಿನವರು ಕನ್ನಡೇತರರಾದ್ದರಿಂದ ಕನ್ನಡಿಗರು ಆಡಳಿತ ವಿಚಾರಗಳಲ್ಲಿ ಅನಾನುಕೂಲಕ್ಕೆ ತುತ್ತಾಗಿದ್ದಾರೆ ಎಂದು ಹೇಳಲಾಯಿತು. ಆದ್ದರಿಂದಾಗಿ ಅನೇಕರು ಏಕೀಕರಣದ ಕುರಿತು ಜಾಗೃತಿ ಮೂಡಿಸಲಾರಂಭಿಸಿದರು.[೭]

೧೯೧೫ರಲ್ಲಿ ಏಕೀಕರಣದ ಆಸ್ತಿಭಾರ ಹಾಕಿದ್ದರೂ ಅದು ತೀವ್ರಗೊಂಡದ್ದು, ೧೯೪೭ರ ತರುವಾಯ, ಕರ್ನಾಟಕ ವಿದ್ಯಾವರ್ಧಕ ಸಂಘ, ಕನ್ನಡಸಾಹಿತ್ಯ ಪರಿಷತ್ತು, ಕರ್ನಾಟಕ ಏಕೀಕರಣ ಸಮಿತಿ ಸಂಘಗಳು, ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತು, ಕನ್ನಡ ಚಳುವಳಿಯ ವಿವಿಧ ಸಂಘಸಂಸ್ಥೆಗಳು, ಈ ಚಳುವಳಿಯನ್ನು ಮುನ್ನಡೆಸಿದ್ದವು. ಅಲ್ಲದೆ ಹಲವಾರು ಆಯೋಗಗಳು ರಾಜ್ಯಗಳ ಪುನರ್‌ವಿಂಗಡನೆಯ ಬಗ್ಗೆ ವರದಿಕೊಟ್ಟವು. ಬ್ರಿಟಿಷರು ನೇಮಿಸಿದ ಸಮಿತಿಗಳನ್ನು ಹೊರತುಪಡಿಸಿಯೂ ಕರ್ನಾಟಕ ಏಕೀಕರಣದ ಬಗ್ಗೆ ೧೯೨೧ರಲ್ಲಿ ರಚಿಸಿದ ಎನ್.ಸಿ. ಕೇಳ್ಕರ್ ಸಮಿತಿಯಿಂದ ಮೊದಲ್ಗೊಂಡು ಧರ್ ಸಮಿತಿ, ನೆಹರೂ ಪಟೇಲ್, ಪಟ್ಟಾಭಿ ಸಮಿತಿ, ವಾಂಛೂ ಸಮಿತಿ, ಎಲ್.ಎಸ್. ಸಮಿತಿ, ಫಜಲ್ ಆಲಿ ಸಮಿತಿ ಮತ್ತು ನೆಹರೂ ಪಂತ್-ಮೌಲಾನಾ ಸಮಿತಿ ಹೀಗೆ, ವಿವಿಧ ಹಂತಗಳಲ್ಲಿ ವರದಿ ಸಲ್ಲಿಸಿದ್ದವು.[೮] ಈ ಸಮಿತಿಗಳಲ್ಲದೆ ಪತ್ರಿಕೆಗಳಾದ ಕರ್ಮವೀರ, ಜಯಕರ್ನಾಟಕ ಇತರೇ ಏಕೀಕರಣ ದಾರಿದೀಪಗಳಾದ್ದವು. ಅನೇಕ ಕವಿಗಳು, ವಿದ್ವಾಂಸರು, ಚಿಂತಕರು, ವಿದ್ಯಾರ್ಥಿಗಳು ಹೀಗೆ ಅನೇಕರು ತಮ್ಮ ಕಾಲವನ್ನು, ಹಣವನ್ನು, ಪ್ರಾಣವನ್ನು ತೆತ್ತರು. ಇವರೆಲ್ಲರೂ ಸಹ ಏಕೀಕರಣಕ್ಕಾಗಿ ಶ್ರಮಿಸಿದ್ದರು.

ಇವರೆಲ್ಲರ ಪ್ರಯತ್ನಗಳಿಂದಾಗಿ ೧೯೫೬ ನವೆಂಬರ್ ೧ನೇ ತಾರೀಖು ಏಕೀಕರಣಗೊಂಡ ಮೈಸೂರು ರಾಜ್ಯ ಅಸ್ತಿತ್ವಕ್ಕೆ ಬಂದಿತ್ತು, ಅಸ್ತಿತ್ವಗೊಂಡ ಕರ್ನಾಟಕ ಕನ್ನಡ ರಾಜ್ಯವು ಶಾಸನದನ್ವಯ ಈ ಪ್ರದೇಶಗಳನ್ನೂ ಒಳಗೊಂಡಿತ್ತು.

ಎ. ೧೯೫೬ಕ್ಕೆ ಹಿಂದಿನ ಭಾಗ-೧೦, ಮೈಸೂರು ರಾಜ್ಯ(ಬಳ್ಳಾರಿ ಜಿಲ್ಲೆಯೂ ಸೇರಿ)

ಬಿ. ಬೆಳಗಾವಿ ಜಿಲ್ಲೆ, (ಚಂದಗೋಡ್ ತಾಲೂಕು ಹೊರತು) ಬಿಜಾಪುರ, ಧಾರವಾಡ ಮತ್ತು ಉತ್ತರಕನ್ನಡ ಜಿಲ್ಲೆಗಳು- ಹಿಂದಿನ ಮುಂಬಯಿ ರಾಜ್ಯದಿಂದ,

ಸಿ. ಗುಲ್ಬರ್ಗಾ ಜಿಲ್ಲೆ, ಕೊಡಂಗತ ಮತ್ತು ತಂದೂರಿ ತಾಲೂಕುಗಳ ಹೊರತು ರಾಯಚೂರು ಜಿಲ್ಲೆ (ಅಲಂಪುರ ಮತ್ತು ಗದ್ವಾಲ ತಾಲೂಕುಗಳ ಹೊರತು) ರಾಯಚೂರು ಜಿಲ್ಲೆ, (ಅಹಮದ್‌ನಗರ, ಬೀದರ್ ಜಿಲ್ಲೆ ನೀಲಂಗೆ ಮತ್ತು ಉದನೀರ್ ತಾಲೂಕುಗಳ ಹೊರತು)- ಹಿಂದಿನ ಹೈದಾರಾಬಾದ್ ರಾಜ್ಯದಿಂದ,

ಡಿ. ದಕ್ಷಿಣ ಕನ್ನಡ ಜಿಲ್ಲೆ(ಕಾಸರಗೋಡು ತಾಲೂಕು ಮತ್ತು ಅಮೀಸದಿಲಿ ದ್ವೀಪಗಳ ಹೊರತು) ಮತ್ತು ಕೊಯಮತ್ತೂರು ಜಿಲ್ಲೆಗಳ ಕೊಳ್ಳೇಗಾಲ ತಾಲೂಕು ಹಿಂದಿನ ಮದ್ರಾಸ್ ರಾಜ್ಯದಿಂದ,

ಇ. ಸಿ- ವಿಭಾಗದ ಕೊಡಗು ರಾಜ್ಯ,

೧೯೫೬ರಲ್ಲಿ ರೂಪುಗೊಂಡ ಏಕೀಕೃತ ಕರ್ನಾಟಕ ಅಖಂಡತೆಯನ್ನು ಸಂರಕ್ಷಿಸುವ ಸಲುವಾಗಿ ರಚನೆಗೊಂಡಿತ್ತು.

ರಾಜ್ಯ ಸರ್ಕಾರವು ಅನೇಕ ಕ್ರಮಗಳನ್ನು ಕೈಗೊಂಡಿತು. ಅವುಗಳಲ್ಲಿ ಕೆಲವನ್ನು ಉದಾಹರಿಸಬಹುದು; ನೂತನ ರಾಜ್ಯವು ಅಸ್ತಿತ್ವಕ್ಕೆ ಬಂದಾಗ ಸ್ಥಳೀಯ ಸಂಸ್ಥೆಗಳು(ಮುನಿಸಿಪಲ್ ಕಾರ್ಪೋರೇಷನ್ ಮುನಿಸಿಪಾಲಿಟಿಗಳು, ಪಂಚಾಯಿತಿಗಳು ಇತ್ಯಾದಿ) ಬೇರೆ ಬೇರೆ ಶಾಸನಗಳಿಗೆ ಒಳಪಟ್ಟಿದ್ದವು. ಒಂದು ಏಕರೂಪತೆ ಅವುಗಳಲ್ಲಿ ಕಂಡುಬರದೇ ಏಕೀಕರಣಕ್ಕೆ ಸ್ವಲ್ಪಮಟ್ಟಿಗೆ ವಿರೋಧಿಯೂ ಆಗಿದ್ದಂತೆ ತೋರುತ್ತಿದ್ದುವು. ಆದ್ದರಿಂದ ಕರ್ನಾಟಕ ಸರ್ಕಾರವು ಎರಡು ಮುಖ್ಯ ಕಾಯ್ದೆಗಳನ್ನು ಜಾರಿಗೆ ತಂದಿತು.

೧. ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಆ್ಯಕ್ಟ್ ೧೯೭೬ ಮತ್ತು

೨. ಕರ್ನಾಟಕ ಮುನಿಸಿಪಾಲಿಟಿಸ್ ಆ್ಯಕ್ಟ್ ೧೯೬೪. ಈ ಕಾಯಿದೆಗಳು ಜಾರಿಗೆ ಬಂದಂತೆ ಎಲ್ಲ ಸ್ಥಳೀಯ ಸಂಸ್ಥೆಗಳಿಗೆ ಒಂದು ನಿಜವಾದ ಏಕರೂಪತೆಗೆ ಒಳಪಟ್ಟಿವೆ, ಐಕ್ಯಕರ್ನಾಟಕವನ್ನು ಬಲಪಡಿಸಿವೆ. ಹಾಗೆಯೇ ವಿಶ್ವವಿದ್ಯಾಲಯಗಳಿಗೆ ಸಂಬಂಧಿಸಿದಂತೆಯೂ ಒಂದು ಸಮಾನ ಶಾಸನವು ಜಾರಿಗೆ ಬಂದಿದೆ. ಅದೇ ಕರ್ನಾಟಕ ಯೂನಿವರ್ಸಿಟಿಸ್ ಆ್ಯಕ್ಟ್ ೧೯೭೬. ರಾಜ್ಯದ ಐಕ್ಯತೆಯನ್ನು ಕಾಪಾಡುವ ಸಲುವಾಗಿ ಸಾರ್ವಜನಿಕ ಸಾರಿಗೆಯನ್ನು ಬಳಸಿಕೊಳ್ಳಲಾಗಿದೆ. ಕೇಂದ್ರ ರಸ್ತೆ, ಸಾರಿಗೆ ನಿಗಮದ ಅವಕಾಶಗಳ ಪ್ರಕಾರ ರಾಜ್ಯವು ರಸ್ತೆಸಾರಿಗೆ ನಿಗಮವನ್ನು ಸ್ಥಾಪಿಸಿದೆ. ಹಾಗೆಯೇ ಕರ್ನಾಟಕ ಲೋಕಸೇವಾ ಆಯೋಗದ ರಚನೆಯು ಅದೇ ಉದ್ದೇಶವನ್ನು ಹೊಂದಿದೆ ಎಂದು ತೋರುತ್ತದೆ.[೯]

ಅದೇ ರೀತಿ ಕರ್ನಾಟಕ ರಾಜ್ಯದಲ್ಲಿ ಗ್ಯಾಸೆಟಿಯರ್ ಇಲಾಖೆಯ ಸ್ಥಾಪನೆಯು ಇಂಥದೇ ಮಹತ್ವದ ದಾಖಲೆಗಳನ್ನು ಕಾಪಾಡುವ ಸಲುವಾಗಿ ರಚನೆಗೊಂಡಿದೆ ಎನ್ನಬೇಕು.

ಬ್ರಿಟಿಷರ ಆಡಳಿತದಿಂದ ಭಾರತವು ಮುಕ್ತವಾದ ನಂತರ, ಆಧುನಿಕ ಸ್ವತಂತ್ರ ಭಾರತೀಯ ದೃಷ್ಟಿಕೋನದಿಂದ ಕರ್ನಾಟಕ ಗ್ಯಾಸೆಟಿಯರ್(ದೇಶಕೋಶ) ಸಂಪುಟಗಳು ಅವಶ್ಯಕವಾಗಿ ಬೇಕಾಗಿದ್ದವು. ಸಮಗ್ರ ಕರ್ನಾಟಕದ ಜಾಗೃತಿಯ ಅರಿವು ಮೂಡಿಸುವಲ್ಲಿ ಕರ್ನಾಟಕ ಗ್ಯಾಸೆಟಿಯರ್‌ಗಳಂಥ ಗ್ರಂಥಗಳ ಸೇವೆ ಅಪಾರವಾದುದು ಎಂಬುದರಲ್ಲಿ ಎರಡು ಮಾತಿಲ್ಲ. ಕರ್ನಾಟಕದ ಬಗೆಗೆ ಅಧಿಕೃತವಾದ ವಿವರವಾದ ಮಾಹಿತಿಗಳನ್ನು ಕೊಡುವಲ್ಲಿ ಕೋಶ, ದೇಶಕೋಶಗಳಂಥ ಉತ್ಕೃಷ್ಟ ಗ್ರಂಥಗಳು ತೀರಾ ವಿರಳ. ಹೀಗಾಗಿ ದೇಶಕೋಶಗಳ ಮಹತ್ವವನ್ನು ಮನಗಂಡಿದ್ದರಿಂದಾಗಿ ಕರ್ನಾಟಕ ರಾಜ್ಯದಲ್ಲಿ ಗ್ಯಾಸೆಟಿಯರ್ ಇಲಾಖೆಯು ತಾತ್ಕಾಲಿಕವಾಗಿ ೧೯೫೮ರಲ್ಲಿ ಅಸ್ತಿತ್ವಕ್ಕೆ ಬಂತು. ನೂತನವಾಗಿ ಗ್ಯಾಸೆಟಿಯರ್ ಸಂಪುಟಗಳನ್ನು ಯಶಸ್ವಿಯಾಗಿ ಪ್ರಕಟಿಸುತ್ತಾ ಬಂದಿತು. ನಂತರ ಕರ್ನಾಟಕ ಸರ್ಕಾರವು ಈ ಇಲಾಖೆಯ ಮಹತ್ವವನ್ನು ಮನಗೊಂಡು ೧೯೮೭ರಲ್ಲಿ ಇಲಾಖೆಯನ್ನು ಖಾಯಂ ಆಧಾರದ ಮೇಲೆ ಮುಂದುವರಿಸಲು ನಿರ್ಧರಿಸಿತು. ಸ್ವಾತಂತ್ರ್ಯೋತ್ತರದಲ್ಲಿ ಇಲಾಖೆಯು ಪ್ರಕಟಿಸಿದ ಜಿಲ್ಲಾ ಗ್ಯಾಸೆಟಿಯರ್ ಸಂಪುಟಗಳ ಸ್ವರೂಪ ಹಾಗೂ ಅಧ್ಯಾಯಗಳ ರೂಪುರೇಷೆಗಳು ಕೇಂದ್ರಸರ್ಕಾರದ ಗ್ಯಾಸೆಟಿಯರ್ ಇಲಾಖೆಯ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಡಿಯಲ್ಲಿದ್ದಿತು.[೧೦] ಅಂದರೆ ಪ್ರಾರಂಭದಲ್ಲಿ ಭಾರತದ ಹಾಗೂ ಭಾರತದಲ್ಲಿಯ ಎಲ್ಲ ರಾಜ್ಯಗಳ ದೇಶಕೋಶಗಳೆರಡೂ ಅಷ್ಟೇ ಮಹತ್ವದ್ದಾಗಿವೆ. ಭಾರತದ ಹಾಗೂ ಭಾರತದಲ್ಲಿಯ ಎಲ್ಲ ರಾಜ್ಯಗಳ-ಗ್ಯಾಸೆಟಿಯರು ಸಂಪುಟಗಳ ಮೂಲ ರೂಪುರೇಷೆ ದೆಹಲಿಯಲ್ಲಿರುವ ಭಾರತ ಸರ್ಕಾರದ ಗೆಜೆಟಿಯರ್ ವಿಭಾಗದ್ದು. ರಾಜ್ಯ ಸರ್ಕಾರದ ಗೆಜೆಟಿಯರ್ ವಿಭಾಗಕ್ಕೂ ಕೇಂದ್ರ ಸರ್ಕಾರದ ಗ್ಯಾಸೆಟಿಯರ್ ವಿಭಾಗದ ಮಾರ್ಗದರ್ಶನವಿದೆ.[೧೧] ಹೀಗಾಗಿ ಕೇಂದ್ರ ಸರಕಾರ ಗ್ಯಾಸೆಟಿಯರ್ ಘಟಕವು ನಿರೂಪಿಸಿದ ನಿಯಮನುಸಾರ ರಚಿತಗೊಂಡವು.

ಪ್ರಾರಂಭದಲ್ಲಿ ಗ್ಯಾಸೆಟಿಯರ್ ಇಲಾಖೆಯ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಲ್ಲಿದ್ದು, ನಂತರ ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನಸೇವಾ ಇಲಾಖೆಗೆ ವರ್ಗಾಯಿಸಲ್ಪಟ್ಟಿತು. ತರುವಾಯ ೧೯೯೫ರಲ್ಲಿ ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ ಇಲಾಖೆಗೆ ಪುನಃ ವರ್ಗಾಯಿಸಲ್ಪಟ್ಟು ಈಗ ಅದರ ಅಧೀನದಲ್ಲಿಯೇ ಕಾರ್ಯ ನಿರ್ವಹಿಸುತ್ತಿದೆ. ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಪ್ರತಿಭಾವಂತ ವಿದ್ವಾಂಸರುಗಳನ್ನೊಳಗೊಂಡ ರಾಜ್ಯಮಟ್ಟದ ಸಲಹಾ ಸಮಿತಿಯ ಮಾರ್ಗದರ್ಶನದಲ್ಲಿ ಗ್ಯಾಸೆಟಿಯರ್ ಸಂಪುಟಗಳು ಪ್ರಕಟಗೊಳ್ಳುತ್ತಿವೆ.[೧೨] ಗ್ಯಾಸೆಟಿಯರ್ ಇಲಾಖೆಯು ಸ್ಥಾಪನೆಗೊಂಡ ತಕ್ಷಣ ಸಮಗ್ರವಾಗಿ ಜಿಲ್ಲಾ ಗ್ಯಾಸೆಟಿಯರ್ ಪ್ರಕಟಣೆಯ ಯೋಜನೆಯನ್ನು ಆರಂಭಿಸಿ ಎಲ್ಲಾ ಇಪ್ಪತ್ತು ಜಿಲ್ಲೆಗಳ ಗ್ಯಾಸೆಟಿಯರ್‌ಗಳನ್ನು ಆಂಗ್ಲಭಾಷೆಯಲ್ಲಿ ೧೯೯೦ರಲ್ಲಿ ಪೂರ್ಣಗೊಳಿಸಿತು. ಸಾಮಾನ್ಯವಾಗಿ ಗ್ಯಾಸೆಟಿಯರ್‌ಗಳು ಪ್ರಾದೇಶಿಕ ಭಾಷೆಯಲ್ಲಿ ಮೊದಲು ಬರೆಯಲ್ಪಡುವುದು ಕಡಿಮೆಯೆಂದೇ ಹೇಳಬೇಕು. ಪ್ರಥಮವಾಗಿ ಇಂಗ್ಲಿಷ್‌ನಲ್ಲಿ ಪ್ರಕಟಗೊಂಡು ಅನಂತರ ಅವು ಪ್ರಾದೇಶಿಕ ಭಾಷೆಗಳಲ್ಲಿ ಅನುವಾದವಾಗುತ್ತಿವೆ. ಕರ್ನಾಟಕ ರಾಜ್ಯದಲ್ಲಿಯ ಜಿಲ್ಲೆಗಳ ದೇಶಕೋಶಗಳು ಪ್ರಥಮವಾಗಿ ಇಂಗ್ಲಿಷ್‌ನಲ್ಲಿಯೇ ಪ್ರಸಿದ್ಧವಾಗಿವೆ.[೧೩] ಅವು

ಈಗಲೂ ಸಹ ಕನ್ನಡದಲ್ಲಿ ಲಭ್ಯವಿರುವುದು ಅತ್ಯಲ್ಪ. ಕನ್ನಡ ಪರಿಷ್ಕೃತ ಪ್ರಕ್ರಿಯೆಯು ಈಗಾಗಲೇ ನಡೆಯುತ್ತಿವೆ. ೧೯೫೮ರಲ್ಲಿ ಕರ್ನಾಟಕದಲ್ಲಿ ಗ್ಯಾಸೆಟಿಯರ್ ಇಲಾಖೆಯು ಮೊಟ್ಟಮೊದಲಿಗೆ ಧಾರವಾಡ ಜಿಲ್ಲಾ ಗ್ಯಾಸೆಟಿಯರ್‌ನ್ನು ಮುಂಬಯಿ ಸರಕಾರದಿಂದ ಖರೀದಿಸಿ ಕರ್ನಾಟಕ ಸರಕಾರವು ಅದನ್ನು ೧೯೫೯ರಲ್ಲಿ ಬಿಡುಗಡೆ ಮಾಡಿತು. ಅದಾದ ನಂತರ ಶ್ರೀಸತ್ಯನ್ ಬಿ.ಎನ್. ಸಂಪಾದಕತ್ವದಲ್ಲಿ ಇವರು ಬಿಜಾಪುರ, ಗುಲಬರ್ಗಾ, ಚಿತ್ರದುರ್ಗ, ಮಂಡ್ಯ ಮತ್ತು ಕೋಲಾರ ಐದು ಜಿಲ್ಲಾ ಗ್ಯಾಸೆಟಿಯರ್‌ಗಳನ್ನು ಹೊರತಂದರು. ಮುಂದೆ ಮುಖ್ಯ ಸಂಪಾದಕರಾದ ಕೆ.ಅಭಿಶಂಕರ್ ಅವರು ಈ ಕಛೇರಿಯಲ್ಲಿ ಆಗಲೇ ದುಡಿದವರಾಗಿದ್ದು ಮುಂದೆ ಕೊಡಗು, ಕೋಲಾರ, ತುಮಕೂರು, ರಾಯಚೂರು, ಹಾಸನ, ಬಳ್ಳಾರಿ, ದಕ್ಷಿಣ ಕನ್ನಡ, ಶಿವಮೊಗ್ಗ, ಬೀದರ್, ಚಿಕ್ಕಮಗಳೂರು ಈ ಒಂಬತ್ತು ಸಂಪುಟಗಳನ್ನು ಹೊರತರಲು ಕಾರಣಕರ್ತರಾದರು. ಅನಂತರ ಸೂರ್ಯನಾಥ ಯು ಕಾಮತ್ ಅವರ ಸಂಪಾದಕತ್ವದಲ್ಲಿ ಉತ್ತರ ಕನ್ನಡ, ಬೆಳಗಾವಿ, ಮೈಸೂರು, ಬೆಂಗಳೂರು ಗ್ರಾಮಾಂತರ, ಬೆಂಗಳೂರು ಜಿಲ್ಲೆಗಳ ಗ್ಯಾಸೆಟಿಯರ್‌ಗಳನ್ನೂ ಪ್ರಕಟಿಸಿದರು.[೧೪]

ಮುಖ್ಯವಾಗಿ ೧೯೯೦ರಲ್ಲಿ ಬಿಡುಗಡೆಗೊಂಡ ೨೦ ಜಿಲ್ಲೆಗಳ ಆಂಗ್ಲ ಗ್ಯಾಸೆಟಿಯರ್‌ಗಳನ್ನು ನೋಡುವುದಾದರೆ,

| | | |
|---|---|---|
| ೧. ಟಿ.ಎ. ಪಾರ್ಥಸಾರಥಿ | ಧಾರವಾಡ ಗ್ಯಾಸೆಟಿಯರ್ ಕೇಂದ್ರ ಸರ್ಕಾರದ್ದು ಬಾಂಬೆ ರಾಜ್ಯದ್ದು Vol-XXVI | ೧೯೫೯ |
| ೨. ಶ್ರೀಸತ್ಯನ್ ಬಿ.ಎನ್. | ಕೂರ್ಗ್ ಗ್ಯಾಸೆಟಿಯರ್ | ೧೯೬೫ |
| ೩. ಶ್ರೀಸತ್ಯನ್ ಬಿ.ಎನ್. | ಬಿಜಾಪುರ ಜಿಲ್ಲಾ ಗ್ಯಾಸೆಟಿಯರ್ | ೧೯೬೬ |
| ೪. ಶ್ರೀಸತ್ಯನ್ ಬಿ.ಎನ್. | ಗುಲ್ಬರ್ಗಾ ಜಿಲ್ಲಾ ಗ್ಯಾಸೆಟಿಯರ್ | ೧೯೬೭ |
| ೫. ಶ್ರೀಸತ್ಯನ್ ಬಿ.ಎನ್. | ಚಿತ್ರದುರ್ಗ ಜಿಲ್ಲಾ ಗ್ಯಾಸೆಟಿಯರ್ | ೧೯೬೭ |
| ೬. ಶ್ರೀಸತ್ಯನ್ ಬಿ.ಎನ್. | ಮಂಡ್ಯ ಜಿಲ್ಲಾ ಗ್ಯಾಸೆಟಿಯರ್ | ೧೯೬೮ |
| ೭. ಅಭಿಶಂಕರ್ ಕೆ. | ಕೋಲಾರ ಜಿಲ್ಲಾ ಗ್ಯಾಸೆಟಿಯರ್ | ೧೯೬೮ |
| ೮. ಅಭಿಶಂಕರ್ ಕೆ. | ತುಮಕೂರು ಜಿಲ್ಲಾ ಗ್ಯಾಸೆಟಿಯರ್ | ೧೯೬೯ |
| ೯. ಅಭಿಶಂಕರ್ ಕೆ. | ರಾಯಚೂರು ಜಿಲ್ಲಾ ಗ್ಯಾಸೆಟಿಯರ್ | ೧೯೭೦ |
| ೧೦. ಅಭಿಶಂಕರ್ ಕೆ. | ಹಾಸನ ಜಿಲ್ಲಾ ಗ್ಯಾಸೆಟಿಯರ್ | ೧೯೭೧ |
| ೧೧. ಅಭಿಶಂಕರ್ ಕೆ. | ಬಳ್ಳಾರಿ ಜಿಲ್ಲಾ ಗ್ಯಾಸೆಟಿಯರ್ | ೧೯೭೨ |
| ೧೨. ಅಭಿಶಂಕರ್ ಕೆ. | ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್ | ೧೯೭೪ |
| ೧೩. ಅಭಿಶಂಕರ್ ಕೆ. | ಶಿವಮೊಗ್ಗ ಜಿಲ್ಲಾ ಗ್ಯಾಸೆಟಿಯರ್ | ೧೯೭೫ |
| ೧೪. ಅಭಿಶಂಕರ್ ಕೆ. | ಬೀದರ್ ಜಿಲ್ಲಾ ಗ್ಯಾಸೆಟಿಯರ್ | ೧೯೭೭ |

| | | |
|---|---|---|
| ೧೫. ಅಭಿಶಂಕರ್ ಕೆ. | ಚಿಕ್ಕಮಗಳೂರು ಜಿಲ್ಲಾ ಗ್ಯಾಸೆಟಿಯರ್ | ೧೯೮೧ |
| ೧೬. ಸೂರ್ಯನಾಥ ಯು.ಕಾಮತ್ | ಉತ್ತರಕನ್ನಡ ಜಿಲ್ಲಾ ಗ್ಯಾಸೆಟಿಯರ್ | ೧೯೮೫ |
| ೧೭. ಸೂರ್ಯನಾಥ ಯು.ಕಾಮತ್ | ಬೆಳಗಾವಿ ಜಿಲ್ಲಾ ಗ್ಯಾಸೆಟಿಯರ್ | ೧೯೮೭ |
| ೧೮. ಸೂರ್ಯನಾಥ ಯು.ಕಾಮತ್ | ಮೈಸೂರು ಜಿಲ್ಲಾ ಗ್ಯಾಸೆಟಿಯರ್ | ೧೯೮೮ |
| ೧೯. ಸೂರ್ಯನಾಥ ಯು.ಕಾಮತ್ | ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಸೆಟಿಯರ್ | ೧೯೮೯ |
| ೨೦. ಸೂರ್ಯನಾಥ ಯು.ಕಾಮತ್ | ಬೆಂಗಳೂರು ಜಿಲ್ಲಾ ಗ್ಯಾಸೆಟಿಯರ್ | ೧೯೯೦ |

ಒಟ್ಟಿನಲ್ಲಿ ೧೯೯೦ರ ವೇಳೆಗೆ ಕರ್ನಾಟಕ ಏಕೀಕರಣವಾದಾಗ ೨೦ ಜಿಲ್ಲೆಗಳು ಮಾತ್ರ ಕರ್ನಾಟಕದಲ್ಲಿದ್ದವು. ಈ ಎಲ್ಲಾ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಎಲ್ಲಾ ಜಿಲ್ಲೆಗಳ ಗ್ಯಾಸೆಟಿಯರ್‌ಗಳು ೧೯೯೦ರಲ್ಲಿ ಪೂರ್ಣಗೊಂಡಿದ್ದವು.[೧೫] ಅನಂತರ ಜೆ.ಎಚ್. ಪಟೇಲರು ಮುಖ್ಯಮಂತ್ರಿಯಾಗಿದ್ದಾಗ(೧೯೯೮ರಲ್ಲಿ) ಏಳು ಹೊಸ ಜಿಲ್ಲೆಗಳನ್ನು ವಿಂಗಡಿಸಿ ೨೭ ಜಿಲ್ಲೆಗಳನ್ನಾಗಿ ಮಾಡಿದರು. ದಾವಣಗೆರೆ, ಚಾಮರಾಜನಗರ, ಉಡುಪಿ, ಕೊಪ್ಪಳ, ಬಾಗಲಕೋಟೆ, ಹಾವೇರಿ, ಗದಗ ನೂತನ ಜಿಲ್ಲೆಗಳಾಗಿ ಪರಿವರ್ತನೆಗೊಂಡರೂ, ರಾಜ್ಯದಲಿದ್ದ ೧೭೫ ತಾಲ್ಲೂಕುಗಳು ಎಂದಿನಂತೆ ಇವೆ.[೧೬] ಅಲ್ಲದೆ ಎಚ್.ಡಿ. ಕುಮಾರಸ್ವಾಮಿ ಮುಖ್ಯಮಂತ್ರಿಗಳಾದಾಗ, ಎರಡು ಜಿಲ್ಲೆಗಳನ್ನು ರಚಿಸಿದರು. ಅವು ರಾಮನಗರ, ಚಿಕ್ಕಬಳ್ಳಾಪುರ (೨೦೦೭)ರಲ್ಲಿ ಜಿಲ್ಲೆಯನ್ನಾಗಿ ಮಾಡಿದರು. ನಂತರ ಬಿ.ಎಸ್. ಯಡಿಯೂರಪ್ಪನವರ ಅವಧಿಯಲ್ಲಿ ಯಾದಗಿರಿ ಜಿಲ್ಲೆಯಾಯಿತು.

ಈಗ ಒಟ್ಟು ೩೦ ಜಿಲ್ಲೆಗಳನ್ನು ಕರ್ನಾಟಕ ರಾಜ್ಯವು ಒಳಗೊಂಡಿದೆ. ಆದರೆ ಗ್ಯಾಸೆಟಿಯರ್ ಇಲಾಖೆಯು ಏಕೀಕರಣದ ಸಂದರ್ಭದಲ್ಲಿದ್ದ ೨೦ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಗ್ಯಾಸೆಟಿಯರ್ ರಚನೆಗಳಿಂದ ಕೂಡಿತ್ತು. ಅನಂತರ ಇನ್ನುಳಿದ ಜಿಲ್ಲೆಗಳ ರಚನೆ ಕಂಡುಬರುತ್ತದೆ. ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯು ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯದ ಅಡಿಯಲ್ಲಿ ಬಂದಾಗ ಕನ್ನಡದ ಬಳಕೆಗೆ ಪೂರಕವಾಗುವಂತೆ ಅನೇಕ ಪ್ರಯತ್ನಗಳು ಸ್ವಾತಂತ್ರ್ಯಾನಂತರವಾಗಿವೆ. ಆಡಳಿತಕ್ಕೆ ಅನುಕೂಲವಾಗುವಂತೆ ಕೈಪಿಡಿಗಳು, ನಿಘಂಟುಗಳು, ಕೋಶಗಳು, ಶಬ್ದಕೋಶಗಳು ಪ್ರಕಟವಾಗಿವೆ. ಹೆಚ್ಚು ತಾಂತ್ರಿಕ ಭಾಗಗಳನ್ನು ಹೊರತುಪಡಿಸಿ ಉಳಿದ ಕಡೆಗಳಲ್ಲಿ ಕನ್ನಡ ಬಳಕೆಗೆ ಅಗತ್ಯವಾದ, ಪೂರಕವಾದ ಮತ್ತು ಸಹಾಯಕವಾದ ಸಾಮಗ್ರಿಗಳು ಲಭ್ಯವಾಗಿವೆ. ಆಡಳಿತದಲ್ಲಿ ಉತ್ತಮವಾಗಿ ಕನ್ನಡವನ್ನು ಬಳಸಿದ ಇಲಾಖೆ ಮತ್ತು ಸಿಬ್ಬಂದಿಗೆ ಕೆಲವು ಕಾಲ ಸರ್ಕಾರ ಬಹುಮಾನಗಳನ್ನು ಕೊಡುವ ಸಂಪ್ರದಾಯವನ್ನು ಪಾಲಿಸಿಕೊಂಡು ಬಂದಿತ್ತು. ಆದರೆ ಇಂದು ಆ ಸಂಪ್ರದಾಯವನ್ನು ಕೈಬಿಟ್ಟಿದೆ. ಏಕೆಂದರೆ ಇಂದು ಪ್ರತಿಯೊಬ್ಬರೂ ಕಡ್ಡಾಯವಾಗಿ ಕನ್ನಡವನ್ನು ಬಳಸಲೇ ಬೇಕಾಗಿದೆ. ಇದಕ್ಕೆ ಸಂಬಂಧಿಸಿದಂತೆ ೧೯೯೦ರಲ್ಲಿ ಜ್ಞಾಪನವನ್ನು ಹೊರಡಿಸಿತು.[೧೭] ಈ ಉದ್ದೇಶದಿಂದಾಗಿ ಹಾಗೂ ಏಕೀಕರಣವು ಭಾಷಾ ಆಧಾರದ ಮೇಲೆ ವಿಭಜನೆಗೊಂಡಿದ್ದರಿಂದ ಕನ್ನಡದಲ್ಲಿ ಮೊಟ್ಟ ಮೊದಲಿಗೆ

ಸೂರ್ಯನಾಥ ಯು ಕಾಮತ್ ; ಕೊಡಗು ಜಿಲ್ಲಾ ಗ್ಯಾಸೆಟಿಯರ್ ೧೯೯೦
(ಕನ್ನಡ ಪರಿಷ್ಕೃತ ಆವೃತ್ತಿ)

| | | | |
|---|---|---|---|
| | ; | ಕೊಡಗು ಜಿಲ್ಲಾ ಗ್ಯಾಸೆಟಿಯರ್ | ೧೯೯೩ |
| | | (ಆಂಗ್ಲ ಪರಿಷ್ಕೃತ ಆವೃತ್ತಿ) | |
| ಸೂರ್ಯನಾಥ ಯು. ಕಾಮತ್ | ; | ಧಾರವಾಡ ಜಿಲ್ಲಾ ಗ್ಯಾಸೆಟಿಯರ್ | ೧೯೯೫ |
| | | (ಕನ್ನಡ ಪರಿಷ್ಕೃತ ಆವೃತ್ತಿ) | |
| | ; | ಧಾರವಾಡ ಜಿಲ್ಲಾ ಗ್ಯಾಸೆಟಿಯರ್ | ೨೦೦೩ |
| | | (ಆಂಗ್ಲ ಪರಿಷ್ಕೃತ ಆವೃತ್ತಿ) | |
| ಮುನಿಸ್ವಾಮಿ ಆರ್. | ; | ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್ | ೧೯೯೭ |
| | | (ಕನ್ನಡ ಪರಿಷ್ಕೃತ ಆವೃತ್ತಿ) | |
| ಪಾರ್ಥಸಾರಥಿ ಟಿ.ಎ. | ; | ಮಂಡ್ಯ ಜಿಲ್ಲಾ ಗ್ಯಾಸೆಟಿಯರ್ | ೨೦೦೩ |
| | | (ಕನ್ನಡ ಪರಿಷ್ಕೃತ ಆವೃತ್ತಿ) | |
| ಮುನಿಸ್ವಾವಿ ಆರ್. | ; | ಬಿಜಾಪುರ ಜಿಲ್ಲಾ ಗ್ಯಾಸೆಟಿಯರ್ | ೧೯೯೯ |
| | | (ಕನ್ನಡ ಪರಿಷ್ಕೃತ ಆವೃತ್ತಿ) | |
| ಎಚ್. ಚಿತ್ತರಂಜನ್ | ; | ಕೋಲಾರ ಜಿಲ್ಲಾ ಗ್ಯಾಸೆಟಿಯರ್ | ೨೦೦೫ |
| | | (ಕನ್ನಡ ಪರಿಷ್ಕೃತ ಆವೃತ್ತಿ) | |
| ಎಸ್.ಎ. ಜಿಲಾನಿ | ; | ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್ | ೨೦೦೭ |
| | | (ಕನ್ನಡ ಪರಿಷ್ಕೃತ ಆವೃತ್ತಿ) | |
| ಅನಿಲ್ ಸಿರಾಜ್ ಎಸ್. | ; | ಉಡುಪಿ ಜಿಲ್ಲಾ ಗ್ಯಾಸೆಟಿಯರ್ | ೨೦೧೦ |
| | | (ಕನ್ನಡ ಪರಿಷ್ಕೃತ ಆವೃತ್ತಿ) | |

ಇವುಗಳೆಲ್ಲವೂ ಸಹ ಗ್ಯಾಸೆಟಿಯರ್ ಇಲಾಖೆಯಿಂದ ಪ್ರಕಟಣೆಗೊಂಡಿರುವ ಕನ್ನಡ ಆವೃತ್ತಿಗಳಾಗಿವೆ. ಇನ್ನೂ ಕೆಲವೊಂದು ಮುದ್ರಣದ ಹಂತದಲ್ಲಿವೆ ಎಂದು ಹೇಳಲಾಗಿದೆ.[೧೮]

ಇವುಗಳಲ್ಲದೆ ಕರ್ನಾಟಕ ರಾಜ್ಯಕ್ಕೆ ಸಂಬಂಧಿಸಿದಂತೆ 'ಕರ್ನಾಟಕ ರಾಜ್ಯ ಗ್ಯಾಸೆಟಿಯರ್' ಎಂಬ ಎರಡು ಬೃಹತ್ ಸಂಪುಟಗಳು (ಆಂಗ್ಲ) ಮತ್ತು ಕನ್ನಡದಲ್ಲಿ ಬೃಹತ್ ಮೂರು ಸಂಪುಟಗಳು ೧೯೮೨-೮೪ರ ನಡುವೆ ಪ್ರಥಮ ಬಾರಿಗೆ ಪ್ರಕಟಿಸಿದ ಹೆಗ್ಗಳಿಕೆಗೆ ಇಲಾಖೆ ಪಾತ್ರವಾಯಿತು. ಇದನ್ನು ಡಾ. ಸೂರ್ಯನಾಥ ಯು. ಕಾಮತ್ ಅವರ ಸಂಪಾದಕತ್ವದಲ್ಲಿ ರಚನೆಗೊಂಡಿವೆ.

ಇದೊಂದು ಬೃಹತ್ ಯೋಜನೆಯಾಗಿರುವುದರಿಂದಾಗಿ ಈ ಯೋಜನೆಯಡಿಯಲ್ಲಿ ಆಂಗ್ಲ ಆವೃತ್ತಿಗಳಿಗೆ ಮಾತ್ರ ಕೇಂದ್ರ ಸರ್ಕಾರವು ಆರ್ಥಿಕ ಸಹಾಯ ನೀಡಿತ್ತು. ಈ ಮೂಲಕ ಕರ್ನಾಟಕದ ಸಮಗ್ರ ದರ್ಶನ ಮೂಡಿಸುವ ಒಂದು ಯತ್ನವನ್ನು ರಾಜ್ಯ ಗ್ಯಾಸೆಟಿಯರ್‌ನ ಸಂಪುಟಗಳ ಮೂಲಕ ಕಾಣಬಹುದು.[೧೯]

ಈ ಮಾಲಿಕೆಗಳು ಪೂರ್ಣಗೊಂಡ ಮೇಲೆ ಇಲಾಖೆಯು ೧೯೭೨ರಿಂದ ಜಿಲ್ಲಾ ಗ್ಯಾಸೆಟಿಯರ್‌ಗಳನ್ನು ಪರಿಷ್ಕೃತಗೊಳಿಸಿ ಕೇಂದ್ರ ಮಾದರಿಗೆ ಬದಲಾಗಿ ಅಧ್ಯಾಯಗಳನ್ನು ಪುನರ್‌ವಿಂಗಡಿಸಿ ವಿಶಿಷ್ಟ ಆಯಾಮಗಳನ್ನು ಹೊಂದಿರುವಂತೆ ರೂಪಿಸಿ ಕನ್ನಡ ಭಾಷೆಯಲ್ಲಿ ಪ್ರಕಟಿಸುವ ವಿನೂತನ ಯೋಜನೆಯನ್ನು ಆರಂಭಿಸಿತು. ಈ ಸಂಯೋಜನೆಯಡಿಯಲ್ಲಿ ಇಲಾಖೆಯು ಕನ್ನಡ ಭಾಷೆಯಲ್ಲಿ ಹಲವು ಜಿಲ್ಲಾ ಸಂಪುಟಗಳನ್ನು ಹೊರತಂದಿದೆ.[೨೦]

ಕರ್ನಾಟಕ ಸರ್ಕಾರವು 'ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಮುಖಾಂತರ 'ದಿ ಗೆಜೆಟಿಯರ್ ಆಫ್ ಇಂಡಿಯಾ'ದ ನಾಲ್ಕು ಸಂಪುಟಗಳನ್ನು ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದಿಸಲು ಗ್ಯಾಸೆಟಿಯರ್ ಇಲಾಖೆಗೆ ಅನುಮತಿ ಕೊಟ್ಟಿತು. ಧಾರವಾಡದ ಕರ್ನಾಟಕ ಇತಿಹಾಸ ಸಂಶೋಧನ ಮಂಡಲದ ಕಾರ್ಯಾಲಯದ ವತಿಯಿಂದ ಈ ಯೋಜನೆಯನ್ನು ಹಮ್ಮಿಕೊಳ್ಳಲಾಯಿತು. ೧೯೭೮ರಲ್ಲಿ ಜನವರಿಯಲ್ಲಿ ಪ್ರಾರಂಭವಾದ ಈ ಮಹತ್ಕಾರ್ಯವು ೧೯೮೨ ಮಾರ್ಚ್‌ನಲ್ಲಿ ಸಂಪೂರ್ಣಗೊಂಡಿತ್ತು.

ವರದರಾಜ ಹುಯಿಲಗೋಳ ಅವರು ಇಲಾಖೆಯ ಪರವಾಗಿ ಭಾರತದ ಗ್ಯಾಸೆಟಿಯರ್ ಸಂಪುಟ-೧ (ದೇಶ ಮತ್ತ ಜನರು), ಸಂಪುಟ-೨ (ಇತಿಹಾಸ ಮತ್ತು ಸಂಸ್ಕೃತಿ), ಸಂಪುಟ-೩ (ಅರ್ಥವ್ಯವಸ್ಥೆ ಮತ್ತು ಉದ್ಯಮಗಳು), ಸಂಪುಟ-೪ (ಆಡಳಿತ ಮತ್ತು ಸಮಾಜಕಲ್ಯಾಣ)ಗಳೆಂಬ ನಾಲ್ಕು ವಿಚಾರಗಳ ಕುರಿತು ಪ್ರಕಟಿಸಲಾಯಿತು.[೨೧]

ಇವುಗಳಲ್ಲದೆ ರಾಜ್ಯ ಗ್ಯಾಸೆಟಿಯರ್ ಇಲಾಖೆಯು 'ದಶವಾರ್ಷಿಕ ಪುರವಣಿ' 'ಕರ್ನಾಟಕ ರಾಜ್ಯ ಕೈಪಿಡಿ' ಅಥವಾ A handbook of karnataka ಅಲ್ಲದೆ Karnataka tourism gazetteer ಎಂಬ ಸಂಪುಟದಲ್ಲಿ ಕರ್ನಾಟಕಕ್ಕೆ ಬರುವ ಪ್ರವಾಸಿಗರನ್ನು ಗಮನದಲ್ಲಿಟ್ಟುಕೊಂಡು ಪ್ರಕಟಿಸಿದೆ. ಇದು ಪ್ರವಾಸೋದ್ಯಮದ ಅಡಿಯಲ್ಲಿ ಬರುತ್ತದೆ. ಇದು ನಾಲ್ಕು ಸಂಪುಟಗಳಲ್ಲಿ ಪ್ರಕಟಗೊಂಡಿದೆ.

'ದಶವಾರ್ಷಿಕ ಪುರವಣಿ' ಎಂದರೆ ಇದೊಂದು ಹತ್ತು ವರ್ಷಗಳಿಗೊಮ್ಮೆ ಹೊರತರುವ ಕೃತಿ. ಮುಂದಿನ ಹತ್ತು ವರ್ಷಗಳಲ್ಲಿ ರಾಜ್ಯ ಸರ್ಕಾರದ ವಿವಿಧ ಅಭಿವೃದ್ಧಿ ಇಲಾಖೆಗಳು ತಮ್ಮ ಹಿಂದಿನ ಯೋಜನೆಯ ಪೂರೈಕೆಯೊಂದಿಗೆ ಹಲವಾರು ಹೊಸ ಕಾರ್ಯಕ್ರಮಗಳನ್ನು ಗಣನೀಯವಾಗಿ ಪೂರೈಸಿದ್ದಾರೆ. ರಾಜ್ಯ ಗ್ಯಾಸೆಟಿಯರ್ ತಯಾರಿಕೆಯ ವೇಳೆಯಲ್ಲಿ ಕೆಲವು ಮಹತ್ವದ ಸಂಗತಿಗಳನ್ನು ಗಮನಕ್ಕೆ ಬಾರದೇ ಬಿಟ್ಟು ಹೋಗಿದ್ದರೆ, ಇಂಥ ಇನ್ನೂ ಹಲವಾರು ಉಪಯುಕ್ತ ಅಂಶಗಳನ್ನು ಇದರಲ್ಲಿ ಸೇರಿಸುವುದಾಗಿದೆ.

ಈ ದಶವಾರ್ಷಿಕ ಪುರವಣಿಯು ಸ್ವತಂತ್ರ್ಯ ಗ್ರಂಥವಾಗಿರುವುದಿಲ್ಲ. ಹೊಸದಾದ ಸೇರ್ಪಡೆಗಳು ಅಥವಾ ತಿದ್ದುಪಡಿಗಳು ಈ ಹಿಂದೆ ಪ್ರಕಟವಾಗಿರುವ ಮೂರು ಸಂಪುಟಗಳ ರಾಜ್ಯ ಗ್ಯಾಸೆಟಿಯರ್‌ಗಳ (ಕನ್ನಡ\ಇಂಗ್ಲಿಷ್) ಆವೃತ್ತಿಗೆ ಸಂಬಂಧಿಸಿದವುಗಳಾಗಿವೆ. ದಶವಾರ್ಷಿಕ ಪುರವಣಿಯ ಇಂಗ್ಲಿಷ್ ಆವೃತ್ತಿ ೧೯೮೨-೯೭ರ ಅವಧಿಯದಾಗಿದ್ದು ಕನ್ನಡ ಆವೃತ್ತಿಯು ಅದನ್ನೇ ಅನುಸರಿಸಿದೆ. ಆದರೆ ಕೆಲವು ಇಲಾಖೆಗಳ ಸಚಿವಾಲಯಗಳು ಬದಲಾದರೆ ಮುಖ್ಯವಾಗಿ ಸಾಂಸ್ಕೃತಿಕ ಕ್ಷೇತ್ರದಲ್ಲಿ ಕೆಲವು ವಿದ್ವಾಂಸರು ರಾಷ್ಟ್ರೀಯ

ಮಟ್ಟದ ಪ್ರಶಸ್ತಿಯನ್ನು ಪಡೆದಿದ್ದರೆ- ಈ ಸಂಗತಿಗಳ ಸೇರ್ಪಡೆಯನ್ನು ಇದರಲ್ಲಿ ಅಳವಡಿಸಲಾಗುವುದು. ಉದಾಹರಣೆಗೆ ತಿದ್ದುಪಡಿ ಭಾಗ-೧ ಪುಟ-೮ರಲ್ಲಿ ಸೇರಿಸಿ, ಕರ್ನಾಟಕ ರಾಜ್ಯದ ವಿಸ್ತೀರ್ಣವು ೧,೯೧,೭೯೧, ಚದರ ಕಿ.ಮೀ. (ಮೂಲ ಆವೃತ್ತಿಯಲ್ಲಿ ಅದು, ೧.೯೨.೨೦೪ ಎಂದು ಮುದ್ರಿಸಲಾಗಿದ್ದರೆ) ಈ ರೀತಿ ತಿದ್ದುಪಡಿ ಮಾಡಲಾಗುತ್ತದೆ.[೨೨]

ಮತ್ತೊಂದು ಸಂಪುಟ 'A handbook of karnataka'ದ ಕನ್ನಡ ಅನುವಾದ 'ಕರ್ನಾಟಕ ಕೈಪಿಡಿ' ರೂಪದಲ್ಲಿ ಹೊರಬರುತ್ತಿದೆ. ಈ ಗ್ರಂಥದಲ್ಲಿ ಕರ್ನಾಟಕದ ಪ್ರಸ್ತಾವಿಕತೆ, ಇತಿಹಾಸ, ಜನರು, ಕೃಷಿ, ಭೂಪ್ರದೇಶ, ವಿದ್ಯುಚ್ಛಕ್ತಿ, ಬ್ಯಾಂಕ್, ಸಂಘ-ಸಂಸ್ಥೆಗಳು, ವಾಣಿಜ್ಯ-ವ್ಯಾಪಾರ, ಸಾರಿಗೆ, ಆರ್ಥಿಕ ಯೋಜನೆಗಳು, ಶಿಕ್ಷಣ, ಕ್ರೀಡೆ, ಸಾರ್ವಜನಿಕ ಸೇವೆ, ಸಂಸ್ಕೃತಿ, ಕರ್ನಾಟಕ ಪ್ರವಾಸಿ ಸ್ಥಳಗಳಾವುವು ಎಂಬುದರ ಬಗ್ಗೆ ಹೀಗೆ ಹದಿನಾಲ್ಕು ಅಧ್ಯಾಯಗಳನ್ನು ಇದು ಒಳಗೊಂಡಿದ್ದು, ಇಡೀ ಕರ್ನಾಟಕಕ್ಕೆ ಸಂಬಂಧಿಸಿದಂತೆ ಸಂಕ್ಷಿಪ್ತವಾಗಿ ವಸ್ತುನಿಷ್ಠವಾಗಿ ಮತ್ತು ನಿಖರವಾಗಿ ಪರಿಚಯಿಸುವ ಒಂದು ಉತ್ತಮವಾದ ಪ್ರಯತ್ನವು ಇಲಾಖೆಯು ಮಾಡಿದೆ. ಇವು ಕನ್ನಡ ಮತ್ತು ಆಂಗ್ಲಭಾಷೆಯಲ್ಲಿ ಪ್ರಕಟಗೊಳ್ಳುತ್ತವೆ. ಆದರೆ ಇವುಗಳ ರಚನೆಗೆ ಕಾಲಮಿತಿ ಇಲ್ಲ. ಇವು ಹೆಚ್ಚಾಗಿ ಐದು ವರ್ಷಗಳಿಗೊಮ್ಮೆ ರಚನೆಗೊಳ್ಳುತ್ತವೆ.

ಪ್ರಮುಖವಾಗಿ ರಚನೆಗೊಂಡ ಕೈಪಿಡಿ ಅಥವಾ 'A handbook of karnataka.'

| ಸಂಪಾದಕ | ಇಂಗ್ಲೀಷ್ | ಕನ್ನಡ |
|---|---|---|
| ಎಂ.ಬಿ. ಪಾಟೀಲ್ | ೧೯೯೬ | ೧೯೯೬ |
| ಎಸ್.ಆರ್. ಹೊನ್ನಲಿಂಗಯ್ಯ, | ೨೦೦೧ | - |
| ಎಚ್. ಚಿತ್ತರಂಜನ್ | ೨೦೦೫ | - |
| ಎಸ್.ಎ. ಜಿಲಾನಿ, | ೨೦೧೦ | ೨೦೧೧ |

ಇದು ೨೦೧೧ರಲ್ಲಿ ಅನೀಸ್ ಸಿರಾಜ್ ಸಂಪಾದಕತ್ವದಲ್ಲಿ ಕನ್ನಡದಲ್ಲಿ ಹೊರಬಂದಿದೆ. ಇಂಗ್ಲಿಷ್‌ನಲ್ಲಿ 'A handbook of karnataka' ಹೆಚ್ಚಾಗಿ ಹೊರಬಂದಿದೆ. ಆದರೆ ಕನ್ನಡಲ್ಲಿ ೧೯೯೬ರಲ್ಲಿ ಮತ್ತು ೨೦೧೧ರಲ್ಲಿ ಮಾತ್ರ ಹೊರಬಂದಿದೆ.[೨೩] ಕನ್ನಡದ ಬಗ್ಗೆ ಅಸಡ್ಡೆ ತೋರಿರುವುದನ್ನು ಗಮನಿಸಬಹುದು. ಅಲ್ಲದೆ ಮತ್ತೊಂದು ಮುಖ್ಯವಾದ ಕಾರಣವೆಂದರೆ ಆಂಗ್ಲಭಾಷಾ ಕೈಪಿಡಿಗಳಿಗೆ ಬೇಡಿಕೆ ಹೆಚ್ಚಾಗಿರುವುದ ರಿಂದಾಗಿ ಇಲಾಖೆಯು ಕನ್ನಡಕ್ಕಿಂತ ಇಂಗ್ಲೀಷ್‌ಗೆ ಪ್ರಾಮುಖ್ಯತೆ ನೀಡುತ್ತಿದೆ ಎಂದು ಹೇಳಬಹುದು.

ಸ್ವಾತಂತ್ರ್ಯೋತ್ತರ ಕಾಲದಲ್ಲಿ ರಚನೆಗೊಂಡ ಇಪ್ಪತ್ತು ಜಿಲ್ಲಾ ಗ್ಯಾಸೆಟಿಯರ್‌ಗಳು ಹಾಗೂ ಇನ್ನುಳಿದ ಗ್ಯಾಸೆಟಿಯರ್‌ಗಳು ಒಳಗೊಂಡಿರುವ ಮಾಹಿತಿಯನ್ನು ನೋಡುವುದಾದರೆ ಪ್ರತಿ ಜಿಲ್ಲಾ ಗ್ಯಾಸೆಟಿಯರ್ ಸಂಪುಟದಲ್ಲಿ ವಿವಿಧ ವಿಷಯಗಳನ್ನು ಒಳಗೊಂಡಿರುತ್ತದೆ. ಮುಖ್ಯವಾಗಿ ಮುನ್ನುಡಿ ಸಂಪಾದಕರದ್ದು, ವಿಷಯಾನುಕ್ರಮಣಿಕೆ(ಅಧ್ಯಾಯಗಳು, ಸಲಹಾ ಸಮಿತಿ ಸದಸ್ಯರಪಟ್ಟಿ, ಇಲಾಖೆಯ ಅಧಿಕಾರಿ, ಸಿಬ್ಬಂದಿವರ್ಗ,

ಛಾಯಾಚಿತ್ರ, ನೆರವು ಹಾಗೂ ಕೃತಜ್ಞತೆಯನ್ನು ಒಳಗೊಂಡಿರುತ್ತದೆ. ಸಾಮಾನ್ಯವಾಗಿ ಗ್ಯಾಸೆಟಿಯರ್ ಸಂಪುಟವು ೧೭ ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ಪ್ರಾಸ್ತಾವಿಕ, ಇತಿಹಾಸ, ಜನತೆ, ಕೃಷಿ ಮತ್ತು ನೀರಾವರಿ, ಕೈಗಾರಿಕೆಗಳು, ಬ್ಯಾಂಕಿಂಗ್-ಹಣಕಾಸು-ವ್ಯವಹಾರ, ವ್ಯಾಪಾರ ಮತ್ತು ವಾಣಿಜ್ಯ, ಸಾರಿಗೆ ಮತ್ತು ಸಂಪರ್ಕ, ಆರ್ಥಿಕ ಪ್ರವೃತ್ತಿಗಳು, ಆಡಳಿತ ಮತ್ತು ರಾಜಸ್ವ, ನ್ಯಾಯಾಡಳಿತ, ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಗಳು, ಶಿಕ್ಷಣ ಮತ್ತು ಕ್ರೀಡೆ, ಸಾಹಿತ್ಯ ಮತ್ತು ಸಂಸ್ಕೃತಿ, ವೈದ್ಯಕೀಯ ಮತ್ತು ಸಾರ್ವಜನಿಕ ಆರೋಗ್ಯ ಸೇವೆಗಳು, ಇತರ ಸಮಾಜ ಸೇವಾ ಸೌಲಭ್ಯಗಳು, ಹಾಗೂ ಪ್ರೇಕ್ಷಣೀಯ ಸ್ಥಳಗಳು, ಜಿಲ್ಲೆಯ ಗ್ರಾಮ, ಉಪಗ್ರಾಮ ಹಾಗೂ ನಗರಗಳು ಎಂಬ ವಿಷಯಗಳನ್ನು ಒಳಗೊಂಡಿದ್ದು, ಜಿಲ್ಲೆಯ ಸಂಪೂರ್ಣ ಮಾಹಿತಿಯನ್ನು ಇದು ಒಳಗೊಂಡಿರುತ್ತದೆ. ಇದರಲ್ಲಿ ವರ್ಣ ಹಾಗೂ ಕಪ್ಪು, ಬಿಳುಪು ಚಿತ್ರಗಳು, ಗ್ರಾಮಗಳ ಪಟ್ಟಿ ಆಕರಗ್ರಂಥಗಳ ಪಟ್ಟಿ ಅಕಾರಾದಿ ಶಬ್ದಸೂಚಿ, ನಕ್ಷೆ ಹಾಗೂ ಬಹುವರ್ಣದ ಆಕರ್ಷಕ ರಕ್ಷಾ ಕವಚವನ್ನು ಹೊಂದಿರುವಂತೆ ಆಯಾ ಜಿಲ್ಲೆಯ ವಿಶೇಷತೆಯನ್ನು ರೂಪಿಸಲಾಗಿದೆ.[೨೫]

ಈ ಮೇಲಿನ ವಿಷಯ ಸ್ವರೂಪವು ಈಗಿನ ಎಲ್ಲ ಜಿಲ್ಲಾ ಗ್ಯಾಸೆಟಿಯರ್‌ಗಳ ರಚನೆಯು ಇದೇ ಮಾದರಿಯದಾಗಿರುತ್ತವೆ. ಆದರೆ ಆಯಾ ಜಿಲ್ಲೆಯ ವಿಷಯಗಳು ಬೇರೆ ಬೇರೆ ರೂಪವನ್ನು ಹೊಂದಿರುತ್ತದೆ.

ಜಿಲ್ಲಾ ಗ್ಯಾಸೆಟಿಯರ್‌ಗಳಲ್ಲದೆ, ತಾಲ್ಲೂಕು ಗ್ಯಾಸೆಟಿಯರ್‌ಗಳನ್ನು ಇಲಾಖೆಯು ಹೊರತಂದಿದೆ. ಈ ತಾಲೂಕು ಗ್ಯಾಸೆಟಿಯರ್‌ಗಳ ಪ್ರಯತ್ನವನ್ನು ೧೯೧೪ರಲ್ಲಿಯೇ ಪ್ರಾರಂಭಿಸಲಾಯಿತು. ಅಂದರೆ ಜಿಲ್ಲಾ ಕೈಪಿಡಿ(Destrict handbook)ಗಳನ್ನು ಹಾಗೂ ತಾಲೂಕು ಕೈಪಿಡಿಗಳ(Taluk handbook)ನ್ನು ೧೯೧೫-೧೭ರಲ್ಲಿ ಆಂಗ್ಲಭಾಷೆಯಲ್ಲಿ ಪ್ರಕಟಿಸಲಾಗುತ್ತೆಂಬುದು ಮಹತ್ವದ ಬದಲಾವಣೆ ಎನ್ನಬೇಕು.

೧೯೧೭ರ ಸಂದರ್ಭದಲ್ಲಿ ಚಿತ್ರದುರ್ಗ ಜಿಲ್ಲಾ ಹ್ಯಾಂಡ್‌ಬುಕ್ ಅನ್ನು ರಚಿಸಿ ಪ್ರಕಟಿಸಿದಾಗ ಸರ್ಕಾರದಲ್ಲಿ ಜಿಲ್ಲಾ ಆರ್ಥಿಕ ಅಧೀಕ್ಷಕರಾಗಿದ್ದ ಎನ್. ಸುಬ್ಬರಾವ್ ಹಾಗೂ ಜಿಲ್ಲಾಧಿಕಾರಿಯಾಗಿದ್ದ ಸಿ.ಎಸ್. ಬಾಲಸುಂದರಮ್ ಐಯ್ಯರ್ ಅವರು ತಮ್ಮ ಮುನ್ನುಡಿಯಲ್ಲಿಯೇ 'ಇದೊಂದು ಪ್ರಥಮ ಪ್ರಯತ್ನವಾಗಿದ್ದು ಪೂರ್ಣವಾಗಿ ಸಮಗ್ರವಾಗಿದೆ ಎಂದು ಹೇಳಲಾಗುವುದಿಲ್ಲ ಎಂದು ಅಭಿಪ್ರಾಯಪಟ್ಟಿದ್ದರು. ಹೀಗಾಗಿ ಈ ಜಿಲ್ಲಾ ಹ್ಯಾಂಡ್‌ಬುಕ್‌ಗಳ ಮೂಲಭೂತ ಉದ್ದೇಶವೆಂದರೆ ವಿವಿಧ ಇಲಾಖಾ ಅಧಿಕಾರಿಗಳಿಗೆ ಆಡಳಿತದ ವಿವಿಧ ಅಂಕಿ ಅಂಶಗಳನ್ನು ಸಮಗ್ರವಾಗಿ ಒದಗಿಸುವುದೇ ಆಗಿದೆ ಎಂದು ಅಭಿಪ್ರಾಯಪಡುತ್ತಾರೆ. ಜಿಲ್ಲಾ ಗ್ಯಾಸೆಟಿಯರ್‌ಗಳಲ್ಲಿ ಸರ್ಕಾರದ ವೈವಿಧ್ಯಮಯ ಯೋಜನೆ. ಅಂಕಿ-ಅಂಶ ಹಾಗೂ ಇತರೇ ತಾಲೂಕು ಮಟ್ಟದಲ್ಲಿ ಆಡಳಿತ ಘಟಕದ ಬಗ್ಗೆ ಆಡಳಿತಾತ್ಮಕ ಸಾಧನೆಗಳ ಅಂಕಿ ಅಂಶಗಳ ಬಗ್ಗೆ ವೈವಿಧ್ಯಮಯವಾದ ವಿವರಗಳನ್ನು ಸೂಕ್ಷ್ಮ(micro)ವಾಗಿ ದಾಖಲಿಸುವುದು ಈ ತಾಲೂಕು ಗ್ಯಾಸೆಟಿಯರ್‌ಗಳ ಮೂಲ ಉದ್ದೇಶವಾಗಿರುತ್ತದೆ ಎಂದು ಹೇಳಿದ್ದಾರೆ. ಮುಂದೆ ೧೯೩೯ರಲ್ಲಿ ಎಲ್.ಎಸ್. ಸ್ವಾಮಿಯವರು ಸಂಪಾದಿಸಿ ಪ್ರಕಟಿಸಿದ ತಾಲೂಕು ಕೈಪಿಡಿಗಳು ಕಿರುಗಾತ್ರದ, ಅಂಕಿ-ಅಂಶ ಪ್ರಧಾನ ಹೊತ್ತಿಗೆಗಳಾದರೂ. ಆ ದಿನಗಳಿಗೆ ಅದೊಂದು ಉತ್ತಮ ಪ್ರಯತ್ನವಾಗಿತ್ತು. ಆದರೆ ಅನಂತರದಲ್ಲಿ ಆ ಪ್ರಕಟಣೆಗಳು ನಿಂತುಹೋಗಿದ್ದು, ತಾಲೂಕು

ಕೈಪಿಡಿಗಳನ್ನು ಪುನರುಜ್ಜೀವನಗೊಳಿಸುವ ಉದ್ದೇಶದಿಂದ ಇಲಾಖೆಯು ಪ್ರಾಯೋಗಿಕ ಯೋಜನೆಯಾಗಿ (Pilot Project) ಮೈಸೂರು ಜಿಲ್ಲೆಯ ಏಳು ತಾಲೂಕುಗಳ ಗ್ಯಾಸೆಟಿಯರ್ ಸಂಪುಟಗಳನ್ನು ೨೦೧೧ರಲ್ಲಿ ಪ್ರಕಟಿಸಿದೆ.[೨೫]

ಮೈಸೂರು ಜಿಲ್ಲೆಯು ಒಳಗೊಂಡಂತೆ, ಮೈಸೂರು, ಪಿರಿಯಾಪಟ್ಟಣ, ತಿರುಮಕೂಡಲು ನರಸೀಪುರ, ಹೆಗ್ಗಡದೇವನ ಕೋಟೆ, ಹುಣಸೂರು, ಕೃಷ್ಣರಾಜನಗರ, ನಂಜನಗೂಡು ತಾಲೂಕು ಎಂಬುದಾಗಿ ಈ ಏಳು ತಾಲೂಕುಗಳ ಗ್ಯಾಸೆಟಿಯರ್‌ಗಳನ್ನು ಅನೀಸ್ ಎಸ್. ಸಿರಾಜ್ ಅವರ ಪ್ರಧಾನ ಸಂಪಾದಕತ್ವದಲ್ಲಿ ಹೊರತರಲಾಗಿದ್ದು, ಏಳು ತಾಲೂಕುಗಳ ಲೇಖಕರು ಬೇರೆ ಬೇರೆಯಾಗಿರುವರು. ಈ ತಾಲೂಕು ಗ್ಯಾಸೆಟಿಯರ್‌ಗಳಲ್ಲಿ ಒಟ್ಟು ೧೨ ಅಧ್ಯಾಯಗಳನ್ನು ಒಳಗೊಂಡಿವೆ. ಅವು ೧. ಪ್ರಾಸ್ತಾವಿಕ, ೨. ಇತಿಹಾಸ, ೩. ಜನತೆ, ೪. ಕೃಷಿ ಮತ್ತು ನೀರಾವರಿ, ೫. ಕೈಗಾರಿಕೆ ಮತ್ತು ಆರ್ಥಿಕ ಪ್ರವೃತ್ತಿಗಳು, ೬. ಬ್ಯಾಂಕಿಂಗ್, ಸಹಕಾರ ಮತ್ತು ವಾಣಿಜ್ಯ ೭. ಸಾರಿಗೆ ಮತ್ತು ಸಂಪರ್ಕ, ೮. ಸಾರ್ವತ್ರಿಕ ಆಡಳಿತ, ೯. ಶಿಕ್ಷಣ ಮತ್ತು ಕ್ರೀಡೆ, ೧೦. ಸಾಹಿತ್ಯ ಮತ್ತು ಸಂಸ್ಕೃತಿ ೧೧. ಆರೋಗ್ಯ ಮತ್ತು ವೈದ್ಯಕೀಯ ಸೇವೆಗಳು, ೧೨. ಪ್ರೇಕ್ಷಣೀಯ ಸ್ಥಳಗಳು, ಕಂದಾಯ ಗ್ರಾಮ-ಉಪಗ್ರಾಮ, ಹಾಗೂ ಪಟ್ಟಣಗಳ ಪಟ್ಟಿ, ಆಯ್ದ ಆಕರಗ್ರಂಥಗಳು, ಅನುಬಂಧ-೧ ಅಂಕಿ-ಅಂಶಗಳ ನೋಟ, ಅನುಬಂಧ-೨. ತಾಲೂಕು ನಕಾಶೆಯನ್ನು ಒಳಗೊಂಡಿದೆ. ಇದು ಸುಮಾರು ೩೦೦ ಪುಟಗಳಷ್ಟಿದೆ. ಜಿಲ್ಲಾ ಗ್ಯಾಸೆಟಿಯರ್‌ನಂತೆ ದೊಡ್ಡ ಗಾತ್ರದಲ್ಲಿ ಇಲ್ಲ. ಕಡಿಮೆ ಪ್ರಮಾಣದಲ್ಲಿ ಇದೆ ಎಂದು ಹೇಳಬಹುದು. ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ಸಂಪುಟ ಸಂಪಾದಕರಿರುತ್ತಾರೆ. ಆದರೆ ಇಲ್ಲಿ ಒಬ್ಬ ಲೇಖಕನೇ ತಾಲೂಕು ಗ್ಯಾಸೆಟಿಯರ್ ರಚಿಸಿರುತ್ತಾನೆ.

ಹೀಗೆ ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯು ಈವರೆಗೆ ಪ್ರಕಟಪಡಿಸಿರುವ ಗ್ಯಾಸೆಟಿಯರ್‌ಗಳೆಂದರೆ ೨೦ ಜಿಲ್ಲಾ ಗ್ಯಾಸೆಟಿಯರ್‌ಗಳು ಆಂಗ್ಲಭಾಷೆಯಲ್ಲಿ, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂಪುಟಗಳು (ಆಂಗ್ಲ-ಎರಡು ಸಂಪುಟಗಳು, ಕನ್ನಡ-ಮೂರು ಸಂಪುಟಗಳು) ದಶವಾರ್ಷಿಕ ಪುರವಣಿಗಳು, 'ಕರ್ನಾಟಕ ರಾಜ್ಯ ಕೈಪಿಡಿ ಅಥವಾ ಹ್ಯಾಂಡ್‌ಬುಕ್ ಆಫ್ ಕರ್ನಾಟಕ(ಆಂಗ್ಲ/ಕನ್ನಡ ಸಂಪುಟಗಳು). ಕೆಲವೊಂದು ಜಿಲ್ಲಾ ಆಂಗ್ಲ ಪರಿಷ್ಕೃತ ಆವೃತ್ತಿಗಳು ಪ್ರಕಟಗೊಂಡಿವೆ. ಅಲ್ಲದೆ ಕನ್ನಡದಲ್ಲಿ ಕೊಡಗು, ಧಾರವಾಡ, ಕೋಲಾರ, ಮಂಡ್ಯ, ಗುಲಬರ್ಗಾ, ಬಿಜಾಪುರ, ದಕ್ಷಿಣ ಕನ್ನಡ, ಉಡುಪಿ, ಜಿಲ್ಲೆಗಳ ಪರಿಷ್ಕೃತ ಕನ್ನಡ ಆವೃತ್ತಿಗಳು, ಹಾಗೂ ಮೈಸೂರು ಜಿಲ್ಲೆಯ ಏಳು ತಾಲೂಕುಗಳ ಗ್ಯಾಸೆಟಿಯರ್‌ಗಳು ಪ್ರಕಟಗೊಂಡಿವೆ.

ಇವುಗಳಲ್ಲದೆ ಸ್ವಾತಂತ್ರ್ಯಪೂರ್ವದಲ್ಲಿ ವಸಾಹತುಶಾಹಿಗಳಿಂದ ರಚನೆಗೊಂಡಂತಹ ಕನ್ನಡ ಭೂಪ್ರದೇಶಗಳಿಗೆ ಸಂಬಂಧಿಸಿದ ಕೆಲವೊಂದು ಗ್ಯಾಸೆಟಿಯರ್‌ಗಳು ಶಿಥಿಲಾವಸ್ಥೆಯಲ್ಲಿದ್ದು ಮಾಹಿತಿ ಪ್ರಧಾನವಾದ ಅಪರೂಪದ ಗ್ಯಾಸೆಟಿಯರ್‌ಗಳನ್ನು ಇಲಾಖೆಯು ಪುನರ್‌ಮುದ್ರಣ ಮಾಡಿದೆ. ಅವುಗಳೆಂದರೆ;

೧. ಬೆಂಜಮಿನ್ ಲೂಯಿ ರೈಸ್, ಮೈಸೂರು ಅಂಡ್ ಕೂರ್ಗ್ ಗ್ಯಾಸೆಟಿಯರ್-ಸಂಪುಟ-ಮೂರು ಮೊದಲ ಮುದ್ರಣ ೧೮೯೭.

೨. ಜೇಮ್ಸ್ ಎಂ. ಕ್ಯಾಂಬೆಲ್, ಧಾರವಾಡ ಗ್ಯಾಸೆಟಿಯರ್, ವಿಜಾಪುರ ಗ್ಯಾಸೆಟಿಯರ್, ಬೆಳಗಾವಿ ಗ್ಯಾಸೆಟಿಯರ್, ಕೆನರಾ ಗ್ಯಾಸೆಟಿಯರ್ ಸಂಪುಟಗಳನ್ನು ಹೊರತಂದಿದೆ.

೩. ಜಾನ್ ಸ್ಟರ್ರೋಕ್ ಮತ್ತು ಹೆರಾಲ್ಡ್ ಎ. ಸ್ಟೂವರ್ಟ್ ಅವರ ಸೌತ್‌ಕೆನರಾ ಡಿಸ್ಟಿಕ್ಟ್ ಮ್ಯಾನ್ಯುಯಲ್ ಭಾಗ-೧-೨ ಮತ್ತು ಭಾಗ ೨ನ್ನು ಹೊರತರಲಾಗಿದೆ.

೪. ಜಾನ್ ಕೆಲ್‌ಸಾಲ್ ಅವರ ಬಳ್ಳಾರಿ ಮ್ಯಾನ್ಯುಯಲ್ ಸಂಪುಟ ೧ (೧೮೭೨)

೫. ವಿಲಿಯಂ ಫ್ರಾನ್ಸಿಸ್ ಅವರ ಬಳ್ಳಾರಿ ಮ್ಯಾನ್ಯುಯಲ್ ಸಂಪುಟ ೨ (೧೯೦೪)

ಈ ಗ್ಯಾಸೆಟಿಯರ್‌ಗಳ ಪುನರ್‌ಮುದ್ರಣಗಳನ್ನು ೨೦೦೩-೨೦೦೪ರಲ್ಲಿ ಕ್ರಮವಾಗಿ ಪ್ರಕಟಿಸಲಾಗಿದೆ.[೨೬]

ಗ್ಯಾಸೆಟಿಯರುಗಳಲ್ಲದೆ, ಡೈರಿ ರೂಪದಲ್ಲಿರುವ ಸಂಪುಟವೆಂದರೆ ಫ್ರಾನ್ಸಿಸ್ ಬುಕಾನನ್ ಅವರ 'ಎ ಜರ್ನಿ ಥ್ರೋ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್' ಎಂಬ ಮೂರು ಸಂಪುಟಗಳನ್ನು (ಮೊದಲಮುದ್ರಣ ೧೮೦೭) ಇಲಾಖೆಯು ೨೦೧೧ರಲ್ಲಿ, ಮರು ಮುದ್ರಣಮಾಡಿ ಪ್ರಕಟಿಸಿದೆ.[೨೭]

ರಾಜ್ಯ ಸರ್ಕಾರದ ವಿದ್ಯುನ್ಮಾನ ಆಡಳಿತ ಅಳವಡಿಕೆಯ ಯೋಜನೆಯಂತೆ ಈವರೆಗೆ ಪ್ರಕಟವಾದ ರಾಜ್ಯಕ್ಕೆ ಸಂಬಂಧಿಸಿದ ೯೧ಕ್ಕಿಂತ ಹೆಚ್ಚು ಗ್ಯಾಸೆಟಿಯರ್‌ಗಳನ್ನು 'ಸರ್ಚ್ ಮತ್ತು ಹೈಲೈಟಿಂಗ್' ತಂತ್ರಜ್ಞಾನದ ಸಹಾಯದೊಂದಿಗೆ ಆಡಳಿತಕ್ಕೆ, ಕ್ಷಿಪ್ರವಾಗಿ ಸ್ಪಂದಿಸುವ ದೃಷ್ಟಿಯಿಂದ ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯಲ್ಲಿ ಈವರೆಗೆ ಪ್ರಕಟಿವಾಗುತ್ತಿರುವ ೬೦,೦೦೦ಕ್ಕಿಂತಲೂ ಹೆಚ್ಚಿನ ಪುಟಗಳನ್ನು ಆದುನಿಕ ಕಂಪ್ಯೂಟರ್ ತಂತ್ರಜ್ಞಾನದ ಸಹಾಯದಿಂದ ಸ್ಕ್ಯಾನ್ ಮಾಡಿಸಿದ್ದು, ಗಣಕ ತಂತ್ರಜ್ಞಾನದ ಸಹಾಯದೊಂದಿಗೆ ಒಂಬತ್ತು ಸಿ.ಡಿ.ಗಳ ಒಂದು ಸಮಗ್ರ ಸಂಗ್ರಹವನ್ನು ಸಹ ಇಲಾಖೆಯು ಹೊರತಂದಿದೆ.

ಸುಮಾರು (೧೯೫೮-೨೦೧೧) ೫೩ ವರ್ಷಗಳ ಇತಿಹಾಸವಿರುವ ಗ್ಯಾಸೆಟಿಯರ್ ಇಲಾಖೆಯು ಈವರೆಗೆ ಪ್ರಕಟಿಸಿರುವ ಆಂಗ್ಲಭಾಷೆಯ ಸಂಪುಟಗಳಲ್ಲಿ ಅಡಕವಾಗಿರುವ ವಿಶ್ವಕೋಶ ಮಾದರಿಯ ಮೌಲ್ಯವುಳ್ಳ ಮಾಹಿತಿಗಳನ್ನು ಸಂಶೋಧಕರ ಮತ್ತು ಆಸಕ್ತ ಓದುಗರ ಮನೆಯ ಹಾಗೂ ಕಛೇರಿಯ ಬಾಗಿಲಿಗೆ ಕೊಂಡೊಯ್ಯುವಲ್ಲಿ ಇಲಾಖೆಯು ಆರಂಭಿಸಿರುವ ವೆಬ್‌ಸೈಟ್: www.karnatakagazetteer.com,

ಇ.ಮೈಲ್: kargaz@mail.kar.nic.in

ಈ ಸಹಾಯದಿಂದಲೂ ಸಹ ಗ್ಯಾಸೆಟಿಯರ್‌ಗಳ ಬಗೆಗಿನ ಮಾಹಿತಿಯನ್ನು ತಿಳಿದುಕೊಳ್ಳಬಹುದಾಗಿದೆ.[೨೮]

ಪ್ರಸ್ತುತ ಮೇಲಿನ ಮಾಹಿತಿಯಿಂದ ಇಂದಿನ ಸ್ವರೂಪದ ಗ್ಯಾಸೆಟಿಯರ್‌ಗಳಿಂದ ಒಂದು ರಾಜ್ಯದ, ಜಿಲ್ಲೆಯ ತಾಲೂಕುಗಳ ಸಮಗ್ರವಾದ ಚಿತ್ರಣವನ್ನು ಪಡೆಯಬಹುದಾಗಿದೆ. ಈ ಗ್ಯಾಸೆಟಿಯರ್‌ಗಳಲ್ಲದೆ ಇವುಗಳಿಗೆ ಪೂರಕವಾದಂತಹ ಆಕರಗ್ರಂಥಗಳು ಇಂದು ಲಭ್ಯವಿದೆ. ಅವುಗಳೆಂದರೆ, ತ್ರೈಮಾಸಿಕ ವರದಿಗಳು, ಅರ್ಧವಾರ್ಷಿಕ ವರದಿಗಳು, ವಾರ್ಷಿಕ ವರದಿಗಳು, ಪಂಚವಾರ್ಷಿಕ ವರದಿಗಳು, ದಶವಾರ್ಷಿಕ ವರದಿಗಳು, ಬೆಳ್ಳಿಹಬ್ಬದ ವರದಿಗಳು ಬರುವಂತಹ ಯೋಜನೆಗಳು ಇತರೇ ಜಾನಪದ, ಜಾತ್ರೆಗಳ ಇತರೇ ಕೋಶ

ಮಾದರಿಗಳು, ಇಂಥಹ ವರದಿ, ಯೋಜನೆಗಳು, ಕೋಶಗಳೆಲ್ಲವೂ ಸರ್ಕಾರದ ವತಿಯಿಂದ ಹೊರಬಂದರೆ ಕೆಲವೊಂದು ಖಾಸಗಿ ವಲಯಗಳಿಂದಲೂ, ಸಂಘ-ಸಂಸ್ಥೆಗಳಿಂದಲೂ, ಶಿಕ್ಷಣ ಸಂಸ್ಥೆಗಳಿಂದಲೂ, ಸಹ ಗ್ರಂಥರೂಪದಲ್ಲಿ ಬಿಡುಗಡೆಗೊಳ್ಳುತ್ತಿವೆ. ಇತರೆ ಯಾವುದಾದರೂ ಒಂದು ವಿಷಯಕ್ಕೆ ಸಂಬಂಧಿಸಿದ ಸಮಗ್ರ ಮಾಹಿತಿಗಳು ಸಹ ಇಂದಿನ ಸ್ವರೂಪದ ಗ್ಯಾಸೆಟಿಯರ್ ಮಾದರಿಗಳೆನ್ನಬಹುದು. ಏಕೆಂದರೆ ಗ್ಯಾಸೆಟಿಯರ್ ರಚನೆಯ ಸಂದರ್ಭದಲ್ಲಿಯೂ ಸಹ ಇವುಗಳ ವರದಿಗಳನ್ನು ಆಧರಿಸಿ ಸಹ ರಚನೆಗೊಂಡಿರುತ್ತವೆ.

ಭಾರತ ಸರ್ಕಾರದಿಂದ ಕರ್ನಾಟಕದ ಕುರಿತು "ಡೆವಲಪ್‌ಮೆಂಟ್ ರಿಪೋರ್ಟ್ ಪ್ಲಾನಿಂಗ್ ಕಮೀಷನ್" ಎಂಬ ಯೋಜನೆಯಿದೆ. ಇದೊಂದು ೨೫ ವರ್ಷಗಳ ಯೋಜನೆಯಾಗಿದೆ. ಇದೊಂದು ದೀರ್ಘಕಾಲದ್ದು. ಇದರಲ್ಲಿ ಸರ್ಕಾರವು ಕೈಗೊಂಡಿರುವ ಯೋಜನೆಗಳೇನು? ಬೆಳವಣಿಗೆ ಹಂತ ಹಾಗೂ ಯೋಜನೆಗಳು ಪೂರ್ಣಗೊಳ್ಳಬೇಕಾದ ಹಂತಗಳೇನು? ಕಾರ್ಯಗಳೇನು? ಈಗಾಗಲೇ ಪೂರ್ಣಗೊಂಡಿರುವ ಹಂತಗಳಾವುವು? ಎಂಬುದರ ಬಗ್ಗೆ ಇದರಲ್ಲಿ ಮಾಹಿತಿ ಸಿಗುತ್ತದೆ. ಇದರಲ್ಲಿಯೂ ಸಹ ಜಿಲ್ಲಾ ಗ್ಯಾಸೆಟಿಯರುಗಳು ಒಳಗೊಂಡಿರುವ ಪರಿವಿಡಿಗಳ ವಿಷಯಗಳನ್ನು ಇದು ಒಳಗೊಂಡಿರುತ್ತದೆ. ಕೆಲವೊಂದು ಹೆಚ್ಚಿನ ಅಂಶಗಳನ್ನು ಇದು ಒಳಗೊಂಡಿರುತ್ತದೆ. ಪಂಚವಾರ್ಷಿಕ ಯೋಜನೆಗಳು, ಕೈಗೊಳ್ಳಬೇಕಾದ-ಕೈಗೊಂಡಿರುವ ಹಾಗೂ ಪೂರ್ಣಗೊಂಡಿರುವ ಮಾಹಿತಿಗಳ ಕುರಿತು ವಿವರಿಸಲಾಗುತ್ತದೆ. ವಾರ್ಷಿಕ ವರದಿಗಳು ವಸಾಹತುಶಾಹಿಗಳ ಆಳ್ವಿಕೆಯಿಂದಲೇ ಪ್ರಾರಂಭವಾಗಿದ್ದು ಇಂದಿಗೂ ಸಹ ಅವು ಮುಂದುವರೆದಿವೆ. ಒಂದು ವರ್ಷದಲ್ಲಿ ಕೈಗೊಳ್ಳಬೇಕಾದ ಕೈಗೊಂಡಿರುವ ಒಂದು ವಿಷಯದ ಕುರಿತು ಸಮಗ್ರ ಮಾಹಿತಿ ನೀಡುವುದು. ಇದು ಸರ್ಕಾರದಿಂದ ಹೊರಡಿಸುವ, ಎಲ್ಲಾ ವಿಷಯಗಳಿಗೆ ಸಂಬಂಧಿಸಿದಂತೆ ಸೆನ್ಸಸ್ ವರದಿ ಅಥವಾ ಕೋಷ್ಟಕ ಅಥವಾ ಪಟ್ಟಿಯನ್ನು ಒಂದು ವರ್ಷದ ಕಾರ್ಯಕ್ರಮಗಳ ಬಗ್ಗೆ ತಿಳಿಯುವುದಾಗಿದೆ. ಇವುಗಳನ್ನು ಭಾರತ ಸರ್ಕಾರವು ಹಾಗೂ ಕರ್ನಾಟಕ ಸರ್ಕಾರದ ಜಂಟಿ ಆಯೋಗದಲ್ಲಿ ರಚನೆ ಮಾಡಲಾಗುತ್ತದೆ.

ಮುಖ್ಯವಾಗಿ ಸೆನ್ಸಸ್ ಆಫ್ ಇಂಡಿಯಾ- ಕರ್ನಾಟಕ ಸೀರೀಸ್ ೯ ಭಾಗ, VIII A and Biii. ಹೌಸ್ ಹೋಲ್ಡ್, ಟೇಬಲ್ಸ್ ಆನ್ ಷೆಡ್ಯೂಲ್ಡ್ ಕ್ಯಾಸ್ಟ್ ಆ್ಯಂಡ್ ಷೆಡ್ಯೂಲ್ಡ್ ಟ್ರೈಬ್ಸ್-೧೯೮೧ರ ವರದಿಯಂತೆ- ಇದರಲ್ಲಿ ಕರ್ನಾಟಕ ರಾಜ್ಯದಲ್ಲಿರುವ ಎಲ್ಲಾ ಜಿಲ್ಲೆಗಳ ಪರಿಶಿಷ್ಟಜಾತಿ ಹಾಗೂ ಪರಿಶಿಷ್ಟ ಪಂಗಡಗಳ ವಿವರಣೆ ಇವುಗಳಲ್ಲಿ ಬರುವಂತಹ ವಿವಿಧ ಜಾತಿಗಳು, ಅದರಲ್ಲಿ ಗಂಡು-ಹೆಣ್ಣಿನ ಸಂಖ್ಯೆಗಳು ಅವರ ವೃತ್ತಿಗಳು ಇತರೇ ಸಮಗ್ರ ಮಾಹಿತಿಗಳನ್ನು ಒಳಗೊಂಡಿರುತ್ತದೆ.

ಸೆನ್ಸಸ್ ಆಫ್ ಇಂಡಿಯಾ- ೧೯೯೧ ಎಕಾನಮಿಕ್ ಟೇಬಲ್ ಸಂ-೧ ಇದರಲ್ಲಿ ಕರ್ನಾಟಕ ರಾಜ್ಯದಲ್ಲಿ ಆರ್ಥಿಕತೆಗೆ ಸಂಬಂಧಿಸಿದಂತೆ ಕೈಗೊಂಡಿರುವ ವೃತ್ತಿಗಳಾವುವು? ಕೃಷಿಯಲ್ಲಿ ಕಾರ್ಖಾನೆಯಲ್ಲಿ ಕೈಕಸುಬು ಇತರೇ ಬೇರೆ ಬೇರೆ ವೃತ್ತಿ ಕೈಗೊಂಡವರ ಆದಾಯ ಪ್ರಮಾಣ, ಉದ್ಯೋಗದಲ್ಲಿರುವವರ ಪ್ರಮಾಣ, ವಿದ್ಯಾರ್ಥಿಗಳ ಸಂಖ್ಯೆ, ನಿರುದ್ಯೋಗ ಇರುವವರ ಸಂಖ್ಯೆ, ಭಿಕ್ಷುಕರ ಸಂಖ್ಯೆ, ಸ್ತ್ರೀ ಮತ್ತು ಪುರುಷರ ಪ್ರಮಾಣ ಅವರ ಆರ್ಥಿಕತೆ ಇತ್ಯಾದಿ ಅಂಶಗಳ ಜೊತೆಗೆ ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲೆಗಳ ಆರ್ಥಿಕತೆಯ ಅಂಶದ ಬಗ್ಗೆ ಸಮಗ್ರ ಮಾಹಿತಿ ನೀಡಲಾಗಿದೆ.

ಸೆನ್ಸಸ್ ಆಫ್ ಇಂಡಿಯಾ-೧೯೯೧ ಸೀರೀಸ್-II ಕರ್ನಾಟಕ ಡಾಟ್ and VA and VBCD ಸೀರೀಸ್, Migration ಟೇಬಲ್ - vo-1. ಇದೊಂದು ವಲಸೆ ಹೋಗುವವರ ಮಾಹಿತಿಯ ಪಟ್ಟಿಯಾಗಿದೆ. ಅಂದರೆ ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲೆ, ತಾಲ್ಲೂಕು, ಗ್ರಾಮಗಳಿಂದ ಬೇರೆ ಬೇರೆ ಕಡೆ ವಲಸೆ ಹೋಗುವವರ ಕುರಿತು ವಿವರಣೆ ಸಿಗುತ್ತದೆ. ಮುಖ್ಯವಾಗಿ ಉದ್ಯೋಗಗಳಿಗಾಗಿ, ವಿದ್ಯಾಭ್ಯಾಸಕ್ಕಾಗಿ, ಕೆಲವೊಂದು ನೈಸರ್ಗಿಕ ವಿಕೋಪದಿಂದ, ಕುಟುಂಬದ ವಲಸೆ, ಇನ್ನಿತರ ಕಾರಣಗಳಿಂದಾಗಿ ವಲಸೆ ಹೋದವರ ವಿವರಣೆ ಸಿಗುತ್ತದೆ. ಇದರಲ್ಲಿ ಗಂಡು ಹೆಣ್ಣುಗಳ ಸಂಖ್ಯೆ, ನಗರ, ಗ್ರಾಮಗಳ ಪಟ್ಟಿ, ಬೇರೆ ದೇಶದಿಂದ ಇಲ್ಲಿಗೆ ಬಂದವರ ವಿವರಣೆಯನ್ನು ಇದು ಒಳಗೊಂಡಿರುತ್ತದೆ.

ಸೆನ್ಸಸ್ ಆಫ್ ಇಂಡಿಯಾ 'ಕರ್ನಾಟಕ; ೧೯೯೧ ಟೇಬಲ್ ಆನ್ ಹೌಸಾಸ್, ಹೌಸ್ ಓಲ್ಡ್ ಅಂಡ್ amenties ಇದರಲ್ಲಿ ಕರ್ನಾಟಕ ರಾಜ್ಯದಲ್ಲಿರುವ ಒಟ್ಟು ಮನೆಗಳ ಸಂಖ್ಯೆಗಳು, ಹೋಟೆಲ್, ಕಛೇರಿ-ಇನ್ನಿತರೇ ಕಟ್ಟಡಗಳ ಮಾಹಿತಿ ಸಿಗುತ್ತದೆ. ಇದರಲ್ಲಿ ಮನೆಗಳಲ್ಲಿ ಹೆಂಚಿನ ಮನೆ-ಸಿಮೆಂಟ್ ಕಟ್ಟಡಗಳ ಮನೆಗಳು, ಹುಲ್ಲಿನ ಹೊದಿಕೆ ಮನೆಗಳು, ಬಾಡಿಗೆ ಮನೆ, ಸ್ವಂತಮನೆಗಳ ವಿವರಗಳು, ನಗರ-ಗ್ರಾಮದ ಮನೆಗಳ ಸಂಖ್ಯೆ ಮನೆಯಲ್ಲಿರುವವರ ಸಂಖ್ಯೆ, ಮನೆಗಳಲ್ಲಿ ಮೂಲಭೂತ ಸೌಕರ್ಯಗಳ ಸಂಪೂರ್ಣ ವಿವರಗಳು ಇದರಲ್ಲಿ ಸಿಗುತ್ತವೆ.

ಇವುಗಳಲ್ಲದೆ ಜನಸಂಖ್ಯೆ ಕುರಿತಂತೆ ಹಾಗೂ ಇತರೇ ಎಲ್ಲಾ ವಿಷಯಗಳ ಕುರಿತು ಪ್ರತಿವರ್ಷದ ವರದಿಗಳಿಂದಲೂ ಸಮಗ್ರ ಸ್ಪಷ್ಟ ಮಾಹಿತಿಯನ್ನು ಇದು ಒಳಗೊಂಡಿರುತ್ತದೆ. ಆದರೆ ಇವು ಒಂದೊಂದು ವಿಷಯಕ್ಕೆ ಮಾತ್ರ ಸೀಮಿತಗೊಂಡು ಸ್ಪಷ್ಟವಾದ ಮಾಹಿತಿ ನೀಡುತ್ತವೆ. ಇವು ಸರ್ಕಾರದ ವರದಿಗಳಾದವು, ಆದರೆ ಇವುಗಳಲ್ಲದೆ ಶಿಕ್ಷಣಕ್ಷೇತ್ರಕ್ಕೆ ಸಂಬಂಧಿಸಿದಂತೆ ವಾರ್ಷಿಕ ವರದಿಗಳನ್ನು ಎಲ್ಲಾ ವಿಶ್ವವಿದ್ಯಾಲಯಗಳು ಹೊರಡಿಸುತ್ತವೆ. ಉದಾಹರಣೆಗೆ ಮೈಸೂರು ವಿಶ್ವವಿದ್ಯಾನಿಲಯವು, ೯೨ನೇ ವಾರ್ಷಿಕ ವರದಿಯನ್ನು(೨೦೦೮-೨೦೦೯)ರಲ್ಲಿ ಬಿಡುಗಡೆಗೊಳಿಸಿತ್ತು. ಬೆಳಗಾವಿ ವಿಶ್ವೇಶ್ವರಯ್ಯ ವಿಶ್ವವಿದ್ಯಾಲಯವು ೧೨ನೇ ವಾರ್ಷಿಕ ವರದಿಯನ್ನು ೨೦೦೯-೨೦೧೦ರ ಸಾಲಿನಲ್ಲಿ ತಂದಿತ್ತು, ಇವುಗಳಿಂದ ಅವು ಸ್ಥಾಪನೆಗೊಂಡ ವರ್ಷ, ಅಧಿಕಾರಿಗಳ ವರ್ಗ, ಶಿಕ್ಷಣ ಮಂಡಳಿ, ಆಡಳಿತಾಂಗ, ಅಧ್ಯಯನಾಂಗ, ಹಣಕಾಸು ಮಂಡಳಿ, ವಿದ್ಯಾರ್ಥಿಗಳ ಸಂಖ್ಯೆ, ವಿಭಾಗಗಳ ಸಂಖ್ಯೆ, ಕೈಗೊಂಡಿರುವ ಯೋಜನೆಗಳು ಇತರೇ ಸಂಸ್ಥೆಯ ಎಲ್ಲಾ ಮಾಹಿತಿಯನ್ನು ಇದು ಒಳಗೊಂಡಿದ್ದು ಶಿಕ್ಷಣಕ್ಷೇತ್ರದ ಬಗ್ಗೆ ಸ್ಪಷ್ಟ ಮಾಹಿತಿಯನ್ನು ತಿಳಿಸುತ್ತವೆ.

ರಾಯಚೂರು ಜಿಲ್ಲಾ ಸಹಕಾರಿ ಮಧ್ಯವರ್ತಿ ಬ್ಯಾಂಕ್ ನಿಗಮವು ಸಹ ೧೯೬೬-೬೭ನೇ ಸಾಲಿನಲ್ಲಿ ೪೮ನೇ ವಾರ್ಷಿಕ ವರದಿಯನ್ನು ನೀಡುತ್ತದೆ. ಇವುಗಳಲ್ಲದೆ ಗೋಲ್ಡನ್ ಜೂಬ್ಲಿ(Souvenier 1979 (ಇದು ೧೯೨೮ರಿಂದ ೧೯೭೯) ಒಮ್ಮೆ ಇಪ್ಪತ್ತೈದು ವರ್ಷದ ಯೋಜನೆ, ಮಾಹಿತಿ ವಾಣಿಜ್ಯ ವ್ಯಾಪಾರದಿಂದ ಎಂಬುದು ಕಷ್ಟನಷ್ಟದ ವರದಿಯನ್ನು ಇದು ತಿಳಿಸುತ್ತದೆ.

ಇವುಗಳಲ್ಲದೆ ಕೆಲವೊಂದು ಕೋಶಗಳನ್ನು ಸಹ ಗ್ಯಾಸೆಟಿಯರ್‌ಗೆ ಹೋಲಿಸಬಹುದಾಗಿದೆ. ಅವುಗಳಲ್ಲಿ ಕರ್ನಾಟಕ ಜನಪದ ಕಲೆಗಳ ಕೋಶ ಒಂದು ಹಿ.ಚಿ. ಬೋರಲಿಂಗಯ್ಯನವರ ಸಂಪಾದಕತ್ವದಲ್ಲಿರುವ ಈ

ಕೋಶದಲ್ಲಿ ನಾಡಿನಲ್ಲಿರುವ ವಿವಿಧ ಸಮುದಾಯಗಳ ಕಲೆಗಳ ಬಗ್ಗೆ, ಆರಾಧನೆ, ಆಚರಣೆ, ನಂಬಿಕೆಗಳು, ಕಥೆ, ಹಾಡು, ವೇಷಭೂಷಣ, ಪ್ರದರ್ಶನ, ಸ್ವರೂಪ ಮುಖ್ಯವಾಗಿ- ಮಾರಿಯ ಆರಾಧನೆ, ಭೂತಾರಾಧನೆ, ನಾಗಾರಾಧನೆ, ಸಮೃದ್ಧ ಹಾಗೂ ಫಲವಂತಿಕೆ ಆಚರಣೆಗಳು, ಕಲೆಗಳು ವಿಶೇಷ ಜನವರ್ಗಗಳ ಮತ್ತು ಬುಡಕಟ್ಟುಗಳ ಕೆಲವು ಕಲೆಗಳು ಸಂಕೀರ್ಣ ಕಲೆಗಳು, ಜಾನಪದ ರಂಗಭೂಮಿ ಕಲೆಗಳು ಹೀಗೆ ವಿಶೇಷವಾದ ಮಾಹಿತಿಯನ್ನು ಇಡೀ ಕನ್ನಡ ನಾಡಿಗೆ ಸಂಬಂಧಿಸಿದಂತೆ ಸಿಗುತ್ತದೆ. ಡಾ. ಕರೀಗೌಡ ಬೀಚನಹಳ್ಳಿ ಸಂಪಾದಕತ್ವ ದಲ್ಲಿರುವ, ಕರಕುಶಲ ಕಲೆಗಳು ಸಂ-೨ ಎಂಬ ಈ ಕೋಶದಲ್ಲಿ ನಾಡಿನಲ್ಲಿರುವ ವಿವಿಧ ಕರಕುಶಲ ಕಲೆಗಳ ಪರಂಪರೆ ಮತ್ತು ಇತಿಹಾಸ, ಅಲಂಕರಣ ಸಂಬಂಧಿಸಿದ ಕುಶಲಕಲೆಗಳು, ಆರಾಧನಾ ಸಂಬಂಧಿ ಕರಕುಶಲ ಕಲೆಗಳೂ ಅಲಂಕರಣ ಸಂಬಂಧಿಸಿದ ಕರಕುಶಲ ಕಲೆಗಳು. ಗೃಹೋಪಯೋಗಿ, ಮನರಂಜನಾ ಸಂಬಂಧಿಸಿದ, ವ್ಯವಸಾಯ ಸಂಬಂಧಿ ಕರಕುಶಲ ಕಲೆಗಳು ವೇಷಭೂಷಣಗೋಪಾದಿ ಇತ್ಯಾದಿ ಕಲೆಗಳನ್ನು ಇದು ಒಳಗೊಂಡಿರುತ್ತದೆ.

ಇವುಗಳೆಲ್ಲವೂ ಗ್ಯಾಸೆಟಿಯರ್‌ಗಳಿಗೆ ಹೋಲಿಸಬಹುದಾದ ಪ್ರಸ್ತುತ ಗ್ಯಾಸೆಟಿಯರ್ ರೂಪದ ಗ್ರಂಥಗಳಾಗಿವೆ. ಕೋಶಗಳು, ವರದಿಗಳು ಇವುಗಳೆಲ್ಲವೂ ಸಹ ಕೇವಲ ಒಂದೊಂದು ವಿಷಯದಲ್ಲಿ ಮಾತ್ರ ತಮ್ಮ ಅಧ್ಯಯನ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡು ಸಮಗ್ರ ಮಾಹಿತಿಯನ್ನು ಆಯಾ ವಿಷಯಗಳ ಕುರಿತು ಮಾಹಿತಿ ನೀಡುತ್ತವೆ. ಆದರೆ ಗ್ಯಾಸೆಟಿಯರ್‌ಗಳು ಒಂದು ಪ್ರದೇಶದ ಎಲ್ಲಾ ವಿಷಯಗಳ ಸಮಗ್ರ ಮಾಹಿತಿ ನೀಡುವುದರಿಂದಾಗಿ ಇವು ತಮ್ಮದೇ ಆದ ಮಹತ್ವ ಪಡೆದಿವೆ. ಅಲ್ಲದೆ ಗ್ಯಾಸೆಟಿಯರ್ ಮಾಹಿತಿಯೇ ಬೇರೆ ರೂಪದ್ದಾಗಿರುವುದನ್ನು ಗಮನಿಸಬಹುದು. ಏಕೆಂದರೆ ಗ್ಯಾಸೆಟಿಯರ್ ರಚನೆ ಮೂಲಕ ಮಾಹಿತಿ ಸಂಗ್ರಹಿಸುವುದು ಕಷ್ಟಸಾಧ್ಯ ಹಾಗೂ ಕೆಲವೊಂದು ಮಿತಿಗಳಿಗೂ ಒಳಪಟ್ಟಿರುತ್ತದೆ. ಉದಾಹರಣೆಗೆ ಗ್ಯಾಸೆಟಿಯರ್ ಪುಟಗಳು ಈಗಾಗಲೇ ಅವುಗಳ ಗಾತ್ರವು ವಿಸ್ತಾರವಾದದ್ದು ಹಾಗೂ ಕಾಲಮಿತಿ ಒಂದು ಬಾರಿ ರಚನೆಗೊಂಡರೆ ಪುನಃ ರಚನೆಗೊಳ್ಳಲೂ ದೀರ್ಘಾವಧಿ ಬೇಕಾಗುತ್ತದೆ. ಆ ಮೂಲಕವಾಗಿ ದಶವಾರ್ಷಿಕ ಪುರವಣಿಯ ಆ ನ್ಯೂನತೆಯನ್ನು ನೀಗಿಸುತ್ತದೆ. ಇದು ಹತ್ತು ವರ್ಷಗಳಿಗೊಮ್ಮೆ ರಚನೆಗೊಂಡು ಕೆಲವೊಂದು ಮರೆತುಹೋದ, ಬಿಟ್ಟುಹೋದ, ಗಮನಕ್ಕೆ ಬಾರದ ವಿಚಾರವನ್ನು ಇದರಲ್ಲಿ ಪುಟ ಸಂಖ್ಯೆ ಹಾಕಿ ಮುಂದಿನ ವಿಚಾರಕ್ಕೆ, ಸೇರಿಸಬಹುದಾದ ವಿಷಯವನ್ನು ತಿಳಿಸುತ್ತದೆ. ಇದರಿಂದಾಗಿ ಓದುಗನು ಸುಲಭವಾಗಿ ಗ್ರಹಿಸ ಬಹುದಾಗಿದೆ. ಜೊತೆಗೆ ಇಂದಿನ ವಿಷಯ ಕ್ಷೇತ್ರವು ವಿಸ್ತಾರವಾದದ್ದು. ಯಾವುದೇ ಒಂದು ವಿಚಾರದ ಮೇಲಿನ ಹಿಡಿತವು ಸಾಕಷ್ಟು ಕಷ್ಟ ಸಾಧ್ಯ. ಹೀಗಾಗಿ ಕರ್ನಾಟಕ ಸರ್ಕಾರದ ಆಡಳಿತ ಸ್ವರೂಪದ ಪುಸ್ತಕಗಳು, ಬೇರೆ ಬೇರೆ ವಾರ್ಷಿಕ ವರದಿಗಳು, ಕೋಶಗಳು, ಇತರೇ ಒಂದೇ ವಿಷಯದ ಮೇಲೆ ಸಮಗ್ರವಾದ ಮಾಹಿತಿ ಸಿಗುತ್ತದೆ ಹೊರತು, ಎಲ್ಲಾ ವಿಷಯಗಳನ್ನು ಇವು ಒಳಗೊಂಡಿರುವುದಿಲ್ಲ. ಇವು ಆಯಾಕ್ಷೇತ್ರಗಳ ಕುರಿತು ಸಮಗ್ರ, ಸ್ಪಷ್ಟವಾದ, ನಿಖರವಾದ ಮಾಹಿತಿಯನ್ನು ನೀಡುತ್ತವೆ. ಆದ್ದರಿಂದ ಒಟ್ಟು ಚಿತ್ರಣವೆಂದರೆ, ಗ್ಯಾಸೆಟಿಯರ್‌ನಂತೆ ಒಂದೇ ಗ್ರಂಥದಲ್ಲಿ ಎಲ್ಲಾ ಮಾಹಿತಿಗಳು ಸಿಗುವುದಿಲ್ಲವಾದ್ದರಿಂದ ಗ್ಯಾಸೆಟಿಯರ್‌ಗಳು ಇವುಗಳಿಗೆಲ್ಲಕ್ಕಿಂತ ಉತ್ತಮ ಆಕರಗ್ರಂಥಗಳಾಗಿವೆ ಎಂಬುದರಲ್ಲಿ ಸಂಶಯವಿಲ್ಲ.

**ಟಿಪ್ಪಣಿಗಳು**

೧. ಶಂಕರನಾರಾಯಣರಾವ್ ಎನ್.ಪಿ, 'ಸ್ವಾತಂತ್ರ್ಯ ಹೋರಾಟ: ಚಾರಿತ್ರಿಕ ಅವಲೋಕನ', **ಸಮಕಾಲೀನ ಕರ್ನಾಟಕ ಸಂಪುಟ-೬**, ವಿಜಯ್ ತಂಬಂಡ ಪೂಣಚ್ಚ(ಪ್ರ.ಸಂ), ಚಿನ್ನಸ್ವಾಮಿ ಸೋಸಲೆ(ಸಂ.ಸಂ), ೨೦೧೦. ಪುಟ.೧.

೨. ಜಾವೇದ್ ಎಸ್.ಎ(ಮೂಲ), ಅನಂತರಾಮಯ್ಯ ಆರ್.ಎಲ್(ಅನು), 'ಏಕೀಕರಣ', **ಚರಿತ್ರೆ ವಿಶ್ವಕೋಶ. ೪**, ವಿಜಯ್ ತಂಬಂಡ ಪೂಣಚ್ಚ(ಸಂ), ೨೦೦೧, ಪು.೭೯೧.

೩. ಶಿವಮೂರ್ತಿಶಾಸ್ತ್ರಿ ಬಿ, 'ಕರ್ನಾಟಕ ಪ್ರಾಂತರಚನೆ, ೧೯೫೩, ಪು.೧೨.

೪. ಚಂದ್ರಶೇಖರ್ ಎಸ್, ಸ್ವಾತಂತ್ರ್ಯೋತ್ತರ ಕರ್ನಾಟಕ: ಒಂದು ನೋಟ, ಪು.೧೭೮.

೫. ಸೂರ್ಯನಾಥ ಯು ಕಾಮತ್(ಸಂ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ.೧ ೧೯೮೫, ಪು. V, VI

೬. ಜಾವೇದ್ ಎಸ್.ಎ(ಮೂಲ), ಅನಂತರಾಮಯ್ಯ ಆರ್.ಎಲ್(ಅನು), 'ಏಕೀಕರಣ', **ಚರಿತ್ರೆ ವಿಶ್ವಕೋಶ. ೪**, ವಿಜಯ್ ತಂಬಂಡ ಪೂಣಚ್ಚ(ಸಂ), ೨೦೦೧, ಪು.೭೯೩.

೭. ಅದೇ, ಪು.೧೭೯.

೮. ಚಂದ್ರಶೇಖರ್ ಎಸ್, ಸ್ವಾತಂತ್ರ್ಯೋತ್ತರ ಕರ್ನಾಟಕ, ಒಂದು ನೋಟ(ವಿಜಯ್ ತಂಬಂಡ ಪೂಣಚ್ಚ(ಪ್ರ.ಸಂ), ಚಿನ್ನಸ್ವಾಮಿ ಸೋಸಲೆ(ಸಂ.ಸಂ), 'ಸಮಕಾಲೀನ ಕರ್ನಾಟಕ ಸಂಪುಟ-೬), ೨೦೧೦, ಪು.೧೭೮-೧೭೯.

೯. ಜಾವೇದ್ ಎಸ್.ಎ(ಮೂಲ), ಅನಂತರಾಮಯ್ಯ ಆರ್.ಎಲ್(ಅನು), 'ಏಕೀಕರಣ', **ಚರಿತ್ರೆ ವಿಶ್ವಕೋಶ. ೪**, ವಿಜಯ್ ತಂಬಂಡ ಪೂಣಚ್ಚ(ಸಂ), ೨೦೦೧, ಪು-೧೯೫.

೧೦. ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರ್‌ಗಳ ಧೀಮಂತ ಹೆಜೆ(ಇಲಾಖೆಯದ್ದು).

೧೧. ಹುಯಿಲಗೋಳ ನಾರಾಯಣರಾವ್(ಅನು), ಭಾರತದ ಗ್ಯಾಸೆಟಿಯರ್ ಸಂ.೧, ೧೯೯೬, ಪು. ಮುನ್ನುಡಿ.

೧೨. ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರುಗಳ ಧೀಮಂತ ಹೆಜ್ಜೆ(ಇಲಾಖೆಯದ್ದು).

೧೩. ಹುಯಿಲಗೋಳ ನಾರಾಯಣರಾವ್(ಅನು), ಭಾರತದ ಗ್ಯಾಸೆಟಿಯರ್ ಸಂ.೧, ೧೯೯೬, ಮುನ್ನುಡಿ

೧೪. ಅದೇ, ಸಂ.೧, ೧೯೯೬, ಪು.XI

೧೫. ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರ್‌ಗಳ ದೀಮಂತಹೆಜ್ಜೆ(ಇಲಾಖೆದ್ದು).

೧೬. ಗಿರಿಯಪ್ಪ ಕೂ.ಗಿ, ಕರ್ನಾಟ ಕರ್ನಾಟಕ ಕನ್ನಡ ಏಕೀಕರಣ, ೨೦೦೨, ಪು.೪೬.

೧೭. ಛಾಯಾಪತಿ ಟಿ.ಎಸ್, ಆಡಳಿತ ಭಾಷೆ ಕನ್ನಡ, ೨೦೦೮(೪ನೇ ಮುದ್ರಣ), ಪು-೩೧.

೧೮. ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರುಗಳ ಧೀಮಂತ ಹೆಜ್ಜೆ(ಇಲಾಖೆಯದ್ದು).

೧೯. ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರ್‌ಗಳ ಧೀಮಂತ ಹೆಜ್ಜೆ(ಇಲಾಖೆಯದ್ದು).

೨೦. ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರುಗಳ ಧೀಮಂತ ಹೆಜ್ಜೆ(ಇಲಾಖೆದ್ದು).

೨೧. ಹುಯಿಲಗೋಳ ನಾರಾಯಣರಾವ್(ಅನು), 'ಭಾರತದ ಗ್ಯಾಸೆಟಿಯರ್', ೧೯೯೬ ಮುನ್ನುಡಿ.

೨೨. ಪಾಟೀಲ ಎಂ.ಬಿ(ಪ್ರ.ಸ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ದಶವಾರ್ಷಿಕ ಪುರವಣಿ(೧೯೮೩-೧೯೯೩), ೧೯೯೬, ಪು-VI. ೨.

೨೩. ಪಾಟೀಲ್ ಎಂ.ಬಿ(ಪ್ರ.ಸ), ಕರ್ನಾಟಕ ಕೈಪಿಡಿ, ೧೯೯೬, ಮುನ್ನುಡಿ.

೨೪. ಚಿತ್ತರಂಜನ್ ಎಚ್, ಕೋಲಾರ ಜಿಲ್ಲಾ ಗ್ಯಾಸೆಟಿಯರ್, ೨೦೦೫, ಪುಟ. VII, XIII.

೨೫. ಅನೀಸ್ ಸಿರಾಜ್ ಎಸ್(ಮು.ಸಂ), ಮೈಸೂರು ತಾಲೂಕು ಗ್ಯಾಸೆಟಿಯರ್- ೨೦೧೦, ಪು. vi-vii.

೨೬. ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರ್‌ಗಳ ಧೀಮಂತ ಹೆಜ್ಜೆ(ಇಲಾಖೆಯದ್ದು)

೨೭. ಪ್ರಜಾವಾಣಿ ದಿನ ಪತ್ರಿಕೆ, ಸೆಪ್ಟಂಬರ್-೦೭, ೨೦೧೧, ಪು.೭.

೨೮. ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರ್‌ಗಳ ಧೀಮಂತ ಹೆಜ್ಜೆ(ಗ್ಯಾಸೆಟಿಯರ್ ಇಲಾಖೆಯದ್ದು).

# ತಳೆದ ನಿಲುವು

'ಗ್ಯಾಸೆಟಿಯರ್' ಎಂದರೆ ಹಲವು ವಿಚಾರಗಳ ಜ್ಞಾನಭಂಡಾರ ಎಂದರೆ ತಪ್ಪಾಗಲಾರದು. ಏಕೆಂದರೆ ಪಾಶ್ಚಾತ್ಯ ಅಧಿಕಾರಿಗಳಿಗಾಗಿ ತಮ್ಮ ಆಡಳಿತದ ಸುಗಮಕ್ಕೋಸ್ಕರ ಹೊಸದಾಗಿ ಬರುವ ಕಲೆಕ್ಟರನಿಗೆ ಅಗತ್ಯವಾಗಿ ಬೇಕಾದಂತಹ ಕೋಶವಾಗಿತ್ತು ಎಂಬುದನ್ನು ಒಪ್ಪತಕ್ಕ ಅಂಶವೆಂದೇ ಕಂಡುಬರುತ್ತವೆ. ಗ್ಯಾಸೆಟಿಯರ್ ರಚನೆಯ ಇತಿಹಾಸಕ್ಕೆ ಅನೇಕ ವರ್ಷಗಳ ಹಿನ್ನೆಲೆ ಇದ್ದು ಹಲವು ತಿರುವುಗಳನ್ನು ಪಡೆದುಕೊಂಡು ರಚನೆಗೊಂಡಿರುವುದಾಗಿದೆ. ಅಂದರೆ ಇದರ ರಚನೆಯ ಪ್ರಕ್ರಿಯೆಯು ಕುತೂಹಲಕರವಾದದ್ದು ಹಾಗೂ ದೀರ್ಘಾವಧಿಯಾದದ್ದು ಎಂಬುದಾಗಿ ತಿಳಿದುಬರುತ್ತದೆ.

ಪ್ರಾಚೀನ ಕಾಲದಿಂದಲೂ, ನಮ್ಮಲ್ಲೂ ಸಹ ಇಂಥ ಗ್ರಂಥಗಳ ರಚನೆಗಳಿದ್ದವು. ಆದರೆ ಅವು ಕೇವಲ ರಾಜರ ಕುರಿತಾದ ವೈಭವೋಪೇತ ವಿವರಣೆಗಳಾಗಿವೆ. ಜೊತೆಗೆ ಸೀಮಿತ ಕ್ಷೇತ್ರವುಳ್ಳದ್ದಾಗಿವೆ ಎನ್ನಬಹುದು. ಹಾಗಾಗಿ ವಸಾಹತುಶಾಹಿಗಳ ಗ್ಯಾಸೆಟಿಯರ್ ರಚನೆಯು ವಿಶೇಷವಾದದ್ದು. ಗ್ಯಾಸೆಟಿಯರ್ ರಚನೆಯು ಪ್ರಪಂಚಕ್ಕೆ ಸಂಬಂಧಿಸಿದಂತೆ, ದೇಶ, ರಾಜ್ಯ, ಜಿಲ್ಲೆಗಳಿಗೆ ಸಂಬಂಧಿಸಿದಂಥ ಇವುಗಳ ರಚನೆಯು ವಸಾಹತು ಶಾಹಿ ಕಾಲಘಟ್ಟದ್ದಾಗಿದೆ. ಹೀಗಾಗಿ ಭಾರತಕ್ಕೆ ಸಂಬಂಧಿಸಿದಂತೆ ವಿಲಿಯಂ ಹಂಟರ್‌ನ 'ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ' ಎಂಬ ಸಂಪುಟಗಳು ಮಾತ್ರ ಭಾರತದ ಮಟ್ಟಿಗೆ ಮೊದಲ ಪ್ರಯತ್ನವೆಂದು ಪರಿಗಣಿಸಬಹುದು. ಅನಂತರದಲ್ಲಿ ಭಾರತದ ಎಲ್ಲಾ ಪ್ರಾಂತ್ಯಗಳಿಗೆ ಸಂಬಂಧಿಸಿದಂತೆ ಈ ರಚನಾ ಪ್ರಕ್ರಿಯೆಯು ಕಂಡುಬರುತ್ತದೆ. ಇದುವರೆಗೂ ಭಾರತಕ್ಕೆ ಸಂಬಂಧಿಸಿದಂತೆ ೫೦೦ಕ್ಕಿಂತಲೂ ಹೆಚ್ಚು ಗ್ಯಾಸೆಟಿಯರ್ ರಚನೆ ಆಗಿದೆ.

ವಸಾಹತುಕಾಲೀನ ಮೈಸೂರು ಸಂಸ್ಥಾನ, ಮುಂಬಯಿ ಕರ್ನಾಟಕ, ಹೈದರಾಬಾದ್(ನಿಜಾಂ) ಕರ್ನಾಟಕ, ಮದ್ರಾಸ್(ಬ್ರಿಟಿಷ್) ಕರ್ನಾಟಕ ಹಾಗೂ ಕೊಡಗು ಪ್ರದೇಶಗಳಿಗೆ ಸಂಬಂಧಿಸಿದಂತೆ ಗ್ಯಾಸೆಟಿಯರ್ ರಚನೆ ಕಾರ್ಯವು ಇದೇ ಕಾಲಘಟ್ಟದಲ್ಲಿ ಕಂಡುಬಂದಿದ್ದು, ಆ ಮೂಲಕ ಮೈಸೂರು ಪ್ರಾಂತ್ಯಕ್ಕೆ ಎಚ್. ವೆಲ್ಲೆಸ್ಲಿ

ಅವರ ಹಾಗೂ ಕೊಡಗಿಗೆ ಸಂಬಂಧಿಸಿದಂತೆ ಜಿ. ರಿಕ್ಟರ್ ಅವರ ಪ್ರಯತ್ನವು ಮೊದಲಿನದಾಗಿರುತ್ತದೆ. ಹೀಗಾಗಿ ಛಿದ್ರಗೊಂಡ ಕನ್ನಡ ಭೂಪ್ರದೇಶಕ್ಕೆ ಸಂಬಂಧಿಸಿದ ಗ್ಯಾಸೆಟಿಯರ್‌ಗಳನ್ನು ಜೇಮ್ಸ್ ಎಂ. ಕ್ಯಾಂಬೆಲ್, ಜಾನ್ ಕೆಲ್‌ಸಾಲ್, ಮ್ಯಾಕ್ಲೀನ್ ಸಿ.ಡಿ, ಜಾನ್ ಸ್ಟರ್ರೋಕ್, ಹೆರಾಲ್ಡ್ ಎ ಸ್ಟೂವರ್ಟ್, ವಿಲಿಯಂ ಫ್ರಾನ್ಸಿಸ್, ಹಾಲ್ ಜೆ.ಎಫ್, ಕೃಷ್ಣಯ್ಯಂಗಾರ್, ಹಯವದನರಾವ್ ಸಿ ಹಾಗೂ ಕನ್ನಡಕ್ಕೆ ಅನುವಾದ ಮಾಡಿದ ವೆಂಕಟ ರಂಗೋಕಟ್ಟಿ ಇವರ ಹಾಗೂ ಎಲ್ಲಾ ಪ್ರಾಂತ್ಯದ ಗ್ಯಾಸೆಟಿಯರ್‌ಗಳನ್ನು ಅಧ್ಯಯನಕ್ಕೆ ಒಳಪಡಿಸಿರುವುದು ಮುಖ್ಯವಾಗಿರುತ್ತದೆ. ಹೀಗಾಗಿ ಇದೊಂದು ಅಧ್ಯಯನದ ಮೊದಲನೇ ಪ್ರಯತ್ನವೆಂದು ಕಂಡುಬಂದಿದ್ದು, ಈ ಮೂಲಕವಾಗಿ ಛಿದ್ರಗೊಂಡ ಕನ್ನಡದ ಪ್ರಾಂತ್ಯವನ್ನು ಗ್ಯಾಸೆಟಿಯರ್‌ಗಳ ಮೂಲಕವೂ ಕಟ್ಟಿಕೊಡಲು ಸಾಧ್ಯ. ದಾಖಲೆಗೊಂಡ ಗ್ಯಾಸೆಟಿಯರ್‌ಗಳ ಮೂಲಕ ಅಂದಿನ ಸಮಾಜದ ಇಲ್ಲಿ ಅತಿ ಸೂಕ್ಷ್ಮ ಅಂಶಗಳನ್ನು ಸಹ ಅವರು ದಾಖಲಿಸಿರುವುದರಿಂದ ಆಂಗ್ಲರ ಚಿಂತನಾ ನೆಲೆಗಳು ಅಭಿವ್ಯಕ್ತವಾಗಿವೆ. ಗ್ಯಾಸೆಟಿಯರ್‌ಗಳ ಮೂಲಕ ಸಮಾಜವನ್ನು ಕುರಿತು ವಿವರಿಸುವಾಗ ಮೈಸೂರು, ಮುಂಬಯಿ, ಮದ್ರಾಸ್ ಹಾಗೂ ಹೈದರಾಬಾದ್‌ಗಳಲ್ಲಿ ಒಂದೇ ರೀತಿಯ ಆಹಾರ ಪದ್ಧತಿ, ಆಚರಣೆ, ಉಡುಗೆ-ತೊಡುಗೆಗಳು, ಸಂಸ್ಕಾರ ಆಚರಣೆಗಳಲ್ಲಿ ಹೆಚ್ಚಿನ ಭಿನ್ನತೆಗಳಿರಲಿಲ್ಲ ಎಂಬುದು ತಿಳಿಯುತ್ತದೆ. ಆದರೆ ಕೊಡಗು ಪ್ರದೇಶಕ್ಕೆ ಬಂದಾಗ ತನ್ನದೇ ಆದ ವಿಶೇಷ ಆಚರಣೆ, ವೇಷಭೂಷಣ, ಆಹಾರ ಪದ್ಧತಿ, ಮನೆಗಳ ಮಾದರಿ ಇತ್ಯಾದಿಗಳೆಲ್ಲವೂ ಸಹ ಭಿನ್ನತೆಗಳಿಂದ ಕೂಡಿರುವುದು ಕಂಡುಬರುತ್ತದೆ. ಕ್ಯಾಂಬೆಲ್ ಅವರು ಸಾಮಾಜಿಕ ಚಿತ್ರಣ ಹಾಗೂ ಬ್ರಾಹ್ಮಣ ವರ್ಗದವರನ್ನು ಕುರಿತಂತೆ ಹೆಚ್ಚಿನ ವಿವರಣೆ ನೀಡಿರುವುದುಂಟು. ಹೀಗಾಗಿ ಗ್ಯಾಸೆಟಿಯರ್‌ಗಳಲ್ಲಿ ದಾಖಲಿಸಿರುವ ಸಮಾಜ ಕೇವಲ ಉನ್ನತ ವರ್ಗದವರ ಆಚರಣೆಗಳಿಗೆ ಮಾತ್ರ ಸೀಮಿತವಾಗಿದೆ. ಅಲ್ಲದೆ ಸಹಜವಾಗಿಯೇ ಚಿತ್ರಿಸಿದ್ದಾರೆ. ಇಲ್ಲಿ ಯಾವುದೇ ರೀತಿಯ ಉತ್ಪ್ರೇಕ್ಷೆಗಳೂ ಇಲ್ಲ. ಏಕೆಂದರೆ ಅವರಿಗೆ ಇಲ್ಲಿನ ಸಮಾಜದ ಜನರನ್ನು  ಅರ್ಥ ಮಾಡಿಕೊಂಡು ಆಳ್ವಿಕೆ ನಡೆಸಲು ಹೆಚ್ಚಿನ ಮಾಹಿತಿಯು ಅಗತ್ಯ ವಿದ್ದುದರಿಂದ. ಆದರೆ ಸಮಾಜವನ್ನು ಕುರಿತು ರಿಕ್ಟರ್, ಕ್ಯಾಂಬೆಲ್, ಹಯವದನ್‌ರಾವ್ ಅವರ ಗ್ಯಾಸೆಟಿಯರ್‌ಗಳಿಂದ ಹೆಚ್ಚಿನ ಮಾಹಿತಿ ದೊರೆಯುತ್ತವೆ. ಆದರೆ ಸ್ವಲ್ಪಮಟ್ಟಿನ ಮಾಹಿತಿಯನ್ನು ಜಾನ್ ಕೆಲ್‌ಸಾಲ್ ಅವರ ಗ್ಯಾಸೆಟಿಯರ್‌ನಿಂದಲೂ ತಿಳಿಯಬಹುದು. ಹೈದರಾಬಾದ್ ಸಂಸ್ಥಾನಕ್ಕೆ ಸಂಬಂಧಿಸಿದ ಮಾಹಿತಿ ಕೊರತೆ ಇರುತ್ತದೆ ಎಂಬುದನ್ನು ಪರಿಗಣಿಸಬಹುದು. ಆದರೆ ಬಿ.ಎಲ್. ರೈಸ್ ಅವರ ಗ್ಯಾಸೆಟಿಯರ್‌ನಲ್ಲಿ ಯಾವುದೇ ರೀತಿಯ ಸಾಮಾಜಿಕತೆಯ ಬಗ್ಗೆ ವಿವರಣೆಗಳು ನೀಡಿರುವುದಿಲ್ಲ, ಇದೊಂದು ಕೊರತೆ ಅವರ ಗ್ಯಾಸೆಟಿಯರ್‌ನಲ್ಲಿ ಕಂಡುಬರುತ್ತದೆ. ಆದರೆ ಇನ್ನಿತರೆ ಅಂಶಗಳ ವಿಚಾರಗಳಲ್ಲಿ ಅಚ್ಚುಕಟ್ಟುತನ, ವಿವರಿಸಿದ ಅಂಶಗಳು ಮಹತ್ವದ್ದಾಗಿವೆ. ಕರ್ನಾಟಕದ, ಕನ್ನಡನಾಡಿನ ಎಲ್ಲಾ ಗ್ಯಾಸೆಟಿಯರ್ ಗಳಿಗಿಂತ ಇವರು ನಿರೂಪಿಸಿದ ಶೈಲಿಗಳೆಲ್ಲವೂ ಸಹ ವಿಭಿನ್ನತೆಯಿಂದ ಕೂಡಿದವು ಎಂಬುದಾಗಿ ಅಧ್ಯಯನದಿಂದ ತಿಳಿದುಬರುತ್ತದೆ.

ವಸಾಹತು ಕರ್ನಾಟಕದ ವ್ಯವಸ್ಥೆಯಲ್ಲಿ ಗ್ಯಾಸೆಟಿಯರ್‌ಗಳ ಅಧ್ಯಯನ ನಡೆಸುವಾಗ ಬಹುಮುಖ್ಯವಾಗಿ ಕಂಡುಬರುವ ಅಂಶವೆಂದರೆ ಎಲ್ಲಾ ಗ್ಯಾಸೆಟಿಯರ್‌ಗಳು ಎಲ್ಲಾ ವಿಚಾರಗಳಲ್ಲೂ ಸಹ ಯೋಜನಾಬದ್ಧವಾಗಿ

ರೂಪಿಸಲು ಪ್ರಯತ್ನಪಟ್ಟಿರುವುದು ತಿಳಿಯುತ್ತದೆ. ಆಡಳಿತ, ಶಿಕ್ಷಣ, ಕಂದಾಯ, ನ್ಯಾಯಾಂಗ, ಪೊಲೀಸ್ ಮುಂತಾದ ಇಲಾಖೆಗಳನ್ನು ಶಿಸ್ತುಬದ್ಧವಾಗಿ ಹಾಗೂ ಯೋಜನಾಬದ್ಧವಾಗಿ ಬೆಳೆಸಲು ಬ್ರಿಟಿಷ್ ಸರ್ಕಾರ ಪ್ರಯತ್ನಿಸಿತು. ಏಕೆಂದರೆ ಗ್ಯಾಸೆಟಿಯರ್‌ಗಳ ಮೂಲಕ ಆಡಳಿತ ನೋಡುವುದು ತುಂಬಾ ಕ್ಲಿಷ್ಟಕರವಾದದ್ದು. ಏಕೆಂದರೆ ಒಂದೊಂದು ಪ್ರಾಂತ್ಯದಲ್ಲಿ ಒಂದೊಂದು ರೀತಿಯ ಆಡಳಿತ, ಅನೇಕ ಪದ್ಧತಿಗಳು ಇರುವುದನ್ನು ಏಕೀಕರಣಗೊಳಿಸಿದ ರೀತಿ, ಆಡಳಿತದ ಅನುಕೂಲತೆಗಾಗಿ ಆಡಳಿತವನ್ನು ವಿವಿಧ ಇಲಾಖೆಗಳಾಗಿ ವಿಭಜಿಸಿ ಕೊಂಡು ಕಾಯ್ದೆ-ಕಾನೂನುಗಳ ಮೂಲಕ ಹಂತ-ಹಂತವಾಗಿ ಏಕರೂಪಗೊಳಿಸಿದ ರೀತಿ ವಿಶೇಷವಾದದ್ದು.

ಹೀಗಾಗಿ ಗ್ರಾಮಮಟ್ಟದಿಂದ ಜಿಲ್ಲಾಮಟ್ಟದವರೆಗೆ ವಿವಿಧ ವರ್ಗಗಳಾಗಿ ವಿಭಜನೆಗೊಳಿಸಿ ಅನೇಕ ಹುದ್ದೆಗಳನ್ನು ಸೃಷ್ಟಿಸಿ ಪ್ರಧಾನ ಅಥವಾ ಮುಖ್ಯ ಹುದ್ದೆಯ ವ್ಯಕ್ತಿಯಾಗಿ ಆಂಗ್ಲ ಅಧಿಕಾರಿಗಳೇ ನೇಮಕ ಗೊಳ್ಳುತ್ತಿದ್ದುದು ಗಮನಾರ್ಹ. ಹೀಗಾಗಿ ವಸಾಹತುಶಾಹಿಗಳ ಆಡಳಿತದಲ್ಲಿ ಕೇಂದ್ರ ವ್ಯಕ್ತಿಯಾಗಿ ಕಲೆಕ್ಟರ್ ಪರಿಗಣಿಸಲ್ಪಟ್ಟಿರುತ್ತಾನೆ. ಇವನ ಮೂಲಕ ಎಲ್ಲಾ ಆಡಳಿತವನ್ನು ನೋಡಲಾಗುತ್ತದೆ. ಹೀಗಾಗಿ ಆಡಳಿತ, ಶಿಕ್ಷಣ, ಕಂದಾಯ, ನ್ಯಾಯಾಂಗ, ಪೊಲೀಸ್ ಮುಂತಾದ ಇಲಾಖೆಗಳನ್ನು ಶಿಸ್ತುಬದ್ಧವಾಗಿ ಹಾಗೂ ಯೋಜನಾಬದ್ಧವಾಗಿ ಬೆಳೆಸಲು ಬ್ರಿಟಿಷ್ ಸರ್ಕಾರ ಪ್ರಯತ್ನಿಸಿತು. ಒಂದು ಇಲಾಖೆಯು ಇವರ ಅಧೀನಕ್ಕೆ ಬಂದಾಗ ಅವುಗಳ ಕುರಿತು ಕೂಲಂಕಷವಾಗಿ ವಿವರಿಸುವುದು ಸಹ ಒಂದು ರೀತಿಯ ವರದಿ ರೂಪದಲ್ಲಿ ಮಾಹಿತಿಗಳನ್ನು ಗ್ಯಾಸೆಟಿಯರ್‌ಗಳು ಒಳಗೊಂಡಿರುತ್ತದೆ ಎಂದರೆ ತಪ್ಪಾಗಲಾರದು. ಆಡಳಿತದಲ್ಲಿ ಪ್ರತಿಯೊಂದು ವಿಷಯಗಳ ಅಂಕಿ-ಸಂಖ್ಯೆಗಳ ಮಾಹಿತಿಯು ಸಹಜವಾಗಿ ಒಳಗೊಂಡಿರುತ್ತಿದ್ದವು. ಈ ಎಲ್ಲ ಬಗೆಯ ಪ್ರಕ್ರಿಯೆಗಳೂ ಈ ಹೊತ್ತಿಗೂ ಜೀವಂತವಾಗಿರುವುದನ್ನು ಗಮನಿಸಬಹುದು.

ಬ್ರಿಟಿಷ್ ಸರ್ಕಾರ ತನ್ನ ಅನುಕೂಲಕ್ಕೆ ತಕ್ಕಂತೆ ಆಡಳಿತವನ್ನು ಕ್ರಮಬದ್ಧಗೊಳಿಸುವ ಕೆಲಸವನ್ನು ಮಾಡಿತು. ಬ್ರಿಟಿಷರು ತಮ್ಮನ್ನು ತಾವು ನಾಗರಿಕರು ಎಂಬುದಾಗಿ ಕರೆದುಕೊಳ್ಳುತ್ತಾ ಅತ್ಯಂತ ಕ್ರೂರವಾದ ಕಾನೂನು, ಕಾಯಿದೆಗಳನ್ನು ಜಾರಿಗೊಳಿಸಿದರು. ಅರಣ್ಯ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಜೀವನ ನಡೆಸುತ್ತಿದ್ದ ಜನರನ್ನು ಅವರ ಸ್ಥಳಗಳಲ್ಲಿಯೇ ಪರಕೀಯರನ್ನಾಗಿಸುವ ಪ್ರಯತ್ನವನ್ನು ಬ್ರಿಟಿಷ್ ಸರ್ಕಾರ ಮಾಡಿತ್ತು. ಇಲ್ಲಿನವರಿಗೆ ದೇಶೀಯ ವಸ್ತುಗಳನ್ನು ಉಪಯೋಗಿಸಲು ಬಿಡದೆ ತೆರಿಗೆಗಳನ್ನು ವಿಧಿಸುತ್ತಿತ್ತು. ಹೀಗಾಗಿ ಇಲ್ಲಿನ ಜನರನ್ನು ನಿರ್ಗತಿಕರನ್ನಾಗಿ ಮಾಡಿತ್ತು ಎಂಬುದನ್ನು ದಾಖಲಿಸಲೇಬೇಕಾಗಿದೆ.

ಆಂಗ್ಲರ ಆರ್ಥಿಕ ಅಭಿವೃದ್ಧಿ ಅಂಶಗಳು, ರೈಲ್ವೆ ಮಾರ್ಗಗಳು ಮುಂತಾದ ಸಾಧನೆಗಳನ್ನು ಲಾಭ-ನಷ್ಟದಲ್ಲಿ ಉಂಟಾದ ಹಾಗೂ ಕೈಗೊಂಡ ಕ್ರಮಗಳನ್ನು ದಾಖಲಿಸುವ ಪ್ರಯತ್ನವು ಗ್ಯಾಸೆಟಿಯರ್‌ಗಳಲ್ಲಿ ಕಂಡುಬರುತ್ತದೆ. ಹೀಗಾಗಿ ಗ್ಯಾಸೆಟಿಯರ್‌ಗಳೆಂದರೆ ಇವರಿಗೆ ತಮ್ಮ ಸಾಧನೆಗಳು, ಕೈಗೊಂಡ ಕ್ರಮಗಳ ಲಾಭ-ನಷ್ಟಗಳನ್ನು ಕುರಿತ ಮಾರ್ಗಸೂಚಿಗಳಾಗಿದ್ದವು ಎಂದರೆ ತಪ್ಪಾಗಲಾರದು. ಜೊತೆಗೆ ತಮಗೆ ಲಾಭವೆಂದು ಕಂಡುಬಂದ ಸ್ಥಳಗಳಲ್ಲಿ ಅನೇಕ ರೀತಿಯ ಅಭಿವೃದ್ಧಿ ಕೆಲಸಗಳಿಗೆ ಒಲವು ತೋರಿಸುತ್ತಿದ್ದರು ಎಂಬುದನ್ನು ಮೈಸೂರು ಸಂಸ್ಥಾನ, ಮುಂಬಯಿ ಕರ್ನಾಟಕ ಹಾಗೂ ಮದ್ರಾಸ್ ಕರ್ನಾಟಕಗಳಲ್ಲಿ ಕೈಗೊಂಡ ಕಾರ್ಖಾನೆಗಳ

ಸ್ಥಾಪನೆಯಿಂದ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ವಸಾಹತುಶಾಹಿ ಸಂದರ್ಭದ ಗ್ಯಾಸೆಟಿಯರ್‌ಗಳ ಮಾಹಿತಿಗಳನ್ನು ಅರ್ಥೈಸಬೇಕಾದರೆ ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳ ಕಡೆಗೂ ಗಮನ ಹರಿಸುತ್ತಿದ್ದರು. ಇದರಿಂದ ನಾವು ವಸಾಹತುಶಾಹಿಗಳನ್ನು ಸಹ ಸೂಕ್ಷ್ಮವಾಗಿಯೇ ಗಮನ ಹರಿಸಬೇಕಾಗುತ್ತದೆ ಎಂಬ ವಿಚಾರ ಗಂಭೀರವಾದುದು. ಬ್ರಿಟಿಷ್ ಸರ್ಕಾರದ ಆಡಳಿತ, ಅಭಿವೃದ್ಧಿ ಕಾರ್ಯಗಳು ಕೈಗಾರಿಕೆ, ಕಾಯ್ದೆ-ಕಾನೂನು ಹಾಗೂ ಅವರ ಸಂಸ್ಕೃತಿ ಕೊಡುಗೆಗಳನ್ನು ವಿಶ್ಲೇಷಣೆಗೆ ಒಳಪಡಿಸಿದಾಗ ಅವುಗಳ ಹಿಂದಿದ್ದ ಧೋರಣೆಗಳು ಆರ್ಥಿಕ ಲಾಭ ಗಳಿಸುವುದಾಗಿತ್ತು ಹಾಗೂ ತಮ್ಮ ದೇಶಕ್ಕೆ ಕಚ್ಚಾವಸ್ತುಗಳ ರಫ್ತು ಮತ್ತು ಸಿದ್ಧ ವಸ್ತುಗಳನ್ನು ಆಮದುಗಳ ಮೂಲಕ ಲಾಭ ಪಡೆಯುವುದಾಗಿತ್ತು. ಹೀಗಾಗಿ ಅವುಗಳ ಲಾಭವನ್ನು ಪಡೆದುಕೊಂಡ ಸಮುದಾಯಗಳೆಂದರೆ ಬ್ರಿಟಿಷರ ಪರವಾಗಿದ್ದ ಮೇಲ್ವರ್ಗದವರು ಹಾಗೂ ಪ್ರಬಲ ವರ್ಗಗಳೆಂಬುದು ಸ್ಪಷ್ಟ. ಬ್ರಿಟಿಷ್ ಸರ್ಕಾರವು ಕಾಯ್ದೆ-ಕಾನೂನುಗಳನ್ನು ಜಾರಿಗೊಳಿಸಿದ ಕ್ರಮ, ಕೈಗೊಂಡ ಯೋಜನೆಗಳೆಲ್ಲವೂ ಸಹ ವಿಶಾಲವಾಗಿತ್ತು. ಇವು ಕೇವಲ ಒಂದೇ ವಿಷಯಕ್ಕೆ ಸೀಮಿತವಾಗಿರಲಿಲ್ಲ. ಇವೆಲ್ಲವೂ ಸಹ ಅವರ ಸಾಮ್ರಾಜ್ಯಶಾಹಿ ಬೇರುಗಳನ್ನು ಗಟ್ಟಿಗೊಳಿಸುವ ನಿಟ್ಟಿನಲ್ಲಿ ಜಾರಿಗೆ ಬಂದಂಥ ಹುನ್ನಾರಗಳೇ ಆಗಿವೆ.

ಇವರು ಕೈಗೊಂಡ ಯೋಜನೆಗಳಲ್ಲಿ ಉಂಟಾದ ಲಾಭ-ನಷ್ಟಗಳೆಲ್ಲವೂ ಅವರದೇ ಆದ ಸಮಸ್ಯೆಗಳಿಗೆ ಪರಿಹಾರ, ಲಾಭ-ನಷ್ಟಗಳು ಸಹ ಇದ್ದವು. ಇವು ಉತ್ತಮ ಆಕರಗಳಾಗಿ ಗ್ಯಾಸೆಟಿಯರ್‌ಗಳಿಂದ ಸಿಗಲೂ ಸಾಧ್ಯ. ಬ್ರಿಟಿಷರು ತಮಗೆ ಅಗತ್ಯವೆಂದು ಕಂಡುಬಂದಾಗ ಎಂಥ ದುಸ್ಸಾಹಸಕ್ಕೂ ಕೈಹಾಕಲು ಹಿಂದೆ-ಮುಂದೆ ನೋಡುತ್ತಿರಲಿಲ್ಲ. ಸಾಧ್ಯವಾದಷ್ಟು ತಮ್ಮ ಯೋಜನೆಗಳನ್ನು ಕಾರ್ಯಗತಗೊಳಿಸದೆ ಬಿಡಲಿಲ್ಲವೆಂಬುದೇ ಹೆಚ್ಚಾಗಿ ಕಂಡುಬರುತ್ತದೆ. ಹೀಗಾಗಿ ಮೈಸೂರಿನಲ್ಲಿ ಬೃಹತ್ ಕಾರ್ಖಾನೆಗಳು ಸ್ಥಾಪಿಸಲ್ಪಟ್ಟವು. ಒಂದು ರೀತಿಯಲ್ಲಿ ಇಲ್ಲಿನ ದಿವಾನರು ಮಹಾರಾಜರ ಪ್ರೋತ್ಸಾಹವೂ ಸಹ ಇದಕ್ಕೆ ಕಾರಣವಾಗಿದೆ. ಮುಂಬಯಿ, ಮದ್ರಾಸ್ ಇತರೆ ಕಡೆಗಳಲ್ಲೂ ಕೈಗಾರಿಕೆಗಳ ಸ್ಥಾಪನೆಯೂ ಕಂಡುಬರುತ್ತದೆ. ಆದರೆ ಕೊಡಗಿನಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಯೋಜನೆ ಕೈಗೊಂಡರೂ, ಅದು ದುರ್ಗಮವಾದ ಸ್ಥಳವಾದುದರಿಂದಾಗಿ ಕೈಬಿಡಲಾಯಿತು ಎಂದು ಈ ಅಧ್ಯಯನದಿಂದ ಸ್ಪಷ್ಟವಾಗಿದೆ.

ಯಾವುದೇ ಕೆಲಸವನ್ನು ಕೈಗೊಂಡರೂ ಸಹ ಅವುಗಳಿಗೆ ತಗಲುತಿದ್ದ ಖರ್ಚು-ವೆಚ್ಚಗಳನ್ನು, ಎದುರಿಸಿದ ಸಮಸ್ಯೆ, ಲಾಭ-ನಷ್ಟಗಳನ್ನು ಕುರಿತು ದಾಖಲಿಸಿರುವ ವಿಚಾರವು ಪ್ರಮುಖವಾದದ್ದು. ಅಲ್ಲದೆ ಇವರು ತಮಗೋಸ್ಕರ ಕಾಯ್ದೆ-ಕಾನೂನುಗಳನ್ನು ಜಾರಿಗೆ ತಂದು ಆ ಮೂಲಕ ಅವರು ತಮ್ಮನ್ನು ಇತರರಿಗಿಂತ ಭಿನ್ನ ಎಂಬುದಾಗಿ ಗುರುತಿಸಿಕೊಳ್ಳಲು ಪ್ರಯತ್ನಿಸಿದ್ದರು. ಸೈನಿಕ ನೆಲೆಗಳನ್ನು ಕಂಟೋನ್ಮೆಂಟ್ ಏರಿಯಾದ ಮೂಲಕ ಕಂಡುಕೊಂಡರು. ಇವರ ಪ್ರತ್ಯೇಕತೆ ಧೋರಣೆಗಳು ಬೆಂಗಳೂರು, ಬೆಳಗಾಂ ಹಾಗೂ ಬಳ್ಳಾರಿಗಳನ್ನು ಕಂಟೋನ್ಮೆಂಟ್‌ಗಳಾಗಿಸಿದ್ದು ಗಮನಾರ್ಹ.

ವಸಾಹತುಶಾಹಿ ಕಾಲದ ಸಂಸ್ಕೃತಿ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿತ್ತು. ಬ್ರಿಟಿಷರು ಕೇವಲ ಆಳ್ವಿಕೆ ನಡೆಸುವುದಷ್ಟೇ ಅಲ್ಲದೆ ಅನೇಕ ರೀತಿಯ ಸಾಹಿತ್ಯ ರಚನೆಗಳು, ನಿಘಂಟುಗಳು, ಜಾನಪದ ಸಾಹಿತ್ಯ

ಸಂಗ್ರಹ, ದಾಖಲೀಕರಣ, ಕೃತಿಗಳ ರಚನೆಗಳಂಥ ಕಾರ್ಯಗಳನ್ನು ಮಾಡಿದರು. ಶಾಸನಗಳ ಸಂಗ್ರಹ, ರಂಗಭೂಮಿ, ಪತ್ರಿಕೋದ್ಯಮ, ಚಿತ್ರಕಲೆ, ಛಾಯಾಚಿತ್ರ, ವಾಸ್ತುಶಿಲ್ಪ, ಮೂರ್ತಿಶಿಲ್ಪ ಹಾಗೂ ಇತರೆ ಹಲವು ಕ್ಷೇತ್ರಗಳಲ್ಲಿ ಇವರ ಕೊಡುಗೆಗಳು ಕಂಡುಬರುತ್ತವೆ. ಅಂದರೆ ಗ್ಯಾಸೆಟಿಯರ್‌ಗಳಲ್ಲಿ ದಾಖಲಿಸಲ್ಪಟ್ಟ ಅಂಶಗಳನ್ನು ಪಟ್ಟಿಮಾಡಿಕೊಡುವ ಪ್ರಯತ್ನವನ್ನು ಮಾತ್ರ ಇಲ್ಲಿ ಮಾಡಲಾಗಿದೆ. ಹೀಗಾಗಿ ಅವರ ಸಂಸ್ಕೃತಿ, ಕೊಡುಗೆಗಳು ಅಪರೂಪವಾದದ್ದು, ಹಾಗಾಗಿ ಅವರ ಪ್ರಭಾವವು ಸಾಮಾಜಿಕ ಜೀವನದ ಮೇಲೂ ಕಂಡು ಬಂದಿರುವುದು ಸುಳ್ಳಲ್ಲ. ಹೀಗಾಗಿ ಗ್ಯಾಸೆಟಿಯರ್ ರಚನೆಯು ಮಹತ್ವವಾದದೆಂದೇ ತಿಳಿದುಬರುತ್ತದೆ.

ಗ್ಯಾಸೆಟಿಯರ್‌ಗಳ ರಚನೆಯು ಆಂಗ್ಲ ಅಧಿಕಾರಿಗಳ ಕಾಲದಲ್ಲಿ ಮಹತ್ವದ್ದಾಗಿತ್ತು. ಆದರೆ ಆಂಗ್ಲರು ಭಾರತವು ಸ್ವಾತಂತ್ರ್ಯಗೊಂಡ ನಂತರದಲ್ಲಿ ಭಾರತವನ್ನು ಬಿಡಬೇಕಾಯಿತು. ಆಗ ಆಂಗ್ಲರ ಗ್ಯಾಸೆಟಿಯರ್ ರಚನೆ ಸ್ಥಗಿತಗೊಂಡಿತು. ಆದರೆ ಗ್ಯಾಸೆಟಿಯರ್ ರಚನೆಯ ಅವಶ್ಯಕತೆ ಹಾಗೂ ಅವುಗಳ ಮಹತ್ವವನ್ನು ಮನಗಂಡಿದ್ದರಿಂದಾಗಿ ಕರ್ನಾಟಕ ಸರ್ಕಾರವು ಅವುಗಳಿಗೆ ಪುನರ್‌ಚೇತನ ಕೊಡುವ ಸಲುವಾಗಿ ೧೯೫೮ರ ಗ್ಯಾಸೆಟಿಯರ್ ಇಲಾಖೆ ಸ್ಥಾಪಿಸುವ ಮೂಲಕ ಗ್ಯಾಸೆಟಿಯರ್ ರಚನೆಗೆ ಉತ್ತೇಜನ ದೊರಕಿತು. ಹೀಗಾಗಿ ಇಂದಿನ ಗ್ಯಾಸೆಟಿಯರ್‌ಗಳೂ ಸಹ ರಾಜ್ಯಕ್ಕೆ ಸಂಬಂಧಿಸಿದಂತೆ ಜಿಲ್ಲೆಗಳಿಗೆ ಹಾಗೂ ತಾಲೂಕುಗಳ ಗ್ಯಾಸೆಟಿಯರ್‌ಗಳ ರಚನೆಯನ್ನು ಕೈಗೊಂಡಿದ್ದು ಪ್ರಾರಂಭದ ಇಪ್ಪತ್ತು ಜಿಲ್ಲೆಗಳನ್ನು ಆಂಗ್ಲ ಭಾಷೆಯಲ್ಲಿ ರಚಿಸಲಾಯಿತು. ನಂತರ ಈಗ ೩೦ ಜಿಲ್ಲೆಗಳನ್ನು ಕುರಿತಂತೆ ಸರ್ಕಾರ ರಚನಾ ಕಾರ್ಯವನ್ನು ಕೈಗೊಂಡಿದ್ದು, ಆಂಗ್ಲ ಹಾಗೂ ಕನ್ನಡ ಎರಡೂ ಭಾಷೆಗಳಲ್ಲಿ ಗಮನಹರಿಸುತ್ತಿದೆ. ಇವೆಲ್ಲವೂ ಹಿಂದಿನ ಗ್ಯಾಸೆಟಿಯರ್ ರಚನಾ ಸ್ವರೂಪದಂತೆ ಕಂಡುಬರುತ್ತಿವೆ. ಆದರೆ 'ದಶವಾರ್ಷಿಕ ಪುರವಣಿ', 'ಗ್ಯಾಸೆಟಿಯರ್ ಕೈಪಿಡಿ' ಹಾಗೂ ರಾಜ್ಯಕ್ಕೆ ಸಂಬಂಧಿಸಿದಂತೆ ಗ್ಯಾಸೆಟಿಯರ್ ರಚನೆಗಳು ಸ್ವಲ್ಪಮಟ್ಟಿನ ಗ್ಯಾಸೆಟಿಯರ್‌ಗಳ ಸ್ವರೂಪದಲ್ಲೂ ಸುಧಾರಣೆಗೊಂಡಿರುವುದರ ಸೂಚನೆಯಾಗಿದೆ.

ವಸಾಹತುಕಾಲೀನ ಗ್ಯಾಸೆಟಿಯರ್ ರಚನೆಯು ಹೆಚ್ಚಾಗಿ ಆಂಗ್ಲ ಭಾಷೆಯಲ್ಲಿ ಆಗಿದೆ. ಆಂಗ್ಲ ಶಿಕ್ಷಣಾಧಿಕಾರಿಗಳು, ಕಲೆಕ್ಟರ್‌ಗಳು ಇತರೆ ಅಧಿಕಾರಿಗಳಿಂದ ರಚನೆಗೊಂಡಿವೆ. ಇಲ್ಲಿ ಅವರು ಮಿತಿಗಳಿಗೂ ಒಳಪಟ್ಟಿರುವುದುಂಟು. ಏಕೆಂದರೆ ಯಾವುದೇ ವಿಚಾರಗಳನ್ನು ಹೆಚ್ಚಾಗಿ ಸೇರಿಸಬಹುದಾಗಿತ್ತು ಅಥವಾ ಕೆಲವೊಂದನ್ನು ಸೂಕ್ಷ್ಮವಾಗಿ ಹೇಳಬಹುದಾಗಿತ್ತು ಎಂಬುದು ಅನಾವರಣವಾಗಿದೆ. ಪ್ರಸ್ತುತ ಅಧ್ಯಯನವು ವಸಾಹತುಶಾಹಿ ಕಾಲಘಟ್ಟದಲ್ಲಿ ರಚನೆಗೊಂಡ ಎಲ್ಲಾ ಗ್ಯಾಸೆಟಿಯರ್‌ಗಳನ್ನು ದಾಖಲಿಸುವ ಪ್ರಯತ್ನ ಮಾಡಿಲ್ಲ. ಏಕೆಂದರೆ ಕೆಲವೊಂದು ರಚನೆಗೊಂಡಿದ್ದರೂ ಸಹ ಕೆಲವೊಂದು ಗ್ಯಾಸೆಟಿಯರ್‌ಗಳ ಲಭ್ಯತೆ ಇರುವುದಿಲ್ಲ. ಅವುಗಳೆಂದರೆ: ಎಚ್. ವೆಲ್ಲೆಸ್ಲಿ ಅವರ ಮೈಸೂರು ಜಿಲ್ಲೆಗೆ ಸಂಬಂಧಿಸಿದ ಗ್ಯಾಸೆಟಿಯರ್. ಬಿ. ಕೃಷ್ಣಯ್ಯಂಗಾರ್ ಅವರ ಕೋಲಾರ ಜಿಲ್ಲೆಗೆ ಸಂಬಂಧಿಸಿದ ಗ್ಯಾಸೆಟಿಯರ್ ಹಾಸನಕ್ಕೆ ಕ್ಯಾಪ್ಟನ್ ಗೋರ್ಡನ್ ಅವರ ಹಾಸನ ಜಿಲ್ಲೆಯ ಗ್ಯಾಸೆಟಿಯರ್ ಮೇಯರ್ಸ್ ಅವರ ತುಮಕೂರು ಜಿಲ್ಲೆಯ ಗ್ಯಾಸೆಟಿಯರ್ ಚಿತ್ರದುರ್ಗಕ್ಕೆ ಸಂಬಂಧಿಸಿದಂತೆ ಮಿ. ಕೃಷ್ಣರಾವ್ ಅವರ ಗ್ಯಾಸೆಟಿಯರ್‌ಗಳು ಲಭ್ಯವಿಲ್ಲದುದರಿಂದಾಗಿ, ಇದು ಈ ಅಧ್ಯಯನದ ಮಿತಿಗೆ ಒಳಪಡುವ ಅಂಶವಾಗಿದೆ. ಹೀಗಾಗಿ ಇವುಗಳನ್ನು ಪತ್ತೆ ಹಚ್ಚಿ ಹೆಚ್ಚಿನ

ಅಧ್ಯಯನಕ್ಕೆ ಒಳಪಡಿಸಬಹುದಾದ ಸಾಧ್ಯತೆಗಳು ಇವೆ. ಮತ್ತೊಂದು ಗಮನಿಸುವ ಅಂಶವೇನೆಂದರೆ, ಮೈಸೂರು ಪ್ರಾಂತ್ಯಕ್ಕೆ ಸಂಬಂಧಿಸಿದಂತೆ ಗ್ಯಾಸೆಟಿಯರ್‌ಗಳು ರಚನೆಗೊಂಡಿರುವುದು ಹೆಚ್ಚು. ಜೊತೆಗೆ ಲಭ್ಯವಿಲ್ಲ ದಿರುವುದು ಸಹ ಇದೇ ಪ್ರಾಂತ್ಯದ್ದು.

ಛಿದ್ರಗೊಂಡ ಐದು ಪ್ರಾಂತ್ಯಗಳಿಗೆ ಸಂಬಂಧಿಸಿದಂತೆ ಹಲವಾರು ವಿಚಾರಗಳಲ್ಲಿ ಉದಾಹರಣೆಗೆ ಭೂ ಪರಿಸರಕ್ಕೆ ಸಂಬಂಧಿಸಿದಂತೆ ಆರ್ಥಿಕತೆ, ಕೈಗಾರಿಕೆ, ಶೈಕ್ಷಣಿಕ ಪ್ರಗತಿ ಇತ್ಯಾದಿ ಅಂಶಗಳನ್ನು ಕುರಿತು ಇನ್ನೂ ಹೆಚ್ಚಿನ ಅಧ್ಯಯನಗಳನ್ನು ನಡೆಸಬೇಕಾದ ಜರೂರು ಇದೆ. ಹೀಗಾಗಿ ಈ ಅಧ್ಯಯನದ ಜೊತೆಗೆ ಇತರ ಪ್ರಾಂತ್ಯಗಳೊಂದಿಗೆ ಇವುಗಳ ಸಂಬಂಧಗಳು ಹೇಗೆ ಬೆಸೆದುಕೊಂಡಿವೆ ಎಂಬುದನ್ನು ಅರಿಯಬೇಕಾಗಿದೆ. ಗ್ಯಾಸೆಟಿಯರ್‌ಗಳಿಂದ ಆಯಾ ಪ್ರದೇಶಗಳ ಮಾಹಿತಿಯು ಸ್ಥಳೀಯರಿಗಿಂತ ಆಂಗ್ಲರಿಗೇ ಹೆಚ್ಚು ತಿಳಿದು ಕೊಳ್ಳಲು ಸುಲಭವಾಗುತ್ತಿತ್ತು. ಹೀಗಾಗಿ ಆಂಗ್ಲ ಭಾಷೆಯಲ್ಲಿ ಆಂಗ್ಲರಿಂದ, ಆಂಗ್ಲರಿಗಾಗಿ, ಆಂಗ್ಲರಿಗೋಸ್ಕರ ಈ ಗ್ಯಾಸೆಟಿಯರ್ ರಚನೆಗೊಂಡಿವು ಎಂದರೂ ತಪ್ಪಾಗಲಾರದು. ಆದರೆ ಈ ಬಗೆಯ ಗ್ಯಾಸೆಟಿಯರ್ ರಚನೆಯ ಚಿಂತನೆ, ಪ್ರಯತ್ನಗಳು ಸಮಕಾಲೀನ ಸನ್ನಿವೇಶದಲ್ಲೂ ಹೆಚ್ಚಿನ ಮಹತ್ವ ಪಡೆದಿವೆ. ಆದ್ದರಿಂದಲೇ ಸರ್ಕಾರ ಅಥವಾ ಇತರೆ ಸಂಘ-ಸಂಸ್ಥೆಗಳ ಅಭಿವೃದ್ಧಿಯ ಮುಖವಾಣಿಯಾಗಿಯೂ ಇಂದು ಅನಾವರಣಗೊಳ್ಳು ತ್ತಿರುವುದು ಕೇವಲ ಸರ್ಕಾರಿ ಆಡಳಿತಯಂತ್ರಕ್ಕೆ ಮಾತ್ರ ಸೀಮಿತವಾಗಿದ್ದ ಈ ಪ್ರಕ್ರಿಯೆ ಇಂದು ಖಾಸಗಿ ಸಂಸ್ಥೆಗಳಿಂದಲೂ ಪ್ರಚುರಪಡಿಸುವಂತೆ ಆಗಿದೆ.

# ಅನುಬಂಧ ೧

# ಆಕರಗಳು

## ೧. ಪ್ರಾಥಮಿಕ ಆಕರಗಳು


**(ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಹಾಗೂ ವಿವಿಧ ಗ್ರಂಥಾಲಯಗಳು)**

1. Anantha krishna iyer L.K, **The mysore tribes & castes vo-1,** Published under the aspects of the mysore university, Mysore, 1935.
2. Edger thurston, Rangachari K, **Caste and tribes of southern india vo-1, A to B,** Asian education services, New delhi, 1909(first published), 1987.
3. Frances buchanan, **A journey from madras through the countries of mysore Canara and malabar Vol-I, II, III,** Asian education services, New delhi, 1807.
4. Fleet J.F, **Dynasties of canarised districts of the bombay,** Govt of bombay presidence, bombay, 1882.
5. Mark wilks, **History of mysore Vol-I II,** Asian education services, New delhi(First published 1810), 1980.
6. Rev. Moegling H, **Coorg memories an account of coorg and of the coorg mission,** Printed at the welseyan mission press, Bangalore, 1855.
7. Shama rao M, **Modern mysore Vol-I, II,** Printed by higginbothems south parade, Bangalore, 1936.

**Gazetteers/Manuals**

1. Benjamin lewis rice, **Mysore gazetteer Vo-I II,** Mysore government press, Bangalore, 1897, Revies(1976).
2. Benjamin lewis rice, **Mysore and coorg gazetteer Vo-III,** Mysore government press, Bangalore, 1878.

3. Harold A stuart, **South canara district gazetteer Vo-II,** Madras government press, madras, 1894.

4. Hayavadana rao C, **Mysore gazetteer vol- I to V,** B.R. Publishing corp, Delhi, 1927-1930.

5. Hall J.V(Ed), Krishnaswamy ayyar K.N(A,E), Madras district gazetteers stastical appendix together with a supplement to the two district manuals for south canara district, Printed by the superintendent government press, Madras 1938.

6. James M campbell, **Canara gazetteer Vol-XX, Part-I,** Bombay government, Central press, Bombay, 1883.

7. John strurrock, **South canara district gazetteer Vo-I,** Madras government press, Madras, 1894.

8. James M campbell, **Dharwar gazetteer Vol-XXII,** Government bombay central press, Bombay, 1884.

9. James M campbell, **Belgaum gazetteer Vol-XXI,** Government of bombay Central press, Bombay, 1864.

10. James M campbell, **Bijapur gazetteer Vol-XXIII,** Government of bombay Central press, Bombay, 1884.

11. John kelsall, **Manual of bellary district Vol.I,** Lawrence asylum press, Madras, 1872.

12. Maclean C.D(Ed), **Manual of the administration of Madras Presidency (Three volumes),** Asian educational services, New delhi, 1987(First published), 1885.

13. Rev. Richter G(Ed), **Gazetteer of coorg,** B.R. Publishing Corporation, Delhi 1870(First Published), 1984.

14. **The imperial gazetteer of India Vo-1,** Descrptive, Oxford press, New Delhi, 1909(New edition).

15. **The imperial gazetteer of India Vo-II,** Historical, Oxford press, New Delhi, 1909.

16. **The imperial gazetteer of India vo-I, III,** Economic, Oxford press, New Delhi, 1908.

17. **The imperial gazetteer of India voI-IV,** Administrative, Oxford press, New Delhi, 1909.

18. **The imperial gazetteer of India vo-I, XIII,** Gyaraspur to Jais, Oxford press, New Delhi, 1908.

19. **Imperial gazetteer of India vol. XXII,** Samudhiala to Sirghana, Oxford press, New Delhi-1908.

20. William Francis, **Bellary district gazetteer Vol.II,** lawrence asnlum press, Madras, 1904.

21. ವೆಂಕಟರಂಗೋಕಟ್ಟಿ(ಅನು), ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು(ಧಾರವಾಡ, ಬಿಜಾಪುರ, ಬೆಳಗಾವಿ, ಕೆನರಾ ಈ ನಾಲ್ಕು ಜಿಲ್ಲೆಗಳದ್ದು), ಏಶಿಯಲ್ ಎಜುಕೇಶನ್ ಸರ್ವೀಸಸ್ ಹೊಸದೆಹಲಿ, ೧೯೯೩.

### ೧೯೫೬ರ ನಂತರದ ಗ್ಯಾಸೆಟಿಯರ್‌ಗಳು ಹಾಗೂ ಕೈಪಿಡಿಗಳು

22. Abhishankar K, **Kolar district gazetteer,** Mysore state gazetteer, Bangalore, 1968.

23. Abhishankar K, **Tumkur district gazetteer,** Mysore state gazetteer, Bangalore, 1969.

24. Abhishankar K, **Raichur district Gazetteer,** Mysore state gazetteer, Bangalore, 1969.

25. Abhishankar K, **Hassan district gazetteer,** Mysore state gazetter, Bangalore, 1971.

26. Abhishankar K, **Bellary district gazetteer,** Mysore state gazetteer, Bangalore, 1972.

27. Abhishankar K, **Dakshina kannada district Gazetteer,** Mysore state gazetteer, Bangalore, 1974.

28. Abhishankar K, **Shimoga district Gazetteer,** Mysore state gazetteer, Bangalore, 1975.

29. Abhishankar K, **Bidar district Gazetteer,** Mysore state gazetteer, Bangalore, 1977.

30. Abhishankar K, **Chikkamagalur district gazetteer,** Government of karnataka state gazetteer, Bangalore, 1981.

31. Parthasarathy T.A(C.E), **Gazetteer of Bombay State Dharwad district (Revised edition) vol. XXII,** Government central press, Bombay, 1959.

32. Srisathyan B.N, **Coorg district gazetteer,** Mysore state gazetteer, Mysore, 1965.

33. Srisathyan B.N, **Bijapur district gazetteer,** Government of karnataka, Bangalore, 1966.

34. Srisathyan B.N, **Gulbarga district Gazetteer,** Government of karnataka, Bangalore-1967.

35. Srisathyan B.N, **Chitradurga district gazetteer,** Mysore state gazetteer, Bangalore, 1967.

36. Srisathyan B.N, **Mandya district gazetteer,** Mysore state gazetteer, Bangalore, 1968.

37. Suryanath U Kamat, **Uttara kannada district gazetteer,** Government of karnataka state, Bangalore, 1985.

38. Suryanath U kamat, **Belgaum district gazetteer,** Government of karnataka state, Bangalore, 1987.

39. Suryanath U kamat, **Mysore district gazetteer,** Government of karnataka state, Bangalore, 1988.

40. Suryanath U kamat, **Bangalore rural district gazetteer,** Government of karnataka state, Bangalore, 1989.

41. Suryanath U kamat, **Bangalore district gazetteer,** Government of karnataka state, Bangalore, 1990.

೪೨. ಅನೀಸ್ ಸಿರಾಜ್ ಎಸ್(ಪ್ರ.ಸಂ), ಎನ್.ಎನ್. ಚಿಕ್ಕಮಾದು(ಲೇಖಕರು), **ಮೈಸೂರು ತಾಲೂಕು ಗ್ಯಾಸೆಟಿಯರ್**, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೧೧.

೪೩. ಅನೀಸ್ ಸಿರಾಜ್ ಎಸ್(ಪ್ರ.ಸಂ), ಪಿ.ಕೆ. ರಾಜಶೇಖರ್(ಲೇಖಕರು), **ಪಿರಿಯಾಪಟ್ಟಣ ತಾಲೂಕು ಗ್ಯಾಸೆಟಿಯರ್**, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೧೧.

೪೪. ಅನೀಸ್ ಸಿರಾಜ್ ಎಸ್(ಪ್ರ.ಸಂ), ಎಸ್ ರಾಜೇಂದ್ರಪ್ಪ(ಲೇಖಕರು), **ತಿರುಮಕೂಡಲು ನರಸೀಪುರ ತಾಲೂಕು ಗ್ಯಾಸೆಟಿಯರ್**, ಕರ್ನಾಟಕ ಸರ್ಕಾರಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೧೦.

೪೫. ಅನೀಸ್ ಸಿರಾಜ್ ಎಸ್(ಪ್ರ.ಸಂ), ಗಿರೀಗೌಡ ನೀ(ಲೇಖಕರು), **ಹೆಗ್ಗಡದೇವನಕೋಟೆ ತಾಲೂಕು ಗ್ಯಾಸೆಟಿಯರ್**, ಕರ್ನಾಟಕ ಸರ್ಕಾರ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೧೦.

೪೬. ಅನೀಸ್ ಸಿರಾಜ್ ಎಸ್(ಪ್ರ.ಸಂ), ಬಿ ಶ್ಯಾಮಸುಂದರ್(ಲೇಖಕರು), **ಹುಣಸೂರು ತಾಲೂಕು ಗ್ಯಾಸೆಟಿಯರ್**, ಕರ್ನಾಟಕ ಸರ್ಕಾರ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೧೦.

೪೭. ಅನೀಸ್ ಸಿರಾಜ್ ಎಸ್(ಪ್ರ.ಸಂ), ತೇ.ಸಿ.ವಿಶ್ವೇಶ್ವರ(ಲೇಖಕರು), **ಕೃಷ್ಣರಾಜನಗರ ತಾಲೂಕು ಗ್ಯಾಸೆಟಿಯರ್**, ಕರ್ನಾಟಕ ಸರ್ಕಾರ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೧೧.

೪೮. ಅನೀಸ್ ಸಿರಾಜ್ ಎಸ್(ಪ್ರ.ಸಂ), ಮಂಜುಳಾ ಹುಲ್ಲಹಳ್ಳಿ(ಲೇಖಕರು), **ನಂಜನಗೂಡು ತಾಲೂಕು ಗ್ಯಾಸೆಟಿಯರ್**, ಕರ್ನಾಟಕ ಸರ್ಕಾರ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೧೦.

೪೯. ಅನೀಸ್ ಸಿರಾಜ್ ಎಸ್(ಪ್ರ.ಸಂ), **ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ)**, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೧೧.

೫೦. ಅನೀಸ್ ಸಿರಾಜ್ ಎಸ್(ಕ.ಆ. ಸೇ), **ಕರ್ನಾಟಕ ಕೈಪಿಡಿ(ಕನ್ನಡ ಆವೃತ್ತಿ)**, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೧೧.

೫೧. ಚಿತ್ತರಂಜನ್ ಎಚ್(ಮು.ಸಂ), **ಕೋಲಾರ ಜಿಲ್ಲಾ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ)**, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ಬೆಂಗಳೂರು, ೨೦೦೫.

೫೨. ಜಿಲಾನಿ ಎಸ್.ಎ(ಮು.ಸಂ), **ಉತ್ತರ ಕನ್ನಡ ಜಿಲ್ಲಾ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ)**, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ಬೆಂಗಳೂರು, ೨೦೦೭.

೫೩. ಜಿಲಾನಿ ಎಸ್.ಎ(ಮು.ಸಂ), **ಉಡುಪಿ ಜಿಲ್ಲೆ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ)**, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೧೦.

೫೪. ಜಿಲಾನಿ ಎಸ್.ಎ, **ಹ್ಯಾಂಡ್‌ಬುಕ್ ಆಫ್ ಕರ್ನಾಟಕ(ಆಂಗ್ಲ ಆವೃತ್ತಿ)**, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೨೦೧೦.

೫೫. ಪಾಟೀಲ್ ಎಂ.ಬಿ(ಪ್ರ.ಸಂ), **ಕರ್ನಾಟಕ ರಾಜ್ಯ ಗ್ಯಾಸೆಟಿಯರ್(ಕನ್ನಡ ಆವೃತ್ತಿ), (ದಶವಾರ್ಷಿಕ ಪುರವಣಿ ೧೯೮೩-೧೯೯೩)**, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೧೯೯೬.

೫೬. ಪಾಟೀಲ್ ಎಂ.ಬಿ(ಪ್ರ.ಸಂ), **ಕರ್ನಾಟಕ ಕೈಪಿಡಿ(ಕನ್ನಡ ಆವೃತ್ತಿ)**, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ೧೯೯೬.

೫೭. ಪಾರ್ಥಸಾರಥಿ ಟಿ.ಎ(ಪ್ರ.ಸಂ), **ಮಂಡ್ಯ ಜಿಲ್ಲಾ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ)**, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ಬೆಂಗಳೂರು, ೨೦೦೩.

೫೮. ಮುನಿಸ್ವಾಮಿ ಆರ್(ಪ್ರ.ಸಂ), **ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ)**, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ಬೆಂಗಳೂರು, ೧೯೯೭.

೫೯. ಮುನಿಸ್ವಾಮಿ ಆರ್(ಪ್ರ.ಸಂ), **ಬಿಜಾಪುರ ಜಿಲ್ಲೆ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ)**, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ಬೆಂಗಳೂರು, ೧೯೯೯.

೬೦. ವರದರಾಜ ಹುಯಿಲಗೋಳ(ಅನು), **ಭಾರತದ ಗ್ಯಾಸೆಟಿಯರ್ ಭಾಗ ೧ರಿಂದ ೪**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೬-೧೯೮೭.

೬೧. ಸೂರ್ಯನಾಥ ಯು ಕಾಮತ್, **ಕೊಡಗು ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ)**, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ಬೆಂಗಳೂರು, ೧೯೯೦.

೬೨. ಸೂರ್ಯನಾಥ ಯು ಕಾಮತ್, **ಕೊಡಗು ಗ್ಯಾಸೆಟಿಯರ್(ಆಂಗ್ಲ ಪರಿಷ್ಕೃತ ಆವೃತ್ತಿ)**, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ಬೆಂಗಳೂರು, ೧೯೯೩

೬೩. ಸೂರ್ಯನಾಥ ಯು ಕಾಮತ್, **ಧಾರವಾಡ ಜಿಲ್ಲೆ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ)**, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ಬೆಂಗಳೂರು, ೧೯೯೫.

೬೪. ಸೂರ್ಯನಾಥ ಯು ಕಾಮತ್, **ಧಾರವಾಡ ಜಿಲ್ಲೆ ಗ್ಯಾಸೆಟಿಯರ್(ಆಂಗ್ಲ ಪರಿಷ್ಕೃತ ಆವೃತ್ತಿ)**, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ಬೆಂಗಳೂರು, ೨೦೦೩.

೬೫. ಸೂರ್ಯನಾಥ ಯು ಕಾಮತ್, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂ-I, II, III**, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ಬೆಂಗಳೂರು, ೧೯೮೫-೧೯೮೬.

೬೬. ಸೂರ್ಯನಾಥ ಯು ಕಾಮತ್, **ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್ ಸಂ-I, II(ಆಂಗ್ಲ ಆವೃತ್ತಿ)**, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ, ಬೆಂಗಳೂರು, ೧೯೮೨-೧೯೮೩

**೨. ಪೂರಕ ಆಕರ ಹಾಗೂ ಸಾಹಿತ್ಯ**

೧. ಅನಂತರಾಮಯ್ಯ ಆರ್.ಎಲ್(ಅನು), **ಸ್ವಾತಂತ್ರ್ಯದ ಹೋರಾಟ**, ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ಹೊಸದೆಹಲಿ, ೧೯೭೪, ೧೯೮೮(ಮರುಮುದ್ರಣ).

೨. ಅನಂತರಾಮು ಕೆ, **ದಕ್ಷಿಣ ಸಿರಿನಾಡು(ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಪ್ರವಾಸ ಕಥನ)**, ಅನಂತ ಪ್ರಕಾಶನ, ದೇವಾಂಬಾ ಅಗ್ರಹಾರ, ಮೈಸೂರು, ೧೯೯೭.

೩. ಅಮರೇಶ ನುಗಡೋಣಿ, **ಹೈದರಾಬಾದ್ ಕರ್ನಾಟಕ ಹಾಡುಪಾಡು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೪. ಅಶೋಕ ಯು ಅಸುಂಡಿ, **ಕನ್ನಡದಲ್ಲಿ ಸಂದರ್ಭ ಗ್ರಂಥಗಳು: ಸಮಗ್ರ ಸಮೀಕ್ಷೆ ಮತ್ತು ವಿವರಣಾತ್ಮಕ ಸೂಚಿ**, ಎಸ್.ಎ. ಪ್ರಕಾಶನ, ಬೆಂಗಳೂರು, ೧೯೯೨.

೫. ಆರ್ವೀಯಸ್ ಸುಂದರಂ, ಎನ್.ಎಸ್. ತಾರಾನಾಥ(ಸಂ), **ಸಂಶೋಧನ ಪಥ**, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೬.

೬. ಉಪಾಧ್ಯ ಜಿ.ಎನ್, **ಮಹಾರಾಷ್ಟ್ರ ಕರ್ನಾಟಕ ಸಾಂಸ್ಕೃತಿಕ ಸಂಬಂಧ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬.

೭. ಉಪ್ಪಂಗಳ ರಾಮಭಟ್ಟ, **ಗಡಿನಾಡು ಕಾಸರಗೋಡು**, ಅಕಲಂಕ ಪ್ರಕಾಶನ, ಉಡುಪಿ, ೧೯೯೪.

೮. ಎಚ್ಚೆಸ್ಕೆ(ಸಂ), **ಅವಲೋಕನ**, ವಿಶ್ವಕನ್ನಡ ಸಮ್ಮೇಳನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೮೫.

೯. ಕಲಬುರ್ಗಿ ಎಂ.ಎಂ(ಸಂ), **ಸೋಮೇಶ್ವರ ವಿರಚಿತ ಮಾನಸೋಲ್ಲಾಸ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೮.

೧೦. ಕೃಷ್ಣಯ್ಯ ಡಿ.ಎನ್, **ಕೊಡಗಿನ ಇತಿಹಾಸ**, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೫.

೧೧. ಕೃಷ್ಣಕೋಲ್ಹಾರ ಕುಲಕರ್ಣಿ, **ಮಹಮ್ಮದ್ ಇಬ್ರಾಹಿಮ ಜುಬೇರಿ ವಿರಚಿತ 'ಬುಸಾತಿನೆ ಸಲಾತೀನ' (ಬಿಜಾಪುರ ಆದಿಲ್‌ಶಾಹಿಗಳ ಚರಿತ್ರೆ)**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೧೨. ಖಂಡೋಬರಾವ್ ಹೆಚ್, **ನಾಣ್ಯ ಕರ್ನಾಟಕ(ವಸ್ತುವಿನಿಮಯದಿಂದ ೧೯೪೭ರವರೆಗೆ)**, ಮಗರ್ ಪಬ್ಲಿಕೇಷನ್ಸ್, ಶಿವಮೊಗ್ಗ, ೨೦೦೨.

೧೩. ಗಿರಿಯಪ್ಪ ಕೂ.ಗಿ, **ಕರ್ನಾಟ ಕರ್ನಾಟಕ ಕನ್ನಡ ಏಕೀಕರಣ**, ಮಧು ಪ್ರಕಾಶನ, ಕನಕಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ೨೦೦೨.

೧೪. ಗುರುಲಿಂಗ ಕಾಪಸೆ(ಸಂ), ಕನ್ನಡ ಕಾವಲು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫.

೧೫. ಗುಂಡಪ್ಪ ಡಿ.ವಿ, ಮೈಸೂರಿನ ಕೈಗನ್ನಡಿಯೆಂಬ ಕರ್ನಾಟಕ ವಾರ್ಷಿಕ ಪುಸ್ತಕ, ಕರ್ನಾಟಕ ಪತ್ರಿಕಾಲಯ, ಬೆಂಗಳೂರು, ೧೯೯೫.

೧೬. ಗೋಪಾಲ್ ಆರ್(ಸಂ), ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೫.

೧೭. ಗೋಪಾಲರಾವ್ ಎಚ್.ಎಸ್, ಕರ್ನಾಟಕ ಏಕೀಕರಣ ಇತಿಹಾಸ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೦.

೧೮. ಗೋವಿಂದರಾಜು ಸಿ.ಆರ್, ಕರ್ನಾಟಕ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ, ಎಸ್.ಬಿ.ಎಸ್, ಪಬ್ಲಿಕೇಷನ್ಸ್, ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ೧೯೯೮.

೧೯. ಗೋವಿಂದರಾಜು ಸಿ.ಆರ್(ಸಂ), ಚರಿತ್ರೆ ಅಧ್ಯಯನ ಸಂಪುಟ-೨, ಸಂಚಿಕೆ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೨೦. ಚಂದ್ರಶೇಖರ್ ಎಸ್, ಆಧುನಿಕ ಕರ್ನಾಟಕದ ಆಂದೋಲನಗಳು, ನಮ್ಮ ಪ್ರಕಾಶನ ಬಿಳಿಗೆರೆ-ತಿಪಟೂರು, ತಾಲ್ಲೂಕು ೨೦೦೨.

೨೧. ಚಂದ್ರಶೇಖರ್ ಎಚ್.ಕೆ, ಭಾರತದ ಬೃಹತ್ ಬೇಲಿ, ಸುಧಾ ಎಂಟರ್ ಪ್ರೈಸಸ್, ಬೆಂಗಳೂರು, ೨೦೦೨.

೨೨. ಚಂದ್ರ ಪೂಜಾರಿ ಎಂ, ನಿತ್ಯಾನಂದ ಬಿ. ಶೆಟ್ಟಿ, ಕರಾವಳಿ ಕರ್ನಾಟಕದ ಕೋಮುವಾದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೨೩. ಚಿದಾನಂದಮೂರ್ತಿ ಎಂ, ಭಾಷಿಕ ಬೃಹತ್ ಕರ್ನಾಟಕ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೫.

೨೪. ಚಿನ್ನಸ್ವಾಮಿ ಸೋಸಲೆ ಎನ್, ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೨೫. ಚಿನ್ನಸ್ವಾಮಿ ಸೋಸಲೆ ಎನ್, ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೨೬. ಚುಳಕಿ ಆರ್.ಎಸ್, ಮೇಡೋಸ್ ಟೇಲರನು ಚಿತ್ರಿಸಿದ ಭಾರತ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮.

೨೭. ಛಾಯಾಪತಿ ಟಿ.ಎಸ್, ಆಡಳಿತ ಭಾಷೆ ಕನ್ನಡ, ಶಾಸ್ತ್ರೀಯ ಭಾಷೆಯ ಹಿನ್ನೆಲೆಯಲ್ಲಿ ಆಡಳಿತ ಭಾಷೆಯ ಮುನ್ನೋಟ, ತುಳುಕಿನ ವೆಂಕಣ್ಣಯ್ಯ, ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೦೮(೪ನೇ ಮುದ್ರಣ).

೨೮. ತಾರಕೇಶ್ವರ ವಿ.ಬಿ, ವಸಾಹತುಶಾಹಿ ಮತ್ತು ಭಾಷಾಂತರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೨೯. ದೀಕ್ಷಿತ್ ಜಿ.ಎಸ್, ಕುಪ್ಪುಸ್ವಾಮಿ ಜಿ.ಆರ್, ಮೋಹನ್ ಎಸ್.ಕೆ, **ಕರ್ನಾಟಕದಲ್ಲಿ ಕೆರೆ ನೀರಾವರಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೩೦. ದೇವಿಪ್ರಸಾದ್ ಸುಪಾಜೆ ಎನ್.ಎಸ್, **ಅಮರಸುಳ್ಯದ ಸ್ವಾತಂತ್ರ್ಯ ಸಮರ**, ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು(ದಕ್ಷಿಣ ಕನ್ನಡ), ೧೯೯೯.

೩೧. ನಂದೀಶ್ವರ ಎನ್, **ಸಿರಾ ತಾಲ್ಲೂಕು ದರ್ಶನ**, ಪೂರ್ಣಚಂದ್ರ ತೇಜಸ್ವಿ ಪ್ರಕಾಶನ, ಬಾಲಾಜಿನಗರ, ಸಿರಾ(ತು ಜಿ), ೨೦೦೮.

೩೨. ನಾಗಯ್ಯ ಜೆ.ಎಂ, **ಸಂದರ್ಭ ಸಾಹಿತ್ಯ**, ವಿಜಯ ವಿಕ್ರಮ ಪ್ರಕಾಶನ, ಕಲಬುರ್ಗಿ, ೧೯೯೦.

೩೩. ನಾರಾಯಣ ಕೆ.ವಿ(ಸಂ), **ವಿಶ್ವಕೋಶ: ೧ ಭಾಷೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೩೪. ನಾಯಕ ಎಸ್.ಆರ್, **ಉತ್ತರ ಕನ್ನಡ ಜಿಲ್ಲೆಯ ನಾಡವರ ಸಂಸ್ಕೃತಿ**, ಜಾನಪದ ಪ್ರಕಾಶನ ಹೊನ್ನಾವರ (ಉ.ಕ), ೨೦೦೧.

೩೫. ನಾಗೇಗೌಡ ಎಚ್.ಎಲ್, **ಪ್ರವಾಸಿ ಕಂಡ ಇಂಡಿಯಾ ಸಂ.೧**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೪.

೩೬. ನೀರ್ಪಾಜೆ ಭೀಮಭಟ್ಟ(ಕನ್ನಡಕ್ಕೆ), **ಕಲ್ಹಣನ ರಾಜತರಂಗಿಣಿ**, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೯೪(ಪು.ದಾ.ಮ), ೨೦೦೨.

೩೭. ನೀಲಮ್ಮ ಕತ್ತಳ್ಳಿ, **ಮಹದೇವ ಬಣಕಾರರ ಕೃತಿಗಳು**, ರೇಣುಕಾ ಪ್ರಕಾಶನ, ಶಹಾಬಾದ್, ೧೯೯೯.

೩೮. ನೀಲತ್ತಹಳ್ಳಿ ಕಸ್ತೂರಿ(ಅನು), **ಕರ್ನಾಟಕದ ಕೆರೆ ನೀರಾವರಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೩೯. ಪಾಟೀಲ ಪುಟ್ಟಪ್ಪ, **ಕನ್ನಡದ ಕಂಪು**, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೦೧.

೪೦. ಪೇಟರ ವಿಲ್ಸನ್ ಪ್ರಭಾಕರ, ವಿಘ್ನೇಶ್ವರ ವರ್ಮುಡಿ, ಪುತ್ತೂರು ಪ್ರಕಾಶನ, **ಇತಿಹಾಸ ದರ್ಪಣ**, ಇತಿಹಾಸ ಮತ್ತು ಸಂಸ್ಕೃತಿ ಅಧ್ಯಯನ ಕೇಂದ್ರ, ಪುತ್ತೂರು, ದ.ಕ, ೨೦೦೫.

೪೧. ಪುಟ್ಟಣ್ಣ ವೈ.ಎನ್, **ನಾನು ಕಂಡ ಮಲೆನಾಡು**, ಚಂದನ ಪ್ರಿಂಟರ್ಸ್, ಬೆಂಗಳೂರು, ೧೯೯೧.

೪೨. ಪುರುಷೋತ್ತಮ ಬಿಳಿಮಲೆ, **ಲಿಂಗರಾಜನ ಹುಕುಂನಾಮೆ**, ಸವಾರ ಪ್ರಕಾಶನ, ಪುತ್ತೂರು, ದ.ಕ, ೧೯೮೫.

೪೩. ಬಸವರಾಜ ಸಾದರ(ಸಂ), **ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯ ಘಟ್ಟಗಳು**, ಕರ್ನಾಟಕ ವಿದ್ಯಾವರ್ಧಕ ಸಂಘ, ಬೆಂಗಳೂರು, ೨೦೦೨.

೪೪. ಬಸವರಾಜ ಕಲ್ಗುಡಿ, **ನಕ್ಷೆ-ನಕ್ಷತ್ರ(ಸಾಹಿತ್ಯ ಇತಿಹಾಸ ಮತ್ತು ಸಂಸ್ಕೃತಿ)**, ಸಂಬಂಧವನ್ನು ಕುರಿತು ಲೇಖನಗಳು, ಕನ್ನಡ ಸಂಘ ಬೆಂಗಳೂರು, ೧೯೯೯.

೪೫. ಭಾಸ್ಕರ ಎಂ, ರಾಜಶೇಖರ ಹತಗುಂದಿ ಟಿ.ಎಂ, **ಕಲಬುರ್ಗಿ ಜಿಲ್ಲಾ ದರ್ಶನ**, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಧಾರವಾಡ, ೧೯೭೫.

೪೬. ಭಾನುಮತಿ ವೈ.ಸಿ, **ಗ್ರಂಥಸಂಪಾದನೆ ಕೆಲವು ಅಧ್ಯಯನ**, ಕೇಶವ ಪ್ರಕಾಶನ, ಮೈಸೂರು, ೧೯೯೭.

೪೭. ಭೀಮಂಡ ಈ ಕುಶಾಲಪ್ಪ, **ಕೊಡಗು(ಚರಿತ್ರೆ ನಿವಾಸಿಗಳು ಮತ್ತು ಪ್ರಭಾವ)**, ಪಾಲೂರು ಗ್ರಾಮ, ಕೊಡಗು ಜಿಲ್ಲೆ, ೧೯೯೩.

೪೮. ಮಹದೇವ ಬಣಕಾರ, **ಆಂಗ್ಲರ ಆಡಳಿತದಲ್ಲಿ ಕನ್ನಡ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೬.

೪೯. ಮಹದೇವ ಬಣಕಾರ, **ಭಾರತದಲ್ಲಿ ಭಾಷಾ ಅಲ್ಪಸಂಖ್ಯಾತರ ಹಿತರಕ್ಷಣೆ ಕರ್ನಾಟಕ ಮೇಲ್ಮೈ**, ಅನುಭವ ಮಂಟಪ ಪ್ರಕಾಶನ, ಬೆಂಗಳೂರು, ೧೯೮೨.

೫೦. ಮಲ್ಲೇಪುರಂ ಜಿ. ವೆಂಕಟೇಶ(ಪ್ರ.ಸಂ.), **ಕೆಳದಿ ಬಸವರಾಜ ಸಂಕಲಿಸಿದ ಶಿವತತ್ತ್ವರತ್ನಾಕರ ಸಂ-೧**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೫೧. ಮಾಲತಿ ಕೆ. ಮೂರ್ತಿ, ಎಚ್.ವಿ. ನರಸಿಂಹಮೂರ್ತಿ(ಸಂ), **ಕುಂದಾಪುರ ತಾಲೂಕು: ಒಂದು ಅಧ್ಯಯನ**, ಭಂಡಾರಕರ್ಸ್ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜು, ಕುಂದಾಪುರ, ೧೯೯೪.

೫೨. ಮುಕುಂದ ಪ್ರಭು ಎಂ(ಪ್ರ.ಸಂ), **ಪೊಲಿ-ಕೆನರಾ-೨೦೦**, ಪ್ರಕಾಶಕರು ಜಿಲ್ಲಾಧಿಕಾರಿ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ೨೦೦೨.

೫೩. ಮುತ್ತಣ್ಣ ಐ.ಮಾ, **೧೯ನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ ಭಾಗ-೧**, ಆರ್.ಎಸ್. ಹಬ್ಬು, ಉಷಾ ಪ್ರೆಸ್, ಮೈಸೂರು, ೧೯೬೯.

೫೪. ಮುತ್ತಣ್ಣ ಐ.ಮಾ, **ಭಾರತ ಸಾಹಿತ್ಯ ಸಂಸ್ಕೃತಿಗೆ ಪಾಶ್ಚಾತ್ಯ ವಿದ್ವಾಂಸರ ಸೇವೆ**, ಆರ್.ಎಸ್. ಹಬ್ಬು, ಉಷಾಪ್ರೆಸ್, ಮೈಸೂರು, ೧೯೮೭.

೫೫. ಮೈಲಾರರಾವ್ ಎ, **ಮೈಸೂರು ಒಡೆಯರು**, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೭.

೫೬. ಮೋಹನ್‌ಕೃಷ್ಣ ರೈ, **ವಸಾಹತುಶಾಹಿ ಮತ್ತು ನಗರೀಕರಣ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೫೭. ಮೋಹನ್‌ಕೃಷ್ಣ ರೈ, **ಕೆನರಾದ ವಿಭಜನೆ ಹತ್ತಿರಾಜಕೀಯದ ವಿಶ್ಲೇಷಣೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೫೮. ರಂಗನಾಥ ದಿವಾಕರ(ಸಂ), **ಕರ್ನಾಟಕ ಏಕೀಕರಣ ಕಥೆ**, ಲೋಕಶಿಕ್ಷಣ ಟ್ರಸ್ಟ್, ಹುಬ್ಬಳ್ಳಿ, ೧೯೫೬.

೫೯. ರಘುನಾಥರಾವ್, **ತತ್ವಪದಕಾರರು ಮತ್ತು ವಸಾಹತುಶಾಹಿ ವ್ಯವಸ್ಥೆ: ಒಂದು ಅಧ್ಯಯನ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೮.

೬೦. ರವೀಂದ್ರನಾಥ ಕೆ, **ಬಳ್ಳಾರಿ ಜಿಲ್ಲಾ ದರ್ಶನ**, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೫.

೬೧. ರಂಗೋಪಂತ ನಾಗರಾಜರಾಯರು(ಸಂ), **ಕರ್ನಾಟಕ ಸಂಸ್ಕೃತಿ ಸ್ಥೂಲನೋಟ: ಅವಲೋಕನ ಕಲ್ಪನೆ**, ಶರಣರ ಸುವಾಸಿನಿ ಬಳಗ, ಹೊಸಪೇಟೆ, ೧೯೯೭.

೬೨. ರಹಮತ್ ತರೀಕೆರೆ, **ಕನ್ನಡ ಸಂಶೋಧನೆ ತಾತ್ವಿಕ ವಿಚಾರ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯(೨ನೇ ಮುದ್ರಣ).

೬೩. ರಾಮಾನುಜಂ ಟಿ.ಎಸ್, **ಕೊಡವರು**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೫.

೬೪. ರಹಮತ್ ತರೀಕೆರೆ, **ಸಾಂಸ್ಕೃತಿಕ ಅಧ್ಯಯನ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೮ (ಮೊದಲ ಮುದ್ರಣ ೨೦೦೪).

೬೫. ರಹಮತ್ ತರೀಕೆರೆ, **ಪ್ರತಿಸಂಸ್ಕೃತಿ**, ಅಭಿನವ ಪ್ರಕಾಶನ, ಬೆಂಗಳೂರು, ೨೦೧೦(ಮೊದಲ ಮುದ್ರಣ ೧೯೯೩).

೬೬. ರಾಜಪ್ಪ ಡಿ.ಸಿ, **ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲಕಲೆಗಳು(೧೮೦೦-೧೮೮೧)**, ಅಕ್ಷರ ಪ್ರಕಾಶನ, ಹೆಗ್ಗೋಡು(ಸಾಗರ ತಾ.), ೧೯೯೫.

೬೭. ರಾಜೇಂದ್ರಚೆನ್ನಿ, **ದೇಶೀವಾದ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೯.

೬೮. ಲಕ್ಷ್ಮಣ್ ತೆಲಗಾವಿ, **ಸಂಶೋಧನ(ಎಂ. ಚಿದಾನಂದಮೂರ್ತಿ ಅವರ ಅಭಿನಂದನ ಸಂಪುಟ)**, ಎಂ. ಚಿದಾನಂದಮೂರ್ತಿ ಅಭಿನಂದನ ಸಮಿತಿ, ಬೆಂಗಳೂರು, ೧೯೯೧.

೬೯. ವಿಜಯ್ ತಂಬಂಡ ಪೂಣಚ್ಚ(ಸಂ), **ಇ. ಮಾರ್ಸ್ಡೆನ್ ಕೊಡಗು ವಿವರಣೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೭೦. ವಿಜಯ್ ತಂಬಂಡ ಪೂಣಚ್ಚ(ಪ್ರ.ಸಂ), **ಚರಿತ್ರೆ ವಿಶ್ವಕೋಶ ಸಂ-೪**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೭೧. ವಿಜಯ್ ತಂಬಂಡ ಪೂಣಚ್ಚ, **ಆಧುನಿಕ ಕೊಡಗು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೭೨. ವಿಜಯ್ ತಂಬಂಡ ಪೂಣಚ್ಚ(ಪ್ರ.ಸಂ), ಚಿನ್ನಸ್ವಾಮಿ ಸೋಸಲೆ ಎನ್(ಸಂ.ಸಂ), **ಸಮಕಾಲೀನ ಕರ್ನಾಟಕ ಚರಿತ್ರೆ ಸಂಪುಟ.೬**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೭೩. ವಿರೂಪಾಕ್ಷಿ ಪೂಜಾರಹಳ್ಳಿ, **ವಸಾಹತುಕಾಲೀನ ಬಳ್ಳಾರಿ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೭೪. ವಿರೂಪಾಕ್ಷಿ ಪೂಜಾರಹಳ್ಳಿ, **ವಿಜಯನಗರ ಕಾಲದ ಸಂಸ್ಕೃತಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೭೫. ವಿದ್ಯಾಶಂಕರ ಎಸ್, **ಸಮಾಹಿತ(ಸಂಶೋಧನ ಲೇಖನಗಳ ಸಂಕಲನ)**, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೪.

೭೬. ವಿವೇಕ ರೈ ಬಿ.ಎ, **ಪ್ರವಾಸಿಕಂಡ ವಿಜಯನಗರ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೫.

೭೭. ವೆಂಕಟರಾಮಯ್ಯ ಎಂ.ಎಸ್(ಸಂ), **ಕಾಸರಗೋಡು**, ಸಿರಿಗನ್ನಡ ವೇದಿಕೆ, ಮೈಸೂರು, ೨೦೦೪.

೭೮. ಶಂಕರರಾವ್ ಚ.ನ, **ಸಮಾಜಶಾಸ್ತ್ರದ ಮೂಲತತ್ತ್ವಗಳು(ಪ್ರಥಮ ಪಿ.ಯು.ಸಿ)**, ಜೈಭಾರತ್ ಪ್ರಕಾಶನ, ಮಂಗಳೂರು, ೨೦೦೭.

೭೯. ಶಂಕರನಾರಾಯಣರಾವ್ ಎನ್.ಪಿ, **ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೮.

೮೦. ಶ್ರೀನಿವಾಸಮೂರ್ತಿ ಕಾ.ವೆಂ, **ಕನ್ನಡಪರ ಚಿಂತನೆ ಮತ್ತು ಪರಂಪರೆ**, ಸಿ.ವಿ.ಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩(೩ನೇ ಮುದ್ರಣ).

೮೧. ಶಿವಾರೆಡ್ಡಿ ಕೆ.ಸಿ, **ಕನ್ನಡದ ಹಾಡುಪಾಡು**, ಅಧ್ಯಯನ ಮಂಡಲ, ಬೆಂಗಳೂರು, ೨೦೦೩.

೮೨. **ಶಿವಮೂರ್ತಿಶಾಸ್ತ್ರಿ, ಕರ್ನಾಟಕ ಪ್ರಾಂತರಚನೆ**, ಸ್ವಾಗತ ಸಮಿತಿ, ಬೆಂಗಳೂರು, ೧೯೫೩.

೮೩. ಶ್ರೀನಿವಾಸ ಹಾವನೂರ, **ಕನ್ನಡದಲ್ಲಿ ಕ್ರೈಸ್ತಸಾಹಿತ್ಯ ಹನಿಗತೆ ಕಂಪ್ಯೂಟರ್ ಇತ್ಯಾದಿ**, ಅನನ್ಯ ಪ್ರಕಾಶನ, ಮೈಸೂರು, ೧೯೮೨.

೮೪. ಶ್ರೀನಿವಾಸ ಹಾವನೂರು, **ಹೊಸಗನ್ನಡದ ಅರುಣೋದಯ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦.

೮೫. ಶ್ರೀನಿವಾಸ ಹಾವನೂರು, **ಶಾಸನಗಳ ಪಿತಾಮಹ ಬಿ.ಎಲ್. ರೈಸ್**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೩೮

೮೬. ಸಣ್ಣಯ್ಯ ಬಿ.ಎಸ್(ಸಂ), **ದೇವಚಂದ್ರ ವಿರಚಿತ ರಾಜಾವಳಿ ಕಥಾಸಾರ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೦.

೮೭. ಸರದಾರ್ ಕೆ.ಎಂ, ಪಣಿಕ್ಕೈಲ್(ಮೂಲ), ನರಗುಂದಕರ್ ಎನ್(ಅನು), **ಭಾರತದ ಭೂರಾಜಕಿರಣ**, ಸಮಾಜ ಪುಸ್ತಕಾಲಯ, ಧಾರವಾಡ-೧, ೧೯೭೧.

೮೮. ಸಚ್ಚಿದಾನಂದ ಶಂಕರ ಭಾರತಿ ಸ್ವಾಮಿಗಳು(ಕನ್ನಡಾನುವಾದ), **ಕೌಟಿಲ್ಯನ ಅರ್ಥಶಾಸ್ತ್ರ**, ಮೈಸೂರು ರಾಜ್ಯದ ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು, ೧೯೬೩.

೮೯. ಸಂತೋಷ ಚೊಕ್ಕಾಡಿ, **ದಕ್ಷಿಣ ಕನ್ನಡ ಕಾವ್ಯದ ವಿಭಿನ್ನ ನೆಲೆಗಳು**, ಕರ್ನಾಟಕ ಸಂಘ, ಪುತ್ತೂರು, ದಕ್ಷಿಣ ಕನ್ನಡ, ೨೦೦೨.

೯೦. ಸಿದ್ಧಲಿಂಗಯ್ಯ ಜಿ.ಎಸ್, ಕೃಷ್ಣಯ್ಯ ಎಂ.ಎಚ್, **ಸಾಲುದೀಪಗಳು**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧.

೯೧. ಸೀತಾರಾಮಯ್ಯ ವಿ(ಸಂ), **ಕವಿರಾಜಮಾರ್ಗ**, ಐ.ಬಿ.ಎಚ್ ಪ್ರಕಾಶನ, ಗಾಂಧೀನಗರ, ಬೆಂಗಳೂರು, ೧೯೭೩.

೯೨. ಸೂರ್ಯನಾಥ ಯು ಕಾಮತ್, **ಕರ್ನಾಟಕ ಇತಿಹಾಸ ಹಲವು ಮುಖಗಳು**, ಸುಮುಖ ಪ್ರಕಾಶನ, ಬೆಂಗಳೂರು, ೨೦೦೬.

೯೩. ಸೂರ್ಯನಾಥ ಯು ಕಾಮತ್, ದೇವರಕೊಂಡಾರೆಡ್ಡಿ, ಜಗನ್ನಾಥ ಎನ್.ಎ(ಸಂ), **ಇತಿಹಾಸದರ್ಶನ ಸಂ-೭**, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೯೪. ಷೇಕ್ ಆಲಿ ಬಿ(ಪ್ರ.ಸಂ), ಸೆಬಾಸ್ಟಿಯನ್ ಜೊಸೆಫ್(ಸಂ.ಸಂ), **ಕರ್ನಾಟಕ ಚರಿತ್ರೆ ಸಂ-೭**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

**೩. ಅಪ್ರಕಟಿತ ಪಿಎಚ್.ಡಿ ಪ್ರಬಂಧಗಳು**

೧. ಗುರುಪ್ರಸಾದ್ ಸಿ.ಟಿ(ಸಂ), ಬೋರಲಿಂಗಯ್ಯ ಹಿ.ಚಿ(ಮಾರ್ಗದರ್ಶಕ), **ನೀಲಗಾರರು: ಒಂದು ಧಾರ್ಮಿಕ ಸಮುದಾಯ ಅಧ್ಯಯನ(ಪಿಎಚ್.ಡಿ)**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೨. ಮಲ್ಲಿಕಾರ್ಜುನ ಭೀಮರಾಯರ(ಸಂ), ಮೇತ್ರಿ ಕೆ.ಎಂ(ಮಾರ್ಗದರ್ಶಕ), **ಕರ್ನಾಟಕ ವಿಮುಕ್ತ ಬುಡಕಟ್ಟುಗಳು ಸಾಮಾಜಿಕ ಅಧ್ಯಯನ(ಪಿಎಚ್.ಡಿ)**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೩. ರೇಖಾ ಎಂ.ಪಿ(ಸಂ), ರಾಮಚಂದ್ರೇಗೌಡ ಹಿ.ಶಿ(ಮಾರ್ಗದರ್ಶಕ), **ಆಧುನಿಕ ಕೊಡವ ಸಾಹಿತ್ಯ (ಪಿಎಚ್.ಡಿ)**, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೯.

೪. ರೇಣುಕಾಪ್ರಸಾದ್ ಪಿ.ಆರ್(ಸಂ), ನಾಗಭೂಷಣಸ್ವಾಮಿ ಓ.ಎಲ್(ಮಾರ್ಗದರ್ಶಕ), **ಕನ್ನಡ ಚಿಂತನೆಯಲ್ಲಿ ಸಂಸ್ಕೃತಿಯ ವ್ಯಾಖ್ಯಾನಗಳು(ಎಂ.ಫಿಲ್)**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.

೫. ಸೋಮಶೇಖರ ಜಿ.ಟಿ(ಸಂ), ಮಾದೇಗೌಡ(ಮಾರ್ಗದರ್ಶಕ), **ಬಿ.ಎಲ್.ರೈಸ್: ಒಂದು ಅಧ್ಯಯನ (ಪಿಎಚ್.ಡಿ)**, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು, ೨೦೦೯.

**೪. ವಿಶ್ವಕೋಶ, ಶಾಸನ ಸಂಪುಟ ಇತ್ಯಾದಿ**

೧. ನಾಯಕ ಹಾ.ಮಾ(ಸಂ), **ಎಫಿಗ್ರಾಫಿಯ ಕರ್ನಾಟಕ: ಕೊಡಗು ಜಿಲ್ಲೆ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೨.

೨ ನಾಯಕ ಹಾ.ಮಾ(ಸಂ), **ಕನ್ನಡ ವಿಷಯ ವಿಶ್ವಕೋಶ ಸಂ.೬**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೩.

೩. ನಿರಂಜನ(ಪ್ರ.ಸಂ), **ಜ್ಞಾನಗಂಗೋತ್ರಿ ಕಿರಿಯರ ವಿಶ್ವಕೋಶ ಸಂ.೧(ಮನುಕುಲದ ಕಥೆ)**, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು, ೧೯೭೦.

೪.	ಬಸವಾರಾಧ್ಯ ಎನ್(ಪ್ರ.ಸಂ), **ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಂ.೮,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫.

**೫. ಪತ್ರಿಕೆಗಳು, ನಿಯತಕಾಲಿಕೆಗಳು**

೧.	***ಇತಿಹಾಸ ದರ್ಪಣ(ತ್ರೈಮಾಸಿಕ),*** ಜನವರಿ-ಮಾರ್ಚ್, ೨೦೧೧.

೨.	***ಪ್ರಜಾವಾಣಿ,*** ಸೆಪ್ಟೆಂಬರ್ ೭, ೨೦೧೧, ಪು-೭.

೩.	***ಸುಧಾ ಬೆಳ್ಳಿ ಸಂಚಿಕೆ,*** ಬೆಂಗಳೂರು, ೧೯೯೦, ಪು. ೨೬.

೪.	***ಸಂಯುಕ್ತ ಕರ್ನಾಟಕ,*** ಸಾಪ್ತಾಹಿಕ ಸೌರಭ, ಹುಬ್ಬಳ್ಳಿ, ೧೫.೮.೨೦೧೦, ಪು. ೨.

೫.	ವಿರೂಪಾಕ್ಷಿ ಪೂಜಾರಹಳ್ಳಿ(ಸಂ), ***ಚರಿತ್ರೆ ಅಧ್ಯಯನ ಸಂ-೮, ಸಂಚಿಕೆ-೧,*** ಜುಲೈ, ಡಿಸೆಂಬರ್ ೨೦೦೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.



## ಅನುಬಂಧ ೨

# ನಕಾಶೆಗಳು

### ತುಂಡಾದ ೨೨ ಕನ್ನಡ ಭೂಪ್ರದೇಶಗಳು



## ಪ್ರಸ್ತುತ ಕರ್ನಾಟಕ (ಮೂವತ್ತು ಜಿಲ್ಲೆಗಳೊಂದಿಗೆ)




**ನಕ್ಷೆಗಳ ಕೃಪೆ**

೧. ಗೋವಿಂದರಾಜು ಸಿ.ಆರ್, ಕರ್ನಾಟಕದ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ.

೨. ಚಿನ್ನಸ್ವಾಮಿ ಸೋಸಲೆ, ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ.

೩. ಜಿಲಾನಿ ಎಸ್.ಎ(ಮು.ಸಂ), ಹ್ಯಾಂಡ್ ಬುಕ್ ಆಫ್ ಕರ್ನಾಟಕ.

೪. ರೈಸ್ ಬಿ.ಎಲ್, ಮೈಸೂರು ಆ್ಯಂಡ್ ಕೂರ್ಗ್ ಗ್ಯಾಸೆಟಿಯರ್ ಸಂಪುಟ-೩.

